# ಹಟ್ಟಿ ಸಂಸ್ಕೃತಿ ಮತ್ತು ಪರಂಪರೆ - ಸಾಮಾಜಿಕ ಅಧ್ಯಯನ
## (ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸಿ)

---

(ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು
ಕೆ.ಸಿ. ಶರಣಪ್ಪ

ಮಾರ್ಗದರ್ಶಕರು
ಡಾ. ಚಲುವರಾಜು
ಪ್ರಾಧ್ಯಾಪಕರು






ಬುಡಕಟ್ಟು ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೬

# ಹಟ್ಟಿ ಸಂಸ್ಕೃತಿ ಮತ್ತು ಪರಂಪರೆ – ಸಾಮಾಜಿಕ ಅಧ್ಯಯನ

## (ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸಿ)

(ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು
**ಕೆ.ಸಿ. ಶರಣಪ್ಪ**

ಮಾರ್ಗದರ್ಶಕರು
**ಡಾ. ಚಲುವರಾಜು**
ಪ್ರಾಧ್ಯಾಪಕರು



**ಬುಡಕಟ್ಟು ಅಧ್ಯಯನ ವಿಭಾಗ**
ಸಮಾಜವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ–೫೮೩ ೨೭೬
೨೦೧೭

# ಮಾರ್ಗದರ್ಶಕರ ದೃಢೀಕರಣ ಪತ್ರ

ಶರಣಪ್ಪ ಕೆ.ಸಿ. ವಿದ್ಯಾರ್ಥಿಯು **"ಹಟ್ಟಿ ಸಂಸ್ಕೃತಿ ಮತ್ತು ಪರಂಪರೆ - ಸಾಮಾಜಿಕ ಅಧ್ಯಯನ"** (ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಮಾಜಶಾಸ್ತ್ರ ವಿಷಯದಲ್ಲಿ ಸಿದ್ಧಪಡಿಸಿ, ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ಚಲುವರಾಜು**
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ : ೨೪.೧೨.೨೦೧೭

ಸ್ಥಳ : ವಿದ್ಯಾರಣ್ಯ

# ಘೋಷಣ ಪತ್ರ

"ಹಟ್ಟಿ ಸಂಸ್ಕೃತಿ ಮತ್ತು ಪರಂಪರೆ – ಸಾಮಾಜಿಕ ಅಧ್ಯಯನ" (ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ. ಚಲುವರಾಜು. ಪ್ರಾಧ್ಯಾಪಕರು, ಅವರ ಮಾರ್ಗದರ್ಶನದಲ್ಲಿ ಸಮಾಜಶಾಸ್ತ್ರ ವಿಷಯದಲ್ಲಿ ಸಿಧ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದವನ್ನು ಈ ಮೊದಲು ಯಾವುದೇ ಪದವಿ ಇಲ್ಲವೇ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

(ಕೆ.ಸಿ. ಶರಣಪ್ಪ)
ಸಂಶೋಧನ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

ದಿನಾಂಕ: 28-12-2017
ಸ್ಥಳ: ವಿದ್ಯಾರಣ್ಯ

# ಪರಿವಿಡಿ

# ಕೋಷ್ಟಕಗಳು

# ರೇಖಾನಕ್ಷೆಗಳು



# ನಕ್ಷೆಗಳು

## ಅಧ್ಯಾಯ : ಒಂದು

# ಅಧ್ಯಯನದ ಸ್ವರೂಪ ವ್ಯಾಪ್ತಿ ಹಾಗೂ ವಿಧಾನ

ಪ್ರಸ್ತಾವನೆ

೧.೧ ಹಟ್ಟಿ ಸ್ವರೂಪ ಮತ್ತು ಲಕ್ಷಣಗಳು

೧.೨ ಸಂಶೋಧನ ಪ್ರಶ್ನೆಗಳು ಹಾಗೂ ಸಮಸ್ಯೀಕರಣ

೧.೩ ಅಧ್ಯಯನದ ಉದ್ದೇಶಗಳು ಹಾಗೂ ಮಹತ್ವ

೧.೪ ಅಧ್ಯಯನ ವಿಧಾನ

೧.೫ ಅಧ್ಯಯನಕ್ಷೇತ್ರದ ವ್ಯಾಪ್ತಿ

೧.೬ ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

೧.೭ ಸಂಶೋಧನ ವಿನ್ಯಾಸ

## ಅಧ್ಯಾಯ: ಒಂದು

# ಅಧ್ಯಯನದ ಸ್ವರೂಪ, ವ್ಯಾಪ್ತಿ ಹಾಗೂ ವಿಧಾನ

### ಪ್ರಸ್ತಾವನೆ

ಮಾನವನು ತನ್ನ ಐತಿಹಾಸಿಕ ನಡಿಗೆಯಲ್ಲಿ ದಾಪುಗಾಲು ಇರಿಸುತ್ತಾ ನಾಗರಿಕತೆಯ ಮಟ್ಟಕ್ಕೆ ತಲುಪಿದ್ದಾನೆಯೇ? ತಲುಪಿದ್ದರೂ ಹಾಗೆಂದ ಮಾತ್ರಕ್ಕೆ ಇಡೀ ಜಗತ್ತಿನ ಎಲ್ಲೆಡೆಯಲ್ಲಿ ಕಾಣಬರುವ ಮಾನವ ಸಮೂಹ-ನಾಗರೀಕತೆಯ ಘಟ್ಟಕ್ಕೆ ಬಂದು ತಲುಪಿವೆಯೋ ? ನಾಗರಿಕತೆಗೂ ಮತ್ತು ಅಭಿವೃದ್ಧಿಗೂ ನೇರವಾದ ಸಂಬಂಧವಿರುವುದರ ತೀವ್ರತರವಾದ ಅನಿವಾರ್ಯತೆಗಳು ಇದನ್ನು ಸಾಕ್ಷೀಕರಿಸುತ್ತವೆ. ಇತ್ತೀಚಿನ ಆಯಾಮಗಳು ಹಲವು ಪ್ರಕಾರದ ಚರ್ಚೆಗೆ ಗ್ರಾಸವಾಗುವುದು. ಭಾರತದಾದ್ಯಂತ ಕಂಡು ಬರುವ ವಿಭಿನ್ನ ಸಮುದಾಯಗಳು ಜಗತ್ತಿನ ಇತರೆ ಸಮುದಾಯಗಳಿಗಿಂತ ಭಿನ್ನವಾಗುವುದರ ಜೊತೆಗೆ ವೈವಿಧ್ಯಮಯವಾಗಿವೆ. ಈ ಹಿನ್ನೆಲೆಯಲ್ಲಿ ಭಾರತವನ್ನು ಅವಲೋಕಿಸಿದರೆ ಬಹುಪ್ರಕಾರದ ಸಂಪ್ರದಾಯ, ಪದ್ಧತಿ, ಜಾತಿ, ಉಪಜಾತಿ, ಭಾಷೆ, ಆಚಾರಗಳಿಂದ ಕೂಡಿರುವ ಬಹುತ್ವದ ವಿವಿಧತೆಯಿದ್ದರೂ ಏಕತೆಯಿಂದ ಕೂಡಿದ ಸಂಸ್ಕೃತಿಗಳ ನೆಲೆಬೀಡು. ಈ ಹಿನ್ನೆಲೆಯಲ್ಲಿ ಭಾರತ ದೇಶದಲ್ಲಿ ಹಲವಾರು ಸಂಸ್ಕೃತಿಗಳು ನೆಲೆಯೂರಿರುವುದು ಕಂಡು ಬಂದಿದೆ. ಭಾರತದ ತಳಮಟ್ಟದ ಸಮುದಾಯಗಳ ಸಂಸ್ಕೃತಿಯನ್ನು ಮಾನವಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ವಿದ್ವಾಂಸರುಗಳು ಬಹಳ ಹಿಂದಿನಿಂದಲೂ ಅಧ್ಯಯನ ಮಾಡುತ್ತಾ ಬಂದಿದ್ದಾರೆ. ಇಂತಹ ಅಧ್ಯಯನಗಳಲ್ಲಿ ತಳ ಸಮುದಾಯಗಳ, ಬುಡಕಟ್ಟು ಸಮುದಾಯಗಳ, ಅಲೆಮಾರಿ ಸಮುದಾಯಗಳ ಪ್ರಕಾರಗಳನ್ನು ಅವುಗಳ ಸ್ವರೂಪಗಳನ್ನು ತಮ್ಮ ಅಧ್ಯಯನದಲ್ಲಿ ಗುರುತಿಸಿದ್ದಾರೆ. ಸಾಮಾಜಿಕ ಜೀವನದಲ್ಲಿ ಸಂಸ್ಕೃತಿ ಎಂಬುದು ಒಂದು ಸಾಂಕೇತಿಕ ಗುರುತು(ಐಡೆಂಟಿಟಿ), ಅದು ಪವಿತ್ರವೂ ಪ್ರಾಚೀನವೂ ಆದದ್ದು, ಸಂಸ್ಕೃತಿಗಿರುವ ಅನೇಕ ಆಚರಣೆಯ ಕ್ರಮಗಳಲ್ಲಿ ತನ್ನನ್ನು ಪ್ರತಿನಿಧಿಸಿಕೊಳ್ಳುತ್ತದೆ. ಸಂಸ್ಕೃತಿಯ ಪರಿಕಲ್ಪನೆಯನ್ನು ಅರ್ಥೈಸುವುದಾದರೆ ಅದು ಜೀವನಕ್ರಮ ಎಂದರ್ಥ.

ಸಂಸ್ಕೃತಿ ಎಂದರೆ ನಾವು ಮನ್ನಿಸುವ ಒಂದು ಸಂಸ್ಕಾರ, ಮೌಲ್ಯ ಪ್ರಜ್ಞೆ, ಸಂಸ್ಕೃತಿಯು ಸಾಹಿತ್ಯ, ಸಂಗೀತ, ನಾಟಕ, ನೃತ್ಯ ಇತ್ಯಾದಿಗಳನ್ನು ಕುರಿತ ಚಟುವಟಿಕೆಯಾಗಿದೆ. ಸಂಸ್ಕೃತಿಯ ಆಚರಣೆಯಲ್ಲಿ ವ್ಯಾಪಕವಾಗಿ ಬಳಕೆಯಾದ ಶಬ್ಧಗಳಲ್ಲಿ ಧರ್ಮಗಳ ಹೆಸರು ಸೇರಿಸಿದರೆ ಅದು

ಹಿಂದೂ ಸಂಸ್ಕೃತಿ, ಇಸ್ಲಾಂ ಸಂಸ್ಕೃತಿ ಇತ್ಯಾದಿ ಪರಿಕಲ್ಪನೆಗಳನ್ನು ಹುಟ್ಟಿಹಾಕುತ್ತದೆ. ಭಾಷಾ ಆಯಾಮದಲ್ಲಿ ನೋಡುವುದಾದರೆ ಅವುಗಳನ್ನು ಮರಾಠಿ ಸಂಸ್ಕೃತಿ, ಕನ್ನಡ ಸಂಸ್ಕೃತಿ, ಎಂದು ಜಾತಿ ಬುಡಕಟ್ಟು ಆಯಾಮದಲ್ಲಿ ನೋಡಿದರೆ ಸಿದ್ಧಿಯರ ಸಂಸ್ಕೃತಿ, ದಲಿತ ಸಂಸ್ಕೃತಿ ಎಂಬ ಪರಿಕಲ್ಪನೆಗಳು ಹುಟ್ಟಿವೆ. ಹಾಗೆಯೇ ಪ್ರಾದೇಶಿಕ ಆಯಾಮದಲ್ಲಿ ನೋಡಿದರೆ ನಗರ ಇಲ್ಲವೇ ಗ್ರಾಮೀಣ ಸಂಸ್ಕೃತಿ ಎನ್ನುವುದುಂಟು. ಹೀಗೆ ಸಂಸ್ಕೃತಿ ಶಬ್ಧವನ್ನು ಬಳಸಿಕೊಂಡು ಹಲವಾರು ಆಶಯದಲ್ಲಿ ಪರಿಭಾಷೆಗಳು, ಪರಿಕಲ್ಪನೆಗಳು ಹುಟ್ಟಿವೆ. ಹೀಗೆ ಹುಟ್ಟಿದ ಪರಿಕಲ್ಪನೆ ಮತ್ತು ವಿಶೇಷಣಗಳಲ್ಲಿ ಮುಂದೆ ಸಂಸ್ಕೃತಿ ಎನ್ನುವ ಪದವು ಗುಣಸೂಚಕವಾಗಿದೆ. ಅನೇಕ ಅಧ್ಯಯನಕಾರರು ಸಂಸ್ಕೃತಿಯನ್ನು ಅಧ್ಯಯನಕ್ಕೊಳಪಡಿಸಿ ವ್ಯಾಖ್ಯಾನಿಸಿದ್ದಾರೆ.

"ಸಂಸ್ಕೃತಿ ಎಂದರೆ ಸಮುದಾಯದ ಸಮಗ್ರ ಜೀವನ ವಿಧಾನಗಳ ಮೊತ್ತ"[1] ಸಮುದಾಯವೊಂದರ ಜೀವನ ವಿಧಾನವೆಂದರೆ ಉಡುವ ಬಟ್ಟೆ, ಉಣ್ಣುವ ಊಟ, ಆಡುವ ಮಾತು, ಮಾಡುವ ಆಚರಣೆ, ನಂಬಿದ ನಂಬಿಕೆ ಮುಂತಾದ ಇಡೀಬದುಕಿನ ವಿವರಗಳನ್ನು ಒಳಗೊಂಡಿರುತ್ತದೆ. ಸಂಸ್ಕೃತಿಯನ್ನು ಸಾಮಾನ್ಯ ಅರ್ಥದಲ್ಲಿ ನೋಡುವುದಾದರೆ ಆಡುವ ಭಾಷೆ, ಹುಟ್ಟಿದ ಜಾತಿ, ಅನುಸರಿಸುವ ಧರ್ಮ, ವಾಸಿಸುವ ಪ್ರದೇಶ ಈ ಆಧಾರಗಳಲ್ಲಿ ನೋಡಲಾಗುತ್ತದೆ.

ಸಂಸ್ಕೃತಿ ಎಂಬುದು ಒಂದು ದೇಶದ ಜನಾಂಗದ ಮಾನಸಿಕ ಸಾಧನೆ–ಕನ್ನಡ ಸಾಹಿತ್ಯ ಪರಿಷತ್ ಮತ್ತು ಕನ್ನಡ ನಿಘಂಟು. ಕಿಟೆಲ್‌ರವರು ತನ್ನ ನಿಘಂಟಿನಲ್ಲಿ ಸಂಸ್ಕೃತಿ ಎಂಬ ಪದಕ್ಕೆ "ಸಂಸ್ಕಾರ" ಎಂದಷ್ಟೇ ದಾಖಲಿಸುತ್ತಾರೆ. ಸಂಸ್ಕಾರಕ್ಕೆ ಶುದ್ಧೀಕರಿಸುವ, ಪವಿತ್ರೀಕರಿಸುವ ಅರ್ಥಗಳು ಹುಟ್ಟಿಕೊಳ್ಳುತ್ತವೆ.

ಸಂಸ್ಕೃತಿ ಎಂಬುದು ಒಂದು ಸಮುದಾಯ ಬದುಕುವ, ಆಲೋಚಿಸುವ, ಸಮಸ್ತ ಆಯಾಮಗಳನ್ನು ಒಳಗೊಳ್ಳುವ ಒಂದು ಪರಿಭಾಷೆ. ಇಡೀ ನಾಡಿಗೆ ಏಕರೂಪಿಯಾದ ಒಂದು ಸಂಸ್ಕೃತಿ ಇರುವುದಿಲ್ಲ. ಆದರೊಳಗೆ ಪ್ರಾದೇಶಿಕ, ಜಾತಿಯ, ಧಾರ್ಮಿಕ, ಬುಡಕಟ್ಟಿನ ರೂಪಗಳಿರುತ್ತವೆ. ಸಂಸ್ಕೃತಿಯಲ್ಲಿ ತರತಮ ಎಂಬುದಿಲ್ಲ, ನೈತಿಕವಾಗಿ ಒಳ್ಳೆಯ, ಕೆಟ್ಟ, ವಿಕಾಸದ ದೃಷ್ಟಿಯಿಂದ ಹಿಂದುಳಿದ ಮುಂದುವರಿದ, ಶ್ರೇಣೀಕರಣದ ದೃಷ್ಟಿಯಿಂದ ಮೇಲು, ಕೀಳು ಎಂಬ ಪರಿಭಾಷೆಯಲ್ಲಿ ಅಳೆಯಲು ಸಾಧ್ಯವಿಲ್ಲ. ಸಮುದಾಯಗಳ ಎಲ್ಲ ಬಗೆಯ ನಂಬಿಕೆ, ಆಚರಣೆಗಳನ್ನು ಸಂಸ್ಕೃತಿ ಎಂದು ಒಪ್ಪಿಕೊಳ್ಳಬೇಕು. ಸಂಸ್ಕೃತಿಯ ಪರಿಧಿಯಲ್ಲಿ ಉಚ್ಚ, ನೀಚ, ಶ್ರೇಷ್ಠ, ಕನಿಷ್ಠ, ಪವಿತ್ರ, ಅಪವಿತ್ರ ಎಂದು ಮಾಪನ ಮಾಡಲಾಗುವುದಿಲ್ಲ. ಪ್ರತಿಯೊಂದು ಸಮುದಾಯಕ್ಕೂ ತನ್ನದೇ ಆದ ಸಂಸ್ಕೃತಿ ಇರುತ್ತದೆ. ಅದೇ ಶ್ರೇಷ್ಠ ಸಂಸ್ಕೃತಿಯೆಂದು ಆ ಸಂಸ್ಕೃತಿಗೆ ಸೇರಿದ ಸಮುದಾಯಗಳು ಬೆಸೆದುಕೊಂಡಿರುತ್ತವೆ.

ಸಂಸ್ಕೃತಿಯ ಬಗ್ಗೆ ಅನೇಕ ಅಧ್ಯಯನಕಾರರು ವಿವಿಧ ಆಯಾಮಗಳಲ್ಲಿ ಅವಲೋಕಿಸಿರುವುದು ಕಂಡುಬಂದಿದೆ. "ಚಿದಾನಂದಮೂರ್ತಿಯವರು ಆರ್ನೆಲ್ಡ್‌ಎಮರ್ಸನ್, ರವೀಂದ್ರನಾಥಟ್ಯಾಗೂರ್, ಟಿ.ಎಸ್.ಈಲಿಯಟ್ ಮುಂತಾದ ಚಿಂತಕರ ಅಭಿಪ್ರಾಯಗಳನ್ನು ಎತ್ತಿಕೊಂಡು ಅವರನ್ನಾಧರಿಸಿ

ವ್ಯಕ್ತಿಗತ ವಿಕಾಸ ಹಾಗೂ ಸಮುದಾಯಿಕ ಜೀವನ ಎಂಬ ಎರಡು ನೆಲೆಗಳಾಗಿ ವಿಂಗಡಿಸಿ ಎರಡನೆ ವಿವರಣೆಯನ್ನು ಅಂಗೀಕರಿಸಿ ಬದುಕಿದ ರೀತಿ, ಅವರ ಧರ್ಮ, ಆರ್ಥಿಕ ವ್ಯವಸ್ಥೆ, ಜಾತಿ ನೀತಿಗಳು ಅವರ ಬಾಳನ್ನು ಹಿಡಿದು ನಡೆಸಿದ ಮೌಲ್ಯಗಳು ಒಟ್ಟನಲ್ಲಿ ಅವರ ಜೀವನ ವಿಧಾನಗಳನ್ನು ರೂಪಿಸುವುದೇ ಸಂಸ್ಕೃತಿ"[೨].

ಸಂಸ್ಕೃತಿಯನ್ನು ಇನ್ನಷ್ಟು ತಳಸ್ಪರ್ಶಿ ಅಧ್ಯಯನ ಮಾಡಿದವರಲ್ಲಿ ಮಾನವಶಾಸ್ತ್ರಜ್ಞರು ಹೆಚ್ಚು.ಇ.ಬಿ. ಟೇಲರ್ ಮೂಲತಃ ಬುಡಕಟ್ಟುಗಳ ಮೇಲೆ ಅಧ್ಯಯನ ವಿಧಾನಗಳನ್ನು ರೂಪಿಸಿದವರು. ಅವರ "ಪ್ರಿಮಿಟಿವ್ ಕಲ್ಚರ್" ಎಂಬ ಪ್ರಸಿದ್ಧ ಗ್ರಂಥದಲ್ಲಿ ಸಂಸ್ಕೃತಿ ಎನ್ನುವುದಕ್ಕೆ "ಸಮುದಾಯದಲ್ಲಿ ಅದರ ಸದಸ್ಯರು ಪಡೆದುಕೊಳ್ಳುವ ಸಮಸ್ತ ತಿಳುವಳಿಕೆ, ನಂಬಿಕೆ, ಆಚರಣೆ, ನೀತಿಗಳನ್ನೊಳಗೊಂಡ ಆಖಂಡವಾದ ಒಂದು ಸಂಕೀರ್ಣ ವ್ಯವಸ್ಥೆ"[೩] ಹೀಗೆ ವ್ಯಾಖ್ಯಾನಿಸುತ್ತಾರೆ. ಈ ವ್ಯಾಖ್ಯಾನವು ಸಮಾಜಶಾಸ್ತ್ರಜ್ಞರಿಗೆ, ಮಾನವಶಾಸ್ತ್ರಜ್ಞರಿಗೆ ಸಂಸ್ಕೃತಿಯನ್ನು ಆರ್ಥೈಸಿಕೊಳ್ಳಲು ಸ್ಪಷ್ಟವಾಗಿ ಪುಷ್ಟಿಕೊಟ್ಟಿತು. ಅವರು ಅದನ್ನು ಆಸ್ತೆಯಿಂದ ಸ್ವೀಕರಿಸಿದರು ಎನ್ನುವ ಅಂಶ ತಿಳಿದು ಬಂದಿದೆ.

ಮನುಷ್ಯ ಆದಿಮ ಸ್ಥಿತಿಯಿಂದ ಈಗಿನ ನಾಗರಿಕ ಸ್ಥಿತಿಯವರೆಗೆ ನಡೆದುಬಂದ ಹಾದಿಯನ್ನು ಪರಾಮರ್ಶೆಗೆ ಒಳಪಡಿಸಿದರೆ ಸಂಸ್ಕೃತಿ ವಿಕಾಸವಾಗಿದೆಯೇ? ವಿಕಾಸವಾಗಿದ್ದರೆ ಯಾವಕಡೆಯಿಂದ ಯಾವಕಡೆಗೆ ತನ್ನ ವಿಕಾಸದ ಚಲನೆಯನ್ನು ಮುಂದುವರಿಸಿದೆ. ಅದು ತನ್ನ ಪ್ರಾದೇಶಿಕ ಹಿನ್ನಲೆಯಲ್ಲಿ ವಿವಿಧ ರೂಪಗಳನ್ನು ಪಡೆದುಕೊಂಡಿದೆಯೇ ಎನ್ನುವ ಬಹುಬಗೆಯ ಪ್ರಶ್ನೆಗೆ ಚರ್ಚೆಗೆ ಗ್ರಾಸವಾಗುತ್ತದೆ. ಈ ಹಿನ್ನಲೆಯಲ್ಲಿ ಸಂಸ್ಕೃತಿಯ ವಿಕಾಸದ ಹಂತಗಳನ್ನು ಮಾನವಶಾಸ್ತ್ರಜ್ಞರು ಮೂರು ಹಂತಗಳಲ್ಲಿ ಗುರುತಿಸುತ್ತಾರೆ ಅವುಗಳೆಂದರೆ–

೧) ಆದಿವಾಸಿ ಸಂಸ್ಕೃತಿ

೨) ಗ್ರಾಮೀಣ ಸಂಸ್ಕೃತಿ

೩) ನಗರ ಸಂಸ್ಕೃತಿ

ಮಾನವ ಶಾಸ್ತ್ರಜ್ಞರು ತಮ್ಮ ಅಧ್ಯಯನದಲ್ಲಿ ಕೃಷಿಮೂಲ ನೆಲೆಯಿಂದ ಮನುಷ್ಯನ ಸಾಂಸ್ಕೃತಿಕ ಅನನ್ಯತೆಯನ್ನು ಹುಡುಕುವ ಪ್ರತ್ನವನ್ನು ಮಾಡಿದ್ದಾರೆ. ಹೀಗಾಗಿಯೇ ಮಾನವ ಜೀವನದ ಅನೇಕ ಸಂಗತಿಗಳು ಅವನೊಟ್ಟಿಗೆ ಸಾಂಸ್ಕೃತಿಕ ಸಂಗತಿಗಳಾಗಿ ಬೆಸೆದುಕೊಂಡವು. ಅವನು ರೂಢಿಸಿಕೊಂಡ ಆಚರಣೆ, ನಂಬಿಕೆ, ಪದ್ಧತಿಗಳು ಸಂಸ್ಕೃತಿಯಾಗಿ ವಿಶಾಲಾರ್ಥದಲ್ಲಿ ಬಳಕೆಯಾಗಲು ಶುರುವಾಯಿತು. ಆದಿಮಾನವನ ಅನೇಕ ಹೊಸ ಶೋಧನೆಗಳು, ಬೆಂಕಿ, ಬಟ್ಟೆ, ಪಶುಪಾಲನೆ, ವ್ಯವಸಾಯ, ಭಾಷೆ, ಹಾಡು, ಕುಣಿತ ಇವೆಲ್ಲವೂ ಸಂಸ್ಕೃತಿಯ ನೆಲೆಗೆ ಒಳಪಟ್ಟವು. ಇವುಗಳ ಮೂಲಕವೇ ಸಂಸ್ಕೃತಿಯ ಅಧ್ಯಯನವು ಆರಂಭವಾಯಿತು. ಆದಿಮಾನವನಿಂದ ಆರಂಭವಾದ ಭಿನ್ನವಾದ ಆಚರಣೆಗಳನ್ನು ಆದಿವಾಸಿಗಳು ಇಂದಿಗೂ ರೂಢಿಸಿಕೊಂಡು ಬಂದಿದ್ದಾರೆ. ಈ ಹಿನ್ನೆಲೆಯಲ್ಲಿ ಆದಿಮಾನವನ

ಸಂಸ್ಕೃತಿಯನ್ನು ಶಿಲಾಯುಗದ ಸಂಸ್ಕೃತಿ ಎಂದು ಕರೆದುಕೊಳ್ಳಬಹುದು. ಅಷ್ಟೇ ಅಲ್ಲ ಇದರ ವಿಸ್ತಾರವನ್ನು ಶಿಲಾಯುಗದಿಂದ-ನವಶಿಲಾಯುಗದವರೆಗೂ ನಡೆದ ಸ್ಥಿತ್ಯಂತರಗಳವರೆಗೆ ಕೊಂಡೊಯ್ಯಬಹುದು. ಆನಂತರದಲ್ಲಿಯೇ ಮನುಷ್ಯ ಒಂದೆಡೆ ನೆಲೆಸುವ ಸಂಸ್ಕೃತಿಯನ್ನು ರೂಢಿಸಿಕೊಂಡನು. ಆಗ ಆದಿವಾಸಿ ಸಂಸ್ಕೃತಿಯೊಂದು ರೂಪುತಾಳಿತು. ಈ ಸಂದರ್ಭದಲ್ಲಿ ಶಿಲಾಯುಗದ ಸಂಸ್ಕೃತಿಯನ್ನು ತನ್ನೊಳಗೆ ಇಟ್ಟುಕೊಂಡು ಆದಿವಾಸಿ ಸಂಸ್ಕೃತಿಯು ವಿಭಿನ್ನವಾಗಿ ರೂಪುತಾಳಲು ಶುರುವಾಯಿತು. ನಂತರದಲ್ಲಿ ಇದರ ಮುಂದಿನ ರೂಪವೇ ನಗರ ಸಂಸ್ಕೃತಿ. ಇದು ವಾಣಿಜ್ಯ, ಔದ್ಯಮಿಕ, ಸಾರಿಗೆಸಂಪರ್ಕದ ಬೆಳವಣಿಗೆಯಿಂದಾಗಿ ರೂಪುಗೊಂಡ ಸಮ್ಮಿಶ್ರ ಸಂಸ್ಕೃತಿಯೇ ನಗರ ಸಂಸ್ಕೃತಿ. ಇದು ಪ್ರಾದೇಶಿಕವಾಗಿ ನೆಲೆಯೂರಿರುವುದನ್ನು ತಿಳಿಯಬಹುದು.

ಈ ಹಿನ್ನೆಲೆಯಲ್ಲಿ ಆದಿವಾಸಿ ಸಂಸ್ಕೃತಿಯು ಹಟ್ಟಿಸಂಸ್ಕೃತಿಯಲ್ಲಿ ಅಡಕವಾಗಿದೆ ಎಂಬುದನ್ನು ಗಮನಿಸಬಹುದು. ಬುಡಕಟ್ಟು ಸಮುದಾಯಗಳು ಹಟ್ಟಿಗಳನ್ನು ಕಟ್ಟಿಕೊಂಡು ಪ್ರತ್ಯೇಕವಾಗಿ ವಾಸಿಸುತ್ತ ಶುದ್ಧ ಜನಪದ ಸಂಸ್ಕೃತಿಯನ್ನು ಹೊಂದಿದವರು. ಮಾನವ ಸಮೂಹ ಆರಂಭಿಕ ಹಂತದಿಂದಲೂ ಅಲೆಮಾರಿಯಾಗಿದ್ದ ತನ್ನ ಜೀವನದ ಭದ್ರತೆಗಾಗಿ ಬೇಟೆಗಾರಿಕೆ, ಪಶುಸಂಗೋಪನೆ, ಕೃಷಿ ಜೀವನವನ್ನು ಅಳವಡಿಸಿಕೊಂಡನು. ಹೀಗೆ ಬುಡಕಟ್ಟು ಸಮುದಾಯಗಳು ಕಾಡು, ಬೆಟ್ಟ, ಗುಡ್ಡ, ಕಣಿವೆಗಳನ್ನು ಆಯ್ದುಕೊಂಡರು. ಪಶುಪಾಲನೆಗೆ ಯೋಗ್ಯವಾದ ಆ ಸ್ಥಳಗಳಲ್ಲಿಯೇ ಹಟ್ಟಿಗಳನ್ನು ಕಟ್ಟಿಕೊಂಡಿರುವುದು ಕಂಡುಬರುತ್ತದೆ.

ಮನುಷ್ಯನು ಪ್ರಾಣಿಗಳಲ್ಲಿ ಒಬ್ಬನಾದರೂ, ತಾನು ಪ್ರಾಣಿಗಳಿಗಿಂತ ಭಿನ್ನ ಎಂದು ಹೇಳಿಕೊಳ್ಳುವನು. ಭಿನ್ನವಾಗಿದ್ದರೆ ಏಕೆ ಭಿನ್ನವಾಗಿದ್ದಾನೆ, ಹೇಗೆ ಭಿನ್ನವಾಗಿದ್ದಾನೆ? ಭಿನ್ನವಾಗಲಿಕ್ಕೆ ಅನಿವಾರ್ಯಗಳೆ? ಅಥವಾ ಕಾರಣಗಳೇನು? ಎನ್ನುವಂತಹದನ್ನು ಪ್ರಶ್ನಿಸಿಕೊಂಡಾಗ ಪ್ರಾಣಿಗಳಿಗೆ ಬುದ್ಧಿ ಇಲ್ಲ, ಸಾಮಾಜಿಕ ಒಕ್ಕೂಟ, ಸಾಮಾಜಿಕ ಅಂತರ್ ಕ್ರಿಯೆಗಳು ಇರುವುದಿಲ್ಲ, ವಾಕ್ ಶಕ್ತಿ ಇಲ್ಲ, ಪ್ರಾಣಿಗಳನ್ನು ಪಳಗಿಸುವ, ಸಾಕುವ ಶಕ್ತಿ ಮಾನವನಿಗೆ ಇದೆ ಎಂಬುದನ್ನು ಆರಂಭದ ಹಂತದಿಂದಲೂ ಅಧ್ಯಯನಗಳು ಕಂಡುಕೊಂಡಿವೆ. ಮನುಷ್ಯ ತಾನು ರೂಪಿಸಿಕೊಂಡಿರುವ ಸಂಸ್ಕೃತಿಯನ್ನು ಪ್ರಾಣಿಸಂಕುಲಕ್ಕೆ ಹೋಲಿಸಿದರೆ ಪ್ರಾಣಿಗಳಿಗೆ ಸಂಸ್ಕೃತಿಯಿಲ್ಲ. ಮನುಷ್ಯ ಸಾಕುಪ್ರಾಣಿಗಳನ್ನು ಸಾಕಿ ಅವುಗಳೊಟ್ಟಿಗೆ ವಾಸಿಸುವುದನ್ನು ಕಲಿತನು. ಪ್ರಾಣಿಗಳಿಂದ ಬೇರ್ಪಡಿಸುವ ಮಾನವನ ಒಂದೇ ಒಂದು ಗುಣವೆಂದರೆ ಸಂಸ್ಕೃತಿ. ಆದ್ದರಿಂದಲೇ ಸಂಸ್ಕೃತಿ ಇಲ್ಲದ ಮನುಷ್ಯನನ್ನು ಪಶುಸಮಾನವೆಂದು ಸಾಮಾನ್ಯವಾಗಿ ವಾಡಿಕೆಯಲ್ಲಿ ಕರೆಯುತ್ತಾರೆ. ಹಾಗಾಗಿ ಮನುಷ್ಯ ಬುದ್ಧಿಜೀವಿ ಎಂದು ಮಾನವಶಾಸ್ತ್ರಜ್ಞರು ತಮ್ಮ ಅಧ್ಯಯನದಲ್ಲಿ ಗುರುತಿಸಿದ್ದಾರೆ.

ಠಾಕೂರರು ಒಂದು ಕಡೆ 'ಸಂಸ್ಕೃತಿ ಎಂಬುದು ಮನೋಮಯ ಜೀವನ' ಎಂದಿದ್ದಾರೆ. ಅಂದರೆ ಒಂದು ಜನಾಂಗದ ಮಾನಸಿಕ ಸಾಧನೆ ಎಂಬ ವಿಭಿನ್ನ ಆಯಾಮದಲ್ಲಿ ಅರ್ಥಮಾಡಿಕೊಳ್ಳಬೇಕಾಗುತ್ತದೆ. ಸಂಸ್ಕೃತಿ ಚಿಂತಕರಾದ ಟಿ.ಎಸ್ ಎಲಿಯಟ್ ವಾದವನ್ನು ಸೈದಾಂತಿಕ

ಚೌಕಟ್ಟಿನಲ್ಲಿ ಗಮನಿಸಿದರೆ ತಳಸ್ಪರ್ಶಿ ಸಂಸ್ಕೃತಿಯ ಚರ್ಚೆಗೆ ಗ್ರಾಸವಾಗುವುದು. ಹಾಗೆಯೇ ಸ್ವಲ್ಪ ಮಟ್ಟಿಗೆ ಭಿನ್ನವಾದುದು. ಸಂಸ್ಕೃತಿಯನ್ನುಗುರುತಿಸುವುದೇ ಒಂದು ಸಮಾಜದ ಅಥವಾ ಗುಂಪಿನ ಮಧ್ಯೆ ಅವರ ಜೀವನ ವಿಧಾನದಲ್ಲಿ ಕಂಡು ಬರುತ್ತದೆ. ಹಾಗಾಗಿಯೇ ಇದು ಒಂದು ಜನಾಂಗದ ಸಮಸ್ಥ ಕ್ರಿಯೆಗಳನ್ನು, ಅಭಿರುಚಿಗಳನ್ನು ಒಳಗೊಳ್ಳುತ್ತದೆ. ಸಂಸ್ಕೃತಿ ಹುಟ್ಟಿನಿಂದ ಬರುವುದಿಲ್ಲ ಮನುಷ್ಯ ತಾನು ಬೆಳೆಯುವ ಸಮುದಾಯದ ಆಚರಣೆಯ ಕ್ರಮಗಳನ್ನು ಜೀರ್ಣಿಸಿಕೊಂಡು ಅನುಸರಿಸುತ್ತಾನೆ. ಉದಾಹರಣೆಗೆ ಭಾಷೆ, ಉಪಕರಣಗಳ ತಯಾರಿಕೆ, ಕಲೆ, ವಿಜ್ಞಾನ, ಕಾನೂನು, ಆಡಳಿತ, ನೀತಿ, ಧರ್ಮ ಇತ್ಯಾದಿಗಳೆಲ್ಲವು ಸಂಸ್ಕೃತಿಯ ಭಾಗವೆ ಆಗಿವೆ.

ಪ್ರಸ್ತುತ ಅಧ್ಯಯನವು ಮಧ್ಯಕರ್ನಾಟಕಕ್ಕೆ ಹೊಂದಿಕೊಂಡಿರುವ ಚಿತ್ರದುರ್ಗ ಜಿಲ್ಲೆಯನ್ನು ಕೇಂದ್ರೀಕರಿಸಿದೆ. ಇದು ಪರಂಪರಾಗತವಾಗಿ ಐತಿಹಾಸಿಕ ಹಿನ್ನಲೆಯುಳ್ಳ ಜಿಲ್ಲೆಯಾಗಿದೆ. ಈ ಜಿಲ್ಲೆಯಲ್ಲಿ  ನೆಲೆಯೂರಿರುವ ಕಾಡುಗೊಲ್ಲ ಮತ್ತು ಮ್ಯಾಸಬೇಡ ಹಟ್ಟಿಗಳ ಸಂಸ್ಕೃತಿ ಬಗ್ಗೆ ಅಧ್ಯಯನವನ್ನು ಕೇಂದ್ರಿಕರಿಸಲಾಗಿದೆ. ಹಾಗೆಯೇ ಚಿತ್ರದುರ್ಗ ಜಿಲ್ಲೆಯಲ್ಲಿ ಬಹುಬಗೆಯ ಹಟ್ಟಿಗಳು ಹಿಂದಿನಿಂದಲೂ ನೆಲೆಸಿಕೊಂಡು ಬಂದಿವೆ. ಅವು ಇಂದಿಗೂ ತನ್ನ ಜೀವಂತಿಕೆಯಿಂದ ನೆಲೆನಿಂತಿವೆ. ಅವುಗಳಲ್ಲಿ ಕೊರಚರ ಹಟ್ಟಿ, ಯಳವರಹಟ್ಟಿಯಂತಹ ಬಹುಬಗೆಯ ಹಟ್ಟಿಗಳು ಇರುವುದನ್ನು ಕಾಣಬಹುದು.

ಪ್ರಸ್ತುತ ಅಧ್ಯಯನವು ಪ್ರಮುಖವಾಗಿ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಅವರದೇ ಆಗಿರುವ ರಚನಾತ್ಮಕವಾದ ಜೀವನಕ್ರಮ ಹೊಂದಿದ್ದಾರೆ. ಅವರನ್ನು ಅಧ್ಯಯನಕ್ಕೊಳಪಡಿಸಿ ಪಾರಂಪರಿಕ ಜನಜೀವನವನ್ನು ಹೇಗೆ ಉಳಿಸಿಕೊಂಡು ಬಂದಿದ್ದಾರೆಂಬುದನ್ನು ಶೋಧಿಸಲು ಸಾಧ್ಯವಿದೆ. ಅವರು ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೇಗೆ ಮೆರೆದಿದ್ದಾರೆಂಬುದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದೆ. ಕಾಲ ಕ್ರಮಿಸಿದ ಆಗೆಲ್ಲ, ಕ್ರಮಿಸುವ ಕಾಲದಲ್ಲಿ ಆಗಿರುವ ಸ್ಥಿತ್ಯಂತರಗಳು (ಪಲ್ಲಟಗಳು) ಏನು ಎಂಬುದನ್ನು ತಿಳಿಯಲು ಪ್ರಯತ್ನಿಸಲಾಗಿದೆ. ಕೃಷ್ಣಮೂರ್ತಿ ಹನೂರುರವರು 'ಮಲೆನಾಡು ಜಾನಪದ'ಎಂಬ ಅಧ್ಯಯನದಲ್ಲಿ ಬೇಡರು, ಗೊಲ್ಲರು ಮತ್ತು ಲಂಬಾಣಿಗಳ ಸಾಂಸ್ಕೃತಿಕ ಜೀವನವನ್ನು ಕುರಿತು  ಅಧ್ಯಯನ ಮಾಡಿದ್ದಾರೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರು ಜಿಲ್ಲೆಯಾದ್ಯಂತ ಹಲವು ಭಾಗಗಳಲ್ಲಿ  ನೆಲೆಸಿದ್ದಾರೆ. ಪ್ರಮುಖವಾಗಿ ಪ್ರಸ್ತುತ ಅಧ್ಯಯನವು ಹಟ್ಟಿಗಳ ಮೂಲ, ಬೆಳವಣಿಗೆ, ಹಟ್ಟಿಗಳನ್ನು ಕಟ್ಟಿಕೊಂಡಿರುವ ಬಗೆ, ತಮ್ಮ ಸಮುದಾಯದ ಸಾಂಸ್ಕೃತಿಕ ವೀರರ ರೀತಿ ನೀತಿಗಳು ಮತ್ತು ಕಟ್ಟಳೆಗಳೊಂದಿಗೆ ಹೇಗೆ ಜೀವನವನ್ನು ರೂಪಿಸಿಕೊಂಡರು ಎಂಬುದನ್ನು ಕೇಂದ್ರಿಕರಿಸುತ್ತದೆ. ಈ ಎರಡೂ ಸಮುದಾಯಗಳು ೧) ಚಿತ್ರದುರ್ಗ ೨) ಹೊಳಲ್ಕೆರೆ ೩) ಹೊಸದುರ್ಗ ೪) ಹಿರಿಯೂರು ೫) ಚಳ್ಳಕೆರೆ ೬)ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ವ್ಯಾಪಕವಾಗಿ ನೆಲೆಸಿರುವುದನ್ನು ಕಾಣುತ್ತೇವೆ. ಹಟ್ಟಿ ಸಂಸ್ಕೃತಿಯ ಕೇಂದ್ರಗಳು ಇಲ್ಲಿ ನೆಲೆಸಿರುವುದನ್ನು ಅಧ್ಯಯನದಿಂದ ತಿಳಿಯಬಹುದು. ಮ್ಯಾಸಬೇಡರು ಚಿತ್ರದುರ್ಗ, ಚಳ್ಳಕೆರೆ, ಮೊಳಕಾಲ್ಮೂರು, ಪ್ರದೇಶಗಳಲ್ಲಿ ವಾಸವಾಗಿರುವುದನ್ನು, ಇನ್ನುಳಿದ ಹಿರಿಯೂರು, ಹೊಳಲ್ಕೆರೆ, ಹೊಸದುರ್ಗ ತಾಲ್ಲೂಕುಗಳಲ್ಲಿ ಸಾಧಾರಣವಾಗಿರುವುದನ್ನು

ಗಮನಿಸಬಹುದು. ಹಟ್ಟಿಗಳ ಜೀವನಾವರ್ತಕ ಆಚರಣೆಗಳಾದ ಜನನ, ನಾಮಕರಣ, ಋತುಮತಿ, ವಿವಾಹ, ಸೀಮಂತ, ಮರಣ ಇವುಗಳಲ್ಲಿ ತಮ್ಮ ಸಮುದಾಯವುಕಟ್ಟಿಕೊಂಡಿರುವ ಸಂಪ್ರದಾಯ ಬದ್ಧವಾದ ನೀತಿನಿಯಮ ಕಟ್ಟಳೆಗಳೊಂದಿಗೆ ಹೇಗೆ ಮಿಳಿತಗೊಂಡಿದ್ದಾರೆಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ಸ್ಪಷ್ಟವಾಗಿ ತಿಳಿಯಲು ಪ್ರಯತ್ನಿಸಿದೆ. ಗ್ರಾಮಗಳಿಗೆ ಹೊಂದಿಕೊಂಡಂತೆ ಹಟ್ಟಿಗಳಲ್ಲಿ ವಾಸವಾಗಿರುವ ಕಾಡುಗೊಲ್ಲರು ಮತ್ತು ಮ್ಯಾಸಬೇಡರು ಇಂದೂ ಸಹ ಎಷ್ಟು ಕಠಿಣ ನಿಯಮಗಳನ್ನು ಆಚರಿಸುತ್ತಿದ್ದಾರೆ. ಈ ಎರಡು ಬುಡಕಟ್ಟು ಸಮುದಾಯಗಳು ಮಿಕ್ಕುಳಿದ ಸಮುದಾಯಗಳಿಗಿಂತ ಗುರುತಿಸುವಷ್ಟರ ಮಟ್ಟಿಗೆ ಪರಂಪರಾನುಗತವಾಗಿ ತಮ್ಮ ಸಂಸ್ಕೃತಿಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ ಎಂಬುದು ಅಧ್ಯಯನಗಳಿಂದ ತಿಳಿದುಬಂದಿದೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರು ತಮ್ಮ ಸಾಂಸ್ಕೃತಿಕ ಪರಂಪರೆಯನ್ನು ಜೀವಂತಿಕೆಯಾಗಿ ರೂಡಿಸಿಕೊಂಡಿರುವ ಇವರು ತಮ್ಮ ಸಾಂಸ್ಕೃತಿಕ ವೀರರ ಆದರ್ಶ ಜೀವನದ ಹಾದಿಯಲ್ಲಿ ಮುಂದುವರಿಯುತ್ತಿದ್ದಾರೆ. ಕಾಡುಗೊಲ್ಲರ ಎತ್ತಪ್ಪ, ಜುಂಜಪ್ಪ ಇವರಿಬರೂ ಕಾಡುಗೊಲ್ಲರ ಸಂಸ್ಕೃತಿಗೆ ಿಡಿದ ಕನ್ನಡಿಯಂತೆ ಖಚಿತವಾಗಿರುವುದು ಅಧ್ಯಯನಗಳಿಂದ ತಿಳಿದು ಬರುತ್ತದೆ. ಎತ್ತಪ್ಪನಂತೂ ಕಾಡುಗೊಲ್ಲರಿಗೆ ಸಂವಿಧಾನದಂತಹ ಕಟ್ಟುಪಾಡುಗಳ ಚೌಕಟ್ಟು ರೂಪಿಸಿದವನು. ಈ ತರಹದ ನಿಯಮಗಳನ್ನು ರೂಪಿಸಿರುವುದಕ್ಕೆ ■ತ್ತಪ್ಪನ ಕಟ್ಟು" ಎನ್ನುತ್ತಾರೆ. ಮ್ಯಾಸಬೇಡರಲ್ಲಿಯೂ ಯರಮಂಚಿನಾಯಕ, ಗಾದರಿಪಾಲನಾಯಕ, ಜಗಳೂರು ಪಾಪನಾಯಕ, ದಡ್ಡಿಸೂರನಾಯಕ ಎನ್ನುವ ಉಪಪಂಗಡಗಳನ್ನು ಕಟ್ಟಿಕೊಂಡು ಸಾಂಸ್ಕೃತಿಕ ನಾಯಕರ ಸಾಮುದಾಯಿಕ ಜೀವನ ಹೆಣೆದುಕೊಂಡಿರುವುದನ್ನು ಅಧ್ಯಯನಕಾರರು ಗುರುತಿಸಿದ್ದಾರೆ. ಈ ಸಾಂಸ್ಕೃತಿಕ ನಾಯಕರು ತಮ್ಮ ಸಮುದಾಯದ ಕುಲ ಪದ್ಧತಿಗಳನ್ನು ಮತ್ತು ಆಚರಣೆಗಳನ್ನು ಆಚರಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಹಟ್ಟಿಸಂಸ್ಕೃತಿ ಮತ್ತು ಪರಂಪರೆಯನ್ನು ಅವರ ನಂಬಿಕೆಗಳು, ಆಚರಣೆಗಳು, ಸಂಪ್ರದಾಯಗಳು, ಹಬ್ಬಗಳು, ಜಾತ್ರೆಗಳು ಇವುಗಳ ನೆಲೆಯಿಂದ ವಿಶ್ಲೇಷಿಸುವುದು ಮುಖ್ಯ ಅಧ್ಯಯನಕಾರರಾದ ಶೀ.ನಂ.ಶಂಕರನಾರಾಣರವರು ೧೯೭೮ರಲ್ಲಿ ಮಂಡಿಸಿದ ಪ್ರಬಂಧ ■ಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು" ಎಂಬುದರಲ್ಲಿ ಕಾಡುಗೊಲ್ಲರ ಬದುಕಿನ ಚಿತ್ರಣವನ್ನು ಸಂಶೋಧನೆಯ ಮೂಲಕ ಹೊರತಂದಿದ್ದಾರೆ. ಎಸ್.ಕೆ.ಸಣ್ಣೋಬಯ್ಯರವರು ಕಾಡುಗೊಲ್ಲ ಮತ್ತು ಮ್ಯಾಸಬೇಡರ ಎರಡೂ ಬುಡಕಟ್ಟುಗಳ ಆಳವಾದ ಅಧ್ಯಯನದೊಂದಿಗೆ ಎರಡೂ ಸಮುದಾಯಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿದ್ದಾರೆ. ಈ ಅಧ್ಯಯನದಿಂದ ಕಂಡು ಬಂದ ಅಂಶವೆಂದರೆ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಹೆಚ್ಚು ಕಡಿಮೆ ಒಂದೇ ತೆರನಾದ ಹಬ್ಬಗಳನ್ನು ಆಚರಿಸುತ್ತಾರೆ. ಗುಗ್ಗರಿ ಹಬ್ಬ, ದೀವಳಿಗೆ, ಶಿವರಾತ್ರಿ ಹಟ್ಟಿಹಬ್ಬಗಳು ಈ ಸಮುದಾಯಗಳಲ್ಲಿ ಪ್ರಮುಖವಾಗಿ ಆಚರಿಸುವುದು ಕಂಡು ಬಂದಿವೆ. ಈ ಎರಡೂ ಬುಡಕಟ್ಟುಗಳಲ್ಲಿ ದೈವಿಕ ತಾಣಗಳು, ಜಾತ್ರೆ ಉತ್ಸವಗಳು ತುಂಬಾ ಮುಖ್ಯವಾದವು. ಜಾತ್ರೆಗಳಲ್ಲಿ ದೇವರಿಗೆ ಹರಕೆ ತೀರಿಸುವುದು ಹಾಲುಮೀಸಲು ಕೊಡುವುದು, ದೇವರನ್ನು ಹೊಳೆಗೆ ಕೊಂಡೊಯ್ಯುವುದು ಇತ್ಯಾದಿ ಕಾರ್ಯಕ್ರಮಗಳು ಮುಖ್ಯವಾದವು. ಕಾಡುಗೊಲ್ಲರು ಆಚರಿಸುವ ದೇವರುಗಳಾದ ಕ್ಯಾತಪ್ಪ, ಎತ್ತಪ್ಪ,

ಜುಂಜಪ್ಪ, ಗೌರಸಂದ್ರ ಮಾರಕ್ಕ, ಪುರ್ಲಹಳ್ಳಿ ಭೂತಪ್ಪ ದೇವರುಗಳು ಕಂಡುಬರುತ್ತವೆ. ಮ್ಯಾಸಬೇಡರಲ್ಲಿ ಕಂಪಳರಂಗ, ಗೌರಸಂದ್ರ ಮಾರಕ್ಕ, ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ ದೇವರುಗಳನ್ನು ಪೂಜಿಸುವುದು ಕಾಣಬುತ್ತದೆ. ಹೀಗೆ ಚಿತ್ರದುರ್ಗ ಜಿಲ್ಲೆ ಬಯಲುಸೀಮೆಯ ಪ್ರದೇಶವಾಗಿದ್ದು ಸಾಂಪ್ರದಾಯಕವಾಗಿ ಹಬ್ಬ, ಜಾತ್ರೆಗಳು ನಿರಂತರವಾಗಿ ನಡೆಯುತ್ತಲೆ ಇರುತ್ತವೆ. ಹಟ್ಟಿಯ ಹಿನ್ನಲೆಯಲ್ಲಿ ಇವರ ಸಂಸ್ಕೃತಿಯನ್ನು ಅವಲೋಕಿಸುವುದಾದರೆ ಹಟ್ಟಿ ಹಬ್ಬಗಳು ವಿಶೇಷವಾಗಿ ಪಶುಪಾಲಕ ಸಂಸ್ಕೃತಿಯಿಂದ ಬಂದ ಇವರು ದನ ಕರುಗಳಿಗೆ ವಿಶೇಷ ಸ್ಥಾನವನ್ನು ಕೊಟ್ಟು ಪೂಜಿಸುತ್ತಾರೆ. ಇವರ ಸಾಮಾಜಿಕ ವ್ಯವಸ್ಥೆಯು ಹಟ್ಟಿಯಿಂದ ಕೂಡಿದ್ದು ತಮ್ಮ ಬದುಕನ್ನು ಅದರಲ್ಲಿ ಕಟ್ಟಿಕೊಂಡಿರುವುದರಿಂದ ಇವರಲ್ಲಿ ಐಕ್ಯತೆ ಹೆಚ್ಚಾಗಿದ್ದು ವಸತಿ ವ್ಯವಸ್ಥೆಯು ವಿಶೇಷವಾಗಿರುತ್ತದೆ. ಇವರು ವಾಸಿಸುವ ಪ್ರದೇಶಗಳಿಗೆ ಸಂಬಂಧಿಸಿದಂತೆ ಇವರ ಸ್ಥಳವಾದ ಗುಡಿಸಲು ಕೆಳಗಿನಿಂದ ಅರ್ಧ ಭಾಗಕ್ಕೆ ಚೌಕಾಕಾರದ ಗೋಡೆಯಿದ್ದು, ಮೇಲ್ಭಾಗಕ್ಕೆ ತ್ರಿಕೋನಾಕಾರದಲ್ಲಿ ಆಪಿನಿಂದ ಹೊದಿಸಿದ ಮೇಲ್ಛಾವಣಿ ಇದ್ದು ಚಿಕ್ಕ ಬಾಗಿಲಿನಿಂದ ಕೂಡಿದ ವಸತಿ ವ್ಯವಸ್ಥೆಯಾಗಿ ಕಂಡು ಬರುವುದು.

ಶಿಕ್ಷಣ, ಕೈಗಾರಿಕಾಕ್ರಾಂತಿ, ವಿಜ್ಞಾನ, ತಂತ್ರಜ್ಞಾನದ ಆವಿಷ್ಕಾರ, ಜಾಗತೀಕರಣ ಹಾಗೂ ಆಧುನಿಕರಣದ ಅಲೆ ಹೊಸ ಹೊಸ ಉದ್ಯೋಗಗಳನ್ನು ಸೃಷ್ಟಿಸಲು ಸಾದ್ಯವಾಯಿತು. ಜಾಗತೀಕರಣ, ನಗರೀಕರಣ, ಆಧುನಿಕರಣ ಮತ್ತು ಶಿಕ್ಷಣ ಉದ್ಯೋಗಗಳನ್ನು ನೀಡುವ ನೆಪದಲ್ಲಿ ಹಟ್ಟಿ ಸಂಸ್ಕೃತಿಯನ್ನು ಸೆಳೆದಿವೆ. ಇದರಿಂದ ಹಟ್ಟಿ ಸಂಸ್ಕೃತಿ ತನ್ನ ಚಲನೆಯ ವೇಗವನ್ನು ಹೆಚ್ಚಿಸಿರುವುದನ್ನು ಬಹು ಬಗೆಯ ಅಧ್ಯಯನಗಳು ಗುರುತಿಸಿವೆ. ಕಾಲ ಗತಿಸಿದಂತೆ ಸ್ಥಿತ್ಯಂತರಗೊಳಗಾಗಿ ಪಲ್ಲಟಗಳನ್ನೊಂದಿದ ಯುವ ಪೀಳಿಗೆ ಸ್ವಲ್ಪ ಮಟ್ಟಿನ ಬದಲಾವಣೆ ಬಯಸುತ್ತದೆ. ಈ ಎಲ್ಲದರ ಹಿನ್ನಲೆಯಲ್ಲಿ ಪಾರಂಪರಿಕ ಕಸುಬು,ನಂಬಿಕೆಗಳು, ಆಚರಣೆಗಳು, ಕುಲಾಚಾರದ ಪದ್ಧತಿಗಳು, ವಿವಾಹ, ಸಂಪ್ರದಾಯಗಳು, ನಾಟಿ ಔಷಧಿ, ಉಡುಗೆ ತೊಡುಗೆಗಳು, ಅವರದೇ ಆಗಿರುವ ಆಡಳಿತ ವ್ಯವಸ್ಥೆ ಎಲ್ಲವೂ ಸ್ವಲ್ಪ ಮಟ್ಟಿಗೆ ಬದಲಾವಣೆಗೊಂಡಿರುವುದು ಕಂಡುಬಂದಿದೆ. ಒಂದು ಕಡೆ ಹಟ್ಟಿಯ ಸಾಂಪ್ರದಾಯಕ ಪೀಳಿಗೆ ಸಂಪ್ರದಾಯಿಕವಾಗಿಯೂ ತನ್ನ ಇರುವಿಕೆಯನ್ನು ಉಳಿಸಿಕೊಳ್ಳದೆ ಸಾಂಸ್ಕೃತಿಕ ಹಿಂಬೀಳಿಕೆ ಹಂತಕ್ಕೆ ತಲುಪಿರುವುದನ್ನು ಕಾಣಬಹುದು. ಹಟ್ಟಿ ಸಂಸ್ಕೃತಿ ಅತಂತ್ರ ಸ್ಥಿತಿಯಾಗಿ ಕಿಂಚಿತ್ತು ಬದಲಾವಣೆಯಾಗಿದೆಯೇ ಹೊರತು ಕೆಲವೊಂದು ಮೂಲ ಆಚರಣೆಗಳನ್ನು ಪಾಲಿಸುತ್ತಿರುವುದು ಕಂಡು ಬರುತ್ತದೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ದೇವರ ಮೇಲಿನ ಅತೀವ ಶ್ರದ್ಧೆ, ತಮ್ಮ ಮೂಲ ಪುರುಷರ ಮೇಲಿನ ನಂಬಿಕೆಗಳು ಇನ್ನೂ ಹಟ್ಟಿ ಸಂಸ್ಕೃತಿಯಲ್ಲಿ ಗಟ್ಟಿಯಾಗಿವೆ. ಹಟ್ಟಿಗಳಲ್ಲಿನ ಕೆಲವು ಪ್ರಕಾರದ ಕಲೆ ಮತ್ತು ಸಾಹಿತ್ಯ ತುಂಬಾ ಶ್ರೀಮಂತಿಕೆಯಿಂದ ಕೂಡಿವೆ. ಸಾಮಾನ್ಯವಾಗಿ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಕೋಲಾಟ, ಭಜನೆ, ಕಥೆಗಳು, ಪುರಾಣಗಳು, ಮೌಖಿಕಸಾಹಿತ್ಯ ತುಂಬಾ ಪ್ರಸಿದ್ಧಿಯಾದ ಕಲೆಯಾಗಿ ಇಂದಿಗೂ ಮುಂದುವರಿದುಕೊಂಡು ಬಂದಿವೆ. ಮಕ್ಕಳ ಕೋಲಾಟ, ಜಡೆಕೋಲು, ದೇವರ ಮೇಲಿನ ಹಾಡುಗಳು, ಸೋಬಾನೆ ಪದಗಳು, ಮದುವೆಯ

ಸಂಧರ್ಭದಲ್ಲಿ ಹಸೆ ಬರೆಯುವಾಗ ಹಾಡುವ ಹಾಡುಗಳು, ದೇವರು ಹೊಳೆಗೆ ಹೋಗುವಾಗ, ಮದಲಿಂಗನ ಮಾಡುವಾಗ ಕಟ್ಟಿ ಹಾಡುವ ಹಾಡುಗಳು ಇಂದಿಗೂ ಅವರ ಸಾಂಸ್ಕೃತಿಕ ಅಸ್ಮಿತೆಯನ್ನು ಪ್ರತಿನಿಧಿಸುತ್ತವೆ.

ಚಿತ್ರದುರ್ಗದ ಕಾಡುಗೊಲ್ಲರ ಹಟ್ಟಿಗಳಲ್ಲಿ ಜನಪದ ಸಾಹಿತ್ಯವು ಇಂದಿಗೂ ಶ್ರೀಮಂತವಾಗಿದೆ. ಸಿರಿಯಜ್ಜಿಯಂತಹವರು ಹಾಗೂ ಯರಬಳ್ಳಿಯ ಈರಣ್ಣನಂತವರು ಕಟ್ಟಿ ಹಾಡಿದ ಜನಪದ ಸಾಹಿತ್ಯ ಇಂದಿಗೂ ಜೀವಂತವಾಗಿದೆ. ಗೊಲ್ಲರಹಟ್ಟಿ ಮತ್ತು ಮ್ಯಾಸಬೇಡರ ಹಟ್ಟಿಗಳಲ್ಲಿ ಜನಪದ ಸಾಹಿತ್ಯವನ್ನು ಪೋಷಿಸುತ್ತಾ, ಹಾಡುತ್ತಾ ಇರುವ ಜನಪದರು ಸಾಕಷ್ಟು ಸಂಖ್ಯೆಯಲ್ಲಿ ಇರುವುದು ಕಂಡುಬಂದಿದೆ.

ತೀ.ನಂ.ಶಂಕರನಾರಾಯಣರವರು ೧೯೭೮ ರಲ್ಲಿ ಕೈಗೊಂಡ ಅಧ್ಯಯನದಲ್ಲಿ ವಿಭಿನ್ನವಾದ ಆಯಾಮಗಳಲ್ಲಿ ಅಧ್ಯಯನ ಮಾಡಿದ್ದರೂ ಹಟ್ಟಿ ಸಂಸ್ಕೃತಿಯ ಸಾಮಾಜಿಕ ಚಲನೆಯ ಬಗ್ಗೆ, ಸ್ಥಿತ್ಯಂತರದ ಸ್ವರೂಪಗಳ ಬಗ್ಗೆ ಎಲ್ಲಿಯೂ ಪ್ರಸ್ತಾಪಿಸಿರುವುದಿಲ್ಲ ಎನ್ನುವುದು ಅವರೇ ಕಟ್ಟಿಕೊಟ್ಟ ಅಧ್ಯಯನದಲ್ಲಿ ಕಂಡುಬಂದಿದೆ.

ಪಾರಂಪರಿಕ ಕುಲ-ಕಸುಬುಗಳು ತುಂಬಾ ಕಡಿಮೆಯಾಗುತ್ತಿವೆ, ಪಶುಪಾಲನೆಯಂತಹ ಮೂಲವೃತ್ತಿಯೂ ಸಹ ಕಡಿಮೆಯಾಗುತ್ತಿದೆ. ಅವರು ಜೀವನೋಪಾಯಕ್ಕಾಗಿ ಕೃಷಿಯನ್ನು ಮಾಡುತ್ತಾ ಈ ಸಮುದಾಯಗಳು ಒಂದೆಡೆ ಸ್ಥಿರವಾಗಿ ನೆಲೆ ನಿಂತು ಜೀವನ ನಿರ್ವಹಿಸುತ್ತಿವೆ. ಆದರೂ ಒಂದು ಕಡೆ ಪಶುಸಾಕಾಣಿಕೆ ಮತ್ತು ಕುರಿಸಾಕಾಣಿಕೆಯನ್ನು ಬಿಟ್ಟಿಲ್ಲದಿರುವ ಅಂಶ ಕಂಡು ಬರುತ್ತದೆ. ಜಾಗತೀಕರಣದ ಇದೇ ಸಂದರ್ಭದಲ್ಲಿ ಕಾಡು, ಗೋಮಾಳಗಳು ನಶಿಸುತ್ತಿದ್ದು ಕಾಡನ್ನು ಕೃಷಿಭೂಮಿಯನ್ನಾಗಿ, ಕೈಗಾರಿಕೋದ್ಯಮಕ್ಕೆ ಬಳಸಿಕೊಳ್ಳುವುದರಿಂದ ಈ ಪಶುಪಾಲಕ ಸಮುದಾಯಗಳು ನಿರಂತರವಾಗಿ ವಲಸೆಹೋಗುವುದು ಅನಿವಾರ್ಯವಾಗಿದ್ದು, ಅಲೆಮಾರಿ ಜೀವನ ನಡೆಸುತ್ತಿರುವುದು ಕೂಡ ಕಂಡುಬಂದಿದೆ.

ಚಿತ್ರದುರ್ಗ ಕರ್ನಾಟಕ ರಾಜ್ಯದ ಒಂದು ಐತಿಹಾಸಿಕ ಹಾಗೂ ಸಾಂಸ್ಕೃತಿಕ ಜಿಲ್ಲೆಯಾಗಿದೆ. ಇದು ಒಟ್ಟು ಜನಸಂಖ್ಯೆಯ ಬಹುಪಾಲು ಬುಡಕಟ್ಟು ಜನರನ್ನು ಒಳಗೊಂಡಿದೆ. ಇತ್ತೀಚಿನ ಅನೇಕ ಅಧ್ಯಯನಗಳ ಮತ್ತು ವರದಿಗಳ ಪ್ರಕಾರ ಕರ್ನಾಟಕ ರಾಜ್ಯದಲ್ಲೇ ಚಿತ್ರದುರ್ಗ ಜಿಲ್ಲೆ ಅತ್ಯಂತ ಕಡಿಮೆ ಮಳೆಬೀಳುವ ಪ್ರದೇಶವಾಗಿದೆ. ಇದರಿಂದಾಗಿ ಸಹಜವಾಗಿಯೇ ಉಷ್ಣಾಂಶ ಹೆಚ್ಚಿದ್ದು ಕೃಷಿಭೂಮಿ ಹೊರತುಪಡಿಸಿದ ಕುರುಚಲು ಆರಣ್ಯಪ್ರದೇಶಗಳಾಗಿ ಮಾರ್ಪಟ್ಟಿರುವುದು ಕಂಡುಬಂದಿದೆ. ಎರಡು ಮೂರು ದಶಕಗಳಿಂದ ಕೃಷಿಯಲ್ಲಿ ಉತ್ಪಾದನೆ ಕಡಿಮೆಯಾಗಿದ್ದು ಹಸಿವು, ಬಡತನ, ಆಹಾರದ ಅಭದ್ರತೆ, ಅಪೌಷ್ಟಿಕತೆ, ನಿರುದ್ಯೋಗದಂತಹ ಸಮಸ್ಯೆಗಳು ದಟ್ಟವಾಗಿ ಕಾಡಿದವು. ಇನ್ನೊಂದೆಡೆ ಶಿಕ್ಷಣ, ಜಾಗತೀಕರಣ, ಕೈಗಾರಿಕರಣ ಮತ್ತು ನಗರೀಕರಣದ ಪ್ರಭಾವದಿಂದಾಗಿ ಹಟ್ಟಿಯಲ್ಲಿ ಹುಟ್ಟಿ ಬೆಳೆಸಿದ ಸಂಸ್ಕೃತಿ ಇಂದು ನಶಿಸುವ ಹಂತ ತಲುಪುತ್ತಿದೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರು ಎಲ್ಲಿ ವಾಸವಾಗಿರುವರು? ಹೇಗೆ ವಾಸವಾಗಿರುವರು? ವಾಸವಾಗಿರುವ ಸ್ಥಳ ಯಾವುದು? ಅವರು ಅಲ್ಲಿಯೇ ಏಕೆ ವಾಸವಾಗಿರುವರು? ಆ ಸ್ಥಳಕ್ಕೂ ಅವರಿಗೂ ಇರುವ ನಡುವಿನ ಸಂಬಂಧ ಏನು? ಎನ್ನುವಂತಹ ಮೂಲಭೂತ ಪ್ರಶ್ನೆಗಳನ್ನು ಎತ್ತಿದರೆ ಅಥವಾ ಗಮನಿಸಿದರೆ ಅವರು ಅರಣ್ಯಗಳ ಅಂಚಿನಲ್ಲಿ, ಬೆಟ್ಟ, ಗುಡ್ಡದಂತಹ ಕಣಿವೆ ಪ್ರದೇಶಗಳಲ್ಲಿ ವಾಸವಾಗಿರುವುದು ಕಂಡು ಬರುತ್ತದೆ. ಈ ಎರಡು ಜನಸಮುದಾಯಗಳು ಹೋಲಿಕೆಯಲ್ಲಿ ನೋಡಿದರೆ ಮೂಲದಲ್ಲಿ ಬಹುಪಾಲು ಒಂದೇ ರೀತಿಯ ಜೀವನ ಪದ್ಧತಿಯನ್ನು ಒಳಗೊಂಡಿರುವುದು ಮೇಲು ನೋಟಕ್ಕೆ ಕಂಡುಬರುತ್ತಿದ್ದು, ಉಡುಗೆ ತೊಡುಗೆ, ಅಕ್ಷರಾಭ್ಯಾಸ, ವೃತ್ತಿ ಮತ್ತು ಜೀವನದ ವಿಧಾನಗಳಲ್ಲಿ ಸಾಮಾಜಿಕ ಚಲನೆ ಹೆಚ್ಚಿರುವುದನ್ನು ಅನೇಕ ಅಧ್ಯಯನಗಳು ಗುರುತಿಸಿರುವುದು ಕಂಡುಬಂದಿದೆ.

ಒಂದು ಕಾಲಘಟ್ಟದಲ್ಲಿ ಶಿಷ್ಟಪರಂಪರೆಯು ಆಚರಿಸುವ ಆಚಾರ, ವಿಚಾರ, ಪಾಲಿಸುವ ಧಾರ್ಮಿಕತೆ, ಹಬ್ಬ ಹರಿದಿನ, ಜಾತ್ರೆ-ಉತ್ಸವಗಳನ್ನು ನಡೆಸಿಕೊಂಡು ಬಂದಿರುವುದು ಈಗಲೂ ಮುಂದುವರೆಸುತ್ತಿರುವುದನ್ನು ಸಮಕಾಲಿನ ಅನೇಕ ಅಧ್ಯಯನಕಾರರು ಗುರುತಿಸಿದ್ದಾರೆ. ಅವರುಗಳಲ್ಲಿ ಪ್ರಮುಖರೆಂದರೆ ರಹಮತ್ ತರಿಕೆರೆಯವರು ಮಾಡಿದ ಸಾಂಸ್ಕೃತಿಕ ಅಧ್ಯಯನ, ಚಲುವರಾಜುರವರ ಜುಂಜಪ್ಪ-ಬುಡಕಟ್ಟು ಮಹಾಕಾವ್ಯಮಾಲೆ, ಮೀರಾಸಾಬಿಹಳ್ಳಿ ಶಿವಣ್ಣರವರ ಕಾಡುಗೊಲ್ಲ ಬುಡಕಟ್ಟು ವೀರರು, ಮಲ್ಲಿಕಾರ್ಜುನ ಕಲಮರಹಳ್ಳಿರವರ ಗೊಲ್ಲರ ಇತಿಹಾಸ ಕಥನ, ಎ. ಎಸ್ ಪ್ರಭಾಕರರವರ ಆದಿವಾಸಿ ಆಖ್ಯಾನ, ತೀ.ನಂ.ಶಂಕರನಾರಾಯಣರವರ ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು ಹೀಗೆ ಅನೇಕ ವಿದ್ವಾಂಸರು ತಮ್ಮ ಅಧ್ಯಯನಗಳಲ್ಲಿ ಕಾಡುಗೊಲ್ಲರ ಮತ್ತು ಮ್ಯಾಸಬೇಡರ ಸಂಸ್ಕೃತಿ ಮತ್ತು ಪರಂಪರೆಯನ್ನು ವಿಭಿನ್ನವಾಗಿ ವಿಶ್ಲೇಷಿಸುವ ಪ್ರಯತ್ನ ಮಾಡಿದ್ದಾರೆ.

ಚಿತ್ರದುರ್ಗ ಜಿಲ್ಲೆಯಲ್ಲಿ ನಾಗರಿಕತೆ ಮತ್ತು ಆಧುನೀಕರಣ, ಜಾಗತೀಕರಣ, ಶಿಕ್ಷಣದ ಪ್ರಭಾವದಲ್ಲೂ ಹಟ್ಟಿ ಸಂಸ್ಕೃತಿ ಮತ್ತು ಅದರ ಪರಂಪರೆಯ ಭಾಗವಾದ ನಂಬಿಕೆಗಳು, ಮೌಲ್ಯಗಳು, ಹಬ್ಬಗಳು, ಸಂಪ್ರದಾಯಗಳು, ವಿಧಿನಿಷೇಧಗಳು, ಕಲಾರಾಧನೆ, ಸಾಹಿತ್ಯ, ಕಲೆ, ನೃತ್ಯ ಇವುಗಳನ್ನು ಉಳಿಸಿ ಬೆಳಸಿಕೊಂಡು ಬಂದ ಆಚರಣೆಗಳನ್ನು ಹಟ್ಟಿ ಜನರು ಆಚರಿಸುತ್ತಿದ್ದಾರೆಯೇ? ಯಾವ ಆಚರಣೆಗಳನ್ನು ಆಚರಿಸುವರು? ಯಾವ ಪ್ರಮಾಣದಲ್ಲಿ ಆಚರಿಸುವರು? ಅವರ ಆಚರಣೆಯ ಕ್ರಮಗಳು ಬದಲಾಗಿವೆಯೇ ಅಥವಾ ಸ್ಥಿತ್ಯಂತರಗೊಂಡಿವೆಯೇ? ಈ ಬದಲಾವಣೆಗೆ ಅಥವಾ ಸ್ಥಿತ್ಯಂತರವಾಗಲು ಕಾರಣಗಳೇನು? ಎನ್ನುವ ಸತ್ಯಾಸತ್ಯತೆಗಳನ್ನು ಅರ್ಥಮಾಡಿಕೊಳ್ಳಲು ಪ್ರಸ್ತುತ ಅಧ್ಯಯನ ಚಿತ್ರದುರ್ಗ ಜಿಲ್ಲೆಯಲ್ಲಿ ನೆಲೆಸಿರುವ ಹಟ್ಟಿಗಳಲ್ಲಿ ಅಧ್ಯಯನಕ್ಕಾಗಿ ಕೇಂದ್ರೀಕರಿಸಿದೆ.

### ೧.೧ ಹಟ್ಟಿಯ ಸ್ವರೂಪ ಮತ್ತು ಲಕ್ಷಣಗಳು:

ಹಟ್ಟಿಗಳು ಗ್ರಾಮಗಳಿಂದ ಪ್ರತ್ಯೇಕವಾಗಿ ವಾಸಿಸುವ ಗುಂಪು, ಬೇರೆಯವರೊಟ್ಟಿಗೆ ಮತ್ತು ಇತರ ಸಮುದಾಯದೊಂದಿಗೆ ಮಿಳಿತಗೊಳ್ಳದೆ ತಮ್ಮದೇ ಆದ ಜನ ಜೀವನ ಮಾದರಿಯಲ್ಲಿ

ತಮ್ಮದೇ ಆದ ಸಂಸ್ಕೃತಿಯನ್ನು ರೂಢಿಸಿಕೊಂಡಿರುತ್ತವೆ. ಕುಲದೈವವನ್ನು ಆರಾಧಿಸುವ ಮತ್ತು ಅನುಸರಿಸುವ ಹಿನ್ನಲೆಯಲ್ಲಿ ತಮ್ಮದೇ ಆದ ನಂಬಿಕೆಗಳು, ಸಂಪ್ರದಾಯಗಳು, ವಿಧಿ ವಿಧಾನಗಳು, ಕಟ್ಟುಕಟ್ಟಳೆಗಳು, ನ್ಯಾಯ ಪದ್ಧತಿ, ಆಡಳಿತ ವ್ಯವಸ್ಥೆಯನ್ನೊಳಗೊಂಡಿರುವ ತಮ್ಮದೆ ಆಗಿರುವ ಚೌಕಟ್ಟನ್ನು ಕಟ್ಟಿಕೊಂಡಿರುತ್ತಾರೆ. ಬೇರೆಯವರ ಹಂಗು ಇಲ್ಲದೆ ತುಂಬಾ ಸರಳ ಮತ್ತು ಸಾದಾ ಸೀದಾ ಜೀವನವನ್ನು ನಿರ್ವಹಿಸುವರು. ಅವರು ಜೀವನೋಪಾಯಕ್ಕಾಗಿ ಬೇಟೆ, ಪಶುಪಾಲನೆಯ ಬದುಕನ್ನು ನಡೆಸುತ್ತಾರೆ. ಜನಜೀವನ ವಿಕಾಸಗೊಂಡಂತೆಲ್ಲಾ ಕೃಷಿ ಜೀವನವನ್ನು ಅಳವಡಿಸಿಕೊಂಡು ಅವರು ತಮ್ಮ ಕುಲದ ನೀತಿ ನಿಯಮಗಳಿಗೆ ಬದ್ಧರಾಗಿ ತಮ್ಮ ಬದುಕನ್ನು ರೂಪಿಸಿಕೊಂಡಿರುವುದನ್ನು ಕಾಣಬಹುದು. ಹಟ್ಟಿ ಸಂಸ್ಕೃತಿಯ ಹಿನ್ನೆಲೆಯಲ್ಲಿ ರೂಪಿಸಿಕೊಂಡಿರುವ ಅವರ ಸಾಮಾಜಿಕ ಬದುಕಿನ ಸ್ವರೂಪ ಮತ್ತು ಲಕ್ಷಣಗಳನ್ನು ಈ ಕೆಳಕಂಡಂತೆ ಗುರುತಿಸಬಹುದು.

**ಅ. ಪ್ರತ್ಯೇಕವಾಗಿ ವಾಸಿಸುವಿಕೆ:**

ಹಟ್ಟಿಯ ಜನರು ಒಂದು ನಿರ್ದಿಷ್ಟ ಪ್ರದೇಶದಲ್ಲಿ ಪ್ರತ್ಯೇಕವಾಗಿ ವಾಸಿಸುತ್ತಾರೆ. ಕಾರಣ ಅವರಲ್ಲಿರುವ ಬಹುಪ್ರಕಾರದ ನೀತಿ ಮತ್ತು ಸಂಪ್ರದಾಯಗಳು ಮತ್ತು ತಾವು ನಂಬಿಕೊಂಡಿರುವ ಸಂಪ್ರದಾಯಗಳಿಗೆ ಧಕ್ಕೆಯಾಗಬಾರದೆಂದು ಬೇಟೆ, ಪಶುಪಾಲನೆಯನ್ನು ಮಾಡುತ್ತಾ ಪ್ರತ್ಯೇಕವಾಗಿರಲು ಭಾವಿಸುತ್ತಾರೆ. ಭಾರತದಲ್ಲಿನ ಅನೇಕ ಸಮುದಾಯಗಳು ಗುಂಪು ಗುಂಪುಗಳಾಗಿ ಒಂದೆಡೆ ವಾಸಿಸುತ್ತವೆ. ಅದೇ ರಿತಿಯಲ್ಲಿ ಹಟ್ಟಿ ಸಂಸ್ಕೃತಿಯಲ್ಲಿ ಗೊಲ್ಲರನ್ನು ಹೊರತುಪಡಿಸಿದರೆ ಚಿತ್ರದುರ್ಗದಲ್ಲಿ ನಾಯಕರು ಇತರ ಜಾತಿ ಸಮುದಾಯಗಳ ಜೊತೆಯಲ್ಲಿ ವಾಸಿಸುತ್ತಾರೆ. ಸರಾಸರಿಯಾಗಿ ಆ ಸಮುದಾಯವು ಸಹ ಪ್ರತ್ಯೇಕವಾಗಿಯೇ ವಾಸಿಸುತ್ತದೆ. ಇದಕ್ಕೆ ಮತ್ತೊಂದು ಕಾರಣ ಅವರು ಕಟ್ಟಿಕೊಂಡ ಸಾಮುದಾಯಿಕ ಭಾವನೆ ಜನರನ್ನು ಒಂದಡೆ ಸೇರಿಸುತ್ತದೆ. ಇವರು ಪ್ರತ್ಯೇಕವಾಗಿ ವಾಸಿಸುವುದರಿಂದ ಇವರಲ್ಲಿ ಗುರುತಿಸುವ ಮುಖ್ಯ ಗುಣಗಳೆಂದರೆ ರಕ್ಷಣೆ, ಐಕ್ಯತೆ, ಸಾಮುದಾಯಿಕ ಭಾವನೆ ಗಾಢವಾಗಿರುತ್ತದೆ.

**ಆ. ವಿಶಿಷ್ಟ ಹೆಸರು:**

ಬುಡಕಟ್ಟುಗಳಿಗೆ ತನ್ನದೇ ಆದ ಹೆಸರು ಇರುವಂತೆ ಹಟ್ಟಿಯ ಸಮುದಾಯಗಳಿಗೂ ವಿಶಿಷ್ಟವಾದ ಹೆಸರಿರುತ್ತದೆ. ಬುಡಕಟ್ಟುಗಳಿಗೆ ಖಾಸಿ, ಗಾರೋ ತೋಡಾ, ಮುಂಡ, ಸಂತಾಲ ಎಂದು ಹೆಸರಿವೆ. ಚಿತ್ರದುರ್ಗ ಜಿಲ್ಲೆಯಲ್ಲಿ ನೆಲೆಸಿರುವ ಹಟ್ಟಿಗಳಿಗೂ ವಿಭಿನ್ನವಾದ ಹೆಸರುಗಳಿವೆ. ಉದಾಹರಣೆಗೆ ಕಾಡುಗೊಲ್ಲರ ಹಟ್ಟಿ ಮತ್ತು ಮ್ಯಾಸಬೇಡರ ಹಟ್ಟಿ, ಹೀಗೆ ನಿರ್ಧಿಷ್ಟವಾದ ಹೆಸರನ್ನು ಒಳಗೊಂಡಿರುತ್ತವೆ. ಅವರ ಹೆಸರುಗಳೂ ಸಹ ಜಾತಿಯನ್ನು ಅಥವಾ ಆ ಬುಡಕಟ್ಟನ್ನು ಸಂಕೇತಿಸುತ್ತದೆ. ಇದರಿಂದ ತನ್ನ ಮೆರುಗನ್ನು ಹೆಚ್ಚಿಸಿಕೊಂಡಿವೆ. ಕಾಡುಗೊಲ್ಲರಲ್ಲಿ ಕೆಂಜೆಡಿಯ, ಕರಿಯೋಬಿ, ಸಿರಿಯಜ್ಜಿ, ಕ್ಯಾಸಪ್ಪ, ಪಾತಪ್ಪ, ಕಾಟಪ್ಪ, ನಿಂಗವ್ವ ಇಲ್ಲವೆ ದೇವರ ಹೆಸರಿನೊಂದಿಗೆ ತಮ್ಮ ಹೆಸರನ್ನು ತಳಕು ಹಾಕಿಕೊಂಡು ಇಟ್ಟುಕೊಂಡಿರುತ್ತಾರೆ. ಮ್ಯಾಸಬೇಡರಲ್ಲೂ ಪಾಪಯ್ಯ, ಪಾಲನಾಯ್ಕ, ಸೂರಯ್ಯ,

ದೊಡ್ಡಪಾಲಯ್ಯ, ಗಾದ್ರಿಪಾಲನಾಯಕ ಎಂದಿಟ್ಟು ಕೊಳ್ಳುತ್ತಾರೆ. ಹೀಗೆ ಹಟ್ಟಿಯ ಜನರ ಬುಡಕಟ್ಟು ವಿಶಿಷ್ಟ ಹೆಸರನ್ನು ಹೊಂದಿರುತ್ತಾರೆ, ಅದರಲ್ಲೂ ಎಷ್ಟೋ ಹಟ್ಟಿಗಳು ವ್ಯಕ್ತಿಗಳ ಹೆಸರಿನಿಂದಲೂ ಗುರುತಿಸಿಕೊಂಡಿವೆ.

**ಇ. ಸಾಮಾನ್ಯ ಭಾಷೆ:**

ಜಾಗತಿಕ ಮಟ್ಟದಲ್ಲಿ ಸಂಪರ್ಕದ ಮಾಧ್ಯಮವಾಗಿ ಭಾಷೆ ತಲೆ ಎತ್ತಿದೆ. ಹಟ್ಟಿಯವರೂ ಸಹ ಬುಡಕಟ್ಟು ಸಮುದಾಯದವರಾಗಿರುವುದರಿಂದ ಅವರ ಭಾಷೆಯನ್ನು ಹಟ್ಟಿಯನ್ನು ಹೊರತುಪಡಿಸಿದವರು ಅರ್ಥೈಸಿಕೊಳ್ಳುವುದು ಕಷ್ಟ. ಆದರೂ ಕಾಡುಗೊಲ್ಲರು ಸ್ಪಷ್ಟವಾಗಿ ಕನ್ನಡ ಮಾತನಾಡುತ್ತಾರೆ ಮ್ಯಾಸಬೇಡರು ಹೆಚ್ಚಿನದಾಗಿ ತೆಲುಗು ಮಾತನಾಡುತ್ತಾರೆ. ಇವರ ಭಾಷೆಗಳು ಬುಡಕಟ್ಟನ್ನು ಗುರುತಿಸುವಂತಿರುತ್ತವೆ.

**ಈ. ಪೂರ್ವಜರಲ್ಲಿ ನಂಬಿಕೆ:**

ಹಟ್ಟಿಯವರು ತಮ್ಮ ಪೂರ್ವಜರ, ಹಿರಿಯರ ಮೇಲೆ ಅಗಾಧವಾದ ನಂಬಿಕೆಯನ್ನು ಇಟ್ಟಿರುತ್ತಾರೆ ಅವರನ್ನು ದೇವರೆಂದು ಪೂಜಿಸುತ್ತಾರೆ. ತಮ್ಮ ಕುಟುಂಬ, ಕುಲದ ಆಧಾರದ ಮೇಲೆ ಪೂರ್ವಿಕರನ್ನು ಪೂಜಿಸುವ ಕ್ರಮ ಅವರಲ್ಲಿ ಆಚರಣೆಯಲ್ಲಿದೆ. ಸತ್ತ ಹಿರಿಯರನ್ನು ದೇವರೆಂದು ಭಾವಿಸಿ ಹಿರಿಯರಹಬ್ಬದ ಮೂಲಕ ನೆನಪಿಸುವ ಮತ್ತು ಆರಾಧಿಸುವ ಸಲುವಾಗಿ ಆಚರಿಸುವ ಕ್ರಮ ರೂಪಿಸಿಕೊಂಡಿರುತ್ತಾರೆ. ತಮ್ಮ ಸಾಂಸ್ಕೃತಿಕ ನಾಯಕರು ಉಪಯೋಗಿಸುತ್ತಿದ್ದ ವಸ್ತುಗಳನ್ನು ಅಂದರೆ ಕತ್ತಿ, ಬಿಲ್ಲು, ಅಲಗು, ಜಾಗಟೆ, ಬೆತ್ತ, ಈ ರೂಪದಲ್ಲಿ ತಮ್ಮ ಪೂರ್ವಜರನ್ನು ಆರಾಧಿಸುತ್ತಾರೆ.

**ಉ. ರಕ್ತ ಸಂಬಂಧ:**

ಬುಡಕಟ್ಟು ಸಮುದಾಯದಲ್ಲಿ ಕರುಳುಬಳ್ಳಿಯ ಸಂಬಂಧ ಅಥವಾರಕ್ತ ಸಂಬಂಧಕ್ಕೆ ಹೆಚ್ಚಿನ ಮಹತ್ವಕೊಡುತ್ತಾರೆ. ಕುಟುಂಬ, ವಂಶ, ಬಂಧುತ್ವ ಎಲ್ಲವೂ ರಕ್ತ ಸಂಬಂಧದ ಆಧಾರದ ಮೇಲೆಯೇ ರಚಿತವಾಗಿರುತ್ತದೆ. ಅವರಲ್ಲಿ ಭ್ರಾತೃ ಪ್ರೇಮ, ಒಡನಾಡಿತನದ ಭಾವನೆ ಹೆಚ್ಚಾಗಿರುತ್ತದೆ. ರಕ್ತ ಸಂಬಂಧದ ಭಾವನೆ ಅವರಲ್ಲಿ ಮನೆಮಾಡಿರುವುದರಿಂದ ಕುಟುಂಬ, ವಿವಾಹ, ಸಮಾರಂಭ, ಸಹಕಾರದಂತ ರಚನಾತ್ಮಕ ಕಾರ್ಯಗಳಲ್ಲಿ ಇವರು ಬಹಳಷ್ಟು ಪ್ರೀತಿ ಪ್ರೇಮದಿಂದ ವರ್ತಿಸುತ್ತಾರೆ.

**ಊ. ಧಾರ್ಮಿಕ ನಂಬಿಕೆಗಳು:**

ಹಟ್ಟಿ ಸಮುದಾಯದವರಲ್ಲಿ ಧಾರ್ಮಿಕ ನಿಷ್ಠೆ ಹೆಚ್ಚಾಗಿರುತ್ತದೆ. ಇವರು ಮೂಲತಃ ಪ್ರಕೃತಿಯ ಆರಾಧಕರು, ನಿಸರ್ಗದ ಮೇಲೆ ಅಪಾರ ನಂಬಿಕೆ ಇಟ್ಟು ಪೂಜಿಸುತ್ತಾರೆ. ಪ್ರಕೃತಿ ಪೂಜೆ, ಪಿತೃ ಪೂಜೆ, ಕುಲದೇವತಾರಾಧನೆ, ವಸ್ತು ಪೂಜೆ ಹೆಚ್ಚು ಇರುತ್ತದೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಗಂಗೆ, ಗಾಳಿ, ಬೆಂಕಿ, ಭೂಮಿ, ಸೂರ್ಯ, ಚಂದ್ರ, ಮರ, ಗೋವುಗಳು ಎಲ್ಲದರಲ್ಲೂ ದೈವತ್ವವನ್ನು

ಕಾಣುತ್ತಾರೆ. ಹಾಗೆಯೇ ಅಲಗು, ಬವನಾಸಿ, ಬೆತ್ತ, ಇವುಗಳನ್ನು ದೇವರೆಂದು ಭಾವಿಸಿ. ದೈವತ್ವಕ್ಕೇರಿಸಿ ಪೂಜಿಸುವುದು ಕಂಡು ಬರುತ್ತದೆ.

**ಎ. ಆಡಳಿತ ವ್ಯವಸ್ಥೆ:**

ಹಟ್ಟಿ ಸಂಸ್ಕೃತಿಯ ಸ್ವರೂಪದಲ್ಲಿ ಆಡಳಿತ ವ್ಯವಸ್ಥೆಯುಒಂದಾಗಿರುತ್ತದೆ. ಹಟ್ಟಿಗಳಲ್ಲಿ ವಾಸಿಸುವವರು ಸಾರ್ವಜನಿಕ ಸೇವೆ ಮಾಡುವ ಭಾವನೆಯಿಂದ ಕೂಡಿದ್ದಾರೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರ ಹಟ್ಟಿಗಳ ಆಡಳಿತ ವ್ಯವಸ್ಥೆಯಲ್ಲಿ ಸಾಂಪ್ರದಾಯಿಕ ಆಡಳಿತ ಕ್ರಮವಿದ್ದು. ಗೌಡ, ಯಜಮಾನ, ದೊರೆ, ದಾಸಯ್ಯಗಳು, ಕಿಲಾರಿಗಳು, ತಳವಾರ ಎಂದು ಸುವ್ಯವಸ್ಥಿತ ಆಡಳಿತ ದೃಷ್ಟಿಯಿಂದ ಇವರುಗಳ ಆಧಿಕಾರವು ಹಂಚಿಕೆಯಾಗಿರುತ್ತದೆ. ಇವರ ಅಧಿಕಾರವು ಅನುವಂಶೀಯವಾಗಿರಬಹುದು ಇಲ್ಲವೆ ಅವರೇ ಒಬ್ಬ ನಾಯಕನನ್ನು ಆಯ್ಕೆ ಮಾಡುತ್ತಾರೆ. ಪ್ರತಿಯೊಂದು ಶ್ರೇಣಿಯು ಗೌರವ ಹಾಗೂ ಮಹತ್ವವನ್ನು ಹೊಂದಿರುತ್ತದೆ. ಅವರ ದೃಷ್ಟಿಯಲ್ಲಿ ಯಾರು ಮೇಲು ಕೀಳು ಎನ್ನುವ ಭಾವನೆ ಇರುವುದಿಲ್ಲ. ಸಮೂಹದ ಕಲ್ಯಾಣವೆ ಅವರಿಗೆ ಬಹು ಮುಖ್ಯವಾದುದು.

**ಏ. ಸರಳತೆ ಮತ್ತು ಸ್ವಯಂ ಪರಿಪೂರ್ಣತೆ:**

ಹಟ್ಟಿಯ ಸಮೂಹದವರು ತುಂಬ ಸರಳರು ಆಧುನಿಕತೆ ಮತ್ತು ಶಿಕ್ಷಣ ಪೂರ್ವ ದಿನಗಳಲ್ಲಿ ಇವರು ಅನುಸರಿಸುವ ಅತಿಯಾದ ಸಂಪ್ರದಾಯಗಳು ಜಗತ್ತಿನ ವೈವಿಧ್ಯಪೂರ್ಣ ಜೀವನದಿಂದ ಬಹಳ ದೂರವಿರುವಂತೆ. ಊರು ಅಥವಾ ಗ್ರಾಮಗಳಿಂದ ಎರಡು, ಮೂರು ಕಿಲೊ ಮೀಟರ್ ದೂರದಲ್ಲಿ ಹಟ್ಟಿಗಳನ್ನು ಕಟ್ಟಿಕೊಂಡು ಪ್ರತ್ಯೇಕವಾಗಿ ವಾಸಿಸುವ ಇವರು ಆಡಂಬರವಿಲ್ಲದೆ ಜೀವನ ಸಾಗಿಸುತ್ತಿರುವುದು ಕಂಡುಬಂದಿದೆ. ಪ್ರಕೃತಿ ಮತ್ತು ಪ್ರಾಣಿಗಳೊಂದಿಗೆ ಸಾಮರಸ್ಯವನ್ನು ಹೆಣೆದುಕೊಂಡಿರುವುದು ಕಂಡುಬರುವುದು. ಇವರು ಮಾಡುವ ಯಾವುದೇ ಕೆಲಸದಲ್ಲಿ ಸ್ವಯಂ ಪರಿಪೂರ್ಣತೆವುಳ್ಳವರು. ಜೀವನೋಪಾಯಕ್ಕಾಗಿ ಪಶುಪಾಲನೆ, ಬೇಟೆ, ಮೀನು ಹಿಡಿಯುವುದು, ಹಣ್ಣು, ಹಂಪಲು ಸಂಗ್ರಹಿಸುವುದು. ಇತ್ತೀಚಿಗಷ್ಟೆ ಕೃಷಿ ಪದ್ದತಿಮಾಡುತ್ತಿರುವುದು ಕಂಡು ಬಂದಿದೆ. ಆದರೂ ಆರ್ಥಿಕವಾಗಿ ಹಿಂದುಳಿದಿದ್ದು ಬಹುತೇಕರಲ್ಲಿ ಕಡುಬಡತನದಲ್ಲಿರುವುದು ಕಂಡುಬರುತ್ತದೆ. ಕೃಷಿಯ ವೈಫಲ್ಯಗಳು ಮತ್ತು ಸರ್ಕಾರದ ಯೋಜನೆಗಳು ಸರಿಯಾಗಿ ತಲುಪುತ್ತಿಲ್ಲ ಮೂಲಭೂತ ಸೌಲಭ್ಯಗಳ ಕೊರತೆ ಬಹಳಷ್ಟು ಇರುವುದು ಕಂಡು ಬರುತ್ತದೆ. ಈ ಸಮುದಾಯಗಳು ಬದಲಾವಣೆಯ ಅನಿವಾರ್ಯತೆಯಲ್ಲೂ ಸರಳತೆಯನ್ನು ಬಿಟ್ಟು ಹೊರ ಬರಲಿಲ್ಲ. ಅಂದರೆ ಅವರ ಜೀವನೋಪಾಯದ ಮಾದರಿಯೇ ಇದಕ್ಕೆ ನಿದರ್ಶನವಾಗಿದೆ. ಈ ಸರಳ ಜೀವನ ಅವರ ಸ್ವಯಂ ಪರಿಪೂರ್ಣತೆಗೆ ಹಿಡಿದ ಪ್ರತಿಬಿಂಬವಾಗಿದೆ.

**ಐ. ಐಕ್ಯತೆಯ ಭಾವನೆ:**

ಹಟ್ಟಿಗಳಲ್ಲಿ ಎದ್ದು ಕಾಣುವ ಗುಣವೆಂದರೆ ಐಕ್ಯತೆಯಿಂದಿರುವುದು. ಸದಾ ಸಂಘಟಿತರಾಗಿರುತ್ತಾರೆ, ಪೂರ್ವದಿನಗಳಲ್ಲಿ ತನ್ನನ್ನು ಇತರೆ ಪ್ರಾಣಿಗಳಿಂದ ನೈಸರ್ಗಿಕ ವಿಪತ್ತುಗಳಿಂದ ರಕ್ಷಿಸಿಕೊಳ್ಳುವುದು

ಅನಿವಾರ್ಯವಾಗಿತ್ತು ಮತ್ತು ಗ್ರಾಮಗಳಿಂದ ಪ್ರತ್ಯೇಕವಾಗಿ ವಾಸವಾಗಿದ್ದರಿಂದಲೂ ಐಕ್ಯತೆ ಅನಿವಾರ್ಯವಾಗಿತ್ತು ಏಕೆಂದರೆ ಸಂಕಟ, ಸಮಸ್ಯೆಗಳು, ಅಪಾಯ, ಸಮಾರಂಭಗಳು, ಹಬ್ಬ ಹರಿದಿನಗಳು ಇತ್ಯಾದಿ ಸಂದರ್ಭಗಳಲ್ಲಿ ಐಕ್ಯತೆಯ ಭಾವನೆ ತೀವ್ರವಾಗಿದ್ದು ಸಮೂಹಕ್ಕೋಸ್ಕರ ತ್ಯಾಗಕ್ಕೂ ಸಿದ್ಧರಿರುತ್ತಾರೆ.

**೬. ರಕ್ಷಣೆಯ ಅಗತ್ಯತೆ:**

ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಯಾವಾಗಲೂ ರಕ್ಷಣೆ ಮತ್ತು ಭದ್ರತೆಗೆ ಹೆಚ್ಚು ಪ್ರಾಮುಖ್ಯತೆ ಕೊಡುವರು. ಕಾಡು ಪ್ರಾಣಿಗಳಿಂದ ರಕ್ಷಿಸಿಕೊಳ್ಳುವುದು ಮತ್ತು ಜೀವನ ಕ್ರಮದಲ್ಲಿ ಅನುಸರಿಸುವ ಸಾಂಪ್ರದಾಯಿಕ ಮಡಿ ಮೈಲಿಗೆ ಕಲ್ಪನೆ ಅನುಸರಿಸುತ್ತಿರುವರಿಂದ ತನ್ನ ರಕ್ಷಣೆಯ ರೂಪವಾಗಿ ಅವರು ಹಟ್ಟಿಯ ಸುತ್ತಲೂ ಬೇಲಿಯನ್ನು ಇಲ್ಲವೆ ಕಳ್ಳಿಯನ್ನು ಹಾಕಿರುತ್ತಾರೆ. ಇದು ಅವರ ರಕ್ಷಣೆ ಮತ್ತು ಅವರ ದೇವರುಗಳ ಪಾವಿತ್ರತೆಯನ್ನು ಕಾಪಾಡುತ್ತದೆ.

**೭. ಒಳಪಂಗಡದ ವಿವಾಹದ ಪದ್ಧತಿ:**

ಆದಿವಾಸಿಗಳಲ್ಲಿರುವಂತೆ ಹಟ್ಟಿಗಳಲ್ಲಿಯೂ ಒಳಪಂಗಡ ವಿವಾಹಕ್ಕೆ ಹೆಚ್ಚು ಮನ್ನಣೆ ಕೊಡುತ್ತಾರೆ, ಕುಲ ಅಥವಾ ಬೆಡಗುಗಳನ್ನಾಧರಿಸಿ ವಿವಾಹ ಮಾಡುತ್ತಾರೆ. ಒಂದೇ ಬೆಡಗಿನಲ್ಲಿ ವಿವಾಹವಾಗದೆ ಬೇರೆ, ಬೇರೆ ಬೆಡಗಿನವರು ವಿವಾಹವಾಗುತ್ತಾರೆ. ಅಂತರ್‌ಜಾತಿ ವಿವಾಹವಂತೂ ಇಲ್ಲವೇ ಇಲ್ಲ, ಅಂತಹವರನ್ನು ಹಟ್ಟಿಯೊಳಗೆ ಬಿಟ್ಟುಕೊಳ್ಳುವುದಿಲ್ಲ. ಹತ್ತಿರದ ರಕ್ತ ಸಂಬಧಿಗಳಲ್ಲಿ ವಿವಾಹವಾಗುವುದಿಲ್ಲ. ಸಂಗಾತಿಯ ಆಯ್ಕೆ, ವಿವಾಹದ ಸ್ವರೂಪಗಳಲ್ಲಿ ತಮ್ಮದೇ ಆದ ನಿಯಮಗಳನ್ನು ಹೊಂದಿರುತ್ತಾರೆ. ಮದುವೆಯ ಸಂದರ್ಭದಲ್ಲಿ ಪೂಜಾರಿಗಳು, ಯಜಮಾನರು ಪ್ರಮುಖ ಪಾತ್ರವಹಿಸುತ್ತಾರೆ. ಹೀಗೆ ದಕ್ಷಿಣ ವಲಯದ ಬುಡಕಟ್ಟುಗಳಲ್ಲಿ ತೋಡ, ಕಾಡುಕುರುಬ, ಉರಾಲಿ, ಸೋಲಿಗ, ಯರವ್, ತಿರುವಾ, ಬಡಗಾ, ಕಾಡಾರ್, ಚೆಂಚೂ, ಮ್ಯಾಸಬೇಡ, ಕಾಡುಗೊಲ್ಲರು ವಾಸಿಸುತ್ತಿದ್ದು ಕೊಡಗು, ಮೈಸೂರು, ಕೊಚ್ಚಿನ್, ತಿರುವಾಂಕೂರು, ಆಂದ್ರ, ಮದ್ರಾಸ್, ಪ್ರದೇಶಗಳಲ್ಲಿ ವ್ಯಾಪಿಸಿಕೊಂಡಿರುವುದು ಕಾಣುತ್ತದೆ. ದಕ್ಷಿಣ ವಲಯದ ಬುಡಕಟ್ಟು ಸಮೂಹಗಳು ನಾಗರಿಕತೆಯಲ್ಲಿ ಬಹಳ ಹಿಂದುಳಿದಿದ್ದು ಸದೃಢ ದೈಹಿಕ ನಿಲುವನ್ನು ಹೊಂದಿದ್ದು ಶ್ರಮದಾಯಕ ಕೆಲಸ ಮಾಡುತ್ತಾರೆ. ಹೊಟ್ಟೆ ಪಾಡಿಗಾಗಿ ಬೇಟೆ, ಪಶುಪಾಲನೆಯನ್ನು ಹೊಂದಿದ್ದು ಇತ್ತೀಚಿನ ದಿನಗಳಲ್ಲಿ ಜೀವಿತಕ್ಕಾಗಿ ಬೇಸಾಯವನ್ನು ಹೊಂದಿರುವುದು ಕಂಡುಬರುತ್ತದೆ ಅಲ್ಲದೆ ಆಧುನಿಕ ಜಗತ್ತಿನತ್ತ ದಾಪುಗಾಲಿರಿಸುತ್ತಿದ್ದಾರೆ.

**೧.೨ ಸಂಶೋಧನಾ ಪ್ರಶ್ನೆಗಳು ಹಾಗೂ ಸಮಸ್ಯೀಕರಣ:**

ಹಟ್ಟಿ ಸಂಸ್ಕೃತಿ ಮತ್ತು ಪರಂಪರೆ–ಸಾಮಾಜಿಕ ಅಧ್ಯಯನ (ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಅಧ್ಯಯನವನ್ನು ಚಿತ್ರದುರ್ಗ ಜಿಲ್ಲೆಯಲ್ಲಿ ಕೈಗೊಂಡು ಅಧ್ಯಯನಕ್ಕೆ ಸಂಬಂಧಿಸಿದ ಸಾಹಿತ್ಯವನ್ನು ಪರಾಮರ್ಶಿಸಿದಾಗ ಅನೇಕ ಪ್ರಕಾರದ ಪ್ರಶ್ನೆಗಳನ್ನು ಎತ್ತಿಕೊಳ್ಳಲಾಗಿದೆ. ಹಟ್ಟಿ ಸಂಸ್ಕೃತಿಯ ತಳಸ್ಪರ್ಶಿಯಾದ ಸತ್ಯಾಸತ್ಯೆತೆಗಳನ್ನು ಕಂಡುಕೊಳ್ಳಲು ಎತ್ತಿದಂತಹ ಪ್ರಶ್ನೆಗಳಿಗೆ ಉದ್ದೇಶಗಳನ್ನು ಕಟ್ಟಿಕೊಳ್ಳಲಾಗಿದೆ.

ಸಾಮಾಜಿಕವಾಗಿ ಅನ್ಯಜಾತಿಯವರೊಟ್ಟಿಗೆ ಬೆರೆಯದಿರುವುದೇ? ಹಟ್ಟಿಜನರ ಅದರಲ್ಲೂ ಕಾಡುಗೊಲ್ಲರ ದೇವಸ್ಥಾನದೊಳಗೆ ಅನ್ಯಜಾತಿಯವರಿಗೆ ಪ್ರವೇಶವನ್ನು ನಿಷೇಧಿಸಿರುವುದೇ? ಬಹುಪಾಲು ಕಾಡುಗೊಲ್ಲರು ಗ್ರಾಮದ ಹೊರಭಾಗದಲ್ಲಿ ಹಟ್ಟಿಯನ್ನು ಕಟ್ಟಿಕೊಂಡು ನೆಲೆಯೂರಿರುವುದು? ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ನೈಸರ್ಗಿಕವಾಗಿ ಏನೆ ಬಿಕ್ಕಟ್ಟುಗಳು ಬಂದರೂ ಏಕೆ ಅವರು ಹಟ್ಟಿಗಳಲ್ಲಿ ವಾಸಿಸುತ್ತಿರುವರು? ಹಟ್ಟಿಜನರು ಆಧುನೀಕರಣ, ತಂತ್ರಜ್ಞಾನ, ಜಾಗತೀಕರಣ ಮತ್ತು ಶಿಕ್ಷಣ ಸೌಲಭ್ಯಗಳು ಇದ್ದರೂ ಏಕೆ ಅವರು ಇನ್ನೂ ಹಟ್ಟಿಗಳಲ್ಲೇ ಉಳಿದಿದ್ದಾರೆ? ಆದರೂ ಜನರು ಹೊರ ಬಂದಿದ್ದಾರೆಯೆ? ಹೊರಬಂದರೂ ಯಾವಪ್ರಮಾಣದಲ್ಲಿ ಹೊರಬಂದಿದ್ದಾರೆ? ಕುಟುಂಬ, ವಿವಾಹ, ರಾಜಕೀಯ, ಆರ್ಥಿಕತೆಯ ಆದಾಯದ ಮೂಲಗಳು ಮತ್ತು ಕಲೆ, ನಂಬಿಕೆ, ಮೌಲ್ಯಗಳು, ಜೀವನ ವಿಧಾನಗಳಲ್ಲಿ ಯಾವ ರೀತಿಯ ಸ್ಥಿತ್ಯಂತರಗಳಾಗಿವೆ? ಎನ್ನುವಂತಹ ಹಟ್ಟಿ ಸಂಸ್ಕೃತಿಯ ಮೇಲೆ ಅನೇಕ ಪ್ರಕಾರದ ಪ್ರಶ್ನೆಗಳನ್ನು ಎತ್ತಿಕೊಂಡು ಅಧ್ಯಯನದ ಉದ್ದೇಶಗಳು ಕಟ್ಟಿಕೊಳ್ಳಲಾಗಿದೆ.

**೧.೩. ಅಧ್ಯಯನದ ಉದ್ದೇಶಗಳು ಹಾಗೂ ಮಹತ್ವ**

ಪ್ರಸ್ತುತ ಅಧ್ಯಯನವು ಹಟ್ಟಿ ಸಂಸ್ಕೃತಿ ಮತ್ತು ಪರಂಪರೆಯ ಸಾಮಾಜಿಕ ಅಧ್ಯಯನವಾಗಿದ್ದು ಹಟ್ಟಿ ಸಂಸ್ಕೃತಿಯು ತನ್ನದೇ ಆದ ಸಾಂಸ್ಕೃತಿಕ ಅನನ್ಯತೆಯನ್ನು ಹೊಂದಿದ್ದು ಅದು ತನ್ನದೇ ಆದ ಪರಂಪರೆಯನ್ನು ಉಳಿಸಿಕೊಂಡು ಬಂದಿದೆ. ನಾಗರಿಕ ಜೀವನಕ್ಕೆ ತೆರೆದುಕೊಂಡಿದ್ದರೂ ಸಹ ತಮ್ಮ ಸಾಂಪ್ರದಾಯಿಕ ಮೌಲ್ಯಗಳು, ನಂಬಿಕೆಗಳು, ಧಾರ್ಮಿಕತೆ, ಶೈಕ್ಷಣಿಕ ಸ್ಥಿತಿ ಗತಿಗಳು, ಆರ್ಥಿಕತೆ ಇನ್ನು ಬದಲಾಗಿಲ್ಲ. ಅವರಿಗೆ ಸ್ವಲ್ಪ ಮಟ್ಟಿನ ನಾಗರಿಕತೆ ಸೋಂಕಿದ್ದರು ಭೂತದಲ್ಲಿದ್ದ ಪರಂಪರೆ ಭವಿಷ್ಯದಲ್ಲೂ ಮುಂದುವರಿಯುತ್ತದೆ. ಪ್ರಸ್ತುತ ಅಧ್ಯಯನವು ಒಳಗೊಂಡಿರುವ ಉದ್ದೇಶಗಳೆಂದರೆ:

- ಹಟ್ಟಿ ಸಂಸ್ಕೃತಿಯ ಅನನ್ಯತೆ ಹಾಗೂ ಅಸ್ತಿತ್ವವನ್ನು (ಪ್ರತ್ಯೇಕತೆ) ತಿಳಿಯುವುದು.
- ಹಟ್ಟಿ ಸಂಸ್ಕೃತಿಯ ಪರಂಪರೆಯನ್ನು ಗುರುತಿಸುವುದು-ಅವರ ಕಲೆ, ನಂಬಿಕೆಗಳು, ಮೌಲ್ಯಗಳು ಮತ್ತು ಆಚರಣೆಗಳನ್ನು ಅರ್ಥಮಾಡಿಕೊಳ್ಳುವುದು.
- ಹಟ್ಟಿ ಸಂಸ್ಕೃತಿಯ ಸಾಮಾಜಿಕ-ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಅರ್ಥಮಾಡಿಕೊಳ್ಳುವುದು.
- ಹಟ್ಟಿ ಸಂಸ್ಕೃತಿ ಮತ್ತುಆಧುನಿಕ ಮುಖಾಮುಖಿಯನ್ನು ತಿಳಿಯುವುದು.

**ಅಧ್ಯಯನದ ಮಹತ್ವ :**

ಪ್ರಸ್ತುತ ಸಂಶೋಧನಾ ನಿಬಂಧವು ಹಟ್ಟಿಸಂಸ್ಕೃತಿ ಮತ್ತು ಪರಂಪರೆಯ ಸಾಮಾಜಿಕ ಅಧ್ಯಯನವಾಗಿದೆ. ಇದು ಹಟ್ಟಿಗಳ ಅಧ್ಯಯನಕ್ಕೆ ತುಂಬಾ ಪ್ರಾಮುಖ್ಯತೆಯನ್ನು. ನೀಡಿದೆ. ಏಕೆಂದರೆ ಜಾಗತೀಕರಣದ ಈ ಸಂದರ್ಭದಲ್ಲಿ ಹಟ್ಟಿಗಳು ತನ್ನ ತನವನ್ನು ಬಿಟ್ಟುಕೊಡದೆ ದೇವರು,

ಧರ್ಮ, ನಂಬಿಕೆಗಳು, ಸಂಪ್ರದಾಯಗಳು, ಸಾಮಾಜಿಕ ಜೀವನ, ಜ್ಞಾನ ಪರಂಪರೆ ಇವುಗಳನ್ನು ಉಳಿಸಿಕೊಂಡು ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಮೆರೆಯುತ್ತಿವೆ. ಇಂದಿಗೂ ಹಟ್ಟಿಯ ಹಬ್ಬಗಳು, ಜಾತ್ರೆ, ಉತ್ಸವ, ಕಲೆ, ನೃತ್ಯ, ಜಾನಪದ ಹಾಡುಗಳು ಇವೆಲ್ಲವೂ ಹಟ್ಟಿಸಂಸ್ಕೃತಿಯಲ್ಲಿ ಮೇಳೈಸಿವೆ. ಒಂದು ಸಮೂಹ ಪ್ರತ್ಯೇಕವಾಗಿ ವಾಸಿಸುತ್ತಿದ್ದು ನಾಗರಿಕತೆಯ ಗೋಜಿಗೆ ಹೋಗದೆ ತನ್ನ ಅಸ್ಮಿತೆಯನ್ನು ಉಳಿಸಿಕೊಂಡಿರುವ ಸಮೂಹವೆಂದರೆ ಹಟ್ಟಿಗಳು. ಈ ಹಿನ್ನೆಲೆಯಿಂದ ಈ ಅಧ್ಯಯನವು ಮಹತ್ವದ್ದಾಗಿದೆ.

ಒಂದು ಸಮೂಹದ ಸಂಸ್ಕೃತಿ ಅಜರಾಮರ, ಊರ್ಜಿತ, ಶಾಶ್ವತವಾಗಿರಬೇಕಾದರೆ ಆದರ ಹಿಂದೆ ಇರುವ ಪ್ರಬಲವಾದ ತರ್ಕಬದ್ಧ, ಪರಂಪರೆಯಿಂದ ದೃಢೀಕರಿಸಲ್ಪಟ್ಟ ಒಂದು ಸಾಮೂಹಿಕ ಶ್ರದ್ಧೆ ಅತ್ಯಂತ ಪ್ರಮುಖವಾದುದು. ಜೀವನದ ಗುರಿಯ ನಿರ್ದೇಶನ ಅದನ್ನು ಸಾಧಿಸಲು ಬೇಕಾದ ಮೌಲ್ಯಗಳು ಆ ಮೌಲ್ಯಗಳ ಅಳವಡಿಕೆಗೆ ಬೇಕಾದ ಸಂಸ್ಕಾರ, ಆಚರಣೆಗಳು, ಹಬ್ಬಗಳು, ಕಲಾರಾಧನೆ, ಸಂಗೀತ, ಸಾಹಿತ್ಯ, ನೃತ್ಯ, ಆತ್ಮರಕ್ಷಣೆಗೆ ಬೇಕಾದ ಉಪಾಯಗಳು ಸೇನಾಸಿದ್ಧತೆ, ಸಾಮಾಜಿಕ, ರಾಜಕೀಯ, ಹಟ್ಟಿಗಳ ನಿರ್ಮಾಣ, ಆಡಳಿತದ ರೀತಿನೀತಿ ಹೀಗೆ ಹಲವು ಸಂಕೀರ್ಣ ಅಂಶಗಳ ಸಮೃದ್ಧ ಸಂಸ್ಕೃತಿಯ ಜೀವನ ಶೈಲಿಯನ್ನು ಹೊಂದಿರುವ ಹಟ್ಟಿಸಂಸ್ಕೃತಿಯು ತುಂಬಾ ಮಹತ್ವವಾದುದು. ಆ ಮಹತ್ವವನ್ನು ಮನಗಂಡು ಈ ಅಧ್ಯಯನವನ್ನು ಮಾಡಲಾಗಿದೆ. ಹಟ್ಟಿಸಂಸ್ಕೃತಿಯನ್ನು ಪ್ರಧಾನವಾಗಿ ಅಳವಡಿಸಿಕೊಂಡಿರುವ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಬಗೆಗಿನ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಅಂಶಗಳನ್ನು ಅಧ್ಯಯನ ಮಾಡುವುದು ಹೆಚ್ಚು ಪ್ರಾಮುಖ್ಯವಾದುದು. ಕಾಡುಗೊಲ್ಲ ಮತ್ತು ಮ್ಯಾಸಬೇಡರು ಸಾಮಾಜಿಕ ಬದಲಾವಣೆಯಲ್ಲಿ ಮಂದಗತಿಯಲ್ಲಿದ್ದು ಆರ್ಥಿಕ ಸಂಕಷ್ಟಕ್ಕೊಳಗಾಗಿರುವುದು ಕಂಡುಬರುತ್ತದೆ. ಹಟ್ಟಿಗಳಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳು ಪರಿಣಾಮ ಬೀರಿರುವುದಿಲ್ಲ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿದ್ದು ಸರ್ಕಾರದ ಸೌಲಭ್ಯಗಳು ಸರಿಯಾದ ರೀತಿಯಲ್ಲಿ ತಲುಪಿಲ್ಲದಿರುವುದು ಹಾಗಾಗಿ ಹಟ್ಟಿಸಂಸ್ಕೃತಿಯ ಅಧ್ಯಯನ ಮಹತ್ವವೆನಿಸಿಕೊಳ್ಳುತ್ತದೆ. ಹಟ್ಟಿಗಳು ಮೂಲ ಹಟ್ಟಿಗಳಾಗಿವೆಯೇ ಅಥವಾ ಬದಲಾಗುತ್ತಿವೆಯೇ, ಹೇಗೆ ಆಧುನಿಕ ಮುಖಾಮುಖಿಯನ್ನು ಹೊಂದುತ್ತಿವೆಯೆಂಬುದನ್ನು ತಿಳಿಯುವುದು ಪ್ರಮುಖವಾದುದು. ಇನ್ನು ಮೂಲಭೂತ ಸೌಲಭ್ಯಗಳನ್ನು ಕಂಡಿಲ್ಲದ ಹಟ್ಟಿಗಳು ಬಹಳಷ್ಟಿವೆ ಮತ್ತು ಅವುಗಳನ್ನು ಕಂದಾಯ ಗ್ರಾಮಗಳನ್ನಾಗಿ ಮಾಡಿ ಸರ್ಕಾರದ ಸೌಲಭ್ಯಗಳನ್ನು ಕಲ್ಪಿಸಿ ಅಭಿವೃದ್ಧಿ ಪಡಿಸಲು ಅವರ ಸಮಸ್ಯೆಗಳನ್ನು ಅಭ್ಯಸಿಸುವುದು ತುಂಬಾ ಮಹತ್ವವಾದುದು. ಹಟ್ಟಿಗಳಲ್ಲಿನ ಮೌಢ್ಯತೆಗಳನ್ನು ದೂರ ಮಾಡಲು ಸಲಹೆಗಳನ್ನು ನೀಡುವುದು. ಹೀಗೆ ಹಟ್ಟಿಗಳ ಸಾಂಸ್ಕೃತಿಕ ಮತ್ತು ಸಾಮಾಜಿಕ ಅಧ್ಯಯನ ತುಂಬಾ ಮಹತ್ವದೆನಿಸುತ್ತದೆ. ಹಟ್ಟಿಗಳ ಬಗ್ಗೆ ಇದುವರೆವಿಗೆ ನಡೆದಿರುವ ಅಧ್ಯಯನಗಳು ಸಾಹಿತ್ಯಿಕ ಮತ್ತು ಜನಪದೀಯ ದೃಷ್ಟಿಕೋನದ ಅಧ್ಯಯನಗಳಾಗಿವೆ. ಹಾಗಾಗಿ ಪ್ರಸ್ತುತ ಅಧ್ಯಯನದಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ದೃಷ್ಟಿಕೋನಕ್ಕೆ ಹೆಚ್ಚು ಮಹತ್ವಕೊಟ್ಟಿದ್ದು ಇದರ ವಿಶೇಷತೆಯಾಗಿದೆ.

ಕಾಡುಗೊಲ್ಲರು ಬುಡಕಟ್ಟು ಲಕ್ಷಣಗಳನ್ನು ಹೊಂದಿದ್ದಾಗ್ಯೂ ಇಂದಿಗೂ ಬುಡಕಟ್ಟಾಗದ ಮತ್ತು ಬುಡಕಟ್ಟು ಪಟ್ಟಿಯಲ್ಲಿ ಸೇರ್ಪಡೆಯಾಗದೆ ಬುಡಕಟ್ಟು ಜನರಿಗೆ ಸಿಗುವ ಸೌಲಭ್ಯಗಳನ್ನು ಪಡೆಯದೇ ವಂಚಿತರಾಗುವುದು ಕಂಡುಬಂದಿದೆ. ಪ್ರಸ್ತುತ ಅಧ್ಯಯನ ಸರ್ಕಾರದ ಗಮನ ಸೆಳೆದು ಬುಡಕಟ್ಟು ಜನರ ಅಭಿವೃದ್ಧಿ ಯೋಜನೆಗಳಲ್ಲಿ ತನ್ನ ನೀತಿಯನ್ನು ಬದಲಾವಣೆ ತರುವಲ್ಲಿ ಮಹತ್ವವಾದುದು.

- ಕಾಡುಗೊಲ್ಲ ಮತ್ತು ಮ್ಯಾಸಬೇಡರ ಸಾಮಾಜಿಕ ಅಸಮಾನತೆ ಮತ್ತು ಅಸಮತೋಲನಗಳ ಸ್ವರೂಪಗಳು ಯಾವ ಪ್ರಮಾಣದಲ್ಲಿವೆ ಅವುಗಳನ್ನು ಅಭಿವೃದ್ಧಿ ತರುವಲ್ಲಿ ಪ್ರಸ್ತುತ ಅಧ್ಯಯನ ತನ್ನ ಪ್ರಾಮುಖ್ಯತೆಯನ್ನು ಹೆಚ್ಚಿಸಿಕೊಳ್ಳುತ್ತದೆ.
- ಹಟ್ಟಿ ಸಮುದಾಯದವರು ಶೈಕ್ಷಣಿಕವಾಗಿ ಏಕೆ ಹಿಂದುಳಿದಿದ್ದಾರೆ? ಹಿಂದುಳಿಯಲಿಕ್ಕೆ ಕಾರಣಾಂಶಗಳೇನು ಎಂಬುದನ್ನು ಗುರುತಿಸಿ ಶೈಕ್ಷಣಿಕ ಅಭಿವೃದ್ಧಿಗಾಗಿ ಕೈಗೊಳ್ಳುವ ಕಾರ್ಯತಂತ್ರಗಳನ್ನು ಸರ್ಕಾರ ಮತ್ತು ಸಂಘ ಸಂಸ್ಥೆಗಳ ಮೂಲಕ ಅಭಿವೃದ್ಧಿ ಪಡಿಸುವಲ್ಲಿ ತನ್ನ ಪ್ರಾಮುಖ್ಯತೆ ಹೆಚ್ಚಿಸಿಕೊಳ್ಳುತ್ತದೆ.
- ಹಟ್ಟಿಸಂಸ್ಕೃತಿಯ ಯಾವ ಯಾವ ಕ್ಷೇತ್ರಗಳಲ್ಲಿ ಸ್ಥಿತ್ಯಂತರಗಳಾಗಿವೆ? ಅಭಿವೃದ್ಧಿ ಅಯಾಮಗಳಲ್ಲಿ ಆಗಿರುವುದು ಸರಿಯೆ? ಆಯಾ ಕ್ಷೇತ್ರಗಳನ್ನು ಗುರುತಿಸುವುದು ಸರ್ಕಾರ ಮತ್ತು ಯೋಜನಾಕಾರರಿಗೆ ಅಭಿವೃದ್ಧಿಯ ಸಲುವಾಗಿ ಯೋಜನೆ ರೂಪಿಸುವಲ್ಲಿ ಮತ್ತು ಅನುಷ್ಠಾನ ಮಾಡುವಲ್ಲಿ ತನ್ನ ಪ್ರಾಮುಖ್ಯತೆ ಹೆಚ್ಚಿಸಿಕೊಳ್ಳುತ್ತದೆ.
- ಕೊರತೆ ಮತ್ತು ಅನಾಭಿವೃದ್ಧಿ ಸ್ವರೂಪ ಮತ್ತು ಪ್ರಮಾಣ ಪ್ರಸ್ತುತ ಅಧ್ಯಯನ ತಿಳಿಸುತ್ತದೆ, ಇದರಿಂದ ಮಾನವ ಅಭಿವೃದ್ಧಿ ಮತ್ತು ಕಲ್ಯಾಣ ಅಭಿವೃದ್ಧಿಗೆ ಏನು ಮತ್ತು ಯಾವ ಕಾರ್ಯಕ್ರಮಗಳನ್ನು ಆರ್ಥಿಕ ಅಭಿವೃದ್ಧಿ ಹಿನ್ನೆಲೆಯಲ್ಲಿ ಕೈಗೊಳ್ಳಬೇಕು ಎನ್ನುವುದನ್ನು ತಿಳಿಸುವುದರ ಮೂಲಕ ಇದರ ಪ್ರಾಮುಖ್ಯತೆ ಏನು ಎನ್ನುವುದನ್ನು ತಿಳಿಸುತ್ತದೆ.
- ಸ್ವಾತಂತ್ರ್ಯ ನಂತರದ ದಿನಗಳಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಯ ಹಿನ್ನೆಯಲ್ಲಿ ಪ್ರಜಾಪ್ರಭುತ್ವ ಮತ್ತು ವಿಕೇಂದ್ರಿಕರಣದ ಮೂಲಕ ಅಭಿವೃದ್ಧಿ ಹಿನ್ನೆಲೆಯಲ್ಲಿ ಇದುವರೆಗೂ ರಾಜಕೀಯ ಅಧಿಕಾರ ಯಾವ ಪಾತ್ರವಹಿಸಿದೆ ಮತ್ತು ಮುಂದಿನ ದಿನಗಳಲ್ಲಿ ಯಾವ ಪಾತ್ರವಹಿಸಬೇಕಾಗಿದೆ ಎನ್ನುವುದನ್ನು ಅಧ್ಯಯನದ ಪ್ರಾಮುಖ್ಯತೆ ಏನು ಎಂಬುದನ್ನು ತಿಳಿಸುತ್ತದೆ.
- ಬುಡಕಟ್ಟು ಸಂಸ್ಕೃತಿಯಲ್ಲಿ ಮಹಿಳೆಯರ ಸಮಸ್ಯೆಗಳನ್ನು ಅಧ್ಯಯನದ ಮೂಲಕ ಗುರ್ತಿಸುವುದರಿಂದ ಆ ಸಮಸ್ಯೆಗಳಿಗೆ ಆರೋಗ್ಯಕ್ಕೆ ಮತ್ತು ಮಹಿಳಾ ಸಬಲಿಕರಣಕ್ಕೆ ಸಂಬಂಧಿಸಿದಂತೆ ಆದ್ಯತೆ ಕೊಡುವುದರಿಂದ ತನ್ನ ಮಹತ್ವ ಹೆಚ್ಚಿಸಿಕೊಳ್ಳುವುದು.
- ಹಟ್ಟಿಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸುವುದು.

ಹೀಗೆ ಹಟ್ಟಿ ಸಂಸ್ಕೃತಿಯ ಅಧ್ಯಯನವು ಸಾಮಾಜಿಕ ಮತ್ತು ಸಾಂಸ್ಕೃತಿಕ ಅಧ್ಯಯನ ದೃಷ್ಟಿಯಿಂದ ಮಹತ್ತರವಾದುದು.

### ೧.೪ ಅಧ್ಯಯನ ವಿಧಾನ

ಚಿತ್ರದುರ್ಗ ಜಿಲ್ಲೆಯನ್ನು ಪ್ರಾದೇಶಿಕ ಹಿನ್ನೆಲೆಯಲ್ಲಿ ಪ್ರಮುಖವಾಗಿ ಎರಡು ಪ್ರದೇಶಗಳಾಗಿ ಗುರುತಿಸಬಹುದು ಒಂದು ಚಳ್ಳಕೆರೆ, ಹಿರಿಯೂರು ಮತ್ತು ಮೊಳಕಾಲ್ಮೂರು ತಾಲೂಕಿನ ದಕ್ಷಿಣ ಭಾಗದ ಬಯಲು ಪ್ರದೇಶ. ಎರಡು ಹೊಸದುರ್ಗ ಮತ್ತು ಮೊಳಕಾಲ್ಮೂರು ತಾಲೂಕಿನ ಉತ್ತರ ಭಾಗ ಮತ್ತು ಹೊಳಲ್ಕೆರೆಯ ಪೂರ್ವ ಭಾಗವನ್ನು ಮಧ್ಯ ಗುಡ್ಡಗಾಡು ಪ್ರದೇಶವೆಂದು ವಿಭಜಿಸಬಹುದು. ಚಿತ್ರದುರ್ಗ ಜಿಲ್ಲೆಯು ರಾಜ್ಯದ ಮಧ್ಯಭಾಗದಲ್ಲಿದ್ದು ಐತಿಹಾಸಿಕ ಜಿಲ್ಲೆಯಾಗಿದೆ. ಕೋಟೆಕೊತ್ತಲಗಳು, ದೇವಸ್ಥಾನಗಳು, ಸ್ಮಾರಕಗಳು, ಶಾಸನಗಳಿಂದ ಕೂಡಿದ ಜಿಲ್ಲೆಯಾಗಿದ್ದು ಉತ್ತರಕ್ಕೆ ದಾವಣಗೆರೆ, ಬಳ್ಳಾರಿ ಜಿಲ್ಲೆಗಳಿದ್ದು ದಕ್ಷಿಣಕ್ಕೆ ತುಮಕೂರು ಜಿಲ್ಲೆ ಪೂರ್ವಕ್ಕೆ ರಾಜ್ಯದ ಅನಂತಪುರ ಜಿಲ್ಲೆ ಪಶ್ಚಿಮಕ್ಕೆ ಶಿವಮೊಗ್ಗ ಹಾಗೂ ಚಿಕ್ಕಮಂಗಳೂರು ಜಿಲ್ಲೆಗಳಿಂದ ಸುತ್ತುವರೆಯಲ್ಪಟ್ಟಿದೆ.

ಪ್ರಸ್ತುತ ಅಧ್ಯಯನವು ಹಟ್ಟಿ ಸಂಸ್ಕೃತಿ ಮತ್ತು ಪರಂಪರೆ–ಸಾಮಾಜಿಕ ಅಧ್ಯಯನ ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸಿ ಎಂಬ ವಿಷಯದಿಂದ ಕೂಡಿದೆ. ಕರ್ನಾಟಕ ರಾಜ್ಯದಲ್ಲಿ ಚಿತ್ರದುರ್ಗ ಜಿಲ್ಲೆಯು ಮಧ್ಯಕರ್ನಾಟಕದ ಬಯಲು ಸೀಮೆಯ ಪ್ರದೇಶವಾಗಿದೆ. ಈ ಜಿಲ್ಲೆಯಲ್ಲಿ ಅತಿ ಹೆಚ್ಚು ವಾಸಿಸುವ ಪ್ರಧಾನ ಬುಡಕಟ್ಟುಗಳೆಂದರೆ ಕಾಡುಗೊಲ್ಲ ಮತ್ತು ಮ್ಯಾಸಬೇಡರು, ಈ ಎರಡು ಸಮುದಾಯಗಳು ನೆಲಸಿರುವ ಸ್ಥಳಗಳ ಕ್ಷೇತ್ರಕಾರ್ಯ ಮಾಡಲಾಗಿದೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಅವಲೋಕಿಸಿದಾಗ ಅವರು ಬಹುತೇಕ ಹಟ್ಟಿಗಳಲ್ಲಿ ವಾಸಿಸುವ ಪದ್ಧತಿ ಕಂಡುಬರುವುದು. ಈ ಹಿನ್ನೆಲೆಯಲ್ಲಿ ಅವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕು ಹೇಗಿದೆ? ಅವರು ಸಾಂಪ್ರದಾಯಿಕವಾಗಿ ತಲೆಮಾರಿನಿಂದ ತಲೆಮಾರಿಗೆ ಸಾಗಿಬಂದ ಅವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕು ಇನ್ನೂ ಉಳಿದಿದೆಯೆ? ಅಥವಾ ಸ್ಥಿತ್ಯಂತರವಾಗಿದೆಯೆ? ಎನ್ನುವಂತಹ ದೃಷ್ಟಿಕೋನದಿಂದ ಪ್ರಸ್ತುತ ಅಧ್ಯಯನದಲ್ಲಿ ಹಟ್ಟಿಗಳನ್ನು ಕೇಂದ್ರೀಕರಿಸಿಕೊಂಡು ವಿವಿಧ ಆಯಾಮಗಳಲ್ಲಿ ಅಧ್ಯಯನ ಮಾಡಲಾಗಿದೆ.

ಹಟ್ಟಿಗಳ ಸ್ವರೂಪವನ್ನು ಕಂಡುಕೊಂಡಿದ್ದಲ್ಲದೆ ಹಟ್ಟಿಗಳು ಗ್ರಾಮಗಳಿಂದ ಅವು ಪ್ರತ್ಯೇಕವಾಗಿ ಉಳಿದಿವೆ. ಗ್ರಾಮಗಳಿಂದ ಪ್ರತ್ಯೇಕವಾಗಿ ವಾಸಿಸುವ, ಹರಿಜನರಂತಹ ಅನ್ಯ ಜಾತಿಗಳನ್ನು ಹಟ್ಟಿಯೊಳಗೆ ಬಿಟ್ಟುಕೊಳ್ಳದಿರುವುದು. ಬೇರೆ ಸಮುದಾಯಗಳಿಗೆ ಹೋಲಿಕೆ ಮಾಡಿದರೆ ವಿಶಿಷ್ಠ ನಂಬಿಕೆ ಮತ್ತು ಆಚರಣೆಗಳನ್ನು ರೂಢಿಸಿಕೊಂಡಿರುವುದು. ಹಟ್ಟಿ ದೇವರ ಹೆಸರಿನಲ್ಲಿ ರೂಢಿಸಿಕೊಂಡಿರುವ ಕಟ್ಟು ನಿಟ್ಟಾದ ಪದ್ಧತಿಗಳನ್ನು ಆಚರಿಸುತ್ತಿರುವುದು. ತಮ್ಮ ಕುಲ ಪಂಗಡಗಳೊಳಗೆ ಕೊಡು ಕೊಳುವಿಕೆಯಂತಹ ವಿವಾಹ ಪದ್ಧತಿಗಳನ್ನು ನಡೆಸಿಕೊಂಡು ಬಂದಿರುವುದು. ತಮ್ಮ ಜೀವನೋಪಾಯಕ್ಕಾಗಿ ಕೃಷಿ ಮತ್ತು ಪಶುಸಂಗೋಪನೆಯನ್ನೆ ಅವಲಂಬಿಸಿರುವುದು. ಸಂಪ್ರದಾಯದ ನೆಲೆಗಳಲ್ಲಿ ಶಿಕ್ಷಣ ಪದ್ಧತಿ, ತಲೆಮಾರುಗಳಿಂದಲೂ ಉಳಿಸಿಕೊಂಡು ಬಂದಿರುವ ಹಬ್ಬ, ಹರಿದಿನ, ಜಾತ್ರೆ ಉತ್ಸವಗಳನ್ನು

ಜಾಗತೀಕರಣ, ಶಿಕ್ಷಣ, ವಿಜ್ಞಾನ ತಮತ್ರಜ್ಞಾನದ ಅಭಿವೃದ್ಧಿ, ಪ್ರಜಾಪ್ರಭುತ್ವ, ಅಧಿಕಾರ ವಿಕೇಂದ್ರಿರಿಕರಣದ ಸಂದರ್ಭದಲ್ಲೂ ಹಟ್ಟಿ ಸಂಸ್ಕೃತಿ ಹೇಗೆ ಬದಲಾವಣೆಯಾಗಿವೆ, ಸ್ಥಿತ್ಯಂತರವಾಗಿವೆ ಈ ಮೂಲಕವೇ ಅವು ರೂಪಾಂತರವಾಗಿರುವುದು ಅನೇಕ ಅಧ್ಯಯನಗಳಿಂದ ಕಂಡುಬಂದಿದೆ. ಈ ಹಿನ್ನೆಲೆಯಲ್ಲಿ ಹಟ್ಟಿ ಸಂಸ್ಕೃತಿಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮಗಳಲ್ಲಿ ಅವರ ಸ್ಥಿತಿಗತಿಗಳು ಹಾಲಿ ಪರಿಸ್ಥಿತಿ ಹೇಗಿವೆ ಎಂಬುದನ್ನು ಸಮಾಜಿಕ ನೆಲೆಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸಿ ಅಧ್ಯಯನ ಮಾಡಲಾಗಿದೆ.

ಕರ್ನಾಟಕದಲ್ಲಿ ಹಟ್ಟಿ ಸಂಸ್ಕೃತಿಯ ಇತಿಹಾಸವನ್ನು ದಾಖಲಾತಿಗಳನ್ನು, ವರದಿಗಳನ್ನು ಅವಲೋಕಿಸಿದರೆ ಬಹುತೇಕ ಚಿತ್ರದುರ್ಗ ಜಿಲ್ಲೆಯಲ್ಲೇ ನೆಲೆಗೊಂಡಿರುವುದು ಕಂಡುಬಂದಿರುತ್ತವೆ. ಚಿತ್ರದುರ್ಗ ಜಿಲ್ಲೆಯಲ್ಲಿ ಇದುವರೆಗೂ ನಡೆದಿರುವ ಅಧ್ಯಯನಗಳು ಅತಿ ಹೆಚ್ಚು ಸಾಹಿತ್ಯದ ಮತ್ತು ಭೌಗೋಳಿಕ ನೆಲೆಯ ಮೇಲೆ ಅಧ್ಯಯನಗಳು ನಡೆದಿರುವುದು ಅನೇಕ ಅಧ್ಯಯನಗಳಿಂದ ತಿಳಿಯುತ್ತದೆ. ಆದರೆ ಹಟ್ಟಿ ಸಂಸ್ಕೃತಿಯನ್ನು ಕುರಿತು ನಡೆದಿರುವ ಅಧ್ಯಯನ ಅತೀ ಕಡಿಮೆ ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಹಟ್ಟಿ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಲು ಚಿತ್ರದುರ್ಗ ಜಿಲ್ಲೆಯನ್ನು ಅಧ್ಯಯನಕ್ಕೊಳಪಡಿಸಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಅನೇಕ ಪ್ರಕಾರದ ಹಟ್ಟಿ ಸಂಸ್ಕೃತಿಯ ಸಮುದಾಯಗಳು ಇದ್ದರೂ ಅದರಲ್ಲಿ ಜಿಲ್ಲೆಯಲ್ಲೇ ಬಹು ಸಂಖ್ಯಾತರೆನಿಸಿದ ಕಾಡುಗೊಲ್ಲ ಮತ್ತು ಮ್ಯಾಸಬೇಡರನ್ನು ಮಾತ್ರ ಅಧ್ಯಯನಕ್ಕೊಳಡಿಸಲಾಗಿದೆ.

ಹೀಗೆ ಹಟ್ಟಿಗಳ ರಚನಾತ್ಮಕವಾದ ಅಧ್ಯಯನವನ್ನು ಹಟ್ಟಿಯ ಹಿರಿಯರು, ಪೂಜಾರಿಗಳು, ಕಿಲಾರಿಗಳು, ದಾಸಯ್ಯಗಳು, ಇವರನ್ನು ಖುದ್ದಾಗಿ ಬೇಟಿ ಮಾಡಿ, ಹಬ್ಬಹರಿದಿನ, ಜಾತ್ರೆಗಳಲ್ಲಿ ಅವರೊಟ್ಟಿಗೆ ಮಿಳಿತಗೊಂಡು ಮಾಹಿತಿ ಸಂಗ್ರಹಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಕ್ಷೇತ್ರಕಾರ್ಯದ ಮೂಲಕ ಮಾದರಿ, ಅವಲೋಕನ ಹಾಗೂ ಗುಂಪು ಚರ್ಚೆಯ ಮೂಲಕ ಸಂದರ್ಶಿಸಿ ಮಾಹಿತಿ ಸಂಗ್ರಹಿಸಲಾಗಿದೆ.

ಹಟ್ಟಿ ಸಂಸ್ಕೃತಿಯ ಭೂತದ ಆಚರಣೆಗಳು, ಪರಂಪರಾನುಗತವಾಗಿ ಮುಂದುವರಿದಿವೆಯೆ? ಸ್ಥಿತ್ಯಂತರಕ್ಕೊಳಪಟ್ಟಿವೆಯೆ ಎಂಬುದನ್ನು ಪ್ರಸ್ತುತ ಅಧ್ಯಯನವು ಕೇಂದ್ರಿಕರಿಸುತ್ತದೆ. ಇದುವರೆಗೆ ನಡೆದ ಅಧ್ಯಯನಗಳು ಜಾನಪದ ಮತ್ತು ಸಾಹಿತ್ಯಿಕ ಅಧ್ಯಯನಗಳಾಗಿದ್ದು. ಪ್ರಸ್ತುತ ಅಧ್ಯಯನದಲ್ಲಿ ಮೂಲಪರಂಪರೆಗಳನ್ನು ಹಟ್ಟಿ ಸಮುದಾಯಗಳು ಉಳಿಸಿಕೊಂಡಿವೆಯೆ?, ನಗರೀಕರಣ ಮತ್ತು ಆಧುನಿಕರಣದ ಜೀವನ ಶೈಲಿ ಇವರ ಮೇಲೆ ಪ್ರಭಾವ ಬೀರಿದೆಯೆ? ಎಂಬುದನ್ನು ಪ್ರಸ್ತುತ ಅಧ್ಯಯನವು ಕೇಂದ್ರಿಕರಿಸುತ್ತದೆ. ಇದುವರೆವಿಗೂ ನಡೆದ ಅಧ್ಯಯನಗಳಲ್ಲಿ ಹಟ್ಟಿಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು ಮತ್ತು ಅವರ ಅನನ್ಯತೆ ಹಾಗೂ ಆಧುನಿಕ ಮುಖಾಮುಖಿಯಾಗಿ ನಡೆದಿರುವ ಸಂಶೋಧನೆಗಳು ತುಂಬಾ ವಿರಳವಾದ್ದರಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಚಿತ್ರದುರ್ಗ ಜಿಲ್ಲೆಯ ಆಯ್ದ ಹಟ್ಟಿಗಳಿಗೆ ಭೇಟಿ ನೀಡಿ ಮಾದರಿ ಬಳಸಿ ಅವಲೋಕನ ಮಾಡಿ ಅನುಸೂಚಿಗಳೊಂದಿಗೆ ಸಂದರ್ಶನ ಮಾಡಿ ಮಾಹಿತಿ ಸಂಗ್ರಹಿಸಲಾಗಿದೆ. ಈ ಅಧ್ಯಯನಕ್ಕಾಗಿ ಮಾಹಿತಿ ಸಂಗ್ರಹಣೆಯಲ್ಲಿ ಎರಡು ಮೂಲಗಳಿಂದ ಮಾಹಿತಿ ಸಂಗ್ರಹಿಸಲಾಗುವುದು.

ಅ)ಪ್ರಾಥಮಿಕ ಮಾಹಿತಿಯ ಮೂಲಗಳು.

ಆ)ಆನುಷಂಗಿಕ ಮಾಹಿತಿಯ ಮೂಲಗಳು.

**ಅ) ಪ್ರಾಥಮಿಕ ಮಾಹಿತಿಯ ಮೂಲಗಳು:-**

ಪ್ರಾಥಮಿಕ ಮಾಹಿತಿಯನ್ನು ಪಡೆಯಲು ಚಿತ್ರದುರ್ಗ ಜಿಲ್ಲೆಯ ೬ ತಾಲ್ಲೂಕುಗಳಲ್ಲಿ ಕ್ಷೇತ್ರ ಅಧ್ಯಯನ ಕೈಗೊಳ್ಳಲಾಗಿದೆ. ಸಂದರ್ಶನ ಅನುಸೂಚಿ ಮೂಲಕ ಖುದ್ದಾಗಿ ಅಧ್ಯಯನ ಕ್ಷೇತ್ರದಲ್ಲಿ ಮಾಹಿತಿದಾರರ ಮೂಲಕ ಮಾಹಿತಿಯನ್ನು ಕಲೆಹಾಕಲಾಯಿತು.ಆ ಮಾಹಿತಿಗಳನ್ನು ಕೋಷ್ಟಕಗಳ ಮೂಲಕ ವಿಶ್ಲೇಷಣೆ ಮಾಡಲಾಯಿತು. ಅಧ್ಯಯನಕ್ಕೆ ಅಗತ್ಯವಾಗಿ ಬೇಕಾಗುವ ಮಾಹಿತಿಯನ್ನು ಅವಲೋಕನದ ಮೂಲಕ, ಪ್ರಶ್ನಾವಳಿ, ಗುಂಪು ಚರ್ಚೆಗಳು, ಸಮೀಕ್ಷೆಗಳು, ಪ್ರಕರಣ ಅಧ್ಯಯನಗಳನ್ನು ಕೈಗೊಂಡು ಮಾಹಿತಿಯನ್ನು ಸಂಗ್ರಹಿಸಲಾಯಿತು. ಅವರ ಆಚರಣೆಗಳು, ಸಂಪ್ರದಾಯಗಳು, ವಿಧಿನಿಷೇಧಗಳು, ಜಾತ್ರೆಗಳು, ಕುಲಾಚರಣೆಗಳ ಬಗ್ಗೆ, ಸಮುದಾಯದ ಐತಿಹ್ಯವನ್ನು ಕಥೆಗಳ ಮೂಲಕ ಹಾಗೂ ಹಾಡಿನ ಮೂಲಕ ಮಾಹಿತಿ ಪಡೆಯಲಾಯಿತು. ಒಂದು ಸಮುದಾಯದ ನೈಜ ಜೀವನವನ್ನು ಅರಿಯಲು ಉಪಯುಕ್ತವಾದ ಮಾಹಿತಿಗಳನ್ನು ಮತ್ತು ಮೂಲ ಆಚರಣೆಗಳನ್ನು ತಿಳಿಯಲು ಪ್ರಾಥಮಿಕ ಮಾಹಿತಿಯ ಮೂಲಗಳಾದ ಅವಲೋಕನ, ಸಂದರ್ಶನ, ಅನುಸೂಚಿಯನ್ನು ಹಾಗೂ ಮಾದರಿಯನ್ನು ಬಳಸಿಕೊಂಡು ಛಾಯಾಚಿತ್ರದೊಂದಿಗೆ, ಧ್ವನಿ ಮುದ್ರಿಸಿಕೊಳ್ಳುವುದರೊಂದಿಗೆ ಮಾಹಿತಿ ಸಂಗ್ರಹಿಸಲಾಯಿತು.

**ಆ) ಆನುಷಂಗಿಕ ಮಾಹಿತಿಯ ಮೂಲಗಳು :-**

ಪ್ರಸ್ತುತ ಅಧ್ಯಯನದಲ್ಲಿ ಆನುಷಂಗಿಕ ಮೂಲಗಳನ್ನು ಸಹ ಬಳಸಿಕೊಳ್ಳಲಾಗಿದೆ. ಇದುವರೆಗೆ ಹಟ್ಟಿ ಸಮುದಾಯಗಳ ಮೇಲೆ ನಡೆದ ಅಧ್ಯಯನಗಳ ಪ್ರಬಂಧಗಳು, ಕೃತಿಗಳು ಹಾಗೂ ಪತ್ರಿಕೆಯಲ್ಲಿ ಪ್ರಕಟಗೊಂಡ ಲೇಖನಗಳು, ಸಂಶೋಧನ ಗ್ರಂಥಗಳು, ಸರ್ಕಾರದ ವರದಿಗಳು, ಮ್ಯಾಗಝಿನ್‌ಗಳು ಮತ್ತು ವರದಿಗಳು, ಜನಗಣತಿ ವರದಿಗಳು, ಆಯೋಗಗಳ ವರದಿಗಳು, ಮಾನವ ಅಭಿವೃದ್ಧಿ ವರದಿಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಸಂದರ್ಶನದಲ್ಲಿ ಕಲೆಹಾಕಿದ ಮಾಹಿತಿಯನ್ನು ಸಂಖ್ಯಾಶಾಸ್ತ್ರೀಯ ವಿಧಾನದಲ್ಲಿ ವಿಶ್ಲೇಷಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಒಟ್ಟು ೧೧೦ ಸೂಚ್ಯಾಂಕಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಕುಟುಂಬಗಳ ಮೌಖಿಕ ಸಂದರ್ಶನದ ಮೂಲಕ ದಾಖಲಿಸಿಕೊಳ್ಳಲಾಗಿದೆ. ಆನುಷಂಗಿಕ ಮಾಹಿತಿಯನ್ನು ಪ್ರಾಥಮಿಕ ಮಾಹಿತಿಯೊಂದಿಗೆ ತಾಳೆನೋಡಿ ವಿಶ್ಲೇಷಣೆ ಮಾಡಲಾಗಿದೆ.

ಪ್ರಸ್ತುತ ಅಧ್ಯಯನವನ್ನು ಗಟ್ಟಿಗೊಳಿಸುವುದಕ್ಕಾಗಿ ಆಧುನಿಕ ತಂತ್ರಜ್ಞಾನದ ಉಪಕರಣಗಳನ್ನು ಬಳಸಲಾಗಿದೆ.ಅವುಗಳೆಂದರೆ ವೀಡಿಯೋ, ಕ್ಯಾಮರ ರೆಕಾರ್ಡರ್ ಅವುಗಳ ಸಹಾಯದಿಂದ ಗುಣಾತ್ಮಕ ಮತ್ತು ಪರಿಣಾಮಾತ್ಮಕ ಮಾಹಿತಿ ಸಂಗ್ರಹಿಸಲಾಗಿದೆ. ಅಧ್ಯಯನ ಕ್ಷೇತ್ರ ವಿಶಾಲವಾದ್ದರಿಂದ ಮಾದರಿಯನ್ನು ಬಳಸಿ ಆಯ್ದ ಹಟ್ಟಿಗಳಿಗೆ ಮಾತ್ರ ಭೇಟಿ ನೀಡಿ ಮಾಹಿತಿ ಸಂಗ್ರಹಿಸಲಾಗಿದೆ.

ಪ್ರಸ್ತುತ ಅಧ್ಯಯನವನ್ನು ಚಿತ್ರದುರ್ಗ ಜಿಲ್ಲೆಯ ಒಟ್ಟು ಆರು ತಾಲ್ಲೂಕುಗಳು ಇದ್ದು ಪ್ರತೀ ತಾಲ್ಲೂಕಿನಿಂದ ಸೂಚನದಾರರನ್ನು ಆಯ್ಕೆಮಾಡಿ ಪ್ರಶ್ನಾವಳಿಯ ಮೂಲಕ ಮಾಹಿತಿಯನ್ನು ಸಂಗ್ರಹಿಸಿ ಕೋಷ್ಟಕ ಪಟ್ಟಿಗಳ ಮೂಲಕ ವಿಶ್ಲೇಷಣೆ ಮಾಡಲಾಗಿದೆ. ಹಟ್ಟಿಸಂಸ್ಕೃತಿಯ ಅಧ್ಯಯನಕ್ಕಾಗಿ ಆಯ್ಕೆ ಮಾಡಿದ ತಾಲ್ಲೂಕುವಾರು ಹಟ್ಟಿಯ ಸಂಖ್ಯೆಗಳ ವಿವರ ಕೆಳಕಂಡಂತಿರುತ್ತದೆ.

**ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲರ ಹಟ್ಟಿಗಳು:**

ಚಿತ್ರದುರ್ಗ ಜಿಲೆಯಲ್ಲಿ ಒಟ್ಟು ೬ ತಾಲ್ಲೂಕುಗಳಿಂದ ೧೫೨ ಸೂಚನಾದಾರರನ್ನು ಆಯ್ಕೆ ಮಾಡಲಾಗಿದೆ. ಚಿತ್ರದುರ್ಗ ಕಾಡುಗೊಲ್ಲರ ಹಟ್ಟಿಗಳಲ್ಲಿ ಈ ಕೆಳಕಂಡ ಮಾದರಿ ಪ್ರಮಾಣವನ್ನು ಆಯ್ಕೆಮಾಡಲಾಗಿದೆ.

**ಚಿತ್ರದುರ್ಗ ಜಿಲ್ಲೆ**

| ಚಿತ್ರದುರ್ಗ | ಚಳ್ಳಕೆರೆ | ಮೊಳಕಾಲ್ಮೂರು | ಹೊಳಲ್ಕೆರೆ | ಹೊಸದುರ್ಗ | ಹಿರಿಯೂರು |
|---|---|---|---|---|---|
| ೨೫ | ೨೫ | ೨೫ | ೨೫ | ೨೫ | ೨೭ |

ಚಿತ್ರದುರ್ಗ ಜಿಲ್ಲೆಯಲ್ಲಿ ಕಾಡುಗೊಲ್ಲರ ಪ್ರಮುಖ ಹಟ್ಟಿಗಳನ್ನು ಕಟ್ಟೆಮನೆ, ದೈವಿಕತಾಣಗಳು ಮತ್ತು ಮೂಲ ಸಂಪ್ರದಾಯಗಳನ್ನು ಹೊಂದಿರುವ ಹಟ್ಟಿಗಳನ್ನು ಆಧಾರವಾಗಿಟ್ಟುಕೊಂಡು ಮಾದರಿ ಆಯ್ಕೆಯ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ.

**ಚಿತ್ರದುರ್ಗ ಜಿಲ್ಲೆಯ ಮ್ಯಾಸಬೇಡರ ಹಟ್ಟಿಗಳು:**

ಚಿತ್ರದುರ್ಗ ಜಿಲೆಯಲ್ಲಿನ ೩ ತಾಲ್ಲೂಕುಗಳಿಂದ ೨೨ ಸೂಚನಾದಾರರನ್ನು ಆಯ್ಕೆ ಮಾಡಿ ಚಿತ್ರದುರ್ಗ ಮ್ಯಾಸಬೇಡರ ಹಟ್ಟಿಗಳಲ್ಲಿ ಈ ಕೆಳಕಂಡ ಮಾದರಿ ಪ್ರಮಾಣವನ್ನು ಆಯ್ಕೆಮಾಡಲಾಗಿದೆ.

**ಚಿತ್ರದುರ್ಗ ಜಿಲ್ಲೆ**

| ಚಿತ್ರದುರ್ಗ | ಚಳ್ಳಕೆರೆ | ಮೊಳಕಾಲ್ಮೂರು |
|---|---|---|
| ೧೩ | ೦೬ | ೦೩ |

ಚಿತ್ರದುರ್ಗ ತಾಲ್ಲೂಕಿನಿಂದ ಮ್ಯಾಸಬೇಡರ ಹಟ್ಟಿಗಳಲ್ಲಿ ಅಧ್ಯಯನಕ್ಕೆ ಹೆಚ್ಚು ಸೂಚನದಾರರನ್ನು ಆಯ್ಕೆಮಾಡಿಕೊಂಡಿರುವ ಹಿನ್ನಲೆ ಏನೆಂದರೆ ಚಿತ್ರದುರ್ಗ ತಾಲ್ಲೂಕಿನಲ್ಲಿ ಹಟ್ಟಿ ಸಂಸ್ಕೃತಿ ಪರಂಪರೆ

ಇನ್ನೂ ಜೀವಂತವಾಗಿರುವುದನ್ನು ಕೆಲವು ಅಧ್ಯಯನಗಳು ಗುರುತಿಸಿರುವುದು ಕಂಡುಬಂದಿದೆ. ಹೀಗಾಗಿ ಆ ಪ್ರದೇಶದಲ್ಲಿ ಹೆಚ್ಚು ಸೂಚನದಾರರನ್ನು ಅಧ್ಯಯನಕ್ಕೆ ಒಳಪಡಿಸಿದೆ.

ಈ ಮೇಲ್ಕಂಡ ೧೭೪ ಮಾಹಿತಿದಾರರನ್ನು ವೈಯುಕ್ತಿಕವಾಗಿ ಸಂದರ್ಶನಕ್ಕೊಳಪಡಿಸಿ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಹಟ್ಟಿಗಳಲ್ಲಿ ಮಾಹಿತಿ ಸಂಗ್ರಹಣೆ ಮಾಡಲಾಗಿದೆ. ಮ್ಯಾಸಬೇಡರ ಹಟ್ಟಿಗಳು ಚಿತ್ರದುರ್ಗ ಜಿಲ್ಲೆಯಲ್ಲಿ ಅತಿ ಹೆಚ್ಚು ಜನಸಂಖ್ಯೆ ಇರುವ ಮೊಳಕಾಲ್ಮೂರು, ಚಳ್ಳಕೆರೆ, ಚಿತ್ರದುರ್ಗ ತಾಲ್ಲೂಕುಗಳಲ್ಲಿ ಪ್ರಾತಿನಿಧಿಕವಾಗಿ ಆಯ್ಕೆ ಮಾಡಿಕೊಂಡು ಮಾಹಿತಿ ಸಂಗ್ರಹಿಸಲಾಗಿದೆ. ಮೊಳಕಾಲ್ಮೂರು ತಾಲ್ಲೂಕಿನ ಕಂಪಳದೇವರಹಟ್ಟಿಯನ್ನೆ ಆಯ್ಕೆ ಮಾಡಿಕೊಂಡಿರುವ ಉದ್ದೇಶವೆಂದರೆ ಮ್ಯಾಸಮಂಡಲದವರಿಗೆ ಕಂಪಳದೇವರು ಗುರುಸ್ಥಾನವಾಗಿರುವುದರಿಂದ, ಮ್ಯಾಸಮಂಡಲದ ಎಲ್ಲಾ ಕೋಮಿನವರು ಈ ದೇವರಿಗೆ ಬರುವುದರಿಂದ ಈ ಹಟ್ಟಿಯು ಸಂಶೋಧನಾ ದೃಷ್ಟಿಯಿಂದ ಮಹತ್ವ ಪಡೆದುಕೊಂಡಿದೆ. ಹಾಗೆಯೇ ಚಿತ್ರದುರ್ಗ ಜಿಲ್ಲೆಯ ಗೋನೂರು ಮ್ಯಾಸಬೇಡರ ಕಟ್ಟೆಮನೆಯಾಗಿರುವುದರಿಂದ ಮತ್ತು ನನ್ನಿವಾಳ ಹಟ್ಟಿಯು ಕಟ್ಟೆಮನೆಯೂ ಹೌದು ಮತ್ತು ಎತ್ತೈಗಳ ಗೂಡು ಇರುವ ನೆಲೆಯಾಗಿರುವುದರಿಂದ ಮಹತ್ವ ಪಡೆದುಕೊಂಡಿದ್ದು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

**೧.೫ ಅಧ್ಯಯನ ಕ್ಷೇತ್ರದ ವ್ಯಾಪ್ತಿ:**

ಕರ್ನಾಟಕ ರಾಜ್ಯವು ಕನ್ನಡ ಭಾಷೆಯನ್ನು ಪ್ರಧಾನವಾಗಿ ಮಾತನಾಡುವ ಜನರು ವಾಸವಾಗಿರುವ ಪ್ರದೇಶವಾಗಿದ್ದು ಐತಿಹಾಸಿಕ ಹಾಗೂ ಭೌಗೋಳಿಕ ಹಿನ್ನೆಲೆಯ ದೃಷ್ಟಿಯಿಂದ ವೈವಿಧ್ಯತೆಯನ್ನು ಪಡೆದುಕೊಂಡಿದೆ. ಧರ್ಮ, ಜಾತಿ, ಜನಾಂಗ, ಸಮುದಾಯ, ಸಂಸ್ಕೃತಿ, ಇವೆಲ್ಲವೂ ಬಹಳ ಪ್ರಾಮುಖ್ಯತೆ ಪಡೆದುಕೊಂಡಿವೆ.

ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಹಟ್ಟಿಸಂಸ್ಕೃತಿಯು ಚಿತ್ರದುರ್ಗ ಜಿಲ್ಲೆಯದಾಗಿದ್ದು, ಜಿಲ್ಲೆಯ ಉದ್ದಗಲಕ್ಕೂ ಹರಡಿಕೊಂಡಿರುವ ಬೆಟ್ಟ, ಗುಡ್ಡಗಳ ಸಾಲು, ಕೋಟೆಕೊತ್ತಲಗಳು, ಗುಡಿಗುಂಡಾರಗಳು, ಕಲೆ, ಶಾಸನಸ್ಮಾರಕಗಳು, ಬುಡಕಟ್ಟುಸಂಸ್ಕೃತಿ, ಜನಪದ ಕಲಾವಿದರು ಹೀಗೆ ಭವ್ಯ ಇತಿಹಾಸವನ್ನು ಹೊಂದಿದೆ. ಚಿತ್ರದುರ್ಗವನ್ನು ಅಧ್ಯಯನದ ಹಿನ್ನೆಲೆಯಲ್ಲಿ ಭೌಗೋಳಿಕ ಆಯಾಮದಲ್ಲಿ ಅವಲೋಕಿಸಿದರೆ ತನ್ನ ವ್ಯಾಪ್ತಿಯ ಸರಹದ್ದುಗಳು ಎಲ್ಲಿಯವರಗೆ ವಿಸ್ತರಿಸಿದೆ ಎಂಬುದರ ಪ್ರಮಾಣವನ್ನು ಗುರುತಿಸಲಾಗಿದೆ. ಒಂದು ಸಮುದಾಯವನ್ನು ನೋಡುವುದಾದರೆ ಆ ಸಮುದಾಯ ಚಿಕ್ಕದೊ ಅಥವಾ ದೊಡ್ಡದೊ ಆ ಸಮುದಾಯದ ಗಾತ್ರವನ್ನು ಗುರುತಿಸಬಹುದು. ಕೆಳಗೆ ಕೊಟ್ಟಿರುವ ಕೋಷ್ಟಕ ಚಿತ್ರದುರ್ಗ ಜಿಲ್ಲೆಯನ್ನು ತಿಳಿಸುತ್ತದೆ. ಜಿಲ್ಲೆಯಲ್ಲಿ ಒಟ್ಟು ಆರು ತಾಲ್ಲೂಕುಗಳು ಇದ್ದು ಆ ತಾಲ್ಲೂಕುಗಳಲ್ಲಿ ತಾಲ್ಲೂಕುವಾರು ವಿಂಗಡಣೆ ಮಾಡಿರುವುದನ್ನು ತಿಳಿಸುತ್ತದೆ.

ಕೋಷ್ಟಕ: ೧

೨೦೧೧-೧೨ನೇ ಸಾಲಿನ ಜನಗಣತಿ ಪ್ರಕಾರ ಚಿತ್ರದುರ್ಗ ಜಿಲ್ಲೆಯ ಒಟ್ಟು ವಿಸ್ತೀರ್ಣ ಮತ್ತು ಜನಸಂಖ್ಯೆ

| ಕ್ರ.ಸಂ | ತಾಲ್ಲೂಕು | ಭೌಗೋಳಿಕ ವಿಸ್ತೀರ್ಣ (ಚ.ಕಿ) | ಒಟ್ಟು ಜನಸಂಖ್ಯೆ | | | ಒಟ್ಟು ಕುಟುಂಬಗಳು | | | ದಶಕದ ಬೆಳವಣಿಗೆ ಪ್ರಮಾಣ (ಪ್ರತಿಶತ) |
|---|---|---|---|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು | ನಗರ | ಗ್ರಾಮೀಣ | ಒಟ್ಟು | |
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ |
| ೧ | ಚಳ್ಳಕೆರೆ | ೨೦೬೩.೯೩ | ೧೮೫೯೩೧ | ೧೭೯೮೫೩ | ೩೬೫೭೮೪ | ೧೨೦೫೦ | ೬೪೩೧೧ | ೭೬೩೬೧ | ೧೦.೦೮ |
| ೨ | ಚಿತ್ರದುರ್ಗ | ೧೩೭೫.೭೨ | ೨೧೪೫೬೩ | ೨೦೯೩೧೬ | ೪೨೩೮೭೯ | ೩೩೪೧೧ | ೫೬೮೪೫ | ೯೦೨೫೬ | ೧೨.೭೨ |
| ೩ | ಹಿರಿಯೂರು | ೧೭೦೧.೪೦ | ೧೪೪೧೬೦ | ೧೪೧೯೭೩ | ೨೮೬೧೩೩ | ೧೩೦೭೧ | ೫೧೦೧೫ | ೬೪೦೮೬ | ೮.೨೩ |
| ೪ | ಹೊಳಲ್ಕೆರೆ | ೧೦೯೪.೮೪ | ೧೦೪೯೯೨ | ೧೦೨೨೬೮ | ೨೦೭೨೬೦ | ೪೮೭೫ | ೪೦೮೫೫ | ೪೫೭೩೦ | ೪.೮೬ |
| ೫ | ಹೊಸದುರ್ಗ | ೧೪೧೬.೪೦ | ೧೧೯೧೪೮ | ೧೧೫೯೬೮ | ೨೩೫೧೧೬ | ೬೫೭೮ | ೪೬೪೪೧ | ೫೩೦೧೯ | ೭.೨೧ |
| ೬ | ಮೊಳಕಾಲ್ಮೂರು | ೭೩೬.೪೯ | ೭೨೦೪೯ | ೬೯೨೩೫ | ೧೪೧೨೮೪ | ೩೩೪೯ | ೨೪೨೦೨ | ೨೭೫೫೧ | ೧೦.೯೧ |
| | ಒಟ್ಟು | ೮೩೮೮.೭೮ | ೮೪೦೮೪೩ | ೮೧೮೬೧೩ | ೧೬೫೯೪೫೬ | ೭೩೩೩೪ | ೨೮೩೬೬೯ | ೩೫೭೦೦೩ | ೯.೩೯ |

ಚಿತ್ರದುರ್ಗ ಜಿಲ್ಲೆಯ ಒಟ್ಟು ಜನಸಂಖ್ಯೆ : ೧೬,೫೯,೪೫೬

(ಮೂಲ :ಜಿಲ್ಲಾ ಸಂಗ್ರಹಣಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆಯ ಅಂಕಿಅಂಶಗಳ ನೋಟ ೨೦೧೧)

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಚಿತ್ರದುರ್ಗ ಜಿಲ್ಲೆಯಲ್ಲಿ ಎಷ್ಟು ಜನಸಂಖ್ಯೆ ನೆಲೆಸಿದೆ. ಇದರಲ್ಲಿ ಸ್ತ್ರೀಪುರುಷರ ಪ್ರಮಾಣ ಎಷ್ಟಿದೆ. ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ ಎಷ್ಟಿದೆ, ಯಾವ

ತಾಲ್ಲೂಕಿನ ಭೌಗೋಳಿಕ ವಿಸ್ತೀರ್ಣ ಹೆಚ್ಚಾಗಿದೆ, ಗ್ರಾಮೀಣ ಪ್ರದೇಶದಲ್ಲಿ ಎಷ್ಟು ಜನರು ವಾಸಿಸುತ್ತಿದ್ದಾರೆ. ದಶಕದ ಬೆಳವಣಿಗೆಯ ಶೇಕಡ ಪ್ರಮಾಣವನ್ನು ತಿಳಿಸುತ್ತದೆ. ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲೆಯ ಜನಸಂಖ್ಯಾ ಬೆಳವಣಿಗೆಯನ್ನು ವಿಷದೀಕರಿಸುತ್ತದೆ.

ಚಿತ್ರದುರ್ಗ ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತೀರ್ಣವು ೮೩೮೮.೭೮ ರಷ್ಟು ಇದ್ದು ತಾಲ್ಲೂಕುವಾರು ಭೌಗೋಳಿಕ ವಿಸ್ತೀರ್ಣವನ್ನು ಗಮನಿಸಿದಾಗ ಚಳ್ಳಕೆರೆ ೨೦೬೩.೯೩ ರಷ್ಟು ಇದ್ದು ವಿಸ್ತೀರ್ಣದಲ್ಲಿ ಪ್ರಥಮ ಸ್ಥಾನ ಪಡೆದಿರುತ್ತದೆ. ೧೭೦೧.೪೦ ರಷ್ಟು ಹೊಂದಿರುವ ಹಿರಿಯೂರು ವಿಸ್ತೀರ್ಣದಲ್ಲಿ ಎರಡನೇ ಸ್ಥಾನ ಪಡೆದಿರುವುದು ಜನಗಣತಿ ಸಮೀಕ್ಷೆಯಿಂದ ತಿಳಿದುಬರುತ್ತದೆ. ಕ್ರಮವಾಗಿ ಹೊಸದುರ್ಗ ೧೪೧೬.೪೦ ರಷ್ಟು ಇದ್ದು ಚಿತ್ರದುರ್ಗವು ೧೩೭೫.೭೨ ರಷ್ಟು ಇದ್ದು ಮೊಳಕಾಲ್ಮುರು ವಿಸ್ತೀರ್ಣದಲ್ಲಿ ಅತಿಕಡಿಮೆ ಅಂದರೆ ೭೩೬.೪೯ ಚ.ಕಿ ವಿಸ್ತೀರ್ಣವನ್ನು ಹೊಂದಿರುವುದು ಕಂಡುಬರುತ್ತದೆ.

ಮೇಲಿನ ಕೋಷ್ಟಕದ ಪ್ರಕಾರ ಸ್ತ್ರೀಪುರುಷರ ಪ್ರಮಾಣವನ್ನು ಗುರುತಿಸಿದಾಗ ಚಿತ್ರದುರ್ಗ ಜಿಲ್ಲೆಯಲ್ಲಿ ೨,೧೪,೫೬೩ರಷ್ಟು ಪುರುಷರಿದ್ದರೆ, ೨,೦೯೩೧೬ ರಷ್ಟು ಸ್ತ್ರೀಯರಿರುವುದು ಕಂಡುಬಂದಿದೆ. ಪುರುಷರ ಸಂಖ್ಯೆಯೇ ಹೆಚ್ಚಾಗಿರುವುದು ಕಂಡುಬರುತ್ತದೆ. ಎರಡನೇ ಸ್ಥಾನದಲ್ಲಿ ಬರುವ ಚಳ್ಳಕೆರೆ ತಾಲ್ಲೂಕಿನಲ್ಲಿ ೧,೮೫,೯೩೧ ರಷ್ಟು ಪುರುಷರಿದ್ದರೆ ಅದೇ ಸ್ತ್ರೀಯರ ಪ್ರಮಾಣ ೧,೭೯,೮೫೩ ರಷ್ಟು ಕಂಡುಬರುತ್ತದೆ. ಒಟ್ಟಾರೆ ಜನಸಂಖ್ಯೆಯಲ್ಲಿ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೧,೪೧,೨೮೪ ರಷ್ಟು ಜನಸಂಖ್ಯೆ ಇದ್ದು ಇಲ್ಲಿಯೂ ಸ್ತ್ರೀಪುರುಷರ ಪ್ರಮಾಣ ವ್ಯತ್ಯಾಸಗೊಂಡಿರುವುದನ್ನು ಗಮನಿಸಿದರೆ ಪುರುಷರ ಪ್ರಮಾಣ ೭೨,೦೪೯ ರಷ್ಟು ಇದ್ದು ಸ್ತ್ರೀಯರ ಪ್ರಮಾಣ ೬೯,೨೩೫ ರಷ್ಟು ಕಂಡುಬಂದಿದೆ.ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಎಲ್ಲಾ ತಾಲ್ಲೂಕುಗಳ ಸ್ತ್ರೀಪುರುಷರ ಸಂಖ್ಯಾ ಪ್ರಮಾಣದಲ್ಲಿ ಪುರುಷರೇ ಹೆಚ್ಚಾಗಿರುವುದು ಕಂಡುಬರುತ್ತದೆ.

ಕೋಷ್ಠಕದ ಸಮೀಕ್ಷೆಯ ಪ್ರಕಾರ ವಾಸಿಸುವಿಕೆಯ ದೃಷ್ಟಿಯಿಂದ ಗ್ರಾಮ ಮತ್ತು ನಗರದ ಕುಟುಂಬಗಳ ಸಂಖ್ಯಾ ಪ್ರಮಾಣವನ್ನು ನೋಡಿದಾಗ ತಾಲ್ಲೂಕುವಾರು ಕುಟುಂಬಗಳ ಸಂಖ್ಯೆ ಗಮನಿಸಿದಾಗ ಚಿತ್ರದುರ್ಗ ತಾಲ್ಲೂಕಿನಲ್ಲಿ ೫೬,೮೪೫ ಕುಟುಂಬಗಳು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದ್ದು, ೩೩,೪೧೧ ಕುಟುಂಬಗಳು ನಗರ ಪ್ರದೇಶದಲ್ಲಿ ವಾಸಿಸುವುದು ಕಾಣಬಹುದು. ವಿಸ್ತೀರ್ಣದಲ್ಲಿ ಎರಡನೇ ಸ್ಥಾನದಲ್ಲಿರುವ ಚಳ್ಳಕೆರೆ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ೬೪,೩೧೧ ರಷ್ಟು ಇದ್ದು ನಗರ ಪ್ರದೇಶದಲ್ಲಿ ೧೨,೦೫೦ ರಷ್ಟು ಕುಟುಂಬಗಳು ವಾಸಿಸುವುದನ್ನು ಕಾಣಬಹುದು. ಎಲ್ಲಾ ತಾಲ್ಲೂಕುಗಳ ವಾಸಿಸುವ ಕುಟುಂಬಗಳ ಸಂಖ್ಯೆಯನ್ನು ಗಮನಿಸಿದರೆ ಗ್ರಾಮೀಣ ಪ್ರದೇಶದಲ್ಲಿ ವಾಸಿಸುವವರ ಕುಟುಂಬಗಳ ಸಂಖ್ಯೆಯೇ ಹೆಚ್ಚಾಗಿರುವುದು ಕಂಡುಬರುತ್ತದೆ. ಒಟ್ಟಾರೆಯಾಗಿಚಿತ್ರದುರ್ಗ ಜಿಲ್ಲೆಯ ಜನಸಂಖ್ಯೆ ೧೬,೫೯,೪೫೬ ರಷ್ಟು ಇರುವುದು ಕಂಡುಬರುತ್ತದೆ.[೫]

## ಚಿತ್ರದುರ್ಗ ಜಿಲ್ಲೆಯ ಐತಿಹಾಸಿಕ ಹಿನ್ನೆಲೆ:

ಚಿತ್ರದುರ್ಗ ಹಿಂದಿನಿಂದಲೂ ಅನೇಕ ಹೆಸರುಗಳಿಂದ ಕರೆಯಲ್ಪಟ್ಟಿದೆ. ಇಲ್ಲಿಯ ಶಾಸನಗಳಲ್ಲಿ ಚಿಂಚಿಸಕಲ್ಲು, ಚಿತ್ರದುರ್ಗದ ಪಾಳೇಗಾರರ ಮೂಲ ಪುರುಷ ಚಿತ್ರನಾಯಕನ ಹೆಸರಿನಲ್ಲಿ ಚಿತ್ರದುರ್ಗ ಎಂದು ಹೆಸರಾಗಿದೆ ಎಂಬ ಅಭಿಪ್ರಾಯವಿದೆ. ತೆಲುಗು ಭಾಷೆಯಲ್ಲಿ 'ಚಿತ್ರಕಲ್ಲು ದುರ್ಗ' ಎಂದು ಕರೆಯಲ್ಪಟ್ಟಿದೆ. ಸೀತೆಯನ್ನು ಅಪಹರಿಸಿದ ರಾವಣನೊಂದಿಗೆ ಜಟಾಯು ಹೋರಾಡಿ ಅಸುನೀಗಿದ್ದರ ನೆನಪಿಗಾಗಿ ಆ ಪ್ರದೇಶವನ್ನು 'ಜಟ್ಟಂಗಿ ರಾಮೇಶ್ವರ' ಎಂದು ಕರೆಯಲಾಗಿದೆ.




ಕ್ರಿ.ಶ ೧೨೮೬ ರಲ್ಲಿ ಬೆಮ್ಮತ್ತನೂರು ದುರ್ಗ ಎಂದು, ಕ್ರಿ.ಶ.೧೬೯೮ರಲ್ಲಿನ (ನೀರ್ಥಡಿ ದಾವಣಗೆರೆ ೧೬ನೇ ಶಾಸನದಲ್ಲಿ) " ಚಿಂನ್ಮನಗಿರಿದುರ್ಗ"ಎಂದು ಕ್ರಿ.ಶ. ೧೭೦೦ ರಲ್ಲಿ (ಚಿತ್ರದುರ್ಗ ೩೭ನೇ ಮದಕರಿಪುರ) ಶಿಂಗನಗಿರಿದುರ್ಗ ಎಂದು, ಕ್ರಿ.ಶ.೧೭೧೪ ರಲ್ಲಿ (ಚಿತ್ರದುರ್ಗದ ೩೧ನೇ ಶಾಸನದಲ್ಲಿ) ಚಿಂಗನಗಿರಿದುರ್ಗ ಎಂದು ಕ್ರಿ.ಶ. ೧೭೩೦ ರಲ್ಲಿ (ಚಿತ್ರದುರ್ಗದ ೫೪ನೇ ಶಾಸನದಲ್ಲಿ) ಚಿಂತಕಲದುರ್ಗ ನಂತರ ಚಿಂತನಕಲ್ಲುದುರ್ಗ, ಚಿತ್ರದುರ್ಗ ಎಂದು ಕರೆಯಲ್ಪಟ್ಟಿದೆ. ಕೃಷ್ಣದೇವರಾಯನ ದಿನಚರಿಯಲ್ಲಿ ಚಿಮುಟದುರ್ಗ ಎಂದು ಹೆಸರಿದೆ.

ಪೌರಾಣಿಕ ಕಾಲಕ್ಕಿಂತ ಮೊದಲೇ ಚಿನ್ಮೂಲಾದ್ರಿಪುರವೆಂದು, ಆಂಧ್ರ ಭೃತ್ಯರ ಕಾಲದಲ್ಲಿ ಚಂದ್ರವಳ್ಳಿ ಎಂದು ಕರೆಯಲ್ಪಟ್ಟಿದೆ. ಟಿಪ್ಪುಸುಲ್ತಾನನ ಕಾಲದಲ್ಲಿ ಫರ್ರಕಾಬಾದ್ ಎಂದು ಇಂಗ್ಲೀಷರ ಕಾಲದಲ್ಲಿ "ಚಿಟಲ್‌ಡ್ರುಗ್" ಎಂದು ಪ್ರಸ್ತುತ ಚಿತ್ರದುರ್ಗ ಎಂದು ಕರೆಯಲಾಗುತ್ತಿದೆ.[೬]

ಮ್ಯಾಸನಾಯಕರ ರಾಜಧಾನಿ ಚಿತ್ರದುರ್ಗ ಐತಿಹಾಸಿಕವಾಗಿ ಪ್ರಸಿದ್ದವಾಗಿದ್ದು ಈ ಜಿಲ್ಲೆಯು ಮೌರ್ಯರು, ಶಾತವಾಹನರು, ಗಂಗರು, ಕದಂಬರು, ಚಾಲುಕ್ಯರು, ಹೊಯ್ಸಳರು, ರಾಷ್ಟ್ರಕೂಟರು, ನೊಳಂಬರು, ವಿಜಯನಗರ ಅರಸರು, ಮೈಸೂರು ಒಡೆಯರು ಹಾಗೂ ಸುಲ್ತಾನರು ಮತ್ತು ಚಿತ್ರದುರ್ಗದ ಪಾಳೆಗಾರರ ಆಳ್ವಿಕೆಯನ್ನು ಕಂಡಿದೆ. ಇದರ ಕುರುಹಾಗಿ ಕೋಟೆಗಳು, ಶಾಸನಗಳು ನಾಣ್ಯಗಳು ಲಭ್ಯವಾಗಿವೆ. ಚಿತ್ರದುರ್ಗದ ಪಾಳೆಗಾರರ ಆಡಳಿತದ ಅವಧಿಯಲ್ಲಿ ಇದು ತನ್ನ ವೈಭವದ ಪರಕಾಷ್ಟತೆ ಮೆರೆದಿರುವುದು ಜಿಲ್ಲೆಯ ಇತಿಹಾಸಕ್ಕೊಂದು ಮೆರಗು. ಇಲ್ಲಿನ ಬೆಟ್ಟಗಳು ಮತ್ತು ಕೋಟೆ, ಚಂದ್ರವಳ್ಳಿ, ಆಡುಮಲ್ಲೇಶ್ವರ, ಜೋಗಿಮಟ್ಟಿ ಗಿರಿಧಾಮ, ಗಾಳಿ ಪಂಕಗಳು, ಮುರುಘರಾಜೇಂದ್ರ ಬೃಹನ್ಮಠ, ಚಿತ್ರದುರ್ಗ ಬೆಟ್ಟದ ಮೇಲಿರುವ ೧೪ ದೇವಾಲಯಗಳು ಅವುಗಳಲ್ಲಿ ಪ್ರಮುಖವಾದವು ಸಂಪಿಗೆ ಸಿದ್ದೇಶ್ವರ, ಹಿಡಿಂಬೇಶ್ವರ, ಏಕನಾಥೇಶ್ವರಿ ಇತ್ಯಾದಿ.

ಚಿತ್ರದುರ್ಗ ಜಿಲ್ಲೆಯು ಕರ್ನಾಟಕ ರಾಜ್ಯದಲ್ಲಿ ಹಿಂದುಳಿದ, ಬರಗಾಲಕ್ಕೆ ತುತ್ತಾಗುತ್ತಿರುವ ಹೆಚ್ಚು ಬುಡಕಟ್ಟು ಜನಾಂಗಗಳಿಂದ ಆವೃತವಾಗಿದೆ. ಪಶುಸಂಗೋಪನೆ ಹಾಗೂ ಕೃಷಿ ಅವಲಂಬಿಸಿರುವ ಬಯಲುಸೀಮೆಯಾಗಿದೆ. ಈ ಜಿಲ್ಲೆಯ ಹವಾಮಾನ ಬೇಸಿಗೆಯಲ್ಲಿ ಬಿಸಿಲು ಹೆಚ್ಚು ಏಪ್ರಿಲ್ ತಿಂಗಳಿನಲ್ಲಿ ೪೧೦ ಸೆ.ನಷ್ಟು ಉಷ್ಣಾಂಶವಿರುತ್ತದೆ. ನವೆಂಬರ್, ಡಿಸೆಂಬರ್‌ನಲ್ಲಿ ೧೬.೬೦ ಸೆ.ನಷ್ಟು ಉಷ್ಣಾಂಶವಿರುತ್ತದೆ. ವೇದಾವತಿ ನದಿಯು ಚಿತ್ರದುರ್ಗ ಜಿಲ್ಲೆಯ ಮುಖ್ಯನದಿಯಾಗಿದ್ದು ಸುಮಾರು ೨೦೮ ಕೀ.ಮಿ.ನಷ್ಟು ಉದ್ದವಿದ್ದು ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲ್ಲೂಕಿನ ತುಂಗಭದ್ರ ನದಿಯನ್ನು ಸೇರುತ್ತದೆ. ಸುವರ್ಣಮುಖಿ ನದಿ ಹಾಗೂ ಚಿಕ್ಕಹಗರಿ (ಜನಿಗೆಹಳ್ಳ), ನಾಯಕನಹಟ್ಟಿಹಳ್ಳ ಸಹ ಮುಖ್ಯವಾಗಿರುತ್ತವೆ. ಚಿತ್ರದುರ್ಗದಲ್ಲಿ ೨೦೧೦ ರಲ್ಲಿ ವಾರ್ಷಿಕ ಮಳೆಯ ಸರಾಸರಿ ૩೮೬.೬ ಮಿ.ಮೀನಷ್ಟು ದಾಖಲಾಗಿದೆ. ಜಿಲ್ಲೆಯಲ್ಲಿ ಮಳೆಯ ಪ್ರಮಾಣ ಕಡಿಮೆಯಿದ್ದು, ರಾಗಿ, ಶೇಂಗಾ, ಸಜ್ಜೆ, ಜೋಳ, ಮತ್ತು ನೀರಾವರಿ ಸೌಲಭ್ಯವಿರುವ ಕಡೆ ಭತ್ತ, ತರಕಾರಿಗಳನ್ನು ಬೆಳೆಯಲಾಗುತ್ತದೆ.

**ಜಿಲ್ಲೆಯ ಸಾಗುವಳಿಯ ವಿವರ**

ಚಿತ್ರದುರ್ಗ ಜಿಲ್ಲೆಯು ಕರ್ನಾಟಕ ರಾಜ್ಯದ ಒಟ್ಟು ಭೂಪ್ರದೇಶದಲ್ಲಿ ಎಂಟನೆಯಸ್ಥಾನದಲ್ಲಿದೆ. ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತೀರ್ಣವು ೮૩೮೮.೭೮ ಹೆಕ್ಟೇರ್ ಪ್ರದೇಶವಿರುವುದನ್ನು ಕಾಣಬಹುದು. ಚಿತ್ರದುರ್ಗ ಜಿಲ್ಲೆಯಲ್ಲಿ ಆರು ತಾಲ್ಲೂಕುಗಳಿದ್ದು, ಆ ತಾಲ್ಲೂಕುಗಳಲ್ಲಿ ಈ ಕೆಳಕಂಡ ಭೌಗೋಳಿಕ ವಿಸ್ತೀರ್ಣವನ್ನು ಕಾಣಲಾಗುವುದು.[೭]

**ಕೋಷ್ಟಕ: ೨**

**ಜಿಲ್ಲೆಯ ಸಾಗುವಳಿಯ ವಿವರ**

| ಕ್ರಸಂ | ತಾಲ್ಲೂಕಿನ ಹೆಸರು | ಭೌಗೋಳಿಕ ವಿಸ್ತೀರ್ಣ | ಜನಸಂಖ್ಯೆಬೆಳವಣಿಗೆ ಪ್ರತಿಶತ |
|---|---|---|---|
| ೧ | ಚಳ್ಳಕೆರೆ | ೨೦೬೩.೯೩ | ೧೦.೦೮ |
| ೨ | ಚಿತ್ರದುರ್ಗ | ೧೩೭೫.೭೨ | ೧೨.೭೨ |
| ೩ | ಹಿರಿಯೂರು | ೧೭೦೧.೪೦ | ೮.೨೩ |
| ೪ | ಹೊಳಲ್ಕೆರೆ | ೧೧೯೪.೮೪ | ೪.೮೬ |
| ೫ | ಹೊಸದುರ್ಗ | ೧೪೧೬.೪೦ | ೭.೨೧ |
| ೬ | ಮೊಳಕಾಲ್ಮೂರು | ೭೩೬.೪೯ | ೧೦.೯೧ |

(ಮೂಲ : ಚಿತ್ರದುರ್ಗ ಜಿಲ್ಲೆಯ ಆರ್ಥಿಕ–ಸಾಮಾಜಿಕ ಅವಲೋಕನ ೨೦೧೧ರ ಜನಗಣತಿಯ ಪ್ರಕಾರ)

ಮೇಲ್ಕಂಡ ಕೋಷ್ಟಕವು ಭೌಗೋಳಿಕವಾಗಿ ತಾಲ್ಲೂಕುವಾರು ಭೂಪ್ರದೇಶ ಮತ್ತು ಸಾಗುವಳಿಯನ್ನು ತಾಲ್ಲೂಕುವಾರು ಹಂಚಿರುವುದು ತಿಳಿಯುತ್ತದೆ. ಅದರಲ್ಲಿ ಚಳ್ಳಕೆರೆ ಮತ್ತು ಚಿತ್ರದುರ್ಗ ತಾಲ್ಲೂಕುಗಳು ವಿಸ್ತೀರ್ಣದಲ್ಲಿ ದೊಡ್ಡದಾಗಿರುವುದು ತಿಳಿಯುತ್ತದೆ. ಹಾಗೆಯೆ ಹೊಳಲ್ಕೆರೆ ಮತ್ತು ಹೊಸದುರ್ಗ ಭೂವಿಸ್ತೀರ್ಣದಲ್ಲಿ ಅತ್ಯಂತ ಚಿಕ್ಕವಾಗಿರುವುದು ಅಧ್ಯಯನದಿಂದ ತಿಳಿಯುತ್ತದೆ.

ಚಿತ್ರದುರ್ಗ ಜಿಲ್ಲೆಯ ಒಟ್ಟು ವಿಸ್ತೀರ್ಣವು ೮೩೮೮.೭೮ ಚ.ಕೀ.ಮೀಗಳಿದ್ದು ಆರು ತಾಲ್ಲೂಕುಗಳು ಮತ್ತು ೨೨ ಹೋಬಳಿಗಳಾಗಿ ವಿಂಗಡಿಸಲಾಗಿದೆ. ಆಡಳಿತ ವಿಕೇಂದ್ರಿಕರಣವಾದ ಮೇಲೆ ೧೮೫ ಗ್ರಾಮ ಪಂಚಾಯಿತಿಗಳು ಆಸ್ತಿತ್ವಕ್ಕೆ ಬಂದಿವೆ. ಜಿಲ್ಲೆಯಲ್ಲಿ ೨೦೦೧ ನೇ ಜನಗಣತಿಯಂತೆ ಒಟ್ಟು ೧೦೫೯ ಗ್ರಾಮಗಳಿರುತ್ತವೆ ಈ ಜಿಲ್ಲೆಯ ಎಲ್ಲಾ ಗ್ರಾಮಗಳು ಗ್ರಾಮ ಪಂಚಾಯಿತಿಗಳ ಆಡಳಿತಕ್ಕೆ ಒಳಪಟ್ಟಿವೆ. ಒಂದು ನಗರಸಭೆ, ಎರಡು ಪುರಸಭೆಗಳು ಉಳಿದಂತೆ ಪಟ್ಟಣ ಪಂಚಾಯಿತಿಗಳಾಗಿ ಪರಿವರ್ತನೆಗೊಂಡು ಕಾರ್ಯನಿರ್ವಹಿಸುತ್ತಿವೆ. ೨೦೧೧ನೇ ಜನಗಣತಿ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೧೬.೫೯ ಲಕ್ಷ ಇದೆ. ಪುರುಷರು ೮.೪ ಲಕ್ಷ, ಮಹಿಳೆಯರು ೮.೧ ಲಕ್ಷ ಇರುತ್ತದೆ.

೨೦೦೧ ನೇ ಜನಗಣತಿಯಂತೆ ಜಿಲ್ಲೆಯು ಕರ್ನಾಟಕ ರಾಜ್ಯದ ಒಟ್ಟು ಜನಸಂಖ್ಯೆಯ ಶೇ ೨.೯ರಷ್ಟು ಜನಸಂಖ್ಯೆಯನ್ನು ಹೊಂದಿದ್ದು ರಾಜ್ಯದ ೧೯ನೇ ಸ್ಥಾನದಲ್ಲಿರುತ್ತದೆ. ರಾಜ್ಯದ ಜನಸಾಂದ್ರತೆಯು ಪ್ರತಿ ಚದರ ಕಿ.ಮಿಗೆ ೨೭೫ ಇದ್ದರೆ ಚಿತ್ರದುರ್ಗಜಿಲ್ಲೆಯಲ್ಲಿ ಸ್ತ್ರೀಪುರುಷರ ಪ್ರಮಾಣ ೯೫೫ ಇದೆ. ಇಲ್ಲಿಯ ಜನಸಾಂದ್ರತೆ ೧೭೯ ಇರುತ್ತದೆ. ಜಿಲ್ಲೆಯಲ್ಲಿ ಒಟ್ಟು ಜನಸಂಖ್ಯೆಯ ಶೇ.೭೩.೮೨ ರಷ್ಟು ಅಕ್ಷರಸ್ಥರಿದ್ದು (೬ ವರ್ಷದೊಳಗಿನ ಮಕ್ಕಳನ್ನು ಹೊರತು ಪಡಿಸಿ) ಸಾಕ್ಷರತೆಯ ಪ್ರಮಾಣವು ಪುರುಷರಲ್ಲಿ ಶೇ.೮೧.೩೭ ಹಾಗೂ ಸ್ತ್ರೀಯರಲ್ಲಿ ಶೇ.೬೬.೦೫ ರಷ್ಟು ಇರುತ್ತದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನಸಂಖ್ಯೆ ೨೦೦೧ ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ೩.೪ ಲಕ್ಷ ಪರಿಶಿಷ್ಟ ಜಾತಿಯವರು ಮತ್ತು ೨.೭ ಲಕ್ಷ ಪರಿಶಿಷ್ಟ ಪಂಗಡದವರಿದ್ದಾರೆ.

**ಜಿಲ್ಲೆಯಲ್ಲಿ ಮಳೆಬೀಳುವ ಪ್ರಮಾಣದ ವಿವರ. ವಾರ್ಷಿಕ ವಾಸ್ತವಿಕ ಮಳೆ (ಮಿ.ಮೀ)**

ಕೃಷಿಗೂ ಜೀವನೋಪಾಯಕ್ಕೂ ಹೇಗೆ ನೇರವಾದ ಸಂಬಂಧವಿದೆಯೊ ಹಾಗೆಯೆ ಕೃಷಿಗೂ ಮತ್ತು ಮಳೆಬೀಳುವ ಪ್ರಮಾಣಕ್ಕೂ ನೇರವಾದ ಸಂಬಂಧವಿರುವುದು. ಈ ಹಿನ್ನೆಲೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಅಥವಾ ಬುಡಕಟ್ಟುಗಳಲ್ಲಿ ಜೀವಿಸುವ ಪ್ರತಿಯೊಬ್ಬರೂ ಸಹ ಭೂಮಿ ಮತ್ತು ಪ್ರಕೃತಿಯನ್ನೆ ಅವಲಂಬಿಸಿ ತನ್ನ ಬದುಕನ್ನು ಮತ್ತು ಬದುಕಿನ ಕ್ರಮವನ್ನು ರೂಪಿಸಿಕೊಂಡಿರುವುದನ್ನು ನೋಡಬಹುದು. ಈ ಕೆಳಕಂಡ ಕೋಷ್ಟಕ ೨೦೦೯ ರಿಂದ ೨೦೧೪ ರವರೆಗೆ ಚಿತ್ರದುರ್ಗ ಜಿಲ್ಲೆಯಲ್ಲಿ ಮಳೆ ಬೀಳುವ ಪ್ರಮಾಣವನ್ನು ಸಂಖ್ಯಾಶಾಸ್ತ್ರೀಯ ಆಯಾಮದಲ್ಲಿ ವಿಶ್ಲೇಶಿಸಲಾಗಿದೆ.

**ಕೋಷ್ಟಕ: ೩**

**ಚಿತ್ರದುರ್ಗ ಜಿಲ್ಲೆಯಲ್ಲಿ ಮಳೆ ಬೀಳುವ ಪ್ರಮಾಣದ ವಿವರ (ಮಿ.ಮೀಗಳಲ್ಲಿ)**

| ಕ್ರಸಂ | ತಾಲ್ಲೂಕಿನ ಹೆಸರು | ೨೦೦೯ | ೨೦೧೦ | ೨೦೧೧ | ೨೦೧೨ | ೨೦೧೩ | ೨೦೧೪ |
|---|---|---|---|---|---|---|---|
| ೧ | ಚಳ್ಳಕೆರೆ | ೭೦೫ | ೭೩೫ | ೨೬೮ | ೫೩೨ | ೪೩೯ | ೫೬೫ |
| ೨ | ಚಿತ್ರದುರ್ಗ | ೮೩೪ | ೯೧೫ | ೩೨೮ | ೬೬೮ | ೭೦೨ | ೯೯೦ |
| ೩ | ಹಿರಿಯೂರು | ೭೧೫ | ೭೯೫ | ೩೦೮ | ೪೫೬ | ೬೨೭ | ೬೪೨ |
| ೪ | ಹೊಳಲ್ಕೆರೆ | ೯೩೦ | ೧೧೧೦ | ೫೪೦ | ೫೯೮ | ೭೧೫ | ೯೬೨ |
| ೫ | ಹೊಸದುರ್ಗ | ೮೬೪ | ೯೫೧ | ೪೨೩ | ೩೬೫ | ೩೭೨ | ೬೩೫ |
| ೬ | ಮೊಳಕಾಲ್ಮೂರು | ೮೧೭ | ೮೦೭ | ೨೯೫ | ೪೯೨ | ೨೨೧ | ೭೦೪ |
| | **ಒಟ್ಟು** | ೮೧೩ | ೮೯೧ | ೩೬೩ | ೫೨೮ | ೫೪೮ | ೭೬೮ |

ಚಿತ್ರದುರ್ಗ ಜಿಲ್ಲೆಯಲ್ಲಿ ಮಳೆಬೀಳುವ ಪ್ರಮಾಣವನ್ನು ಪರಾಮರ್ಶಿಸಿದರೆ ಜಿಲ್ಲೆಯಲ್ಲಿ ಒಟ್ಟು ಆರು ತಾಲ್ಲೂಕುಗಳು ಇದ್ದು, ೨೦೦೯ ರಲ್ಲಿ ಎಲ್ಲ ತಾಲ್ಲೂಕುಗಳಿಂದ ೮೧೩ ಮಿ.ಮೀನಷ್ಟು ಮಳೆಯಾಗಿದ್ದು ಅದರಲ್ಲಿ ಅತಿ ಹೆಚ್ಚು ಮಳೆ ಬಿದ್ದಿರುವ ತಾಲ್ಲೂಕು ಅಂದರೆ ಹೊಳಲ್ಕೆರೆಯಲ್ಲಿ ೯೩೦ ಮಿ.ಮೀನಷ್ಟು ಮಳೆಯಾಗಿದ್ದರೆ, ಹೊಸದುರ್ಗದಲ್ಲಿ ೮೬೪ ಮಿ.ಮೀನಷ್ಟು ಮಳೆಯಾಗಿರುವುದು. ಕಡಿಮೆ ಪ್ರಮಾಣ ಮಳೆ ಬಿದ್ದಿರುವ ತಾಲ್ಲೂಕುಗಳೆಂದರೆ ಚಳ್ಳಕೆರೆ ೭೦೫ ಮಿ.ಮೀ ಮತ್ತು ಹಿರಿಯೂರು ೭೧೫ ಮಿ.ಮೀನಷ್ಟು ಮಳೆಯಾಗಿರುವುದು ಕಂಡುಬಂದಿದೆ. ೨೦೧೪ ರಲ್ಲಿ ಅತಿ ಹೆಚ್ಚು ಮಳೆ ಬಿದ್ದಿರುವ ತಾಲ್ಲೂಕು ಅಂದರೆ ಹೊಳಲ್ಕೆರೆಯಲ್ಲಿ ೯೬೨ ಮಿ.ಮೀನಷ್ಟು ಮಳೆ ಬಿದ್ದಿದರೆ ಚಿತ್ರದುರ್ಗದಲ್ಲಿ ೯೯೦ ಮಿ.ಮೀ ಮಳೆಯಾಗಿರುವುದು ವರದಿಯಾಗಿದೆ.[೮]

**ಜಿಲ್ಲೆಯಲ್ಲಿನ ಕೂಲಿಕಾರರ ವಿವರ:**

ಕೃಷಿ ಈ ದೇಶದ ಪ್ರಮುಖ ಕಸುಬಾಗಿದ್ದು ಬಹುಪಾಲು ಜನರು ಕೃಷಿಯನ್ನೇ ನಂಬಿ ತಮ್ಮ ಜೀವನ ಸಾಗಿಸುತ್ತಿರುವುದನ್ನು ಗಮನಿಸಬಹುದು. ಇತರೆ ರಾಷ್ಟ್ರಗಳಿಗೆ ಹೋಲಿಕೆ ಮಾಡಿದರೆ ನಮ್ಮ ರಾಷ್ಟ್ರದಲ್ಲಿ ಭೂಮಿಗೂ ಕೃಷಿಗೂ ಮತ್ತು ಜೀವನಕ್ಕೂ ನೇರವಾದ ನಂಟು ಇರುವುದು ತಿಳಿದು ಬರುವುದು. ಹಾಗೆಯೇ ಕೃಷಿ ಕೂಲಿಯನ್ನೇ ನಂಬಿ ಲಕ್ಷಾಂತರ ಕುಟುಂಬಗಳು ಅವಲಂಬಿತರಾಗಿರುವುದು

ಒಂದು ಸತ್ಯ ಸಂಗತಿ.ಇದನ್ನು ಅನೇಕ ಪ್ರಕಾರದ ಸಮೀಕ್ಷೆಗಳು ಮತ್ತು ಅಧ್ಯಯನಗಳು ಸಾಬೀತು ಪಡಿಸಿರುವುದನ್ನು ಕಾಣಬಹುದು. ಚಿತ್ರದುರ್ಗ ಜಿಲ್ಲೆಯಲ್ಲಿ ತನ್ನ ಜೀವನವನ್ನು ಸಾಗಿಸುವ ಹಿನ್ನೆಲೆಯಲ್ಲಿ ಜಿಲ್ಲೆಯ ಕೂಲಿಕಾರರ ಪ್ರಕಾರಗಳನ್ನು ಅವಲೋಕಿಸಿದರೆ ಗ್ರಾಮೀಣ ಮತ್ತು ನಗರ ಪ್ರದೇಶದ ಕೂಲಿಕಾರರು ಕಂಡುಬಂದರೂ ಅದರಲ್ಲಿ ಮಹಿಳೆ ಮತ್ತು ಪುರುಷರು ಎನ್ನುವ ಪ್ರಕಾರಗಳನ್ನು ವಿಂಗಡಿಸಿರುವುದು ಈ ಕೆಳಕಂಡ ಕೋಷ್ಟಕದಲ್ಲಿ ಕಾಣಬಹುದು.

**ಕೋಷ್ಟಕ: ೪**

**ಜಿಲ್ಲೆಯಲ್ಲಿನ ಕೂಲಿಕಾರರ ವಿವರ**

| ಲಿಂಗ | ಗ್ರಾಮೀಣ | ನಗರ | ಒಟ್ಟು |
|---|---|---|---|
| ಪುರುಷರು | ೩೬೦೨೧೮ | ೮೩೮೦೬ | ೪೪೪೦೨೪ |
| ಸ್ತ್ರೀಯರು | ೧೯೯೯೬೬ | ೨೩೪೮೯ | ೨೨೩೪೫೫ |
| ಒಟ್ಟು | ೫೬೦೧೮೪ | ೧೦೭೨೯೫ | ೬೬೭೪೭೯ |

ಚಿತ್ರದುರ್ಗ ಜಿಲ್ಲೆಯಲ್ಲಿ ಸ್ತ್ರೀಯರಿಗಿಂತಲೂ ಪುರುಷ ಕೂಲಿಕಾರರ ಸಂಖ್ಯೆ ಹೆಚ್ಚಿರುವುದು ಕಂಡುಬಂದಿದೆ. ಪ್ರಾದೇಶಿಕ ಹಿನ್ನೆಲೆಯಲ್ಲಿ ಕೂಲಿಕಾರರನ್ನು ಅವಲೋಕಿಸಿದರೆ ನಗರ ಪ್ರದೇಶಗಳಿಗಿಂತಲೂ ಗ್ರಾಮೀಣ ಪ್ರದೇಶದಲ್ಲಿ ಕೂಲಿಕಾರರ ಸಂಖ್ಯೆ ಹೆಚ್ಚು ಇರುವುದು ಕಂಡುಬಂದಿದೆ.[೯]

**ಜಿಲ್ಲೆಯ ಕುಟುಂಬಗಳ ವಿವರ:**

ಚಿತ್ರದುರ್ಗ ಜಿಲ್ಲೆಯಲ್ಲಿ ಕುಟುಂಬಗಳು ಎಷ್ಟು ವಾಸಿಸುವುವು. ಯಾವ ತಾಲ್ಲೂಕಿನಲ್ಲಿ ಎಷ್ಟು ನೆಲೆಸಿವೆ. ಯಾವ ತಾಲ್ಲೂಕಿನಲ್ಲಿ ಕಡಿಮೆ ಇವೆ ಅಥವಾ ಹೆಚ್ಚು ಇವೆ ಎನ್ನುವ ಅಂಕಿ ಅಂಶಗಳು ತನ್ನ ಪ್ರಮಾಣ ರೂಪದಲ್ಲಿ ವ್ಯಕ್ತವಾಗುವುದರಿಂದ ಅಂಕಿ ಅಂಶಗಳ ವಿಶ್ಲೇಷಣೆಯನ್ನು ತಾಲ್ಲೂಕುವಾರು ಮಾಡಲಾಗಿದೆ.

**ಕೋಷ್ಟಕ–೫**

**ಜಿಲ್ಲೆಯ ಕುಟುಂಬಗಳ ವಿವರ**

| ಕ್ರಸಂ | ತಾಲ್ಲೂಕಿನ ಹೆಸರು | ಕುಟುಂಬಗಳ ಸಂಖ್ಯೆ |
|---|---|---|
| ೧ | ಚಳ್ಳಕೆರೆ | ೭೬೩೬೧ |
| ೨ | ಚಿತ್ರದುರ್ಗ | ೯೦೨೫೬ |
| ೩ | ಹಿರಿಯೂರು | ೬೪೦೮೬ |
| ೪ | ಹೊಳಲ್ಕೆರೆ | ೪೫೭೩೦ |
| ೫ | ಹೊಸದುರ್ಗ | ೫೩೦೧೯ |
| ೬ | ಮೊಳಕಾಲ್ಮೂರು | ೨೭೫೫೧ |
| | ಒಟ್ಟು | ೩೫೭೦೦೩ |

(ಮಾಹಿತಿಯ ಮೂಲ-ಜಿಲ್ಲಾ ಸಂಗ್ರಹಣಾಧಿಕಾರಿಗಳು ಜಿಲ್ಲಾ ಅಂಕಿ ಅಂಶಗಳ ನೋಟ ೨೦೧೪-೧೫)

ಜಿಲ್ಲೆಯಲ್ಲಿ ಕುಟುಂಬಗಳು ನೆಲೆಸಿರುವುದನ್ನು ವಿಶ್ಲೇಷಿಸಿದರೆ ಚಿತ್ರದುರ್ಗ ಜಿಲ್ಲೆಯಲ್ಲಿ ಒಟ್ಟು ಆರು ತಾಲ್ಲೂಕುಗಳು ಇದ್ದು. ಅದರಲ್ಲಿ ಚಿತ್ರದುರ್ಗ ೯೦೨೫೬, ಚಳ್ಳಕೆರೆ ೭೬೩೬೧ ಮತ್ತು ಹಿರಿಯೂರು ೬೪೦೮೬ ತಾಲ್ಲೂಕುಗಳಲ್ಲಿ ಹೆಚ್ಚು ಕುಟುಂಬಗಳು ನೆಲೆಸಿರುವುದುಕಂಡುಬಂದಿದೆ. ಉಳಿದ ಮೂರು ತಾಲ್ಲೂಕುಗಳಾದ ಹೊಳಲ್ಕೆರೆ, ಹೊಸದುರ್ಗ ಮತ್ತು ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಅತೀ ಕಡಿಮೆ ಕುಟುಂಬಗಳು ನೆಲೆಸಿರುವುದನ್ನುಸಂಖ್ಯಾತ್ಮಕ ವಿಧಾನದಲ್ಲಿ ವಿಶ್ಲೇಷಿಸಿಲಾಗಿದೆ.[೧೦]

## ಜಿಲ್ಲೆಯ ಜನಸಂಖ್ಯಾ ವಿವರ ೨೦೧೧

ಜನಸಂಖ್ಯೆ ಬಗ್ಗೆ ಅನೇಕ ಸಾಮಾಜಿಕ, ಆರ್ಥಿಕ ಚಿಂತಕರು, ಸಂಖ್ಯಾಶಾಸ್ತ್ರಜ್ಞರು ಮತ್ತು ಜನಸಂಖ್ಯಾ ತಜ್ಞರು ಹಲವು ದೃಷ್ಟಿಯಲ್ಲಿ ಅನೇಕ ಆಯಾಮಗಳಲ್ಲಿ ವ್ಯಾಖ್ಯಾನಿಸುತ್ತಾರೆ. ರಾಷ್ಟ್ರದ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯಲ್ಲಿ ತನ್ನದೇ ಆದಂತಹ ನಿರ್ಣಯದ ನಿಲುವನ್ನು ತರುವುದೆಂಬುದನ್ನು ಚಿಂತಿಸುತ್ತಾರೆ. ಸಮಾಜ ಹೇಗೆ ಆಯಾಕಾಲಘಟ್ಟಗಳಲ್ಲಿ ಪರಿವರ್ತನೆ ಆಗುತ್ತದೆಯೋ ಹಾಗೆ ಜನಸಂಖ್ಯೆಯೂ ಜನಗಣತಿಯಿಂದ ಜನಗಣತಿಗೆ ಸಮೀಕ್ಷೆಯಿಂದ ಜನಸಂಖ್ಯಾ ಬೆಳವಣಿಗೆ ಪ್ರಮಾಣವನ್ನು ಗುರುತಿಸಬಹುದು.[೧೧]

**ಕೋಷ್ಟಕ-೬**

**ಜಿಲ್ಲೆಯ ಜನಸಂಖ್ಯಾ ವಿವರ ೨೦೧೧**

| ಕ್ರಸಂ | ತಾಲ್ಲೂಕಿನ ಹೆಸರು | ಪುರುಷ | ಮಹಿಳೆ | ಒಟ್ಟು | ಶೇಕಡ |
|---|---|---|---|---|---|
| ೧ | ಚಳ್ಳಕೆರೆ | ೧೮೫೯೩೧ | ೧೭೯೮೫೩ | ೩೬೫೭೮೪ | ೨೨.೦೪ |
| ೨ | ಚಿತ್ರದುರ್ಗ | ೨೧೪೫೬೩ | ೨೦೯೩೧೬ | ೪೨೩೮೭೯ | ೨೫.೫೪ |
| ೩ | ಹಿರಿಯೂರು | ೧೪೪೧೬೦ | ೧೪೧೯೭೩ | ೨೮೬೧೩೩ | ೧೭.೨೪ |
| ೪ | ಹೊಳಲ್ಕೆರೆ | ೧೦೪೯೯೨ | ೧೦೨೨೬೮ | ೨೦೭೨೬೦ | ೧೨.೪೯ |
| ೫ | ಹೊಸದುರ್ಗ | ೧೧೯೧೪೮ | ೧೧೫೯೬೮ | ೨೩೫೧೧೬ | ೧೪.೧೭ |
| ೬ | ಮೊಳಕಾಲ್ಮೂರು | ೭೨೦೪೯ | ೬೯೨೩೫ | ೧೪೧೨೮೪ | ೮.೫೧ |
| | ಒಟ್ಟು | ೮೪೦೮೪೩ | ೮೧೮೬೧೩ | ೧೬೫೯೪೫೬ | ೨.೭೨ |

(ಮಾಹಿತಿಯ ಮೂಲ-ಜಿಲ್ಲಾ ಸಂಗ್ರಹಣಾದಿಕಾರಿಗಳು ಜಿಲ್ಲಾ ಅಂಕಿ ಅಂಶಗಳ ನೋಟ ೨೦೧೧)

ಹಾಗೆಯೇ ಚಿತ್ರದುರ್ಗ ಜಿಲ್ಲೆಯ ಜನಸಂಖ್ಯೆಯನ್ನು ಅಂಕಿ ಅಂಶಗಳಲ್ಲಿ ನೋಡುವುದಾದರೆ ಜಿಲ್ಲೆಯ ಒಟ್ಟು ಜನಂಖ್ಯಾ ಪ್ರಮಾಣದಲ್ಲಿ ಚಿತ್ರದುರ್ಗ ತಾಲ್ಲೂಕಿನಲ್ಲಿ ಶೇ ೨೫.೫೪ ರಷ್ಟು, ಚಳ್ಳಕೆರೆ ತಾಲ್ಲೂಕಿನಲ್ಲಿ ೨೨.೦೪ ರಷ್ಟು ಮತ್ತು ಹಿರಿಯೂರು ತಾಲ್ಲೂಕಿನಲ್ಲಿ ಶೇ ೧೭.೨೪ ರಷ್ಟು ಕಂಡು ಬಂದಿರುವುದು. ಇತರ ತಾಲ್ಲೂಕುಗಳಲ್ಲಿ ಮೊಳಕಾಲ್ಮೂರು ಶೇ ೮.೫೧ರಷ್ಟು, ಹೊಳಲ್ಕೆರೆ ಶೇ ೧೨.೪೯ ರಷ್ಟು ಮತ್ತು ಹೊಸದುರ್ಗ ಶೇ ೧೪.೧೭ ರಷ್ಟು ಕಂಡುಬರುವುದು.[೧೨]

**ಜಿಲ್ಲೆಯ ಶಿಕ್ಷಣ ಸಂಸ್ಥೆಗಳ ವಿವರ :** ಚಿತ್ರದುರ್ಗ ಜಿಲ್ಲೆಯಲ್ಲಿ ಶಿಕ್ಷಣ ಸಂಸ್ಥೆಗಳ ಸಂಖ್ಯೆಗಳನ್ನು ಯಾವ ತಾಲೂಕಿನಲ್ಲಿ ಎಷ್ಟಿವೆ ಎಂಬುದನ್ನು ಪ್ರಾಥಮಿಕ, ಮಾಧ್ಯಮಿಕ, ಪ್ರೌಢ, ವೈದ್ಯಕೀಯ, ಇಂಜನಿಯರಿಂಗ್ ಹಾಗೂ ಪಾಲಿಟೆಕ್ನಿಕ್ ಇವುಗಳ ಪ್ರಮಾಣವನ್ನು ಈ ಕೆಳಕಂಡ ಕೋಷ್ಟಕದಲ್ಲಿ ತಿಳಿಸಲಾಗಿದೆ.

**ಕೋಷ್ಟಕ: ೭**
**ಜಿಲ್ಲೆಯ ಶಿಕ್ಷಣ ಸಂಸ್ಥೆಗಳ ವಿವರ**

| ಕ್ರಸಂ | ತಾಲ್ಲೂಕಿನ ಹೆಸರು | ಪ್ರಾಥಮಿಕ | ಮಾಧ್ಯಮಿಕ | ಪ್ರೌಢ | ಪ. ಪೂರ್ವ | ಇಂಜನಿಯರ್ | ಮೆಡಿಕಲ್ | ಪಾಲಿಟೆಕ್ನಿಕ್ |
|---|---|---|---|---|---|---|---|---|
| ೧ | ಚಳ್ಳಕೆರೆ | ೨೧೮ | ೨೧೬ | ೮೯ | ೨೧ | ೦೦ | ೦೦ | ೦೧ |
| ೨ | ಚಿತ್ರದುರ್ಗ | ೧೩೪ | ೨೮೬ | ೧೧೫ | ೩೮ | ೦೧ | ೦೧ | ೦೧ |
| ೩ | ಹಿರಿಯೂರು | ೧೬೯ | ೧೯೫ | ೭೮ | ೨೧ | ೦೦ | ೦೦ | ೦೧ |
| ೪ | ಹೊಳಲ್ಕೆರೆ | ೧೨೭ | ೧೩೬ | ೪೯ | ೧೮ | ೦೦ | ೦೦ | ೦೦ |
| ೫ | ಹೊಸದುರ್ಗ | ೧೭೭ | ೧೬೪ | ೬೭ | ೧೮ | ೦೦ | ೦೦ | ೦೧ |
| ೬ | ಮೊಳಕಾಲ್ಮೂರು | ೭೭ | ೯೮ | ೨೯ | ೦೭ | ೦೦ | ೦೦ | ೦೦ |
| | ಒಟ್ಟು | ೯೦೨ | ೧೧೯೫ | ೪೨೭ | ೧೩೦ | ೦೧ | ೦೧ | ೦೪ |

(ಮೂಲ : ಜಿಲ್ಲಾ ಸಂಗ್ರಹಣಾಧಿಕಾರಿಗಳು ಜಿಲ್ಲಾ ಅಂಖಿಅಂಶಗಳ ನೋಟ ೨೦೧೪–೧೫)

ಜಿಲ್ಲೆಯ ಚಿತ್ರದುರ್ಗ ತಾಲ್ಲೂಕಿನಲ್ಲಿ ಹೆಚ್ಚು ಶಿಕ್ಷಣ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿರುವುದು ಅಂಕಿ ಅಂಶಗಳಿಂದ ವ್ಯಕ್ತವಾಗುವುದು. ಅಲ್ಲಿ ಇಂಜನಿಯರಿಂಗ್, ಮೆಡಿಕಲ್, ಪಾಲಿಟೆಕ್ನಿಕ್ ಮತ್ತು ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಂಸ್ಥೆಗಳು ಇರುವವು. ಚಳ್ಳಕೆರೆ ತಾಲ್ಲೂಕಿನಲ್ಲಿ ತಾಂತ್ರಿಕ ಶಿಕ್ಷಣ ಸಂಸ್ಥೆಗಳು ಕಡಿಮೆ ಇರುವವು ಮತ್ತು ಇತರೆ ತಾಲ್ಲೂಕುಗಳಲ್ಲಿ ಮೊಳಕಾಲ್ಮೂರು ಮತ್ತು ಹೊಳಲ್ಕೆರೆ ತಾಲ್ಲೂಕಿನಲ್ಲಿ ಶಿಕ್ಷಣ ಸಂಸ್ಥೆಗಳು ಅತ್ಯಂತ ಕಡಿಮೆ ಇರುವುದು ಕಂಡುಬರುವುದು.

**ಜಿಲ್ಲೆಯ ಸಾಕ್ಷರತಾ ವಿವರ ೨೦೧೧ ರ ಜನಗಣತಿಯ ಪ್ರಕಾರ:**

ಚಿತ್ರದುರ್ಗ ಜಿಲ್ಲೆಯಲ್ಲಿ ಸಾಕ್ಷರತಾ ಪ್ರಮಾಣವನ್ನು ವಿಶ್ಲೇಷಿಸಿದರೆ ೨೦೦೧ರ ಜನಗಣತಿಯ ಪ್ರಕಾರ ಪುರುಷರ ಸಾಕ್ಷರತೆಯ ಪ್ರಮಾಣ ಸ್ತ್ರೀಯರ ಸಾಕ್ಷರತಾ ಪ್ರಮಾಣಕ್ಕಿಂತ ಹೆಚ್ಚು ಇರುವುದು. ೨೦೧೧ ರ ಜನಗಣತಿಯ ವಿಶ್ಲೇಷಣೆ ವರದಿಯಲ್ಲಿ ದಾಖಲಾಗಿರುವುದು. ೨೦೧೧ರ ಜನಗಣತಿಯ ಪ್ರಕಾರವು ಸಹ ಸ್ತ್ರೀಯರ ಸಾಕ್ಷರತಾ ಪ್ರಮಾಣಕ್ಕಿಂತ ಪುರುಷರ ಸಾಕ್ಷರತಾ ಪ್ರಮಾಣ ಹೆಚ್ಚು ಇರುವುದು ಅಂಕಿಅಂಶಗಳಲ್ಲಿ ವ್ಯಕ್ತವಾಗುವುದು. ಇದರ ಪ್ರಮಾಣವನ್ನು ಕೆಳಕಂಡ ಕೋಷ್ಟಕದಲ್ಲಿ ತಿಳಿಸಲಾಗಿದೆ.

ಕೋಷ್ಟಕ: ೮

ಜಿಲ್ಲೆಯ ಸಾಕ್ಷರತಾ ವಿವರ ೨೦೧೧ ರ ಜನಗಣತಿ

| ಕ್ರ.ಸಂ | ತಾಲ್ಲೂಕಿನ ಹೆಸರು | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧ | ಚಳ್ಳಕೆರೆ | ೭೭.೮೪ | ೬೦.೩೪ | ೬೯.೨೨ |
| ೨ | ಚಿತ್ರದುರ್ಗ | ೮೫.೩೩ | ೭೨.೫೩ | ೭೯ |
| ೩ | ಹಿರಿಯೂರು | ೮೧.೩೨ | ೬೬.೪೧ | ೭೩.೯೧ |
| ೪ | ಹೊಳಲ್ಕೆರೆ | ೮೩.೨೯ | ೬೮.೧ | ೭೫.೭೮ |
| ೫ | ಹೊಸದುರ್ಗ | ೮೧.೨೮ | ೬೬.೧೧ | ೭೩.೭೮ |
| ೬ | ಮೊಳಕಾಲ್ಮೂರು | ೭೫.೯೪ | ೫೫.೦೪ | ೬೫.೬೯ |
| ಒಟ್ಟು | | ೮೧.೩೭ | ೬೫.೮೮ | ೭೩.೭೧ |

(ಮಾಹಿತಿಯ ಮೂಲ- ಚಿತ್ರದುರ್ಗ ಜಿಲ್ಲೆಯ ೨೦೧೧ ರ ಜನಗಣತಿಯ ವರದಿ)

ರೇಖಾಚಿತ್ರ-೧, ಜಿಲ್ಲೆಯ ಸಾಕ್ಷರತಾ ವಿವರ ೨೦೧೧ ರ ಜನಗಣತಿ




ಸಾಕ್ಷರತಾ ಎನ್ನುವುದು ಅಭಿವೃದ್ಧಿ ಸೂಚ್ಯಾಂಕದಲ್ಲಿ ಒಂದು ಪ್ರಮುಖವಾದ ಅಂಶವೆಂದು ಮತ್ತು ಅಭಿವೃದ್ಧಿಯನ್ನು ಹಳೆಯುವ ಮಾಪನವೆಂದು ಅನೇಕ ಅರ್ಥಶಾಸ್ತ್ರಜ್ಞರು ಮತ್ತು ಜನಸಂಖ್ಯಾಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. ಅದೇ ರೀತಿಯಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಸಾಕ್ಷರತಾ ಪ್ರಮಾಣವನ್ನು ವಿಶ್ಲೇಷಣೆ ಮಾಡಿದರೆ ಒಟ್ಟು ಜಿಲ್ಲೆಯ ಸಾಕ್ಷರತಾ ಪ್ರಮಾಣ ಶೇಕಡ ೭೩.೭೧ ರಷ್ಟು ಕಂಡುಬಂದರೆ ಅದರಲ್ಲಿ ಪುರುಷರ ಸಾಕ್ಷರತಾ ಪ್ರಮಾಣ ಶೇ ೮೧.೩೭ ರಷ್ಟು ಇದ್ದರೆ ಮಹಿಳಾ ಸಾಕ್ಷರತಾ ಪ್ರಮಾಣ ಶೇ ೬೫.೮೮ ರಷ್ಟು ವ್ಯಕ್ತವಾಗುವುದು. ಪುರುಷ ಮತ್ತು ಮಹಿಳೆಯರ ಸಾಕ್ಷರತಾ ಪ್ರಮಾಣದ ನಡುವೆ ಇರುವ ಅಂತರ ಶೇ ೧೫.೪೯ ರಷ್ಟು ಕಂಡುಬರುವುದು.

ತಾಲ್ಲೂಕುವಾರು ಸಾಕ್ಷರತಾ ಪ್ರಮಾಣವನ್ನು ಪರಾಮರ್ಶಿಸಿದರೆ ಚಿತ್ರದುರ್ಗ ತಾಲ್ಲೂಕ್ ಇತರೆ ತಾಲ್ಲೂಕುಗಳಿಗೆ ಹೋಲಿಸಿದರೆ ಅತೀ ಹೆಚ್ಚು ಅಂದರೆ ಶೇ ೭೯ ರಷ್ಟು ಸಾಕ್ಷರತಾ ಪ್ರಮಾಣ ಹೊಂದಿದ ತಾಲ್ಲೂಕು ಎಂದು ಮೇಲಿನ ಕೋಷ್ಟಕದಿಂದ ವ್ಯಕ್ತವಾಗುತ್ತದೆ. ಜಿಲ್ಲೆಯಲ್ಲೇ ಅತ್ಯಂತ ಕಡಿಮೆ ಸಾಕ್ಷರತೆ ಹೊಂದಿದ ತಾಲ್ಲೂಕು ಮೊಳಕಾಲ್ಮೂರು ಅಂದರೆ ಶೇ ೬೫.೬೯ ರಷ್ಟು ಸಾಕ್ಷರತಾ ಪ್ರಮಾಣದಲ್ಲಿ ಹಿಂದುಳಿದಿರುವುದು ದಾಖಲಿಸಿದ ಅಂಕಿಅಂಶಗಳಿಂದ ವ್ಯಕ್ತವಾಗುತ್ತದೆ.[೧೩]

## ಜಿಲ್ಲೆಯ ಆರೋಗ್ಯ ಕೇಂದ್ರಗಳ ವಿವರ

ಸಾಮಾಜಿಕ ವ್ಯವಸ್ಥೆಯಲ್ಲಿ ಆರೋಗ್ಯ ಅಭಿವೃದ್ಧಿ ಸೂಚ್ಯಂಕದಲ್ಲಿ ಒಂದು ಪ್ರಮುಖ ಭಾಗವಾಗಿರುವುದು. ಆರೋಗ್ಯಕ್ಕೂ ಅಭಿವೃದ್ಧಿಗೂ ನೇರವಾದ ಸಂಬಂಧವಿರುವುದು. ಈ ವಿಷಯಗಳ ಮೇಲೆ ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ವಾದವಿವಾದಗಳು ನಡೆದಿರುವುದು. ಈ ಹಿನ್ನೆಲೆಯಲ್ಲಿ ಜಾಗತಿಕ ಮಟ್ಟದಲ್ಲಿ ಆರೋಗ್ಯಕ್ಕೆ ಮೊದಲ ಆದ್ಯತೆ ನೀಡಿರುವುದು. ಅನೇಕ ಅಧ್ಯಯನಗಳಿಂದ ತಿಳಿಯುತ್ತದೆ. ಅವರ ಆರೋಗ್ಯ ರಕ್ಷಣೆಗೆ ಸಂಬಂಧಿಸಿದಂತೆ ಸರ್ಕಾರ ಮತ್ತು ಸಂಘ ಸಂಸ್ಥೆಗಳು ಸೌಲಭ್ಯಗಳನ್ನು ಒದಗಿಸಿರುವುದು ತಿಳಿಯುತ್ತದೆ. ಈ ಅಂಶಗಳು ಕೆಳಕಂಡ ಕೋಷ್ಟಕದಲ್ಲಿ ವ್ಯಕ್ತವಾಗುವುದು.

**ಕೋಷ್ಟಕ-೯**

**ಜಿಲ್ಲೆಯ ಆರೋಗ್ಯ ಕೇಂದ್ರಗಳ ವಿವರ**

| ಕ್ರಸಂ | ತಾಲ್ಲೂಕಿನ ಹೆಸರು | ಸರ್ಕಾರಿ ಆಸ್ಪತ್ರೆ | ಪಿ.ಹೆಚ್.ಸಿ | ಖಾಸಗಿ ಆಸ್ಪತ್ರೆಗಳು |
|---|---|---|---|---|
| ೧ | ಚಳ್ಳಕೆರೆ | ೧೮ | ೧೪ | ೦೫ |
| ೨ | ಚಿತ್ರದುರ್ಗ | ೨೨ | ೧೮ | ೨೨ |
| ೩ | ಹಿರಿಯೂರು | ೨೬ | ೨೧ | ೦೪ |
| ೪ | ಹೊಳಲ್ಕೆರೆ | ೧೪ | ೧೩ | ೦೧ |
| ೫ | ಹೊಸದುರ್ಗ | ೧೪ | ೦೯ | ೦೩ |
| ೬ | ಮೊಳಕಾಲ್ಮೂರು | ೦೮ | ೦೬ | ೦೧ |

ಚಿತ್ರದುರ್ಗ ಜಿಲ್ಲೆಯಲ್ಲಿ ಸಾರ್ವಜನಿಕ ಆರೋಗ್ಯಕ್ಕೆ ಸಂಬಂಧಿಸಿದಂತೆ ಖಾಸಗಿ ಮತ್ತು ಸರ್ಕಾರವು ಆರೋಗ್ಯದ ರಕ್ಷಣೆಗೆ ನೀಡಿರುವ ಸೌಲಭ್ಯಗಳನ್ನು ಅಂಕಿ ಅಂಶಗಳನ್ನು ಸಂಖ್ಯಾಶಾಸ್ತ್ರೀಯ ಹಿನ್ನೆಲೆಯಲ್ಲಿ ಪರಾಮರ್ಶಿಸಿದರೆ ಮೊದಲನೆಯದಾಗಿ ಚಿತ್ರದುರ್ಗದ ತಾಲ್ಲೂಕಿನಲ್ಲಿ ಹೆಚ್ಚು ಸೌಲಭ್ಯಗಳನ್ನು ನೀಡಿದರೆ ಎರಡನೆಯದಾಗಿ ಚಳ್ಳಕೆರೆ ತಾಲ್ಲೂಕಿನಲ್ಲಿ ಆರೋಗ್ಯ ಸೌಲಭ್ಯಗಳನ್ನು ನೀಡಿರುವುದು ತಿಳಿಯುತ್ತದೆ. ಅತೀ ಕಡಿಮೆ ಆರೋಗ್ಯ ಸೌಲಭ್ಯಗಳನ್ನು ನೀಡಿರುವ ತಾಲ್ಲೂಕುಗಳನ್ನು ನೋಡುವುದಾದರೆ ಮೊಳಕಾಲ್ಮೂರು ಮತ್ತು ಹೊಳಲ್ಕೆರೆಯಲ್ಲಿ ಕಂಡುಬರುವುದು.[೧೪]

## ೧.೬ ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಈ ಅಧ್ಯಯನದ ಪೂರ್ವದಲ್ಲಿ ಹಟ್ಟಿಗಳ ಬಗೆಗೆ ಸಾಕಷ್ಟು ಅಧ್ಯಯನಗಳು ನಡೆದಿವೆ ಅವೆಲ್ಲವೂ ಸಾಂಸ್ಕೃತಿಕ ಅಂಶಗಳನ್ನು ಬಿಂಬಿಸುವ ಅಧ್ಯಯನಗಳಾಗಿವೆ. ಸಾಂಸ್ಕೃತಿಕ ಅಧ್ಯಯನವು ತುಂಬಾ ವಿಸ್ತೃತವಾದ ಅಧ್ಯಯನವಾಗಿದ್ದು ಸಾಂಸ್ಕೃತಿಕ ಒಳನೋಟಗಳನ್ನೊಳಗೊಂಡಿರುತ್ತದೆ. ಸಾಂಸ್ಕೃತಿಕ ಅಂಶಗಳ ಒಂದು ಭಾಗವಾಗಿಯೂ ಸಾಮಾಜಿಕ ಅಧ್ಯಯನ ಮುಖ್ಯವೆನಿಸುತ್ತದೆ. ಹಟ್ಟಿಗಳ ಬಗ್ಗೆ ಜಾನಪದ ಅಧ್ಯಯನಗಳು ನಡೆದಿರುವುದು ತಿಳಿಯುತ್ತದೆ.

**ಶಂಬಾ ಜೋಶಿಯವರ ಶಂಬಾಕೃತಿಸಂಪುಟ ಕಂನಾಡು- ಕರ್ನಾಟ-೧ (೧೯೯೯)** ಈ ಕೃತಿಯನ್ನು ಪರಾಮರ್ಶಿಸಿದಾಗ ಹಟ್ಟಿಕಾರರ ಉಲ್ಲೇಖಗಳು ಕಂಡು ಬರುತ್ತವೆ. ಶಂಬಾ ಅವರು ಹಟ್ಟಿಕಾರರಾದ ಕುರುಬರು, ಯಾದವರು, ಯದುತುರ್ವಶರು, ಕಾನಡರು, ಗೌಳಿಗರು, ಹಳಪೈಕರು ಇವರ ಮೂಲ ನೆಲೆಗಳ ಬಗ್ಗೆ, ವಸತಿಗಳ ಬಗ್ಗೆ ಮಾಹಿತಿ ನೀಡುತ್ತಾರೆ. ಇವರು ಹಟ್ಟಿ ಹಬ್ಬಗಳನ್ನು ಹೇಗೆ ಆಚರಿಸುತ್ತಾರೆ ಮತ್ತು ಗೋವುಗಳಿಗೆ ಹಟ್ಟಿಕಾರರು ಕೊಟ್ಟ ಪೂಜನೀಯ ಸ್ಥಾನವನ್ನು ಈ ಕೃತಿಯಲ್ಲಿ ವಿವರಿಸಿದ್ದಾರೆ. ಶಂಬಾ ಜೋಶಿಯವರು ಹಟ್ಟಿಕಾರರ ಮೂಲ, ಹಟ್ಟಿಕಾರರೆಂದರೆ ಯಾರು ಹಟ್ಟಿಕಾರರ ಅಲೆದಾಟ, ಹಟ್ಟಿಗಳು ಹೇಗೆ ಹುಟ್ಟಿಕೊಂಡವು, ಹಟ್ಟಿಕಾರರ ಭಾಷೆ, ಹಟ್ಟಿಕಾರರ ಹೋರಾಟ, ಶೌರ್ಯ ಸಾಹಸಗಳ ವರ್ಣನೆಯನ್ನು ಈ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ಕರ್ನಾಟಕದಲ್ಲಿ ಕ್ರಿ.ಶ. ೪-೬ನೇ ಶತಮಾನದಲ್ಲಿ ದೊರೆಯುವ ಹಟ್ಟಿಕಾರ ವೀರರ ವೀರಗಲ್ಲುಗಳಲ್ಲಿ 'ತುರುಗಾಳಗದೊಳ್ ಸತ್ತುಸಗ್ಗಮಮ್ ಏರಿದಾನ್' ಎಂಬುದನ್ನು ವೀರಗಲ್ಲುಗಳಲ್ಲಿ ಕೊರೆದಿರುವ ಚಿತ್ರಣವನ್ನು ವಿಮರ್ಶಾತ್ಮಕವಾಗಿ ವಿವರಿಸಿದ್ದಾರೆ. ಖಾನ ದೇಶದ ಗ್ಯಾಝಿಟೀಯರ್‌ನಲ್ಲಿ ಖಾನದೇಶದ ಹಟ್ಟಿಕಾರರ ಮುಖ್ಯ ಸಾಧನ ಆಕಳ ಹಿಂಡು, ತುರುಕರುಗಳೇ ಪಂಚಪ್ರಾಣ ಹಟ್ಟಿಕಾರರು ಮಾನ ಮರ್ಯಾದೆ ಉಳ್ಳವರು, ಸುಧಾರಿಸಿದವರು ಆಗಿದ್ದರೆಂಬ ಮಾಹಿತಿಯನ್ನು ದಾಖಲಿಸಿದ್ದಾರೆ.

ಗೋದಾವರಿಯ ಮೇಗಡೆಯ ನಾಡಿನಲ್ಲಿಯ ಕುರುಬರು, ಮಲೆಯರು, ಹಳಬರು ಇವರೆಲ್ಲರು ಅವಶಿಷ್ಟ ಜನಾಂಗಗಳಲ್ಲ ಇವರೆಲ್ಲ ಕನ್ನಡಕ್ಕೆ ಹತ್ತಿರವಿರುವ ಜಾತಿ ಬಣಗಳೆಂದು ಇವರಲ್ಲಿ ಬಿಲ್ಲವರು ಪ್ರಮುಖರು ಇವರು ಖಾನದೇಶ ಹಾಗೂ ಗುಜರಾತಗಳಲ್ಲಿ ಲಕ್ಷಾಂತರ ಜನಗಳಿದ್ದು ಬಿಲ್ಲು ಶಬ್ಧದಿಂದ ಆದ ಬಿಲ್ಲವ ಎಂದು ಸಂಸ್ಕೃತೀಕರಣಗೊಂಡಿದೆ. ಬಿಲ್ಲವರ ಧೈರ್ಯ ಮತ್ತು ಸಾಹಸ ಬ್ರಿಟಿಷ್ ದಳಪತಿಗಳನ್ನು ಬೆರೆಗುಗೊಳಿಸಿತ್ತು. ಮುಸಲ್ಮಾನರು ಮತ್ತು ಮೊಗಲರ ವಿರುದ್ಧ ಹೋರಾಡುವುದರಲ್ಲಿ ರಜಪೂತರಿಗೆ ನೆರವಾಗಿದ್ದು ಬಿಲ್ಲವರೇ ಅಗಿದ್ದರು. ರಜಪೂತರ ಪರಾಕ್ರಮ ಮತ್ತು ಅಜರಾಮರ ಕೀರ್ತಿಗೆ ಬಿಲ್ಲವರ ಪಡೆಯೆ ಮೂಲಾಧಾರವಾಗಿದೆ. ಬಿಲ್ಲರು ಎಂಬುದು ಬೇಡ ಆಯ್ತು ಎಂಬುದಾಗಿ ಹಟ್ಟಿಕಾರರ ಬಗೆಗಿನ ಒಳನೋಟಗಳನ್ನು ಈ ಕೃತಿಯಲ್ಲಿ ಶಂಬಾ ಅವರು ಅಭಿವ್ಯಕ್ತಿಸುತ್ತಾರೆ.

ಶಂಬಾ ಜೋಶಿಯವರ, ಶಂಬಾಕೃತಿ ಸಂಪುಟ, ಕಂನಡ-ಕಂನುಡಿ ಸಂಪುಟ ೨ (೧೯೯೯)ರಲ್ಲಿ ಪರಾಮರ್ಶಿಸಿದಾಗ ಕಳವರ ಬಗೆಗೆ, ಕಳವರು, ಉಗ್ರರು ದನಗಳನ್ನು ಓಡಿಸಿಕೊಂಡು ಒಯ್ಯುವಲ್ಲಿ ಅವರು ನಿಪುಣರು ಆಗಿದ್ದರೆಂದು ಪ್ರೊ.ವ್ಹಿ.ಆರ್.ದೀಕ್ಷಿತರ ಆಭಿಪ್ರಾಯವನ್ನು ಅಭಿವ್ಯಕ್ತಗೊಳಿಸುತ್ತಾರೆ.

ಮಹಾಭಾರತದ ಅಂದಕ ವೃಷ್ಣಿಗಳು ದನಗಾರರು ಇವರು ಕುರುವಂಶಕ್ಕೆ ಸೇರಿದವರು. ಕುರುವ ಎಂದರೆ ಕುರಿಗಾರರೆಂದು ಅರ್ಥ. ಶಾತವಾಹನರು, ವಿಜಯನಗರದ ರಾಜರು ಕುರುಂಬರಾಯರಾಗಿದ್ದರು. ಕೆಳದಿ ನೃಪವಿಜಯದಲ್ಲಿ ಹರಿಹರ ಬುಕ್ಕರು ಕುರುಬರೆಂದು ಹೇಳಿರುವುದನ್ನು ಪ್ರಸ್ತಾಪಿಸುತ್ತಾರೆ. ವಿದ್ಯಾರಣ್ಯರ ಕಾಲಜ್ಞಾನದಲ್ಲಿ "ಕರುವಂಶ ಪ್ರಸೂತಿಜೌ" ಎಂದು ವರ್ಣಿಸಿರುವುದನ್ನು ಚರ್ಚಿಸುತ್ತಾ ಯದು-ತುರ್ವರ ಸಂತತಿ. ಕುರುವಂಶದ ಮೇಲಿನ ಸಂಗತಿಗಳಿಂದ ಇವರು ಹಟ್ಟಿಕಾರ ಅಥವಾ ದನಗಾರ ವಂಶದ ಗೋಪರಕುಲವಲ್ಲದೆ ಬೇರೆಯಲ್ಲ ಎಂಬುದಾಗಿ ಹೇಳುತ್ತಾರೆ.

ಕ್ರಿಪೂ ೨೫೦೦ ರ ಕಾಲದಲ್ಲಿ ಆರ್ಯರು ಬರುವ ಮೊದಲು ಸಿಂಧ-ಪಂಜಾಬಿನಲ್ಲಿ ಹಟ್ಟಿಗಳನ್ನು ಕಟ್ಟಿಕೊಂಡು ಯದು-ತುರ್ವರೂ, ಕುರುವರೂ, ಪಣಿಗಳೂ ನೆಲೆಸಿದ್ದರು ಎಂಬುದಾಗಿ ಉಲ್ಲೇಖಿಸುತ್ತಾರೆ. ಹಟ್ಟಿಕಾರರ ಆರಾಧನೆಗೆ ಸಂಬಂಧಿಸಿದಂತೆ ಹಟ್ಟಿಕಾರರು ಹೆಣ್ಣು ದೇವರನ್ನು ಅರಾಧಿಸುತ್ತಾರೆ ಆದರೆ ಆರ್ಯರಲ್ಲಿ ದೇವಿ ಪೂಜೆಗೆ ಪ್ರಾಧಾನ್ಯವಿಲ್ಲ. ಕುಟುಂಬ ವ್ಯವಸ್ಥೆಯನ್ನು ಕುರಿತು ಹಟ್ಟಿಕಾರರು ಮಾತೃಪ್ರಧಾನ ಕುಟುಂಬ ಪದ್ಧತಿ ಹಟ್ಟಿಕಾರರಲ್ಲಿತ್ತು ಎಂಬುದಾಗಿ ತಿಳಿಸುತ್ತಾರೆ ಇವರಲ್ಲಿ. ಮಗಳ ಮಗನೆ ಮನೆಯ ಒಡೆಯನಾಗತಕ್ಕವನು, ಸ್ವಂತ ಮಗನೆ ಹೊರಗಿನವನಾಗುತ್ತಾನೆ. ಹೀಗೆ ಹಟ್ಟಿಕಾರರ ವೈಶಿಷ್ಟತ್ಯೆಯನ್ನು ಹಲವಾರು ಅಯಾಮಗಳಲ್ಲಿ ಚರ್ಚಿಸುತ್ತಾರೆ. ಆದರೆ ಇತ್ತೀಚೆಗೆ ಉತ್ಪಾದನಾ ಸಾಧನಗಳು ಬದಲಾವಣೆಯಾದಂತೆ ಕೃಷಿ ಅಸ್ಥಿತ್ವಕ್ಕೆ ಬಂದ ನಂತರದಲ್ಲಿ ಪಿತೃ ಪ್ರಾಧಾನ್ಯತೆ ಅಸ್ಥಿತ್ವಕ್ಕೆ ಬಂದಿರುವುದು ಗೋಚರವಾಗುತ್ತದೆ.

ಸಾಮಾಜಿಕ ಜೀವನವನ್ನು ಕುರಿತಾಗಿ ಹಿಂದೆ ಸಾಮಾಜಿಕ ಜೀವನದಲ್ಲಿ ಗುಂಪುಗೂಡಿ ತಂಡಗಳಾಗಿ ಬಾಳುವುದು ಅವಶ್ಯಕವೇ ಆಗಿದ್ದಿತು. ಹೀಗೆ ಗುಂಪುಗೂಡಿ ತಂಡಗಳಾಗಿ ಬಾಳುವುದನ್ನು ಗಣಗಳೆಂದು ಕರೆಯುತ್ತಾರೆ. ಇದೇ ಹಟ್ಟಿಕಾರರ ವೈಶಿಷ್ಟ್ಯ. ಈ ಗಣಗಳಲ್ಲಿ ರಾಜಪದ್ಧತಿಯಿದ್ದಿಲ್ಲ ಒಬ್ಬ ಹಿರಿಯನನ್ನು ಆರಿಸಿಕೊಂಡು ಒಂದು ಕುಟುಂಬದಂತೆ ಇರುತ್ತಿದ್ದರು. ದೈವದವರು ಕೂಡಿ ಸಮಾಜವನ್ನು ಆಳುವುದು ಎಂದಿನಿಂದಲೂ ಬಂದಿರುವ ವಾಡಿಕೆ. ಪುರಾತನಕಾಲದ ಯಾದವರಲ್ಲಿ ಇದೇ ಬಗೆಯ ನಡವಳಿಕೆಯಿದ್ದು ಮಹಾಭಾರತಾದಿಗಳಿಂದ ಗೊತ್ತಾಗುತ್ತದೆಂದು ಶಂಬಾರವರ ಅಧ್ಯಯನವು ತಿಳಿಸುತ್ತದೆ.

ಒಟ್ಟಾರೆಯಾಗಿ ಶಂಬಾಕೃತಿ ಸಂಪುಟಗಳಲ್ಲಿ ಹಟ್ಟಿಕಾರರ ಜನಾಂಗಗಳ ನೆಲೆಗಳು ಮತ್ತು ಅವರ ಭಾಷೆ. ದ್ರಾವಿಡ ಮೂಲದವರೆಂದು ಹಲವಾರು ಸಾಕ್ಷ್ಯಾಧಾರಗಳ ಮೇಲಿನಿಂದ ಪ್ರಾಚೀನ, ವೇದಗಳ ಕಾಲ, ಹರಪ್ಪ-ಮಹೆಂಜೋದಾರೊಗಳ ಕಾಲದಿಂದಲೂ ಹಟ್ಟಿಕಾರರ ಅಸ್ತಿತ್ವವನ್ನು ತಿಳಿಸುವಲ್ಲಿ ಅತ್ಯಂತ ಮುಖ್ಯವಾದ ಅಕರ ಗ್ರಂಥಗಳಾಗಿವೆ.

**ತೀ.ನಂ.ಶಂಕರನಾರಾಯಣರವರ 'ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು'(೧೯೭೭)** ಎಂಬ ಪ್ರಬಂಧದಲ್ಲಿ ಕಾಡುಗೊಲ್ಲರ ಮೇಲೆ ನಡೆದ ಈ ಅಧ್ಯಯವನ್ನು ಪರಾಮರ್ಶಿಸಿದರೆ ಕಾಡುಗೊಲ್ಲ ಬುಡಕಟ್ಟಿನ ಸಂಪ್ರದಾಯಗಳು, ಮೌಲ್ಯಗಳು, ನಂಬಿಕೆಗಳು ಕಾಡುಗೊಲ್ಲರ ನೆಲೆಗಳನ್ನು ಸಾಮಾಜಿಕ ಸಂಘಟನೆ ಧಾರ್ಮಿಕ ಕೇಂದ್ರಗಳು, ಕಾಡುಗೊಲ್ಲರ ಬುಡಕಟ್ಟು ವೀರರಾದ ಪಶುಪಾಲಕ ಸಂಸ್ಕೃತಿಯ ಎತ್ತಪ್ಪ, ಜುಂಜಪ್ಪನವರ ಪುರಾಣಗಳನ್ನು ತಮ್ಮ ಪ್ರಬಂಧದಲ್ಲಿ ಚರ್ಚಿಸಿದ್ದಾರೆ. ಕಾಡುಗೊಲ್ಲ ಬುಡಕಟ್ಟು ಸಂಪ್ರದಾಯವನ್ನು ಅವರ ಪಂಗಡಗಳಲ್ಲಿ ಬೆಡಗುಗಳು ಕಾಡುಗೊಲ್ಲರ ನ್ಯಾಯ ಪದ್ಧತಿ, ಕಟ್ಟೆಮನೆಗಳು ಮತ್ತು ಸಾಂಸ್ಕೃತಿಕ ನೆಲೆಯಲ್ಲಿ ಚರ್ಚಿಸಿದ್ದಾರೆ. ಸಾಂಸ್ಕೃತಿಕ ನೆಲೆಗಳು ಹಬ್ಬ, ಜಾತ್ರೆ, ಗಣೆಊದುವುದು ಸಂಪ್ರದಾಯಗಳು ಮತ್ತು ಆಚರಣೆಗಳಲ್ಲಿ ಅವರ ಅಧ್ಯಯನವು ಕೇಂದ್ರೀಕೃತವಾಗಿದೆ.

ಕಾಡುಗೊಲ್ಲರ ಸಂಪ್ರದಾಯಗಳಾದ ಹುಟ್ಟು, ಮುಟ್ಟು, ಮದುವೆ, ಮತ್ತು ಸಾವು ಈ ಸಂದರ್ಭದಲ್ಲಿ ಅವರು ಆಚರಿಸುವ ಸಂಪ್ರದಾಯ ಮತ್ತು ಆಚರಣೆಗಳನ್ನು ವಿವರಿಸಿದ್ದಾರೆ. ಕಾಡುಗೊಲ್ಲರು ತಮ್ಮ ದೇವರುಗಳ ಮೇಲೆ ಇಟ್ಟಿರುವ ಅಪಾರ ನಂಬಿಕೆಯನ್ನು ತಮ್ಮ ಪ್ರಬಂಧದಲ್ಲಿ ಚರ್ಚಿಸಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಸಾಂಸ್ಕೃತಿಕ ಮತ್ತು ಸಾಮಾಜಿಕ ಸ್ಥಿತ್ಯಂತರಗಳ ಅಧ್ಯಯನವನ್ನು ಮಾಡಿದಾಗ ಕೆಲವು ಮೂಲ ಆಚರಣೆ ಸಂಪ್ರದಾಯಗಳನ್ನು ಇನ್ನೂ ಉಳಿಸಿಕೊಂಡಿರುವುದು ಕಂಡುಬರುತ್ತದೆ. ತೀ.ನಂ.ಶಂಕರನಾರಾಯಣರವರು ಕಾಡುಗೊಲ್ಲರ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ತಮ್ಮ ಪ್ರಬಂಧದಲ್ಲಿ ಉಲ್ಲೇಖಿಸಿರುವುದಿಲ್ಲದಿರುವುದು ಗೋಚರಿಸುತ್ತದೆ. ಈ ಹಿನ್ನೆಲೆಯಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಮುಖ್ಯವಾಗಿಟ್ಟುಕೊಂಡು ಪ್ರಸ್ತುತ ಅಧ್ಯಯನವನ್ನು ಮಾಡಲಾಗಿದೆ.

**ಕಾಳೇಗೌಡ ನಾಗವಾರರ ಒಂದು ಹಟ್ಟಿಯ ಜನಪದೀಯ ಅಧ್ಯಯನ (೧೯೮೪)** ಈ ಸಂಶೋಧನಾ ಪ್ರಬಂಧದಲ್ಲಿ ಅವರು ಕಾಡುಗೊಲ್ಲರ ಹಟ್ಟಿಯಾದ ಶಿರಾ ತಾಲ್ಲೂಕಿನ ಬೇವಿನಹಳ್ಳಿ ಹಟ್ಟಿಯನ್ನು ಅಧ್ಯಯನ ಮಾಡಿದ್ದಾರೆ. ಕಾಡುಗೊಲ್ಲರ ಜಾನಪದ ಸಾಹಿತ್ಯದ ಮೂಲಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನ ಸೂಕ್ಷ್ಮತೆಯನ್ನು ವಿಮರ್ಶಿಸಿದ್ದಾರೆ. ಒಂದು ಹಟ್ಟಿಯ ಅಧ್ಯಯನವಾದರೂ ಇಡೀ ಕಾಡುಗೊಲ್ಲ ಬದುಕಿನ ಪಶುಪಾಲನೆ, ಆರ್ಥಿಕ ಸ್ಥಿತಿಗತಿಗಳನ್ನು ಮತ್ತು ಮಳೆಕರೆಯುವ ಹಾಡು ಮತ್ತು ಕಾಡುಗೊಲ್ಲರ ಆರಾಧ್ಯದೈವ ಜುಂಜಪ್ಪನ ಬಗ್ಗೆ ವಿಸ್ತೃತವಾದ ಮಾಹಿತಿಯನ್ನು ನೀಡಿದ್ದಾರೆ.

**ಎಂ. ಗುರುಲಿಂಗಯ್ಯರವರ 'ಕಾಡುಗೊಲ್ಲ ಸಾಮಾಜಿಕ ಚಲನೆ ಮತ್ತು ಸಾಮಾಜಿಕ ಪರಿವರ್ತನೆ' (೧೯೯೯)** ಎಂಬ ಸಂಶೋಧನಾ ಪ್ರಬಂಧವನ್ನು ಪರಾಮರ್ಶಿಸಿದಾಗ ಕಾಡುಗೊಲ್ಲ ಜನಾಂಗದ ಸಾಮಾಜಿಕ ರಚನೆ, ಸಾಮಾಜಿಕ ಸಂಘಟನೆ, ಶಿಕ್ಷಣ ಕ್ಷೇತ್ರದಲ್ಲಿ ಗೊಲ್ಲಜನಾಂಗದ ಒಲವುಗಳು, ಪಶುಪಾಲನಾ ವೃತ್ತಿಯ ಬಗ್ಗೆ ಗೊಲ್ಲಜನಾಂಗದ ಪ್ರತಿಕ್ರಿಯೆ, ಜನಾಂಗೀಯ ಮೀಸಲಾತಿಗೆ ಗೊಲ್ಲಜನಾಂಗದ ಹೋರಾಟಗಳು, ರಾಜಕೀಯ ಪ್ರಾತಿನಿಧ್ಯತೆಯ ಬಗೆಗೆ ಮತ್ತು ಸ್ತ್ರೀಯರ

ಸ್ಥಾನಮಾನಗಳಲ್ಲಿನ ಲಂಬಾಂತರ ಚಲನೆಯನ್ನು ಕುರಿತಾಗಿ ಸಮಾಜಶಾಸ್ತ್ರೀಯ ಹಿನ್ನಲೆಯನ್ನು ಅಧ್ಯಯನ ಮಾಡಿದ್ದಾರೆ.

**ಎಂ.ಗುರುಲಿಂಗಯ್ಯರವರ 'ಕರ್ನಾಟಕದ ಗೊಲ್ಲ ಸಮುದಾಯ-ಸಮಾಜೋ-ಸಾಂಸ್ಕೃತಿಕ ಅಧ್ಯಯನ'** (೧೯೮೧) ಎಂಬ ಕೃತಿಯನ್ನು ಪರಾಮರ್ಶಿಸಿದರೆ ಗೊಲ್ಲ ಪದದ ನಿಷ್ಪತ್ತಿ, ಜನಾಂಗದ ಮೂಲ ನೆಲೆ (ಹಟ್ಟಿಗಳ ನೆಲೆ) ಅವರ ಆಹಾರ ಪದ್ಧತಿ, ಉಡುಗೆತೊಡುಗೆಗಳು, ಗೊಲ್ಲ ಜನಾಂಗದವರ ಹೆಸರುಗಳು, ಜೀವನದ ಸಂಸ್ಕಾರಗಳು ಮತ್ತು ಸಂಪ್ರದಾಯಗಳಿಗೆ ಸಂಬಂಧಿಸಿದ ವಿವಾಹ, ಜನನ, ಋತುಮತಿ, ಮುಟ್ಟು, ಸಾವು ಇತ್ಯಾದಿ ಜೀವನಾವರ್ತನ ಆಚರಣೆಗಳ ಬಗ್ಗೆ ಚರ್ಚಿಸಿದ್ದಾರೆ. ಇತ್ತೀಚಿನ ದಿನಗಳಲ್ಲಿ ಗೊಲ್ಲರು ಬದಲಾವಣೆ ಬಯಸುತ್ತಿದ್ದು, ನಂಬಿಕೆ ಮತ್ತು ಸಂಪ್ರದಾಯಗಳಲ್ಲಿ ಸ್ವಲ್ಪಮಟ್ಟಿನ ಬದಲಾವಣೆ ಹೊಂದುತ್ತಿದ್ದಾರೆ. ಜನನ, ಮೈನೆರೆಯುವುದು ಸಹಜವಾದ ಕ್ರಿಯೆ ಎಂದು ಭಾವಿಸುತ್ತಿದ್ದಾರೆಂಬುದಾಗಿ ತಮ್ಮ ಅಧ್ಯಯನದಲ್ಲಿ ಕಂಡುಕೊಂಡಿದ್ದಾರೆ.

**ಮೀರಾಸಾಬಿಹಳ್ಳಿ ಶಿವಣ್ಣನವರು 'ಕಾಡುಗೊಲ್ಲ ಬುಡಕಟ್ಟು ವೀರರು'** (೧೯೯೬) ಎಂಬ ಪ್ರಬಂಧದ ತಮ್ಮ ಅಧ್ಯಯನದಲ್ಲಿ ಕಾಡುಗೊಲ್ಲರ ಪದ ನಿಷ್ಪತ್ತಿ ಮತ್ತು ಗೊಲ್ಲರಲ್ಲಿನ ಪಂಗಡಗಳಾದ ಕಾಡುಗೊಲ್ಲರು ಮತ್ತು ಊರುಗೊಲ್ಲರ ಬಗ್ಗೆ ಮಾಹಿತಿ ಕಲೆಹಾಕಿದ್ದಾರೆ. ಹುಟ್ಟು, ಮುಟ್ಟು, ಸಾವಿನ ಬಗೆಗೆ ಅಧ್ಯಯನದಲ್ಲಿ ಹೇಳಿರುವುದು ಗೋಚರವಾಗುತ್ತದೆ. ಕಾಡುಗೊಲ್ಲರ ಜೀವನ ವಿಧಾನ ಮತ್ತು ಅವರ ಜೀವನ ವಿಧಾನವನ್ನು ರೂಪಿಸಿದ ಎತ್ತಪ್ಪ ಮತ್ತು ಜುಂಜಪ್ಪ ಇವರು ಈ ಸಮುದಾಯಕ್ಕೆ ಕೊಟ್ಟ ಸಾಮಾಜಿಕ ನಿಯಮಗಳು ಸಂವಿಧಾನದ ರೀತಿಯಲ್ಲಿ ಕಟ್ಟುಕಟ್ಟಳೆಗಳ್ನು ರೂಪಿಸಿದ ಬಗೆಯನ್ನು ಚರ್ಚಿಸಿದ್ದಾರೆ.ಪಶುಪಾಲಕ ಸಂಸ್ಕೃತಿಯಿಂದ ಬಂದ ಎತ್ತಪ್ಪ ಮತ್ತು ಜುಂಜಪ್ಪ ನವರ ಬುಡಕಟ್ಟು ಸಂಸ್ಕೃತಿಯನ್ನು ಮತ್ತು ಸಾಂಸ್ಕೃತಿಕ ವೀರರಾಗಿ ಇವರು ಆಳಿಬಾಳಿದ ಜೀವನವನ್ನು ಪಶುಪಾಲನೆಗೂ ಇವರಿಗೂ ಇದ್ದ ಅವಿನಾಭಾವ ಸಂಬಂಧವನ್ನು ಹಾಗೂ ಕಾಡುಗೊಲ್ಲರ ಸಮಗ್ರ ಜೀವನ ಶೈಲಿಯನ್ನು ಚರ್ಚಿಸಿದ್ದಾರೆ.

**ಫ್ರಾನ್ಸಿಸ್ ಬುಕನಾನ್ ರವರ Journey through mysore, canara and malbar(1807)** ಎಂಬಕೃತಿಯ ಮೊದಲ ಸಂಪುಟದಲ್ಲಿ ಕಾಡುಗೊಲ್ಲರು ಜೀವನೋಪಾಯಕ್ಕಾಗಿ ಹೊಂದಿದ್ದ ಪಶುಸಂಗೋಪನೆ ಮತ್ತು ತಮ್ಮ ಪಶುಗಳ ರಕ್ಷಣೆಗಾಗಿ ರಾತ್ರಿಯ ಹೊತ್ತು ಹುಲಿಗಳಿಂದ ಮತ್ತು ಕಳ್ಳಕಾಕರಿಂದ ರಕ್ಷಣೆ ಪಡೆಯಲು ಮುಳ್ಳುಪೊದೆಗಳ ಸುತ್ತಲೂ ಬೆಂಕಿ ಹಾಕಿಕೊಂಡಿರುತ್ತಿದ್ದರೆಂಬುದಾಗಿ ತಿಳಿಸುತ್ತಾರೆ. ಕಾಡುಗೊಲ್ಲರ ಆರ್ಥಿಕ ವ್ಯವಸ್ಥೆ ಪಶುಪಾಲನೆ ಮೇಲೆ ಅವಲಂಬಿತವಾಗಿತ್ತು, ಹಾಗಾಗಿ ಅವುಗಳ ಜವಾಬ್ದಾರಿಯ ಕುರಿತ ಮಾಹಿತಿಯನ್ನು ಈ ಕೃತಿಯಲ್ಲಿ ದಾಖಲಿಸಿದ್ದಾರೆ. ಹೀಗೆ ಕಾಡುಗೊಲ್ಲರ ದನಗಳ ಬಗ್ಗೆ ಕುರಿತಾಗಿ ದನಗಾಹಿಗಳಲ್ಲದ ಅಪರಿಚಿತರು ಆ ದನಗಳನ್ನು ಸಮೀಪಿಸಲೂ ಸಾಧ್ಯವಿರುತ್ತಿರಲಿಲ್ಲವೆಂಬುದನ್ನು ಹೇಳುತ್ತಾರೆ. ಕಾರಣ ಅವುಗಳು ಅಷ್ಟು ಒರಟು ಎಂದು ತಿಳಿಸುತ್ತಾರೆ. ದನಗಾಹಿಗಳ ಬದುಕು ಹೇಗಿತ್ತು ಎಂಬುದರ ಬಗ್ಗೆ ಪಶುಪಾಲಕ ಸಂಸ್ಕೃತಿಯ ಏಳುಬೀಳುಗಳನ್ನು ಸೂಕ್ಷ್ಮವಾಗಿ ವಿವರಿಸಿದ್ದಾರೆ.

**ಹೆಚ್.ವಿ.ನಂಜುಂಡಯ್ಯ ಮತ್ತು ಎಲ್.ಕೆ ಅನಂತಕೃಷ್ಣ ಅಯ್ಯರ್ ಅವರ 'The mysore tribes and caste'(1936)** ನ ಮೂರನೇ ಸಂಪುಟದಲ್ಲಿ ಮಾನವ ವಿಜ್ಞಾನದ ಹಿನ್ನಲೆಯಲ್ಲಿ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಈ ಕೃತಿಯಲ್ಲಿ ಕಾಡುಗೊಲ್ಲರು ವಾಸಿಸುವ ಪ್ರದೇಶಗಳು ಕಟ್ಟೆಮನೆಗಳ ನ್ಯಾಯ ಪದ್ಧತಿ ಅವರ ಸಾಮಾಜಿಕ ವ್ಯವಸ್ಥೆ, ಕುಲಗಳು, ಬೆಡಗುಗಳು, ಸಂಪ್ರದಾಯಗಳ ಬಗ್ಗೆ ಮಾಹಿತಿ ನೀಡಿದ್ದಾರೆ. ಕಾಡುಗೊಲ್ಲರ ಧರ್ಮ, ಕಸುಬು, ಆಹಾರ, ಉಡುಗೆ ತೊಡುಗೆಗಳ ಬಗ್ಗೆ ಸಮಸ್ತ ವಿವರ ನೀಡುತ್ತದೆ. ಕಾಡುಗೊಲ್ಲರನ್ನು ಇವರು "ಕಾಡುಬುಡಕಟ್ಟು" (Forest tribe) ಎಂದು ಗುರುತಿಸಿರುವುದು ವಿಶೇಷವಾಗಿದ್ದು ಬುಡಕಟ್ಟು ಎಂದು ಸೂಚಿಸುವ ಪರಿಕಲ್ಪನೆಯನ್ನು ಹೇಳಿದ್ದಾರೆ.

**ಬಿ.ಎಮ್.ಮಹದೇವಶಾಸ್ತ್ರಿಗಳ 'ಯಾದವರ ಕೈಪಿಡಿ' ಅಥವಾ 'ಗೊಲ್ಲಗೌಡರ ವಂಶಾವಳಿಗಳು'** (೧೯೪೦) ಎಂಬ ಕೃತಿಯನ್ನು ಪರಾಮರ್ಶಿಸಿದರೆ ಇವರು ಅನೇಕ ಕಡೆಗಳಲ್ಲಿ ತಿರುಗಾಡಿ ಗೊಲ್ಲಗೌಡರನ್ನು ಭೇಟಿ ಮಾಡಿ ಯಾದವರು ಅಂದರೆ ಯಾರು ಅವರ ಮೂಲ ಪುರುಷರಾದ ಚಂದಮತ್ತಿ, ಚಿತ್ತಮುತ್ತಿಯವರ ಮೂಲದ ಬಗ್ಗೆ ಮಾಹಿತಿ ಕಲೆಹಾಕಿದ್ದಾರೆ. ಕಾಡುಗೊಲ್ಲರ ಮದುವೆಗಳಲ್ಲಿ ಜಾಡಿಹಾಸುವ ವಿಷಯವನ್ನು ಪ್ರಸ್ತಾಪಿಸುತ್ತಾ ಮದುವೆ ಸಂದರ್ಭದಲ್ಲಿ ಎತ್ತುವ ವೀಳ್ಯದ ವಿವರಗಳನ್ನು ಕೊಟ್ಟಿದ್ದಾರೆ. ವೀಳ್ಯದ ವಿವರದಲ್ಲಿ ಅವರಲ್ಲಿ ಗೌಡರಿಗೆ, ಯಜಮಾನರಿಗೆ, ವೀಳ್ಯವನ್ನು ಕೊಡುವ ಸಂಪ್ರದಾಯವನ್ನು ಪ್ರಸ್ತಾಪಿಸಿದ್ದಾರೆ.

**ಎ.ಎ.ಡಿ.ಲೂಯಿಜ್ Tribes of mysore (1963)** ಎಂಬ ಕೃತಿಯಲ್ಲಿ ಮೈಸೂರು ರಾಜ್ಯದ ಇಪ್ಪತ್ತೇಳು ಬುಡಕಟ್ಟುಗಳನ್ನು ದಾಖಲಿಸಿದ್ದಾರೆ. ಅವುಗಳಲ್ಲಿ

೧) ಆದಿಯನ್ ೨) ಬಂಜಾರರು ೩) ಬೆಟ್ಟಕುರುಬರು ೪) ಭಿಲ್ಲರು ೫) ಚೆಂಟು ೬) ಡಂಕ ೭) ಹಕ್ಕಿಪಿಕ್ಕಿ ೮) ಹಸಲ ೯) ಇರುಳಿಗ ೧೦) ಜೇನುಕುರುಬ ೧೧) ಕಾಡುಗೊಲ್ಲ ೧೨) ಕಪಾಲ ೧೩) ಕಿಳ್ಳೆಕ್ಯಾತರು ೧೪) ಕೊರಗ ೧೫) ಕೊರಮ ೧೬) ಕುಡಿಯ ೧೭)ಕುರುಬ ೧೮) ಮಲೇರು ೧೯) ಮರಾಟಿ ೨೦) ಮೇದ ೨೧) ಮುಳ್ಳುಕುರುಬ ೨೨) ಪಣಿಯ ೨೩) ಪರ್ದಿ ೨೪) ಸೋಲಿಗ ೨೫) ಎರವ ೨೬) ಗೌಡಾಳು ೨೭) ಕಾಡುಕುಡುಬಿ.

ಇಪ್ಪತ್ತೇಳು ಬುಡಕಟ್ಟುಗಳಲ್ಲಿ ಕಾಡುಗೊಲ್ಲರೂ ಒಂದು ಬುಡಕಟ್ಟೆಂದು ಪರಿಗಣಿಸಿದ್ದಾರೆ. The kadugolla`s who have a culture and dialect of their own, rightly deserve to be classed as scheduled tribe ಎಂದು ಹೇಳಿದ್ದಾರೆ. ಕಾಡುಗೊಲ್ಲರು ವಿಶಿಷ್ಟ ಸಂಸ್ಕೃತಿ ಹೊಂದಿದ್ದು ಸಾಮಾಜಿಕವಾಗಿ ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿದ್ದು ಹಿಂದುಳಿದ ಬುಡಕಟ್ಟು ಎಂದು ಪರಿಗಣಿಸಿ ಹೆಚ್ಚಿನ ಸೌಲಭ್ಯಗಳನ್ನು ಕೊಡಬೇಕೆಂಬುದಾಗಿ ಪ್ರಸ್ತಾಪಿಸಿದ್ದಾರೆ.

ಎ.ಎ.ಡಿ.ಲೂಯಿಜ್‌ರವರು **ಭಾರತ ಸರ್ಕಾರದ** The central tribal advisory board ನ ಅಧ್ಯಕ್ಷರೂ. The all india nomadic tribe enquiry committe ಯ ಸದಸ್ಯರೂ ಆಗಿದ್ದು ಬುಡಕಟ್ಟುಗಳ ಬಗ್ಗೆ ಸಂಕ್ಷಿಪ್ತ ಮಾಹಿತಿ ಕೊಟ್ಟಿರುವುದು ಅವರ ಅಧ್ಯಯನದಿಂದ ತಿಳಿದು ಬರುತ್ತದೆ.

**ಮಲ್ಲಿಕಾರ್ಜುನ ಕಲಮರಹಳ್ಳಿಯವರ ಕಾಡುಗೊಲ್ಲರ ಜನಪದ ಕಾವ್ಯಗಳಲ್ಲಿ ಸಾಂಸ್ಕೃತಿಕ ಸಂಘರ್ಷ(೨೦೦೭)** ಈ ಪ್ರಬಂಧವನ್ನು ಪರಾಮರ್ಶಿಸಿದರೆ ಜನಾಂಗವೊಂದು ತನ್ನ ಜನಾಂಗದ ಪಾವಿತ್ರತೆ ಮತ್ತು ಪರಿಶುದ್ಧತೆಯ ಸಲುವಾಗಿ ವಿಭಿನ್ನ ಸಂಸ್ಕೃತಿಗಳ ಮಧ್ಯೆ ಘರ್ಷಣೆಗಳು ನಡೆದು ಕೊನೆಗೆ ಬುಡಕಟ್ಟು ಜನಾಂಗವು ಸಾಂಪ್ರದಾಯಿಕ ಜೀವನವನ್ನು ಹೇಗೆ ಉಳಿಸಿಕೊಂಡು ಬಂದಿದೆ ಎಂಬುದನ್ನು ದಾಖಲಿಸಿದ್ದಾರೆ.

**ಜಿ.ಕೆ.ಪ್ರೇಮರವರ ಕಾಡುಗೊಲ್ಲ ಮಹಿಳೆ(೨೦೧೧)** ಪ್ರಬಂಧದಲ್ಲಿ ಕಾಡುಗೊಲ್ಲ ಮಹಿಳೆಯರ ಸಂಕೀರ್ಣತೆ, ಬದುಕಿನ ಬವಣೆ ಮತ್ತು ಮಹಿಳೆಯರ ಸ್ಥಾನಮಾನಗಳ ಬಗ್ಗೆ ಬದಲಾವಣೆಯಾಗಬೇಕಾದ ಅವಶ್ಯಕತೆ ಹಾಗೂ ಅವರ ಸಾಮಾಜಿಕ ಸ್ಥಾನಮಾನಗಳನ್ನು ವಿವರಿಸಿದ್ದಾರೆ.

**ಎಸ್.ಕೆ.ಸಣ್ಣೋಬಯ್ಯರವರ 'ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳು ಸಮಾಜಶಾಸ್ತ್ರೀಯ ಅಧ್ಯಯನ (೨೦೦೨)** ಇವರ ಅಧ್ಯಯನದಲ್ಲಿ ಈ ಎರಡೂ ಬುಡಕಟ್ಟುಗಳ ಸಾಮ್ಯತೆಯನ್ನು ದಾಖಲಿಸುವುದು ಕಂಡುಬಂದಿದೆ. ಎರಡು ಬುಡಕಟ್ಟುಗಳ ಸಂಪ್ರದಾಯಗಳು, ಆಚಾರ ವಿಚಾರಗಳು, ನಂಬಿಕೆಗಳು, ಅವರ ದೇವರುಗಳನ್ನು ಆರಾಧನೆ ಮಾಡುವ ರೀತಿ, ಪಶುಪಾಲಕ ಸಂಸ್ಕೃತಿಯ ಈ ಜನಾಂಗಗಳ ಹಿನ್ನೆಲೆ, ಜೀವನಾವರ್ತನ ಆಚರಣೆಗಳಾದ ಹುಟ್ಟು, ಸಾವು, ಋತುಮತಿ, ವಿವಾಹ ಈ ಬುಡಕಟ್ಟುಗಳ ದೈವತ್ವದ ಅತೀವವಾದ ನಂಬಿಕೆಗಳನ್ನು ವಿವರಿಸಿದ್ದಾರೆ.ಈ ಎರಡು ಬುಡಕಟ್ಟು ಆಚರಿಸುವ ಹಬ್ಬಗಳು, ಜಾತ್ರೆಗಳ ಬಗ್ಗೆ ವಿವರಣೆ ನೀಡಿದ್ದಾರೆ. ಜೀವನ ವಿಧಾನ ಮತ್ತು ಸಾಮಾಜಿಕ ರಚನೆಗೆ ಸಂಬಂಧಿಸಿದ ಅವರ ವಸತಿ ವಿನ್ಯಾಸ, ಆಹಾರ ಪದ್ಧತಿ, ಮ್ಯಾಸಬೇಡ ಮತ್ತು ಕಾಡುಗೊಲ್ಲರ ಬೆಡಗುಗಳಲ್ಲಿ ರಕ್ತ ಸಂಬಂಧ, ಕುಟುಂಬ ವ್ಯವಸ್ಥೆ ಬಗೆಗೆ ಹೋಲಿಕೆಯ ಮೂಲಕ ಈ ಎರಡು ಬುಡಕಟ್ಟುಗಳ ಅಧ್ಯಯನ ಮಾಡಿ ಈ ಹಿನ್ನೆಲೆಯಲ್ಲಿ ಕಾಡಾಡಿ ಬದುಕಿನ ಬುಡಕಟ್ಟು ಸಂಸ್ಕೃತಿಯನ್ನು ವಿವರವಾಗಿ ತಿಳಿಸುತ್ತಾರೆ. ಅವರು ವಾಸಿಸುವ ಭೌಗೋಳಿಕ ನೆಲೆಗಳು ಅವರ ಮತ್ತು ನಾಗರಿಕ ಜನ ವಸತಿಯ ಜನರ ಬಹುದೊಡ್ಡ ಸಾಮಾಜಿಕ ಅಂತರ ನಿರ್ಮಾಣವಾಗಲು ಕಾರಣ ಎಂಬಂತೆ ವಿವರಿಸಿರುವುದು ಈ ಪ್ರಬಂಧದಲ್ಲಿ ಕಂಡುಬರುತ್ತದೆ.

**ಚಲುವರಾಜುರವರ ಸಂಪಾದಿಸಿದ 'ಜುಂಜಪ್ಪ'-ಬುಡಕಟ್ಟು ಮಹಾಕಾವ್ಯ (೧೯೯೭)** ಕನ್ನಡ ವಿಶ್ವವಿದ್ಯಾಲಯ ಹಂಪಿ, ಗೊಲ್ಲರ ಸಂಸ್ಕೃತಿಯ ಕುರಿತಾದ ಸಮಗ್ರ ಜನಪದ ಮೌಖಿಕ ಮಹಾಕಾವ್ಯವನ್ನು ಕಾಡುಗೊಲ್ಲರ ಸಾಂಸ್ಕೃತಿಕ ವೀರ ಮತ್ತು ಆರಾಧ್ಯ ದೈವವಾದ ಜುಂಜಪ್ಪನ ಬಗೆಗಿನ ಕುರಿತ ಸಮಗ್ರ ಕಾವ್ಯವೊಂದು ಪ್ರಕಟವಾಗುತ್ತಿರುವುದು ಇದೇ ಮೊದಲು. ಜುಂಜಪ್ಪನ ಕುರಿತಾದ ಅಧ್ಯಯನವನ್ನು ವಿದ್ವಾಂಸರಾದ ತೀ.ನಂ.ಶಂಕರನಾರಾಯಣ, ಕಾಳೇಗೌಡ ನಾಗಾವಾರ, ಪಿ.ಬಿ.ಶಿವಣ್ಣನವರು ಅಧ್ಯಯನ ಮಾಡಿದ್ದಾರೆ. ಮೌಖಿಕವಾಗಿದ್ದ ಸಾಹಿತ್ಯವನ್ನು ಅಕ್ಷರರೂಪಕ್ಕಿಳಿಸಿ ಮಹಾ ಕಾವ್ಯವನ್ನು ಸಂಗ್ರಹಿಸಿದ ಕೀರ್ತಿ ಚಲುವರಾಜುರವರಿಗೆ ಸಲ್ಲುವಂತಹುದು. ಈ ಮಹಾಕಾವ್ಯವನ್ನು ಮಾಡಗಾನಹಟ್ಟಿ ದಾಸಪ್ಪ ಎಂಬ ಕಲಾವಿದರಿಂದ ಮೌಖಿಕ ಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಈ ಕಾವ್ಯವನ್ನು ಯಥಾವತ್ತಾಗಿ

ಹಾಡಿದಂತೆಯೇ ಬರೆಯಲಾಗಿದೆ. ಇದು ಶುದ್ಧ ಜನಪದ ಸಂಸ್ಕೃತಿಯನ್ನು ಹೊಂದಿದ್ದು ಜನಪದರ ಭಾಷೆಯಿಂದ ಹಿಡಿದಿಟ್ಟಿದ್ದಾರೆ.

ಈ ಬುಡಕಟ್ಟು ಮಹಾಕಾವ್ಯದಲ್ಲಿ ಜುಂಜಪ್ಪ ಪಶುಪಾಲಕ ಸಂಸ್ಕೃತಿಯ ಪ್ರತೀಕವಾಗಿ ದನಗಳನ್ನೇ ನಂಬಿಕೊಂಡು ಅವುಗಳನ್ನು ಮೇಯಿಸುವ ಕಾಯಕಕ್ಕಾಗಿಯೇ ಕಾಡುಮೇಡು ಅಲೆಯುವ ಅಲೆಮಾರಿ ಜನರ ಅತಂತ್ರಸ್ಥಿತಿಯ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ. ಜುಂಜಪ್ಪನನ್ನು ಸಾಂಸ್ಕೃತಿಕ ವೀರನನ್ನಾಗಿ ಆರಾಧಿಸಲು ಕಾರಣ ಜುಂಜಪ್ಪ ಹಲವಾರು ಹುಲ್ಲುಗಾವಲುಗಳನ್ನು ಗೆಲ್ಲುತ್ತಾನೆ. ಅವನ ಛಲ, ಆತ್ಮವಿಶ್ವಾಸ ಹಾಗೂ ತಾಳ್ಮೆ ವೃತ್ತಿಯಲ್ಲಿನ ಪ್ರಾಮಾಣಿಕತೆ ಅವನನ್ನು ನಾಯಕನನ್ನಾಗಿಸಿವೆ. ಪಶುಪಾಲನೆಯಲ್ಲಿಯೇ ಪಾರಮಾರ್ಥ ಕಂಡ ಜುಂಜಪ್ಪ ಸಹಜವಾಗಿ ಜನಾಂಗದ ಕಣ್ಮಣಿ, ಜುಂಜಪ್ಪನ ಕಾವ್ಯದಲ್ಲಿ ಬರುವ 'ಬಡಮೈಲ' ಕಾಡುಗೊಲ್ಲರು ತಮ್ಮ ದನಗಳಲ್ಲಿ ಇದ್ದ ನಂಬಿಕೆಗೆ ಒಂದು ಪ್ರತೀಕ. ಹಾಗಾಗಿ ಈ ಮಹಾಕಾವ್ಯ ನೋವು ನಲಿವುಗಳನ್ನು ಬಿಂಬಿಸುವ ಕಾಡಿನ ಮಕ್ಕಳ ಹಾಡಿನ ಜೀವದನಿಯಾಗಿ ಗೊಲ್ಲರ ಸಮಗ್ರವಾದ ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿದೆ.

**ಮೀರಾಸಾಬಿಹಳ್ಳಿ ಶಿವಣ್ಣರವರ 'ಗೊಲ್ಲಕಡಗ'** (೧೯೯೯) ಚಿತ್ರದುರ್ಗ ಜಿಲ್ಲೆಯ ಬುಡಕಟ್ಟುಗಳಾದ ಕಾಡುಗೊಲ್ಲರು ಮತ್ತು ಮ್ಯಾಸಬೇಡರಲ್ಲಿಯ ಸಾಮ್ಯತೆಯನ್ನು ಪ್ರಸ್ತಾಪಿಸುತ್ತಾ ಇವರಿಬ್ಬರು ಅಣ್ಣ ತಮ್ಮಂದಿರೆಂಬುದಾಗಿ ಮತ್ತು ಕಾಡುಗೊಲ್ಲರು ಪಶುಪಾಲಕ ಸಂಸ್ಕೃತಿಗೆ ಸೇರಿದರೆ, ಮ್ಯಾಸಬೇಡರು ಬೇಟೆ ಸಂಸ್ಕೃತಿಗೆ ಸೇರಿದವರೆಂದು ಪ್ರಸ್ತಾಪಿಸುತ್ತಾ ಕಾಡುಗೊಲ್ಲರ ನೆಲೆಗಳು ಹಾಗೂ ಇವರು ಗ್ರಾಮ ವಾಸಿಗಳಾಗಿ ಅನ್ಯರನ್ನು ಹಟ್ಟಿಯೊಳಗೆ ಸೇರಿಸದೆ ಹಟ್ಟಿಯ ಸುತ್ತಲೂ ಕಳ್ಳೆಯನ್ನು ಹಾಕಿ ತಮ್ಮ ಹಾಗೂ ತಮ್ಮ ದೇವರ ಪಾವಿತ್ರ್ಯತೆಯನ್ನು ಕಾಪಾಡುವಲ್ಲಿ ನಮ್ಮ ದೇವರುಗಳು ಕಳ್ಳೆ ಪ್ರಿಯ ದೇವರು ಎಂಬುದಾಗಿ ಹೇಳುತ್ತಾರೆ. ಈ ಕೃತಿಯಲ್ಲಿ ಸಂಪ್ರದಾಯಗಳಾದ 'ಜೆನ್ನಿಗೆ' ಅಂದರೆ ಮಗು ಜನಿಸಿದಾಗ ಹಟ್ಟಿ ಪ್ರವೇಶಿಸುವ ಸಂದರ್ಭದಲ್ಲಿ ಜೆನಿಗೆ ಹಾಲನ್ನು ಪೂಜಾರಿಯಿಂದ ತಾಯಿ ಮತ್ತು ಮಗುವಿಗೆ ಹಾಕಿಸಿ ದೇವಸ್ಥಾನದ ಹತ್ತಿರ ಪೂಜಾರಿಯೇ ಆ ಮಗುವಿಗೆ ಹೆಸರಿಡುತ್ತಾನೆ. ಜೆನ್ನಿಗೆ ಎಂದರೆ ಗೋವುಗಲ ಒಂದು ಉತ್ಕೃಷ್ಟ ತಳಿ ಎಂದರ್ಥ. ಇವು ನೋಡಲು ಸುಂದರವಾಗಿರುತ್ತವೆ, ಹಾಗಾಗಿ ಜೆನ್ನಿಗೆ ಎಂದರೆ ದೇವರಿಗೆ ಮೀಸಲಾಗಿಬಿಟ್ಟ ಗೋವು ಮತ್ತು ಅದರ ಹಾಲು ಎಂದರ್ಥ. ಸಾಂಸ್ಕೃತಿಕ ವೀರರಾದ ಎತ್ತಪ್ಪ ಮತ್ತು ಜುಂಜಪ್ಪನ ಬಗೆಗಿನ ಮಾಹಿತಿಯನ್ನು ಒಳಗೊಂಡಿದ್ದು, ಪ್ರಸ್ತುತ ಅಧ್ಯಯನದಲ್ಲಿ ಈ ತರಹದ ಸಂಪ್ರದಾಯ, ಸಂಸ್ಕೃತಿ ಇದೆಯೇ ಎನ್ನುವ ಸತ್ಯಾಸತ್ಯತೆಗಳನ್ನು ಅರ್ಥಮಾಡಿಕೊಳ್ಳಬೇಕಾಗಿದೆ.

**ಕಾಳೇಗೌಡ ನಾಗವಾರರವರ 'ಕಾಡುಗೊಲ್ಲ ಬದುಕಿನ ಅರ್ಥವ್ಯವಸ್ಥೆ' ಆದಿವಾಸಿ ಆಖ್ಯಾನ (೨೦೦೮)** ರಲ್ಲಿ ಬರೆದಿರುವ ಲೇಖನದಲ್ಲಿ ಕಾಡುಗೊಲ್ಲರು ಪರಂಪರಾನುಗತವಾಗಿ ಮೂಲವೃತ್ತಿಯಾಗಿ ಪಶುಪಾಲನೆಯನ್ನು ಹೊಂದಿದ್ದು ವಿಕಾಸದ ಹಂತದಲ್ಲಿ ವ್ಯವಸಾಯವನ್ನು ರೂಢಿಸಿಕೊಂಡಿದ್ದಾರೆ, ವ್ಯವಸಾಯದಲ್ಲೂ ಮಳೆಯಾಶ್ರಿತ ಕೃಷಿಯನ್ನು ಹೊಂದಿರುವವರ ಸಂಖ್ಯೆ ಬಹಳವಾಗಿದೆ ಎಂದು

ಅವರು ಅಭಿಪ್ರಾಯಪಡುತ್ತಾರೆ. ಗೊಲ್ಲರ ಪುರಾಣಗಳಲ್ಲಿ ಸಾಂಸ್ಕೃತಿಕ ವೀರರಾದ ಎತ್ತಪ್ಪ ಮತ್ತು ಜುಂಜಪ್ಪ ಪಶುಪಾಲನೆಯಲ್ಲೇ ಜೀವ ತೆಯ್ದುವರು, ಪಶುಪಾಲನೆಯ ಹಂತವನ್ನು ದಾಟಿ ಇದೀಗ ವ್ಯವಸಾಯ ಮತ್ತು ಕುರಿಸಾಕಾಣಿಕೆಯನ್ನು ಅವಲಂಬಿಸಿದ್ದಾರೆ.ಗೊಲ್ಲರನ್ನು ಕುರಿತು'ಕುರಿ ಕುಂದಣವು, ಮರಿಮಾಣಿಕ್ಯವು ಕುರಿಸಾಕಿ ಕುಬೇರರಾಗಿ' ಎಂಬ ಮಾತನ್ನು ಹಟ್ಟಿಯ ಗೊಲ್ಲರು ಅಕ್ಷರಶಃ ಪಾಲಿಸುತ್ತಿದ್ದಾರೆಂಬುದಾಗಿ ವಿವರಿಸಿದ್ದಾರೆ. ಹಟ್ಟಿಯ ಗೊಲ್ಲರು 'ರಾಜ್ಯಗಳಳಿಯಲಿ ರಾಜ್ಯಗಳುದಿಸಲಿ' ಕಿಂಚಿತ್ತೂ ಲೆಕ್ಕಿಸದೆ ಪರಂಪರಾಗತವಾದ ಅರ್ಥವ್ಯವಸ್ಥೆಯಲ್ಲಿಯೇ ನಿರಾಳವಾದ ಬದುಕನ್ನು ಕಟ್ಟಿಕೊಂಡಿದ್ದಾರೆಂದು ಈ ಕರತಿಯಲ್ಲಿ ಹೇಳುತ್ತಾರೆ.

**ಎಫ್.ಫಾಸೆಟ್ 'The Journal Of Anthropological Society'(1888)** ಎಂಬ ಕೃತಿಯಲ್ಲಿ ಮುಂಬೈ ಸರ್ಕಾರ ಪ್ರಕಟಿಸುತ್ತಿರುವ ಪತ್ರಿಕೆಯಲ್ಲಿ ಕಾಡುಗೊಲ್ಲರ ಕುರಿತಾದ ಈ ಲೇಖನದಲ್ಲಿ ಕಾಡುಗೊಲ್ಲರನ್ನು 'ಅಡವಿಗೊಲ್ಲರು' ಎಂದು ಹೆಸರಿಸಿದ್ದು ಈ ಜನಾಂಗದವರು ಮೂಲತಃ ಬುಡಕಟ್ಟು ಜನರಾಗಿದ್ದರು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಕಾಡುಗೊಲ್ಲರ ಮಹಿಳೆಯರ ಕಟ್ಟುನಿಟ್ಟಿನ ನಿಯಮಗಳು ಮತ್ತು ಹೆರಿಗೆಯ ಸಂಧರ್ಭದಲ್ಲಿನ ಸಂಪ್ರದಾಯಗಳನ್ನು ವಿವರಿಸಿದ್ದಾರೆ.

**ಕೆ.ಎಮ್.ಮೇತ್ರಿ 'ಕೃಷ್ಣ ಗೊಲ್ಲರ ಕಥನ ಕಾವ್ಯಗಳು (೧೯೯೭)** ಎಂಬ ಕಾವ್ಯಗಳನ್ನು ಪರಾಮರ್ಶಿಸಿದರೆ ಕಾಡುಗೊಲ್ಲರ ಸಾಂಸ್ಕೃತಿಕ ವೀರರು ಮತ್ತು ಈರಗಾರರಾದ ಎತ್ತಪ್ಪ, ಚಿತ್ತಯ್ಯ, ಈರಣ್ಣ, ಬೊಮ್ಮಣ್ಣ ಮೊದಲಾದವರ ಕುರಿತು ಕಾವ್ಯಗಳನ್ನು ಸಂಗ್ರಹಿಸಿದ್ದಾರೆ.ಈ ಕೃತಿಯಲ್ಲಿ ಕಾಡುಗೊಲ್ಲರನ್ನು ಯಾದವ ಕುಲದವರು, 'ಕೃಷ್ಣ ಕುಲದವರು' ಎಂಬುದಾಗಿ ಕರೆದಿರುವುದು ಕಂಡುಬರುತ್ತದೆ.

**ಗಂಗಾಧರ ದೈವಜ್ಞ ಬುಡಕಟ್ಟು ಸಮಾಜ, ಹುಟ್ಟು–ಸಾವಿನ ನಡುವೆ (೨೦೦೨)** ರಲ್ಲಿ ಬುಡಕಟ್ಟು ಸಮುದಾಯದ ಸೃಷ್ಟಿಪುರಾಣಗಳು, ಸಾಂಸ್ಕೃತಿಕ ವೀರರ ಹುಟ್ಟು, ಮುಟ್ಟು, ವಿವಾಹ, ಸಾವಿನ ಸೂತಕಗಳನ್ನು ಅನೇಕ ಬುಡಕಟ್ಟುಗಳನ್ನೂ ಕುರಿತು ವಿಶ್ಲೇಷಣೆ ಮಾಡಿದ್ದಾರೆ. ಬೇಟೆಯನ್ನೇ ಪ್ರಧಾನ ಕಸುಬನ್ನಾಗಿ ಹೊಂದಿರುವ ಸೋಲಿಗ, ಜೇನುಕುರುಬ, ಮ್ಯಾಸಬೇಡರ ಸಮುದಾಯಗಳ ಬೇಟೆ, ಆಚರಣೆ ಮತ್ತು ನಂಬಿಕೆಗಳನ್ನು ವಿಶ್ಲೇಷಿಸಿದ್ದಾರೆ. ಸಾವಿನ ಸಂಧರ್ಭದಲ್ಲಿ ಆಚರಿಸುವ ಆಚರಣೆಗಳ ಕುರಿತಾಗಿ ಹಸಲರು, ಗೌಳಿಗರು, ಕಾಡುಗೊಲ್ಲರು, ಗೊಂಡರು, ಹಾಲಕ್ಕಿ ಒಕ್ಕಲಿಗರು, ಮ್ಯಾಸಬೇಡರು ಸಾವಿನ ಸಂದರ್ಭದಲ್ಲಿ ಆಚರಿಸುವ ಸುಡುವ, ಹೂಳುವ, ಮತ್ತು ಮೂರು ದಿನದ ಕೂಳು ಹಾಗೂ ಹಸಲರು ಹೊಂದಿದ್ದ ದೆವ್ವ, ಭೂತಗಳ ಪರಿಕಲ್ಪನೆಗಳನ್ನು ಅವರು ತಮ್ಮ ಅಧ್ಯಯನದಲ್ಲಿ ಗುರ್ತಿಸಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಇಂತಹ ಸಂಪ್ರದಾಯ ಮತ್ತು ಆಚರಣೆಗಳು ಹಟ್ಟಿಸಂಸ್ಕೃತಿಯ ಬುಡಕಟ್ಟುಗಳಲ್ಲಿ ಇವೆಯೆ, ಸಂಪ್ರದಾಯಗಳು ಮುಂದುವರಿದಿವೆಯೇ, ಎಂಬುದನ್ನು ಕಂಡುಕೊಳ್ಳಲಾಗುವುದು.

**ಚಿದಾನಂದ ದೊಡ್ಡೇರಿ 'ಪಾರಿಬೇಲಿ'**(ಕಥೆ) (೧೯೮೪) ಲೇಖನವನ್ನು ಪರಾಮರ್ಶಿಸಿದರೆ ಕಾಡುಗೊಲ್ಲರು ವಾಸಿಸುವ ಹಟ್ಟಿಗಳ ಸುತ್ತಲೂ ಪಾರಿಬೇಲಿ ಅಥವಾ ಕಳ್ಳಿಯನ್ನು ಹಾಕಿರುತ್ತಾರೆ. ಪಾರಿಬೇಲಿ ಹಾಕುವ ಕಾರಣವೆಂದರೆ ಬೇರೆ ಜಾತಿಯವರ ಪ್ರವೇಶವನ್ನು ನಿಷಿದ್ಧಗೊಳಿಸಲು ಮತ್ತು ಮಡಿ ಮೈಲಿಗೆಯಿಂದ ರಕ್ಷಿಸುವ ಸಲುವಾಗಿ ಎಂಬುದಾಗಿ ತಿಳಿಸುತ್ತಾರೆ. ಪ್ರಸ್ತುತ ಅಧ್ಯಯನದಲ್ಲಿ ಎಲ್ಲಾ ಹಟ್ಟಿಗಳು ಈ ನಿಯಮಕ್ಕೆ ಒಳಪಟ್ಟವೆಯೆ? ಏನಾದರೂ ಸ್ಥಿತ್ಯಂತರಕ್ಕೊಳಪಟ್ಟವೆಯೇ ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗುವುದು.

**ಬಿ. ಚಿಕ್ಕಪ್ಪಯ್ಯ ಶ್ರೀ ಶ್ರೀ ಎತ್ತಪ್ಪ ಸ್ವಾಮಿ-ಶ್ರೀಶ್ರೀ ಜುಂಜಪ್ಪ ಸ್ವಾಮಿ ಸ್ಮರಣ ಸಂಚಿಕೆ(೨೦೧೩)** 'ಕಾಡುಗೊಲ್ಲರ ಸ್ಥಿತಿಗತಿಗಳ ಮುನ್ನೋಟ' ಲೇಖನದಲ್ಲಿ ಕಾಡುಗೊಲ್ಲರು ಗ್ರಾಮದ್ಬಹಿವಾಸಿಗಳಾಗಿದ್ದು ಗ್ರಾಮದಿಂದ ದೂರ ಅರಣ್ಯ ಅಂಚಿನಲ್ಲಿ ವಾಸಿಸುತ್ತಿದ್ದು, ಊರಹೊಕ್ಕರೆ ಮೈಲಿಗೆಯೆಂದು ಭಾವಿಸುವ ಇವರು 'ಕೊಕ್ಕರೆಗೆ ಒಂದು ಕೆರೆಯಲ್ಲ ಗೊಲ್ಲರಿಗೆ ಒಂದು ಊರಲ್ಲ' ಅಲೆಮಾರಿಗಳಾಗಿ 'ಎಲ್ಲಿ ಹುಲ್ಲು ನೀರು ಇದೆಯೋ ಅದೇ ನಮ್ಮ ಮನೆಮಾರು' ಎಂದು ಬದುಕಿದವರು. ಇದಕ್ಕೆ ಸಾಕ್ಷಿ ಎಂಬಂತೆ ಜುಂಜಪ್ಪ ಸಾಕಿದ 'ಬಡಮೈಲ' ಎಂಬುದು ಪ್ರತೀಕವಾಗಿದೆ. ಈ ಲೇಖನವು ಪಶುಪಾಲಕ ಸಂಸ್ಕೃತಿಯ ಎತ್ತಪ್ಪ, ಜುಂಜಪ್ಪನವರು ಪಶುಪಾಲನೆಯನ್ನೆ ಪ್ರಧಾನವಾಗಿ ಹೊಂದಿದ್ದು ಪಶುಪಾಲನೆಯಲ್ಲೇ ಸ್ವರ್ಗವನ್ನು ಕಂಡವರು ಎಂದು ಗುರುತಿಸಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಸಾಂಸ್ಕೃತಿಕ ಪರಂಪರೆಯ ಮುಂದಿನ ಅಧ್ಯಯನದಲ್ಲಿ ಸಾಂಸ್ಕೃತಿಕ ವೀರರ ಬಗೆಗೆ ಚರ್ಚಿಸಲಾಗಿದೆ.

**ದೊಡ್ಡ ಮಲ್ಲಯ್ಯ 'ಕಾಡುಗೊಲ್ಲರ ಸಂಸ್ಕೃತಿ ಒಂದು ಅವಲೋಕನ' ಸ್ಮರಣ ಸಂಚಿಕೆ(೨೦೧೩)**ರಲ್ಲಿ ಕಾಡುಗೊಲ್ಲರ ಕಟ್ಟೆಮನೆಗಳು ಮತ್ತು ಅವರ ಜೀವನದುದ್ದಕ್ಕೂ ಅಲೆಮಾರಿ ಬದುಕಿನ ಸಿದ್ಧಾಂತಗಳು ಹಾಗೂ ಕಾಡುಗೊಲ್ಲರ ಆಚರಣೆಗಳಾದ ಹುಟ್ಟು, ಮುಟ್ಟಿನ ಬಗೆಗೆ ತಿಳಿಸುತ್ತಾ ಕಾಡುಗೊಲ್ಲರ ಆಚರಣೆಗಳು ಮೂಢನಂಬಿಕೆಯಂತಿದ್ದರೂ ಆದರ್ಶಗಳಾಗಿವೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಬುಡಕಟ್ಟು ಸಮುದಾಯಗಳು ನಾಗರಿಕರಲ್ಲದಿದ್ದರೂ, ತಮ್ಮ ಸಂಸ್ಕೃತಿಗೆ ಭಂಗ ಬಾರದಂತೆ ನಡೆದು ಕೊಳ್ಳುತ್ತಾರೆ. ಆಧುನಿಕ ನಾಗರಿಕ ಸಮಾಜದಲ್ಲೂ ಎಲ್ಲಾ ಜಾತಿಗಳಲ್ಲೂ ಇಂತಹ ಸಂಪ್ರದಾಯಗಳೂ ಮೌಢ್ಯತೆಗಳಿವೆ ಅವು ಬೆಳಕಿಗೆ ಬರುತ್ತಿಲ್ಲವಷ್ಟೆ. ಹಾಗಾಗಿ ಕಾಡುಗೊಲ್ಲರು ತಮ್ಮ ಸಂಪ್ರದಾಯಗಳನ್ನು ನಿಸರ್ಗದ ಮಡಿಲಲ್ಲಿ ಮುಟ್ಟಿನ ಸಂದರ್ಭದಲ್ಲಿ ವಿಶ್ರಾಂತಿ ಪಡೆಯುತ್ತಾರೆಂಬುದಾಗಿ ಪ್ರಸ್ತಾಪಿಸುತ್ತಾರೆ.

**ಎಸ್. ಎಸ್. ಹಿರೇಮಠ ಕರ್ನಾಟಕ ಸಂಸ್ಕೃತಿ ಪರಂಪರೆ ಭಾಗ-೨ 'ಹಬ್ಬಗಳು ಮತ್ತು ಜಾತ್ರೆಗಳು'** (೧೯೯೨) ಈ ಲೇಖನವನ್ನು ಪರಾಮರ್ಶಿಸಿದರೆ ಕಾಡುಗೊಲ್ಲರು ಆಚರಿಸುವ ಹಬ್ಬಗಳು, ಜಾತ್ರೆಗಳು, ಕುಲದೇವರ ಆಚರಣೆಗಳು ಹಾಗೂ ಹಟ್ಟಿಗಳ ಸಂರಚನೆ ಕುರಿತಾಗಿ ವಿವರಿಸಿದ್ದಾರೆ.

**ಕೃಷ್ಣಮೂರ್ತಿ ಹನೂರು, 'ಸಾವಿರದ ಸಿರಿಬೆಳಗು'**(೨೦೦೫) ಜನಪದ ಸಂಗ್ರಹವನ್ನು ಅಧ್ಯಯನ ಮಾಡಿದಾಗ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಬುಡಕಟ್ಟು ಸಂಸ್ಕೃತಿಯನ್ನು ಆಚರಿಸುತ್ತಿದ್ದು ಅಣ್ಣ ತಮ್ಮಂದಿರಾಗಿ ನಡೆದುಕೊಂಡು ಬಂದಿರುವುದು ಗೋಚರಿಸುತ್ತದೆ. ಮೌಖಿಕ

ಪರಂಪರೆಯಾಗಿ ಜನಪದ ಕಥೆ, ಕಥನ ಗೀತೆ, ಲಾವಣಿ ಅಪಾರ ಸಂಖ್ಯೆಯಲ್ಲಿ ದೊರಕುತ್ತವೆ. ಜನಪದ ಗಾಯಕಿ ಸಿರಿಯಜ್ಜಿ ಚಿತ್ರದುರ್ಗ ಪ್ರದೇಶದ ಜನಪದ ಸಂಸ್ಕೃತಿಯ ಪ್ರತಿನಿಧಿ. ಸಿರಿಯಜ್ಜಿ ಹಾಡಿದ ಮದುವೆ ಸಂದರ್ಭದ ಹಾಡುಗಳು, ಮೈನೆರೆತಾಗ ಹಾಡುವ ಹಾಡುಗಳು, ಸೋಬಾನೆ ಪದಗಳು, ಮಳೆರಾಯನ ಹಾಡುಗಳು, ಭಕ್ತಿಗೀತೆಗಳು ಹೀಗೆ ಮದುವೆ ಸಂಧರ್ಭದಲ್ಲಿ ಹಸೆಬರೆಯುವ ಹಾಡುಗಳು, ಸೋಬಾನೆ ಪದ ಭಕ್ತಿ ಗೀತೆಗಳಲ್ಲಿ ತಿರುಪತಿ ತಿಮ್ಮಪ್ಪ, ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ, ಹನುಮಂತರಾಯನ ಮೇಲಿನ ಹಾಡು ಬರವಣಿಗೆಯ ರೂಪದಲ್ಲಿಲ್ಲದೇ ಮೌಖಿಕವಾಗಿಯೇ ಇವೆ. ಅವು ತಮ್ಮ ಬದುಕಿನ ಬಗೆಗೆ ಮತ್ತು ದೈವತ್ವದ ಮೇಲೆ ಬುಡಕಟ್ಟು ಸಮೂಹದ ನಂಬಿಕೆ, ನಿಸರ್ಗದ ಬಗ್ಗೆ ಬುಡಕಟ್ಟು ಇಟ್ಟಿರುವ ಪ್ರೀತಿ ಅಲ್ಲದೆ ಮಳೆರಾಯನ ಕುರಿತು ಹಾಡುಗಳು, ದೇವರು ಹೊಳೆಗೆ ಹೋಗುವಾಗ ಹೇಳುವ ಪದಗಳು, ತ್ರಿಪದಿ ರೂಪದಲ್ಲಿವೆ. ಹೀಗೆ ಈ ಕೃತಿಯು ಕಾಡುಗೊಲ್ಲರಲ್ಲಿ ಇರುವ ಜನಪದ ಸಂಸ್ಕೃತಿಯ ಶ್ರೀಮಂತಿಕೆಯಬಗ್ಗೆ ಅಭಿವ್ಯಕ್ತಿಸುತ್ತದೆ.

**ಕೃಷ್ಣಮೂರ್ತಿ ಹನೂರುರವರ 'ಕತ್ತಲದಾರಿದೂರ' ಮತ್ತು 'ಜನಪದ ವೀರಗೀತೆಗಳು'**(೧೯೮೨) 'ಕತ್ತಲದಾರಿದೂರ' ಕೃತಿಯನ್ನು ಪರಾಮರ್ಶಿಸಿದಾಗ ಗೊಲ್ಲ ಜನಾಂಗದ ಮಹಾಸತಿಯರ ಬಗ್ಗೆ ಮಾಹಿತಿಯಿದ್ದು, ಗೊಲ್ಲ ಜನಾಂಗದವರು ತಮ್ಮ ಜನಾಂಗದ ಪರಿಶುದ್ಧತೆಯ ದೃಷ್ಟಿಯಿಂದ ಕಾಡುಗೊಲ್ಲರ ಹೆಣ್ಣು ಮಕ್ಕಳಿಗೆ ಪಾತಿವ್ರತ್ಯವು ಪರಿಕ್ಷಿಸುವಂತಹದ್ದು ಮತ್ತು ಅದನ್ನು ಆಚರಿಸುವುದು ಅವರಿಗೆ ಕಡ್ಡಾಯವಾಗಿದೆ. ಈ ಹಿನ್ನೆಲೆಯಲ್ಲಿ ಮಹಾಸತಿಯರಾದ ವೀರತಿಮ್ಮವ್ವ ಮತ್ತು ಕೊಂಡದ ಕಾಟಮ್ಮ ಅವರನ್ನು ಪರಿಚಯಿಸಿದ್ದಾರೆ. 'ಜನಪದ ವೀರಗೀತೆಗಳು' ಕೃತಿಯಲ್ಲಿ ಕಾಡುಗೊಲ್ಲ, ಮ್ಯಾಸಬೇಡ, ಮತ್ತು ಕುಂಚಟಿಗ ಸಮುದಾಯದ ವೀರರನ್ನು ಕುರಿತಾಗಿ ಕಥನಗೀತೆಗಳಿವೆ. ಈ ಜನಾಂಗಗಳ ಆಚರಣೆಗಳ ಸಾಮ್ಯತೆಗಳನ್ನು ಈ ಕೃತಿಯು ತಿಳಿಸುತ್ತದೆ.

**ಮೊಗಳ್ಳಿ ಗಣೇಶರವರ 'ಅವ್ಯಕ್ತ ಚರಿತ್ರೆ'**-(೨೦೦೯) ಅವ್ಯಕ್ತ ಪಶುಪಾಲಕ ನೆಲೆ ಹಂಪಿಯ ನಿಸರ್ಗ ಪರಿಸರದಲ್ಲಿ ಹೇಗೆ ನೆಲೆಯೂರಿತ್ತು ಬೆಟ್ಟ, ಗುಡ್ಡಗಳ ಸಾಲು ಪಶುಪಾಲನೆಗೆ ಹೇಗೆ ಯೋಗ್ಯವಾಗಿತ್ತು ಎಂಬುದನ್ನು ಈ ಕೃತಿಯು ಸಾದರಪಡಿಸುತ್ತದೆ. ಪಶುಪಾಲಕ ಸಮುದಾಯಗಳಾದ ಕುರುಬ, ಮ್ಯಾಸಬೇಡ, ಕಾಡುಗೊಲ್ಲರ ಈ ಸಮುದಾಯಗಳಲ್ಲಿ ಪಶುಪಾಲನೆಗಾಗಿ ಹೇಗೆ ಪೈಪೋಟಿ ಸಂಘರ್ಷಗಳಾದವು ಹೀಗಾಗಿ ಈ ಸಮುದಾಯಗಳು ಅಂತರವನ್ನು ಕಾಯ್ದುಕೊಂಡವು ಎಂಬುದನ್ನು ಈ ಕೃತಿಯಲ್ಲಿ ಚರ್ಚಿಸಿದ್ದಾರೆ.

ನಿಸರ್ಗ ಮತ್ತು ಭೂಮಿಯೊಂದಿಗೆ ಈ ಸಮುದಾಯಗಳು ಯಾವ ರೀತಿಯಾದ ಗಾಢ ಸಂಬಂಧವನ್ನು ಹೊಂದಿದ್ದವು. ಕಾಡುಗೊಲ್ಲರಿಗೆ ಬೇರೆಯಾವುದೇ ವೃತ್ತಿ ಗೊತ್ತಿರದೆ ಪಶುಪಾಲನೆಯನ್ನೇ ನೆಚ್ಚಿಕೊಂಡರು. ನೈಸರ್ಗಿಕ ಮತ್ತು ರಾಜಕೀಯ ಬದಲಾವಣೆಯಿಂದಾಗಿ ಹಂಪಿ ಪರಿಸರವನ್ನು ಬಿಟ್ಟು ಬದುಕಿನ ದೃಷ್ಟಿಯಿಂದ ದಕ್ಷಿಣದ ಕಡೆ ವಲಸೆ ಬಂದರು. ಕಾಡು ಮತ್ತು ಹೆಚ್ಚು ಕುರುಚಲು ಪ್ರದೇಶಗಳಿಂದ ಕೂಡಿದ್ದ ಚಿತ್ರದುರ್ಗದ ಬಯಲು ಸೀಮೆಯ ಪ್ರದೇಶಗಳಿಗೆ ಬಂದರು. ಈ

ಜನಸಮುದಾಯಗಳೇ ಮುಂದೆ ಒಂದು ಸಾಮ್ರಾಜ್ಯದ ನಿರ್ಮಾಣಕ್ಕೆ ಕಾರಣವಾದವು ಎಂಬುದನ್ನು ಅತ್ಯಂತ ಸೂಕ್ಷ್ಮವಾಗಿ ಅವರು ಚರ್ಚಿಸಿದ್ದಾರೆ.

**ರಂಗರಾಜವನದುರ್ಗ, ಸಂಪಾದಿಸಿರುವ 'ಜನಪದ ಸಾಂಸ್ಕೃತಿಕ ವೀರರು'** (೨೦೦೭) ಕೃತಿಯನ್ನು ಚರ್ಚಿಸಿದರೆ ಕಾಡುಗೊಲ್ಲರ ಸಾಂಸ್ಕೃತಿಕ ವೀರರಾದ ಎತ್ತಪ್ಪ ಮತ್ತು ಜುಂಜಪ್ಪ ಇವರ ವ್ಯಕ್ತಿತ್ವವನ್ನು ಪಶುಪಾಲನೆಯ ಹಿನ್ನೆಲೆಯಲ್ಲಿಯೇ ಅವರು ಬೆಳೆಸುತ್ತಾರೆ. ಕಾಡುಗೊಲ್ಲರಲ್ಲಿ ಸಾಂಸ್ಕೃತಿಕ ಪುರುಷರ ಅಸ್ತಿತ್ವವನ್ನು ಪ್ರಾಣಿಗಳ ಸಹಭಾಗಿತ್ವದೊಂದಿಗೆ ಗುರುತಿಸಬೇಕಾಗುತ್ತದೆ. ಈ ಹಿನ್ನಲೆಯಲ್ಲಿ ಎತ್ತಪ್ಪ-ಜುಂಜಪ್ಪ ಕಾವ್ಯಗಳು ಕಾಡುಗೊಲ್ಲ ಜನಾಂಗದ ಮಹಾಕಾವ್ಯಗಳಾಗಿವೆ. ಹಾಲು ಹಯನುಗಳ ದೇವತೆಯಾಗಿ ಎತ್ತಪ್ಪನ ಸಂಪ್ರದಾಯ ರೂಪುಗೊಂಡರೆ, ಹಾವು ಚೇಳಿನ ದೇವತೆಯಾಗಿ ಜುಂಜಪ್ಪನ ಸಂಪ್ರದಾಯ ರೂಪುಗೊಂಡಿರುವುದನ್ನು ಕಾಣಬಹುದು. ಇಬ್ಬರ ಕುಲವೃತ್ತಿಯು ಆವುಗಳನ್ನು ಕಾಯುವುದೇ ಆಗಿದೆ. ಎತ್ತಪ್ಪ ಜನಾಂಗದ 'ಕರೆಕಡೆ' ವಿಂಗಡಿಸಿದ ಪ್ರಥಮ ಸಾಂಸ್ಕೃತಿಕ ವೀರನಾದರೆ, ಜುಂಜಪ್ಪ ಜನಾಂಗದ ಜನಪ್ರಿಯ ಸಾಂಸ್ಕೃತಿಕ ವೀರನಾಗುತ್ತಾನೆ.

ಎತ್ತಪ್ಪ ಮತ್ತು ಜುಂಜಪ್ಪನವರ ಎರಡೂ ಕಾವ್ಯಗಳಲ್ಲಿ ಹುಲ್ಲುನೀರಿನ ಪರದಾಟದ ಚಿತ್ರಣ ಸಮಾನವಾಗಿ ಮೂಡಿಬಂದಿದ್ದು, ಬೇಡ ಜನಗಳೊಂದಿಗೆ ಕಾಡುಗೊಲ್ಲರು ನಡೆಸುವ ಹೋರಾಟಗಳೇ ತುಂಬಿವೆ. ಹಾಗಾಗಿ ಇವರಿಬ್ಬರೂ ಒಂದು ಜನಾಂಗದ ಜೀವನ ವಿಧಾನವನ್ನು ರೂಪಿಸಿದ್ದಕ್ಕಾಗಿ ಕಾಡುಗೊಲ್ಲ ಜನಾಂಗದ ಸಾಂಸ್ಕೃತಿಕ ವೀರರಾಗಿ ಗೋಚರಿಸುತ್ತಾರೆ.

**ಕೃಷ್ಣಮೂರ್ತಿ ಹನೂರುರವರ 'ಮ್ಯಾಸಬೇಡರು'**(೧೯೯೩) ಕೃತಿಯನ್ನು ಪರಾಮರ್ಶಿಸಿದರೆ ಇದರಲ್ಲಿ ಮ್ಯಾಸಬೇಡರ ಮೂಲ ಐತಿಹಾಸಿಕ ಹಿನ್ನೆಲೆಯನ್ನು ಚರ್ಚಿಸುತ್ತಾರೆ. ನಾಯಕನಹಟ್ಟಿ ಬಖೈರಿನ ಪ್ರಕಾರ ಇವರು ಆಂದ್ರಪ್ರದೇಶದ ಶ್ರೀಶೈಲದ ಕಡೆಯಿಂದ ಬಂದವರು. ಚಿತ್ರದುರ್ಗ ಜಿಲ್ಲೆಯ ಜಗಳೂರು ಪ್ರದೇಶದ ಜನಿಗೇನಹಳ್ಳಿಯಲ್ಲಿ ನೆಲೆಸಿದವರು. ನಾಯಕನಹಟ್ಟಿ ಸಮೀಪವಿರುವ ಹಳ್ಳಿ, ಬೇಡನಾಯಕನ ಗುಂಪಿನ ಹೆಸರು ಕಾಟೇಮಲ್ಲಪ್ಪನಾಯಕ ಎಂದಿರುತ್ತದೆ. ಇದು ಅರಣ್ಯ ದೇವತೆಯಾದ ಶ್ರೀಶೈಲಮಲ್ಲಿಕಾರ್ಜುನನದೇ ಹೆಸರು ಎಂಬುದಾಗಿ ಈ ಕೃತಿಯಲ್ಲಿ ತಿಳಿಸುತ್ತಾರೆ. ಇವರು ಜನಿಗೇನಹಳ್ಳಿಗೆ ಬರಲು ಕಾರಣವೆಂದರೆ ತೊರೆ, ಹಳ್ಳ, ಸುತ್ತಮುತ್ತಲೂ ಕೆರೆ ಇರುವುದರಿಂದ ಇಲ್ಲಿ ನೆಲೆಯೂರಿದ್ದರೆಂಬುದಾಗಿ ಇಲ್ಲಿ ಹೇಳುತ್ತಾರೆ. ಮ್ಯಾಸಬೇಡರ ಜೀವನ ವಿಧಾನ, ವಸತಿವ್ಯವಸ್ಥೆ, ಬೆಡಗುಗಳು, ಕೌಟುಂಬಿಕ ವ್ಯವಸ್ಥೆ, ವಿವಾಹಕ್ಕೆ ಸಂಬಂಧಿಸಿದ ಮಾಹಿತಿಯನ್ನು ಚರ್ಚಿಸಿದ್ದಾರೆ. ಮ್ಯಾಸಬೇಡರ ಹಬ್ಬಗಳಲ್ಲಿ ಹಿರಿಯರ ಹಬ್ಬ, ಮಾರಮ್ಮನ ಹಬ್ಬ, ನಾಗಪ್ಪನ ಪೂಜೆ ಮಾಡುತ್ತಾರೆಂಬುದರ ಉಲ್ಲೇಖ ಈ ಕೃತಿಯಲ್ಲಿದೆ.

**ಕರಿಶೆಟ್ಟಿ ರುದ್ರಪ್ಪ ಅವರ'ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ'**(೧೯೯೫) ಎಂಬ ಕೃತಿಯಲ್ಲಿ ಮ್ಯಾಸಬೇಡರ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕನ್ನು, ಕೌಟುಂಬಿಕ ವ್ಯವಸ್ಥೆ, ನ್ಯಾಯಪದ್ಧತಿ, ಧಾರ್ಮಿಕ ಜೀವನ, ಸಂಸ್ಕಾರಗಳು ಸೋಬಾನೆ ಪದಗಳು, ಕಲೆ, ಕ್ರೀಡೆ ಮತ್ತು

ಅವರಲ್ಲಿನ ಉಪಪಂಗಡಗಳ ಬಗ್ಗೆ ಸಮಗ್ರವಾದ ಮಾಹಿತಿಯನ್ನು ಚರ್ಚಿಸಿದ್ದಾರೆ. ಮ್ಯಾಸಬೇಡರ ಜೀವನ ವಿಧಾನವನ್ನು ನೋಡಿದರೆ ಇದೊಂದು ಅಪ್ಪಟ ಬುಡಕಟ್ಟು ಸಂಸ್ಕೃತಿ ಎಂದು ತಿಳಿಯುತ್ತದೆ. ಅವರ ಭಾಷೆ, ವಾಸ, ಆಚರಣೆ, ವೃತ್ತಿ ಎಲ್ಲವುಗಳೂ ಮೂಲ ಬುಡಕಟ್ಟಿನ ಬಹಳಷ್ಟು ಲಕ್ಷಣಗಳನ್ನು ಒಳಗೊಂಡಿರುವುದು ಕಾಣಬರುತ್ತದೆ. ನ್ಯಾಯಪದ್ಧತಿಯಲ್ಲಿ ಕಾಡುಗೊಲ್ಲರಂತೆಯೆ ಕಟ್ಟೆಮನೆಗಳ ಸಂಸ್ಕೃತಿಯನ್ನು ಹೊಂದಿರುವುದು ಕಂಡುಬರುತ್ತದೆ. ಬೇಡರ ಪಂಗಡಗಳಲ್ಲಿ ಊರುಬೇಡರು ಮತ್ತು ಮ್ಯಾಸಬೇಡರುಗಳಲ್ಲಿಯ ಆಚರಣೆಗಳಲ್ಲಿ ಭಿನ್ನತೆಯನ್ನು ಗುರುತಿಸಿದ್ದಾರೆ. ಮ್ಯಾಸಬೇಡರಲ್ಲಿರುವ ಋತುಮತಿ ಮತ್ತು ಹೆರಿಗೆ ಸಂಧರ್ಭದಲ್ಲಿ ಆಚರಿಸುವ ಆಚರಣೆಯನ್ನು ಊರುಬೇಡರಿಗಿಂತ ಭಿನ್ನವಾಗಿ ಆಚರಿಸುವುದು ಕಂಡುಬರುತ್ತದೆಂಬುದಾಗಿ ಚರ್ಚಿಸಿದ್ದಾರೆ. ಈ ಕೃತಿಯಿಂದ ತಿಳಿದು ಬರುವ ಸಂಗತಿಯೆಂದರೆ ಮ್ಯಾಸಬೇಡರಲ್ಲಿ ಸೋಬಾನೆ ಪದಗಳು ಹೆಚ್ಚಾಗಿದ್ದರೆ ಕಾಡುಗೊಲ್ಲರಲ್ಲಿ ದೇವರ ಮೇಲಿನ ಹಾಡುಗಳು ಹೆಚ್ಚಾಗಿರುವುದು ಕಂಡುಬರುತ್ತದೆ.

**ವಿರೂಪಾಕ್ಷಿ ಪೂಜಾರಹಳ್ಳಿಯವರ 'ಬೇಟೆ ಮತ್ತು ಬೇಡರು'(೨೦೦೭)** ಕೃತಿಯನ್ನು ಪರಾಮರ್ಶಿಸಿದರೆ ಆಹಾರ ನಿರ್ವಹಣೆಗಾಗಿ ಮಾನವ ಕೈಗೊಂಡ ವೃತ್ತಿಗಳಲ್ಲಿ ಬೇಟೆಯೂ ಒಂದು. ಬೇಟೆ ಆದಿಮ ಸಮಾಜದಲ್ಲಿ ಹಸಿವನ್ನು ಇಂಗಿಸಿಕೊಳ್ಳಲು ಆ ಸಂದರ್ಭದ ವೃತ್ತಿಯಾಗಿತ್ತು. ಇಂದಿನ ದಿನಗಳಲ್ಲಿಯೂ ಮ್ಯಾಸಬೇಡರು ಯುಗಾದಿ ಹಬ್ಬದ ಸಂದರ್ಭದಲ್ಲಿ ಹಂದಿ ಬೇಟೆಯಾಡುವುದು ಕಾಣುತ್ತದೆ.ಬಹುಶಃ ಮ್ಯಾಸಬೇಡರ ಬೇಟೆಯು ಈಗ ಮನರಂಜನೆಯ ಪ್ರತೀಕವಾಗಿದೆಯಷ್ಟೆ ಅವರ ವಿಕಾಸದ ಹಂತಗಳಲ್ಲಿ ಮ್ಯಾಸಬೇಡರು ಪಶುಪಾಲನೆ, ಕೃಷಿ ಮತ್ತು ಕೂಲಿ ಕಾರ್ಮಿಕರಾಗಿರುವುದನ್ನು ಅಧ್ಯಯನ ಸಂದರ್ಭದಲ್ಲಿ ಕಂಡುಕೊಳ್ಳುವ ಪ್ರತ್ನವನ್ನು ಮಾಡಲಾಗಿದೆ. ಇಂದಿಗೂ ಸಹ ಮ್ಯಾಸಬೇಡರ ಮನೆಗಳಲ್ಲಿ ಭರ್ಜಿ, ಬಿಲ್ಲು, ಚಿಪ್ಪುಗೊಡಲಿ, ಬಲೆ ಇರುವುದು ಕಂಡುಬರುತ್ತದೆ.

ಮ್ಯಾಸಬೇಡರ ಚಾರಿತ್ರಿಕ ಹಿನ್ನಲೆಯಲ್ಲಿ ಇವರಿಗೆ ನಿಷಾದ, ಪುಲಿಂದ, ವ್ಯಾಧ, ಕಿರಾತ, ಶಬರ, ವಾಲ್ಮೀಕಿ, ತಳವಾರ, ಬೋಯಾ, ಬೇರಾದ್, ವೇದನ್, ರಾಮೋಶಿ ಮೊದಲಾದ ಪರ್ಯಾಯ ಹೆಸರುಗಳು ಇವೆ. ಆದರೂ ಚಳ್ಳಕೆರೆ, ಮೊಳಕಾಲ್ಮೂರು, ಜಗಳೂರು ತಾಲ್ಲೂಕುಗಳಲ್ಲಿ ಮ್ಯಾಸನಾಯಕರೆಂದೇ ಕರೆಯುವುದು ವಾಡಿಕೆಯಾಗಿ ಕಂಡು ಬರುತ್ತದೆ.

ಅವರು ಮ್ಯಾಸಬೇಡರ ಬುಡಕಟ್ಟು ವೀರರಾದ ಗಾದರಿಪಾಲನಾಯಕ ಮತ್ತು ಜಗಳೂರು ಪಾಪನಾಯಕನ ಸಂಗತಿಗಳನ್ನು ಚರ್ಚಿಸಿದ್ದಾರೆ. ಇವರಿಬ್ಬರೂ ಸಹ ದನಗಾಹಿ ಸಂಸ್ಕೃತಿಯಿಂದ ಬಂದವರು, ಇವರಿಬ್ಬರನ್ನು ಮ್ಯಾಸಬೇಡರು ಮನೆದೇವರನ್ನಾಗಿ ಪೂಜಿಸುವುದು ಕಂಡುಬರುವ ಸಂಗತಿಯಾಗಿದೆ. ಇವರ ಬಗ್ಗೆ ನಾಯಕ ಜನಾಂಗದಲ್ಲಿ ಹಾಡುಗಳನ್ನು ಹಾಡುವುದು ಕೇಳಿಬರುತ್ತದೆ. ಮ್ಯಾಸಬೇಡರ ಉಡುಗೆ ತೊಡುಗೆಗಳಲ್ಲಿ ಸ್ತ್ರೀಯರು ಕುಪ್ಪಸ, ಸೀರೆನ್ನು ತೊಡುತ್ತಾರೆ. ಪುರುಷರು ಚಲ್ಲಣ, ಪೇಟ, ಹೆಗಲ ಮೇಲೆ ಕಂಬಳಿ ಹಾಕುವ ಬಗ್ಗೆ ಅಧ್ಯಯನಕಾರರು ಪ್ರಸ್ತಾಪಿಸುತ್ತಾರೆ. ಹೀಗೆ ಮ್ಯಾಸಬೇಡರ ಬುಡಕಟ್ಟು ಹಿನ್ನಲೆ, ಬೇಟೆಯ ಬಗೆಗೆ, ಸಾಂಸ್ಕೃತಿಕ ವೀರರ ಬಗ್ಗೆ, ಉಡುಗೆ ತೊಡುಗೆಗಳ ಬಗ್ಗೆ, ಬೇಟೆಯ ಆಯುಧಗಳ ಬಗ್ಗೆ ಸಮಗ್ರ ಚಿತ್ರಣವನ್ನು ಕೊಡುತ್ತಾರೆ.

**ಹಿ.ಚಿ.ಬೋರಲಿಂಗಯ್ಯರವರ ಬುಡಕಟ್ಟು ದೈವಾರಾಧನೆ(೨೦೦೦)** ಈ ಕೃತಿಯಲ್ಲಿ ಮ್ಯಾಸಬೇಡ ಮತ್ತು ಕಾಡುಗೊಲ್ಲರ ಮೂಲ ದೈವಗಳನ್ನು ಹಾಗೂ ಸಾಂಸ್ಕೃತಿಕ ವೀರರು ಲೋಕದ ದೃಷ್ಟಿಯಲ್ಲಿ ದೈವತ್ವಕ್ಕೇರಿದ ಬಗೆಯನ್ನು ಚರ್ಚಿಸಿದ್ದಾರೆ. ಮ್ಯಾಸಬೇಡರಲ್ಲಿ ಗಾದ್ರಿಪಾಲನಾಯಕ ಈ ಜನಾಂಗದ ಕುಲದ ಮೂಲದೈವ ಮೂಲತಃ ದನಗಾಹಿ ಜೀವನವನ್ನು ಹೊಂದಿದ್ದ ಈತ ಬಳ್ಳಾರಿ, ಚಿತ್ರದುರ್ಗದ ನಡುವಿನ ಸಂಡೂರು ಅರಣ್ಯಗಳಿಂದಾವೃತವಾದ ಜರಿಮಲೆಸೀಮೆಯಲ್ಲಿ ಪಶುಪಾಲನೆಯನ್ನು ಮಡುತ್ತಿದ್ದನು. ಆ ಪ್ರದೇಶವು ಹುಲಿಗಳ ವಾಸಸ್ಥಾನ. ಗಾದ್ರಿಪಾಲನಾಯಕ ಮ್ಯಾಸಬೇಡರಿಗೆ ಹೆಚ್ಚು ಪ್ರಸಿದ್ಧವಾದ ದೈವವಾಗಿದ್ದು ಅವನು ಹುಲಿಯೊಂದಿಗೆ ಹೋರಾಡಿ ಸತ್ತ ಕತೆ ಜನಜನಿತವಾಗಿದೆ. ಈತನ ಜಾತ್ರೆಯನ್ನು ಮೊಳಕಾಲ್ಮೂರಿನ ಕಂಪಳದೇವರಹಟ್ಟಿ ಹೊಳಲ್ಕೆರೆ ತಾಲ್ಲೂಕಿನ ಮಿಂಚೇರಿಯಲ್ಲಿ ಆಚರಿಸುವ ಬಹುಮುಖ್ಯಸ್ಥಳಗಳು. ಮಿಂಚೇರಿಯ ಕಾಡಿನಲ್ಲಿರುವ ಗಾದ್ರಿಪಾಲನಾಯಕನ ಸಮಾಧಿ ಮ್ಯಾಸಬೇಡರಿಗೆ ಪವಿತ್ರ ಸ್ಥಳ.

ಬುಡಕಟ್ಟು ಸಾಂಸ್ಕೃತಿಕ ವೀರನ ಸಾಹಸ, ಶೌರ್ಯ, ಪರಾಕ್ರಮದಿಂದಾಗಿ ಈ ಸಮುದಾಯ ಒಬ್ಬ ನಿಸರ್ಗದ ವೀರನನ್ನು ದೈವತ್ವಕ್ಕೇರಿಸಿ ಪೂಜಿಸುತ್ತಿರುವುದು ಅವರ ಅನನ್ಯ ಲೋಕದೃಷ್ಟಿ ಬಹುತೇಕವಾಗಿ ಸಾಂಸ್ಕೃತಿಕ ವೀರರೆಲ್ಲ ಪ್ರಾಣಿ ಮತ್ತು ನಿಸರ್ಗದೊಂದಿಗೆ ಹೊಂದಿದ್ದ ಅವಿನಾಭಾವ ಸಂಬಂಧದಿಂದಾಗಿ ಅವುಗಳ ರಕ್ಷಣೆಗೆ ತಮ್ಮ ಪ್ರಾಣ ತೆತ್ತವರು ಎಂಬುದಾಗಿ ತಿಳಿದು ಬರುತ್ತದೆ. ಬುಡಕಟ್ಟು ದೈವಾರಾಧನೆಯಲ್ಲಿಯೇ ಮತ್ತೊಂದು ಬುಡಕಟ್ಟಾದ ಕಾಡುಗೊಲ್ಲರ ಸಾಂಸ್ಕೃತಿಕ ವೀರರಾದ ಜುಂಜಪ್ಪ ಮತ್ತು ಎತ್ತಪ್ಪನವರು ಈ ಸಮುದಾಯದ ಬಹುಮುಖ್ಯ ದೈವಗಳಾಗಿ ಪರಿಗಣಿತವಾಗಿದ್ದು ಏಕೆ? ಪಶುಪಾಲಕರಾದ ಇವರು ಸಮುದಾಯಕ್ಕಾಗಿ ಪ್ರಾಣತೆತ್ತವರು ಹಾಗಾಗಿ ಈ ಸಮುದಾಯ ದೈವತ್ವಕ್ಕೇರಿಸಿ ಆಚರಣೆ ಮಾಡುವುದು. ಹಾಗಾಗಿ ಪ್ರಾತಿನಿಧಿಕವಾಗಿ ಜುಂಜಪ್ಪನ ಕಾವ್ಯಗಳನ್ನು ತ್ರಿಪದಿಗಳಲ್ಲಿ ಹಾಡುತ್ತಾರೆ, ಜುಂಜಪ್ಪನ ಕಾವ್ಯ, ಪುರಾಣವು ಆತನು ಆಳಿದ, ಬಾಳಿದ ಕಥೆಯನ್ನು ಆತನ ಜೀವನದುದ್ದಕ್ಕೂ, ಸಾಧಿಸಿದ ಛಲ, ತಾಳ್ಮೆ, ಪಶುಪಾಲನೆಯಲ್ಲಿ ಪ್ರಾಮಾಣಿಕತೆಯನ್ನು ಪ್ರತಿನಿಧಿಸುತ್ತವೆ. ಕಾವ್ಯದ ಬಹುಭಾಗ ಆಕ್ರಮಿಸಿಕೊಂಡಿರುವ 'ಬಡಮ್ಮೈಲ' ಕಾಡುಗೊಲ್ಲರು ತಮ್ಮ ದನಗಳಲ್ಲಿ ಇಟ್ಟ ನಂಬಿಕೆಯ ಪ್ರತೀಕ ಎಂಬುದಾಗಿ ಜುಂಜಪ್ಪನನ್ನು ಆರಾಧಿಸುತ್ತಾರೆ. ಕಾಡುಗೊಲ್ಲರು ಪ್ರತ್ಯೇಕವಾಗಿ ಹಟ್ಟಿಗಳಲ್ಲಿ ವಾಸಿಸುತ್ತಿದ್ದು, ಊರಿನೊಂದಿಗೆ ಹೊಂದಾಣಿಕೆಯಾಗದೆ ಮೈಲಿಗೆಯೆಂದೇ ಭಾವಿಸುವ ಇವರು ಪ್ರತ್ಯೇಕವಾಗಿ ವಾಸಿಸುತ್ತಾರೆಂಬುದಾಗಿ ಚರ್ಚಿಸಿದ್ದಾರೆ.

**ಎಮ್.ಗುರುಲಿಂಗಯ್ಯ ಮತ್ತು ಎ.ನಾಗಪ್ಪರವರ 'ಕಾಡುಗೊಲ್ಲ'-ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲೆ (೨೦೦೮)** ಕೃತಿಯನ್ನು ಪರಾಮರ್ಶಿಸಿದರೆ ಕಾಡುಗೊಲ್ಲರ ಮೂಲ ನೆಲೆಗಳು, ಬೆಡಗುಗಳು, ಹಟ್ಟಿಗಳ ರಚನೆ ಅವರ ದೈವಾರಾಧನೆ, ಆಚರಣೆ, ನಂಬಿಕೆ, ಆಡಳಿತ ವ್ಯವಸ್ಥೆಯಾಗಿ ಕಟ್ಟೆಮನೆಗಳ ಪಾತ್ರ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯವಾಗಿ ಹಿಂದುಳಿದಿದ್ದರೂ ಬುಡಕಟ್ಟಿನ ಗುಂಪಿಗೆ ಸೇರಿಲ್ಲ. ಇದು ಬುಡಕಟ್ಟಾಗಿಯೂ ಬುಡಕಟ್ಟಾಗದ ಈ ಜನಾಂಗ ಪರಿಶಿಷ್ಟ ಪಂಗಡಕ್ಕೆ ಸೇರಿಸಬೇಕೆಂಬ ಒತ್ತಾಯವನ್ನು ಈ ಕೃತಿಯಲ್ಲಿ ಪ್ರಸ್ತಾಪಿಸುತ್ತಾರೆ.

**ಎಸ್.ಎಂ.ಮುತ್ತಯ್ಯ, 'ಚಿತ್ರದುರ್ಗ ಜಿಲ್ಲೆಯ ಬುಡಕಟ್ಟುಗಳು' ಪರಂಪರೆ-ಆಧುನಿಕತೆ' ಸಂಪುಟ-೬,** (೨೦೦೯) ಬುಡಕಟ್ಟು ಅಧ್ಯಯನ ಸಂಪುಟದ ಈ ಲೇಖನವನ್ನು ಚರ್ಚಿಸಿದಾಗ ಚಿತ್ರದುರ್ಗ ಜಿಲ್ಲೆಯ ಮೂರು ಬುಡಕಟ್ಟುಗಳಾದ ಮ್ಯಾಸಬೇಡ, ಕಾಡುಗೊಲ್ಲ, ಲಂಬಾಣಿ ಈ ಬುಡಕಟ್ಟುಗಳು ಕಾಡಿನ ಬುಡಕಟ್ಟುಗಳಂತಿರದೆ ಸುಧಾರಿತ ಬುಡಕಟ್ಟುಗಳಾಗಿದ್ದು ಎಸ್.ಟಿ, ಬಿ.ಟಿ, ಎಸ್.ಸಿ, ಸಂವಿಧಾನಾತ್ಮಕವಾಗಿ ಸೇರಿರುವುದು ಸರಿಯಷ್ಟೆ ಹಲವಾರು ಸಂಶೋಧಕರು ಮೂಲಭೂತವಾಗಿ ಇವುಗಳು ಅಲೆಮಾರಿ ಬುಡಕಟ್ಟುಗಳೆಂದು ದೃಢಪಡಿಸಿದ್ದಾರೆ ಎಂಬುದಾಗಿ ಉಲ್ಲೇಖಿಸುತ್ತಾರೆ.

ಚಿತ್ರದುರ್ಗ ಜಿಲ್ಲೆಯ ಮೂರು ಬುಡಕಟ್ಟುಗಳಲ್ಲಿ ಪಾರಂಪರಿಕ ಮೌಲ್ಯಗಳು, ಆಚರಣೆಗಳು, ನಂಬಿಕೆಗಳು, ಹಬ್ಬಗಳು ಹದಿನೈದನೆ ಶತಮಾನದಿಂದೀಚೆಗೆ ಆಧುನಿಕತೆಯ ಮೌಲ್ಯಗಳು, ವ್ಯಕ್ತಿಪ್ರಾಧಾನ್ಯತೆ, ವೈಯಕ್ತಿಕ ಬೆಳವಣಿಗೆಗೆ ಆದ್ಯತೆ ಕೊಟ್ಟುದುದರಿಂದಾಗಿ ಭೂತಕಾಲದ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಚರಣೆಗಳಲ್ಲಿ ಸ್ವಲ್ಪ ಮಟ್ಟಿನ ಬದಲಾವಣೆಯಾಗಿದೆ ಎಂಬುದಾಗಿ ತಿಳಿಸುತ್ತಾರೆ. ಈ ಮೂರು ಸಮುದಾಯಗಳು ಜಾಗತೀಕರಣ ಮತ್ತು ಆಧುನೀಕರಣದಿಂದಾಗಿ ಆಧುನಿಕತಾವಾದಿಗಳ ಅಭಿಪ್ರಾಯದಂತೆ ಸಂಪೂರ್ಣ ಬದಲಾವಣೆಯಾಗಿಲ್ಲ ಅವುಗಳಲ್ಲಿ ಕೆಲವು ಅಂಶಗಳು ಮಾತ್ರ ರೂಪಾಂತರಗೊಂಡಿವೆ ಎಂಬುದಾಗಿ ತಿಳಿಸಿದ್ದಾರೆ.ಪ್ರಸ್ತುತ ಅಧ್ಯಯನದಲ್ಲಿ ಅಂತಹ ಸ್ಥಿತ್ಯಂತರಗಳು, ಹೇಗೆ ಆಧುನಿಕತೆಗೆ ಮುಖಾಮುಖಿಯಾಗಿವೆ ಎಂಬುದನ್ನು ಗುರುತಿಸುವುದೇ ಆಗಿದೆ.

**ಅಂಬಳಿಕೆ ಹಿರಿಯಣ್ಣ, 'ಕಾಡುಗೊಲ್ಲರ ಜನಪದ ಗೀತೆಗಳು'**(೧೯೭೮) ಸಂಗ್ರಹಿಸಿದ ಗೀತೆಗಳಲ್ಲಿ ಕಾಡುಗೊಲ್ಲರ ಕುರುಹುಗಳು ಮತ್ತು ಅವರ ದೈವಗಳಾದ ಚಿತ್ತಯ್ಯ, ಕ್ಯಾತಪ್ಪ, ಜುಂಜಪ್ಪ ದೇವರುಗಳ ಕುರಿತಾಗಿ ತ್ರಿಪದಿ ರೂಪದ ಹಾಡುಗಳನ್ನು ಸಂಗ್ರಹಿಸಿದ್ದಾರೆ. ಈ ಗೀತೆಗಳು ಸಮುದಾಯದ ಜೀವನದ ಸ್ಥಿತಿಗತಿಗಳನ್ನು ತಿಳಿಯಲು ಸಹಾಯಕವಾಗಿದೆ.

**ಎಂ.ಜಿ. ಈಶ್ವರಪ್ಪನವರು 'ಮ್ಯಾಸಬೇಡರು' (೧೯೮೨)** ಎನ್ನುವ ಕೃತಿಯನ್ನು ಪರಾಮರ್ಶಿಸಿದಾಗ ಮ್ಯಾಸಬೇಡರ ಆಚಾರ ವಿಚಾರ ಮತ್ತು ಜೀವನ ಕ್ರಮವನ್ನು ತಿಳಿಸುತ್ತಾರೆ. ಮ್ಯಾಸಬೇಡರು ಯಾರು, ಮ್ಯಾಸಬೇಡರ ಹಟ್ಟಿಗಳು ಮತ್ತು ದೇವಸ್ಥಾನಗಳು. ವೇಷ ಭೂಷಣಗಳು ಕುಟುಂಬ ಪದ್ಧತಿ ಅವರ ಸಂಪ್ರದಾಯಗಳನ್ನು ಕುರಿತಂತೆ ಹುಟ್ಟು, ಸಾವು, ವಿವಾಹ, ಹಬ್ಬಗಳು ಮುಂತಾದ ಅಂಶಗಳ ಬಗ್ಗೆ ವಿವರಿಸಿದ್ದಾರೆ.

**ಆರ್.ರಾಜಣ್ಣರವರ 'ನಾಯಕ ಜನಾಂಗದ ಇತಿಹಾಸ'(೧೯೮೨)**ದಲ್ಲಿ ಮ್ಯಾಸಬೇಡರು ದೃಢಕಾಯರು, ಬರಿಗಾಲಲ್ಲಿ ನಡೆಯುವವರು, ಉಡುಪಿನ ಬಗ್ಗೆ ಗಂಡಸರು ಚಡ್ಡಿ(ಚಲ್ಲಣ) ತಲೆಗೆ ರುಮಾಲು, ಸ್ತ್ರೀಯರು ಸೀರೆ ಮಾತ್ರ ಉಟ್ಟು ಸೆರಗಿನಿಂದ ಎದೆ ಮುಚ್ಚಿಕೊಳ್ಳುತ್ತಿದ್ದು, ಪಶುಪಾಲನೆ ಮತ್ತು ಬೇಸಾಯವನ್ನು ಜೀವನೋಪಾಯ ಮಾಡಿಕೊಂಡಿರುವರೆಂದು ತಿಳಿಸುತ್ತಾರೆ. ಇವರು ಬುಟ್ಟಿದೇವರುಗಳನ್ನು ಪೂಜಿಸುತ್ತಾರೆ. ಗುಗ್ಗರಿಹಬ್ಬ ಮತ್ತು ಎತ್ತಿನ ಹಬ್ಬದಲ್ಲಿ ಬುಟ್ಟಿದೇವರುಗಳಿಗೆ ವಿಶೇಷ ಪೂಜೆ ಸಲ್ಲಿಸುತ್ತಾರೆಂದು ಪ್ರಸ್ತಾಪಿಸುತ್ತಾರೆ. ಈ ತರಹದ ಆಚರಣೆಗಳು ಇಂದೂ ಸಹ

ಈ ಜನಾಂಗದಲ್ಲಿದ್ದಾವೆಯೆ, ಸಾಂಸ್ಕೃತಿಕ ಸ್ಥಿತ್ಯಂತರಗಳಾಗಿವೆಯೆ ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ಗುರುತಿಸುವ ಉದ್ದೇಶವನ್ನೊಂದಿದೆ.

**ಎ.ಎಸ್. ಪ್ರಭಾಕರರವರು ಮ್ಯಾಸಬೇಡರ ಕಥನಗಳು(೧೯೯೯)** ಪಾಲಮ್ಮ ಮತ್ತು ಸಂಗಡಿಗರು ಹಾಡಿದ ಕಾವ್ಯಗಳಲ್ಲಿ ಮ್ಯಾಸಬೇಡರ ಗಾದರಿಪಾಲನಾಯಕನ ಹುಟ್ಟು ಅವನೊಬ್ಬ ಪಶುಪಾಲಕನಾಗಿ ಹುಲಿಯೊಡನೆ ಹೋರಾಡಿ ಸತ್ತಂತಹ ಕಥಾನಕವನ್ನು ಕಾವ್ಯರೂಪದಲ್ಲಿ ಸಂಗ್ರಹಿಸಿದ್ದಾರೆ. ಕಂಪಳದೇವರ ಬಗ್ಗೆ, ಜಗಳೂರಜ್ಜನ ಕಥೆ, ನನ್ನಿವಾಳದ ಗುಗ್ಗಿಹಬ್ಬದ ಆಚರಣೆಯ ಬಗ್ಗೆ ತಿಳಿಸುತ್ತಾರೆ.

**ಎಂ.ಕೆ. ದುರುಗಪ್ಪರವರು 'ವಿಜಯನಗರೋತ್ತರ ಕಾಲೀನ ಬೇಡ ಜನಾಂಗ'(೨೦೧೦)** ಈ ಕೃತಿಯಲ್ಲಿ ಬೇಡರ ಮೂಲ, ಬೇಡರಪಂಗಡಗಳು, ಬೇಡರ ಸ್ಥಿತ್ಯಂತರಗಳ ಬಗ್ಗೆ ಚರ್ಚಿಸಿದ್ದಾರೆ.

ಬೇಡರು ಮೂಲತಃ ಬೇಟೆ ವೃತ್ತಿಯನ್ನು ಹೊಂದಿದ್ದು, ಅವರು ಶೌರ್ಯವಂತರೂ, ಸಾಹಸಿಗಳು ಆಗಿದ್ದರಿಂದ ಅವರ ಬದುಕು ಚರಿತ್ರೆಯುದ್ದಕ್ಕೂ ಸ್ಥಿತ್ಯಂತರಕ್ಕೂಳಪಟ್ಟ ಬಗೆಯನ್ನು ಈ ಕೃತಿಯಲ್ಲಿ ಚರ್ಚಿಸಿದ್ದಾರೆ. ಬೇಡರು, ನಾಯಕ, ಗುರಿಕಾರ, ಸುಬೇದಾರ, ಜಹಗೀರುದಾರ, ದೇಸಾಯಿ, ತಳವಾರ, ಪಾಳೆಯಗಾರ, ದೊರೆ ಹೀಗೆ ನಾನಾ ಹಂತಗಳಿಗೆ ಏರಿದ್ದನ್ನು ಚರಿತ್ರೆ ಗುರುತಿಸಿದೆ. ಒಂದು ಕಾಲಕ್ಕೆ ರಾಜಕೀಯವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಉನ್ನತ ಮಟ್ಟಕ್ಕೇರಿದ ಬೇಡರು ಇಂದು ಕೃಷಿಕರಾಗಿ, ಕೃಷಿಕೂಲಿಕಾರ್ಮಿಕರಾಗಿ, ಕುರಿಸಾಕಾಣಿಕೆಯಲ್ಲಿ ಮುಂದುವರಿದಿರುವುದು ಕಂಡುಬರುತ್ತದೆ. ವಿಜಯನಗರೋತ್ತರ ಕಾಲದಲ್ಲಿ ಪಾಳೆಪಟ್ಟುಗಳನ್ನು ಕಟ್ಟಿಕೊಂಡು ಆಳ್ವಿಕೆ ನಡೆಸುತ್ತಿದ್ದ ಚಿತ್ರದುರ್ಗ, ಕೆಳದಿ, ಹರಪನಹಳ್ಳಿ, ಹಾಗಲವಾಡಿ, ಹರತಿ, ನಿಡುಗಲ್ಲು, ಕನಕಗಿರಿ, ಗುಡೆಕೋಟೆ, ನಾಯಕನಹಟ್ಟಿ ಮುಂತಾದ ಪ್ರದೇಶಗಳಲ್ಲಿ ಪಾಳೆಗಾರರಾಗಿ ಆಳಿದವರ ಚರಿತ್ರೆಯನ್ನು ಸಂಕ್ಷಿಪ್ತವಾಗಿ ವಿವರಿಸಿರುವುದು ಕಂಡುಬರುತ್ತದೆ. ಬೇಡ ಜನಾಂಗಗಳಲ್ಲಾದ ಸಾಮಾಜಿಕ, ರಾಜಕೀಯ, ಆರ್ಥಿಕ ಸ್ಥಿತ್ಯಂತರಗಳ ಬಗ್ಗೆ ಚರ್ಚಿಸಿದ್ದಾರೆ.

"ಕಾಡುಗೊಲ್ಲರ ಸಾಮಾಜಿಕ ಚಲನೆ ಮತ್ತು ಸಾಮಾಜಿಕ ಪರಿವರ್ತನೆ"ಯನ್ನು ಕುರಿತು ಗುರುಲಿಂಗಯ್ಯನವರು ಸಮಾಜಶಾಸ್ತ್ರೀಯ ಹಿನ್ನಲೆಯಲ್ಲಿ ಅಧ್ಯಯನ ಮಾಡಿ ಕಾಡುಗೊಲ್ಲರ ಸಾಮಾಜಿಕ ಜೀವನದಲ್ಲಿ ಬದಲಾವಣೆಯನ್ನು ಗುರುತಿಸುವಂತಹ ನಿಬಂಧವಾಗಿದೆ.

**ಶ್ರೀ ಶ್ರೀ ಎತ್ತಪ್ಪ ಸ್ವಾಮಿ–ಶ್ರೀಶ್ರೀ ಜುಂಜಪ್ಪ ಸ್ವಾಮಿಸ್ಮರಣ ಸಂಚಿಕೆ–(೨೦೧೩)** ಈ ಸಂಚಿಕೆಯಲ್ಲಿ ಬಿ.ಚಿಕ್ಕಪ್ಪಯ್ಯ 'ಕಾಡುಗೊಲ್ಲರ ಸ್ಥಿತಿಗತಿಗಳ ಮುನ್ನೋಟ'ದಲ್ಲಿ ಇವರದು ವಿಶೇಷ ಸರಿಸಾಟಿ ಇಲ್ಲದ ಸಂಸ್ಕೃತಿ, ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕವಾಗಿ ಹಿಂದುಳಿದಿರುವಿಕೆಯನ್ನು ಮತ್ತು ಕಟ್ಟೆಮನೆಗಳ ಪಾತ್ರವನ್ನು ಚಿತ್ರಿಸಿದ್ದಾರೆ.

ಹೀಗೆ ಸಂಶೋಧನೆಗೆ ಸಂಬಂಧಿಸಿದಂತೆ ಈಗಾಗಲೇ ನಡೆದಿರುವ ಸಂಶೋಧನೆಗೆ ಸಂಬಂಧಿಸಿದ ಸಾಹಿತ್ಯ ಅವಲೋಕನ ತುಂಬಾ ಪ್ರಮುಖವಾದುದು. ಈ ಹಿನ್ನಲೆಯಲ್ಲಿ ಕರ್ನಾಟಕದ ಪ್ರಾಚೀನ ಬುಡಕಟ್ಟುಗಳಲ್ಲಿ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಸಮುದಾಯಗಳ ಸಂಪ್ರದಾಯ, ಸಂಚಿಕೆಗಳು,

ಆಚಾರ ವಿಚಾರಗಳು, ಜನಪದ ಸಾಹಿತ್ಯ, ಸಾಂಸ್ಕೃತಿಕ ವೀರರು, ಆರ್ಥಿಕ ಸ್ಥಿತಿಗತಿಗಳು, ಮೂಲ ವೃತ್ತಿ ಪರಂಪರೆಯ ಬಗ್ಗೆ ನನ್ನ ಸಂಶೋಧನೆಗೆ ಮಹತ್ತರವಾದ ಮಾಹಿತಿಯ ಅಂಶಗಳು ದೊರೆತಿದ್ದು ಈ ಸಂಶೋಧನೆಯಲ್ಲಿ ಅಗತ್ಯವಾಗಿ ಸಂದರ್ಭೋಚಿತವಾಗಿ ಅವುಗಳ ಬಗ್ಗೆ ವಿಶ್ಲೇಷಿಸಿದೆ. ಈಗಾಗಲೇ ಪ್ರಕಟಗೊಂಡಿರುವ ಕೃತಿಗಳನ್ನು ಲೇಖನಗಳನ್ನು ಗಮನದಲ್ಲಿಟ್ಟುಕೊಂಡು ಕ್ಷೇತ್ರಕಾರ್ಯದ ಮೂಲಕ ಅವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಧ್ಯಯನಕ್ಕೆ ಹೆಚ್ಚು ಒತ್ತು ಕೊಟ್ಟು ಮಾಹಿತಿ ಸಂಗ್ರಹಿಸಲಾಗಿದೆ.

### ೧.೭ ಸಂಶೋಧನಾ ವಿನ್ಯಾಸ

ಹಟ್ಟಿ ಸಂಸ್ಕೃತಿ ಮತ್ತು ಪರಂಪರೆ-ಸಾಮಾಜಿಕ ಅಧ್ಯಯನ (ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸಿ) ಎನ್ನುವ ಅಧ್ಯಯನವನ್ನು ಚಿತ್ರದುರ್ಗ ಜಿಲ್ಲೆಯಲ್ಲಿ ಕೈಗೊಳ್ಳಲಾಗಿದೆ. ಪ್ರಸ್ತುತ ಅಧ್ಯಯನವನ್ನು ಪ್ರಮುಖವಾಗಿ ಆರು ಅಧ್ಯಾಯಗಳಾಗಿ ವರ್ಗೀಕರಿಸಲಾಗಿದೆ. ಅಧ್ಯಾಯಗಳು ಈ ಕೆಳಕಂಡಂತೆ ಇರುವುವು.

**ಅಧ್ಯಾಯ ಒಂದು:** ಪ್ರಸ್ತಾವನೆ, ಹಟ್ಟಿಗಳ ಸ್ವರೂಪ ಮತ್ತು ಲಕ್ಷಣಗಳು, ಸಂಶೋದನ ಪ್ರಶ್ನೆಗಳು ಹಾಗೂ ಸಮಸ್ಯೀಕರಣ, ಅಧ್ಯಯನಕ್ಕೆ ಸಂಬಂದಿಸಿದ ಉದ್ದೇಶಗಳು ಹಾಗೂ ಮಹತ್ವ ಅಧ್ಯಯನ ವಿಧಾನ, ಅಧ್ಯಯನ ಕ್ಷೇತ್ರದ ವ್ಯಾಪ್ತಿ, ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ, ಕುರಿತು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಅಧ್ಯಾಯ ಎರಡು:** ಹಟ್ಟಿ ಸಂಸ್ಕೃತಿಯ ಐತಿಹಾಸಿಕ ಹಿನ್ನೆಲೆಯಾಗಿ, ಹಟ್ಟಿ ಪರಿಕಲ್ಪನೆ, ಹಟ್ಟಿ ಪದದ ನಿಷ್ಪತ್ತಿ, ಹಟ್ಟಿ ಸಂಸ್ಕೃತಿಯ ಮೂಲ, ಹಟ್ಟಿ ಬೆಳವಣಿಗೆ ಮತ್ತು ವಿಕಾಸ, ಹಟ್ಟಿ ಮತ್ತು ಸಮುದಾಯಗಳು, ಹಟ್ಟ ಸಮುದಾಯದವರ ನೆಲೆ ಮತ್ತು ಜನಸಂಖ್ಯೆಯ ಪ್ರಸಾರದ ಬಗ್ಗೆ ಅಧ್ಯಯನವನ್ನೊಳಗೊಂಡಿದೆ. ಹಟ್ಟಿಗಳು ಇದ್ದ ಪ್ರಾಚೀನ ಕಾಲ ವೇದಗಳ ಕಾಲ ಕ್ರಿಪೂ ದಿಂದಲೂ ಹಟ್ಟಿಗಳು ಹುಟ್ಟಿಕೊಂಡ ಬಗೆ, ಹಟ್ಟಿಗಳು ಹೇಗೆ ಬೆಳವಣಿಗೆ ಹೊಂದಿದವು, ಸಮುದಾಯಗಳು ಹಟ್ಟಿಗಳನ್ನು ಕಟ್ಟಿಕೊಳ್ಳಲು ಕಾರಣಗಳೇನು, ಚಿತ್ರದುರ್ಗದಲ್ಲಿಯ ಹಟ್ಟಿಗಳ ಸಂಖ್ಯೆ ಮತ್ತು ಜಿಲ್ಲೆಯಾದ್ಯಂತ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಹಟ್ಟಿಗಳ ಕುರಿತಾದ ಮಾಹಿತಿ ಇದೆ.

**ಅಧ್ಯಾಯ ಮೂರು:** ಈ ಅಧ್ಯಾಯದಲ್ಲಿ ಹಟ್ಟಿಗಳ ಜೀವನಾವರ್ತನ ಆಚರಣೆಗಳು, ಹಟ್ಟಿ ಸಮುದಾಯಗಳಾದ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಆಚರಣೆಗಳಲ್ಲಿ ಜನನ, ನಾಮಕರಣ, ಋತುಮತಿ, ವಿವಾಹ, ಸೀಮಂತ, ಮರಣ, ಇವುಗಳ ಆಚರಣೆಗಳ ಕುರಿತಾದ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ. ನಂಬಿಕೆಗಳು ಹಾಗೂ ನಿಷೇಧಗಳು, ಹಟ್ಟಿ ಸಮುದಾಯದ ಹಬ್ಬ ಹಾಗು ಜಾತ್ರೆಗಳು, ಹಟ್ಟಿಗಳ ಸಾಮಾಜಿಕತೆ ಮತ್ತು ಆರ್ಥಿಕತೆ. ಎಂಬ ಸಾಮಾಜಿಕ ಸಂಘಟನೆ ಶಿಕ್ಷಣ ವಸತಿ, ಕುಟುಂಬ, ಆಹಾರ ಪದ್ಧತಿ, ಉಡುಗೆ ತೊಡಿಗೆಗಳು, ಆರ್ಥಿಕತೆಗೆ ಸಂಬಂಧಿಸಿದಂತೆ ಪಶುಪಾಲನೆ, ಕೃಷಿ, ಕೃಷಿಯೇತರ ವೃತ್ತಿ, ಬೇಟೆ, ಹಟ್ಟಿಗಳಲ್ಲಿಯ ವೈದ್ಯ ಪದ್ಧತಿ, ಆಡಳಿತ ವ್ಯವಸ್ಥೆಯ ಬಗ್ಗೆ ಚರ್ಚಿಸಲಾಗಿದೆ.

**ಅಧ್ಯಾಯ ನಾಲ್ಕು:** ಹಟ್ಟಿಗಳ ಭಾಷೆ, ಕಲೆ ಹಾಗೂ ಸಾಹಿತ್ಯ ಈ ಅಧ್ಯಾಯದಲ್ಲಿ ಭಾಷೆ, ಕಲೆಗೆ ಸಂಬಂದಿಸಿದ ಜನಪದ ಪ್ರದರ್ಶನ ಕಲೆಗಳು, ಜನಪದ ರಂಗ ಭೂಮಿ ಕಲೆಯ ಬಗೆಗೆ ವಿಶ್ಲೇಷಿಸಲಾಗಿದೆ. ಸಾಹಿತ್ಯಕ್ಕೆ ಸಂಬಂದಿಸಿದಂತೆ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಸೃಷ್ಠಿ ಪುರಾಣಗಳು, ಸಾಂಸ್ಕೃತಿಕ ನಾಯಕರು ಅಥವಾ ದೈವಾಚರಣೆಗಳು ಮತ್ತು ಮೌಖಿಕ ಸಾಹಿತ್ಯದ ಬಗ್ಗೆ ಚರ್ಚಿಸಲಾಗಿದೆ.

**ಅಧ್ಯಾಯ ಐದು:** ಹಟ್ಟಿ ಸಂಸ್ಕೃತಿ ಮತ್ತು ಪರಂಪರೆಯ ಸ್ಥಿತ್ಯಂತರಗಳು. ಹಟ್ಟಿಗಳು ಕಾಲ ಸಂದಂತೆ ಆಧುನೀಕರಣ ಮತ್ತು ನಗರೀಕರಣ ಹಟ್ಟಿಗಳ ಮೇಲೆ ಪ್ರಭಾವಬೀರಿದೆಯಾ ಮತ್ತು ಹಟ್ಟಿಗಳು ಆಧುನಿಕವಾಗಿ ಹೇಗೆ ಮುಖಾಮುಖಿಯಾಗಿವೆ ಎಂಬುದನ್ನು ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ಸ್ಥಿತ್ಯಂತರಗಳ ಬಗ್ಗೆ ಚರ್ಚಿಸಲಾಗಿದೆ.

**ಅಧ್ಯಾಯ ಆರು:** ಈ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ಫಲಿತಗಳು ಮತ್ತು ಸಲಹೆಗಳನ್ನು ಕಂಡುಕೊಳ್ಳಲಾಗಿದೆ.

ಅಧ್ಯಾಯಗಳ ಕೊನೆಯ ಭಾಗದಲ್ಲಿ ಪರಾಮರ್ಶನ ಗ್ರಂಥಗಳು, ಅನುಬಂಧಗಳು ವಕ್ತೃಗಳ ವಿವರ, ಛಾಯಾ ಚಿತ್ರಗಳು, ಸಂದರ್ಶನ ಅನುಸೂಚಿಯನ್ನು ಕೊಡಲಾಗಿದೆ.

**ಅಡಿಟಿಪ್ಪಣಿಗಳು:**

೧. ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯಯನ, ೨೦೦೪, ಪುಟ; ೦೪.

೨. ಚಿದಾನಂದ ಮೂರ್ತಿ.ಎಂ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಸಂಪುಟ-೧, ೧೯೬೬. ಪುಟ; ೦೭.

೩. ಟೇಲರ್. ಇ.ಬಿ. ಪ್ರಿಮಿಟಿವ್ ಕಲ್ಚರ್. ೧೮೧೭ ಪುಟ; ೦೧.

೪. ಮೀರಾಸಾಬಿಹಳ್ಳಿ ಶಿವಣ್ಣ. ಗೊಲ್ಲಕಡಗ, ೧೯೯೯, ಪುಟ; ೨೨.

೫. ಜಿಲ್ಲಾ ಸಂಗ್ರಹಣಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆಯ ಅಂಕಿಅಂಶಗಳ ನೋಟ ೨೦೧೧, ಪುಟ: ೦೧.

೬. ರಂಗಪ್ಪ.ಆರ್, ಚಿತ್ರದುರ್ಗ ಜಿಲ್ಲೆಯ ರಾಜಕೀಯ ನಾಯಕತ್ವ – ಜಗಲೂರು ಇಮಾಮ್‌ಸಾಬ್, ೨೦೦೯. ಪುಟ: ೩೬.

೭. ಚಿತ್ರದುರ್ಗ ಜಿಲ್ಲೆಯ ಆರ್ಥಿಕ-ಸಾಮಾಜಿಕ ಅವಲೋಕನ, ಜನಗಣತಿ ವರದಿ ೨೦೧೧. ಪುಟ : ೧೩೩.

೮. ಜಿಲ್ಲಾ ಸಂಗ್ರಹಣಾಧಿಕಾರಿಗಳು,ಚಿತ್ರದುರ್ಗ ಜಿಲ್ಲೆಯ ಅಂಕಿಅಂಶಗಳ ನೋಟ ೨೦೧೪-೧೫, ಪುಟ : ೧೭.

೯. ಚಿತ್ರದುರ್ಗ ಜಿಲ್ಲಾ ಅಂಕಿ ಅಂಶಗಳ ವರದಿ ೨೦೧೪-೧೫, ಪುಟ : ೦೮.

೧೦. ಜಿಲ್ಲಾ ಸಂಗ್ರಹಣಾಧಿಕಾರಿಗಳು ಜಿಲ್ಲಾ ಅಂಕಿಅಂಶಗಳ ನೋಟ ೨೦೧೪-೧೫, ಪುಟ : ೩೭.

೧೧. ಜಿಲ್ಲಾ ಸಂಗ್ರಹಣಾಧಿಕಾರಿಗಳು ಜಿಲ್ಲಾ ಅಂಕಿಅಂಶಗಳ ನೋಟ ೨೦೧೧, ಪುಟ : ೦೭.

೧೨. ಜಿಲ್ಲಾ ಸಂಗ್ರಹಣಾದಿಕಾರಿಗಳು ಜಿಲ್ಲಾ ಅಂಕಿಅಂಶಗಳ ನೋಟ ೨೦೧೪-೧೫, ಪುಟ: ೬೫.

೧೩. ಚಿತ್ರದುರ್ಗ ಜಿಲ್ಲಾ ಸಾಕ್ಷರತಾ ಜನಗಣತಿಯ ವರದಿ೨೦೧೧, ಪುಟ : ೬೪

೧೪. ಸಂಗ್ರಹಣಾಧಿಕಾರಿಗಳು ಜಿಲ್ಲಾ ಅಂಕಿಅಂಶಗಳ ನೋಟ ೩೧.೩-೨೦೧೫, ಪುಟ : ೭೮.

# ಅಧ್ಯಾಯ : ಎರಡು

## ಹಟ್ಟಿ ಸಂಸ್ಕೃತಿಯ ಐತಿಹಾಸಿಕ ಹಿನ್ನೆಲೆ

೨.೧ ಹಟ್ಟಿ ಪರಿಕಲ್ಪನೆ

೨.೨ ಹಟ್ಟಿ ಪದದ ನಿಷ್ಪತ್ತಿ

೨.೩ ಹಟ್ಟಿ ಸಂಸ್ಕೃತಿಯ ಮೂಲ

೨.೪ ಹಟ್ಟಿ ಬೆಳವಣಿಗೆ ಮತ್ತು ವಿಕಾಸ

೨.೫ ಹಟ್ಟಿ ಮತ್ತು ಸಮುದಾಯಗಳು

೨.೬ ಹಟ್ಟಿ ಸಮುದಾಯದ ನೆಲೆ ಮತ್ತು ಜನಸಂಖ್ಯೆ

## ಅಧ್ಯಾಯ: ಎರಡು

# ಹಟ್ಟಿ ಸಂಸ್ಕೃತಿಯ ಐತಿಹಾಸಿಕ ಹಿನ್ನೆಲೆ



### ೨.೧ ಹಟ್ಟಿ ಪರಿಕಲ್ಪನೆ

ಹಟ್ಟಿಗಳ ಪರಿಕಲ್ಪನೆ ಹೊಸತೇನಲ್ಲ. ವೇದಗಳ ಕಾಲದಿಂದಲೂ ಅಂದರೆ ಕ್ರಿಪೂ. ೨೫೦೦ ಅಥವಾ ೨೦೦೦ ರಿಂದಲೂ ಇದೆ. ಆರ್ಯರು ಬರುವ ಮೊದಲು ಸಿಂಧ-ಪಂಜಾಬಿನಲ್ಲಿ ಹಟ್ಟಿಗಳನ್ನು ಕಟ್ಟಿಕೊಂಡು ಯದು-ತುರ್ವರೂ, ಕುರುವರೂ, ನೆಲೆಸಿದ್ದರು. ಮೊಹೆಂಜೋದಾರೊದಲ್ಲಿ ದೊರೆವ ಪುರಾತನ ಪಟ್ಟಣಗಳು ಈ ಯದು-ತುರ್ವ-ಕುರುವರ ಬೀಡುಗಳಾಗಿರುವ ಸಂಭವವಿದೆ. ಮಾನವ ಸಮಾಜದ ಚಾರಿತ್ರಿಕ ಹಂತಗಳಲ್ಲಿ ಆಹಾರ ಸಂಗ್ರಹಣೆ, ಬೇಟೆ, ಪಶುಸಂಗೋಪನೆ, ಕೃಷಿ, ಈ ಉತ್ಪಾದನ ಹಂತಗಳು ಮಾನವ ಸಮಾಜದ ವಿವಿಧ ಹಂತಗಳು ಇಂದು ಇವು ಒಂದರ ಒಳಗೆ ಇನ್ನೊಂದು ಬೆರೆತು ಮನುಷ್ಯ ಸಮಾಜವನ್ನು ಸಂಕೀರ್ಣವಾಗಿ ರೂಪಿಸುತ್ತಾಬಂದಿವೆ. ಕರ್ನಾಟಕದಾದ್ಯಂತ ಕಂಡುಬರುವ ಹಲವಾರು ಬುಡಕಟ್ಟು ಸಮೂಹಗಳಲ್ಲಿ ಕಾಡುಗೊಲ್ಲರು ಮತ್ತು ಮ್ಯಾಸಬೇಡರು ಕಂಡುಬರುತ್ತಾರೆ. ಕಾಡುಗೊಲ್ಲರು ಬಳ್ಳಾರಿ, ಚಿತ್ರದುರ್ಗ, ತುಮಕೂರು, ಬೆಂಗಳೂರು ಗ್ರಾಮಾಂತರ, ಹಾಗೂ ಕೋಲಾರ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಮ್ಯಾಸನಾಯಕರು ಚಿತ್ರದುರ್ಗ, ಬಳ್ಳಾರಿ, ರಾಯಚೂರುಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಅತಿ ದಟ್ಟವಾಗಿ ಕಾಡುಗೊಲ್ಲರ ಮತ್ತು ಮ್ಯಾಸಬೇಡರ ಹಟ್ಟಿಗಳಿವೆ. ಪಶುಪಾಲಕ ಸಂಸ್ಕೃತಿಯವರೆ ಹಟ್ಟಿಗಳನ್ನು ನಿರ್ಮಿಸಿದ್ದು ಎನ್ನುವ ಹಲವಾರು ಆಧಾರಗಳಿವೆ. ಇಲ್ಲಿ ಮುಖ್ಯವಾದ ಪ್ರಶ್ನೆ ಎಂದರೆ ಈ ಪಶುಪಾಲಕ ಸಮುದಾಯಗಳು ಹಟ್ಟಿಗಳನ್ನು ನಿರ್ಮಿಸಿದ್ದೇಕೆ? ಪ್ರತ್ಯೇಕವಾಗಿದ್ದೇಕೆ? ಅನ್ಯ ಸಮುದಾಯದವರೊಂದಿಗೆ ಮಿಳಿತಗೊಳ್ಳಲಿಲ್ಲವೇಕೆ? ಎಂಬುದಕ್ಕೆ ಹತ್ತು ಹಲವು ಕಾರಣಗಳುಂಟು. ಕಾಡುಗೊಲ್ಲ ಮತ್ತು ಮ್ಯಾಸಬೇಡರು ಹೆಚ್ಚುಕಡಿಮೆ ಒಂದೇ ಓರೆಯವರು. ಸಂಪ್ರದಾಯ, ವೃತ್ತಿ, ಆಚರಣೆಗಳು, ನಂಬಿಕೆಗಳಲ್ಲಿ ಸಾಮ್ಯತೆಯನ್ನು ಹೊಂದಿದವರು. 'ಕಾಡುಗೊಲ್ಲರಂತೂ ಮಡಿ ಮೈಲಿಗೆಗಳಲ್ಲಿ ಹೆಚ್ಚಿನ ನಂಬಿಕೆ ಹೊಂದಿರುವ ಅವರು ಊರಿನ ಇತರ ಜನರೊಡನೆ ವಾಸಿಸಲು ಇಷ್ಟಪಡುವುದಿಲ್ಲ. ಹಾಗಾಗಿ ತಮ್ಮ ವಾಸದ ನೆಲೆಗಳನ್ನು ಊರಿನಿಂದ ಸ್ವಲ್ಪದೂರದಲ್ಲಿ ಕಟ್ಟಿಕೊಳ್ಳುತ್ತಾರೆ. ಹೀಗೆ ವಾಸಿಸುವ ಗೊಲ್ಲರ ಈ ವಸತಿ ಪ್ರದೇಶಕ್ಕೆ 'ಹಟ್ಟಿ' ಎಂದು ಕರೆಯುತ್ತಾರೆ'[೧]. ಹಾಗೆ ನೋಡಿದರೆ ಇಂದೂ ಸಹ 'ಹಟ್ಟಿ ಗೊಲ್ಲರವನು' ಗೊಲ್ಲ. ಗೊಲ್ಲಗೌಡ ಎಂಬುದಾಗಿ ಇತರೆ

ಸಮುದಾಯದವರು ಕರೆಯುತ್ತಾರೆ. ಕಾಡುಗೊಲ್ಲರ ಹಟ್ಟಿಗಳು ಊರುಗಳಿಂದ ಕನಿಷ್ಠ ಒಂದು ಫರ್ಲಾಂಗಿನಷ್ಟಾದರೂ ದೂರವಿರುತ್ತವೆ. ಇಂದೂ ಸಹ ಊರುಗಳ ಹೆಸರು ಹಚ್ಚಿಕೊಂಡೆ ಗೊಲ್ಲರ ಹಟ್ಟಿಗಳಿವೆ. ಹಟ್ಟಿಗಳಲ್ಲಿ ಗುಡಿಸಲುಗಳೇ ಹೆಚ್ಚು. ಈ ಗುಡಿಸಲುಗಳಿಗೆ ಹಂಚೀಹುಲ್ಲು, ಸೋಗೆಗರಿ, ಬಾದೆಹುಲ್ಲನ್ನು ಗುಡಿಸಲಿಗೆ ಹೊದಿಸಲು ಬಳಸುತ್ತಾರೆ. ಹಟ್ಟಿಯ ಮಧ್ಯೆ ದೇವಾಸ್ಥಾನವಿರುತ್ತದೆ. ಈಗಲೂ ದೇವಸ್ಥಾನಗಳ ಗುಡಿಸಲನ್ನು 'ಗುಬ್ಬ'ಎಂದು ಕರೆಯುತ್ತಾರೆ. ಅದಕ್ಕೂ ಸಹ ಹಂಚಿಹುಲ್ಲು, ಬಾದೆಹುಲ್ಲು ಹೊದಿಸುತ್ತಾರೆ. ಇಂತಹ ಗುಡಿಸಲು ಇಂದೂ ಸಹ ಕಂಪಳದೇವರ ಹಟ್ಟಿಯ ಕಂಪಳರಂಗಸ್ವಾಮಿ, ಯರಬಳ್ಳಿ ದೊಡ್ಡಗೊಲ್ಲರ ಹಟ್ಟಿಯ ಹಾಲುಗುಡದಪ್ಪಸ್ವಾಮಿ ನೋಡಲಿಕ್ಕೆ ಸಿಕ್ಕುತ್ತವೆ. ದೇವಸ್ಥಾನಗಳು ಗೋಳಾಕೃತಿಯಲ್ಲಿ ರಚಿಸಿದ್ದು ಚಿಕ್ಕಬಾಗಿಲನ್ನು ಹೊಂದಿದ್ದು ಪೂಜಾರಿಯು ಬಗ್ಗಿಯೇ ದೇವಾಸ್ಥಾನದೊಳಕ್ಕೆ ಹೋಗಬೇಕು. ವಿಶಿಷ್ಟತೆಯೆಂದರೆ ಗೊಲ್ಲರಲ್ಲಿ ಎರಡು ಪಂಗಡಗಳಾಗಿ ಕಾಡುಗೊಲ್ಲರು ಹಟ್ಟಿಗಳಲ್ಲಿ ಊರುಗೊಲ್ಲರು ಊರು ಮತ್ತು ನಗರಗಳಲ್ಲಿ ವಾಸಿಸುತ್ತಾರೆ. ಹಾಗೆಯೇ ನಾಯಕರಲ್ಲಿ ಮ್ಯಾಸಬೇಡರು ಮತ್ತು ಊರು ಬೇಡರು ಎಂಬ ಪಂಗಡಗಳಿದ್ದು ಮ್ಯಾಸಬೇಡರು ಹಟ್ಟಿಗಳಲ್ಲಿಯೇ ಇದ್ದು, ಊರು ಬೇಡರು ಗ್ರಾಮ ಮತ್ತು ನಗರಗಳಲ್ಲಿ ವಾಸಿಸುತ್ತಿದ್ದಾರೆ. ಕಾಡುಗೊಲ್ಲರ ಹಟ್ಟಿಗಳಂತೆಯೇ ಮ್ಯಾಸಬೇಡರ ಹಟ್ಟಿಗಳು ಇವೆ. ಹೀಗೆ ವಿಜಯನಗರ ಸಾಮ್ರಾಜ್ಯ ತಲೆ ಎತ್ತಿದ ನಂತರ, ಪಶುಗಳಿಗೆ ಆಹಾರ ಸಿಕ್ಕಾದಾದಾಗ ಪಶುಪಾಲಕರಲ್ಲಿ ಪೈಪೋಟಿಯಿಂದಾಗಿ ಬಯಲುಸೀಮೆಯ ಪ್ರದೇಶವಾದ ಚಿತ್ರದುರ್ಗದ ಕಡೆ ವಲಸಿಗರಾಗಿ ಬಂದು ನೆಲೆಸಿದರು. ಹಾಗಾಗಿ ಚದುರಿದ ಪಶುಪಾಲಕ ಜನಾಂಗಗಳು ಹೊಳೆ, ಹಳ್ಳ, ಕೊಳ್ಳ, ಬೆಟ್ಟ, ಗುಡ್ಡ, ಕುರುಚಲು ಪ್ರದೇಶಗಳ ಕಡೆ ಕ್ರಮಿಸಿ ಅಲ್ಲಿಯೇ ಹಟ್ಟಿಗಳನ್ನು ಕಟ್ಟಿಕೊಂಡು ವಾಸಿಸಿದರು. ಒಟ್ಟಾರೆಯಾಗಿ, ಹಟ್ಟಿಯೆಂದರೆ ದನ ಮತ್ತು ಜನಗಳಿಂದೊಡಗೂಡಿ ವಾಸಿಸುವ ಪ್ರದೇಶ. ದಟ್ಟವಾದ ಹುಲ್ಲುಗಾವಲು ಪ್ರದೇಶದಲ್ಲಿ ತಾತ್ಕಾಲಿಕ ಗುಡ್ಲುಗಳನ್ನು ಹಾಕಿಕೊಂಡು ಸಾಕು ಪ್ರಾಣಿಗಳನ್ನು ಸಾಕಿಕೊಂಡು ಜೀವಿಸುತ್ತಿದ್ದರು. ಸಾಂಧರ್ಭಿಕವಾಗಿ ಮೇವಿಗಾಗಿ ಒಂದುಕಡೆಯಿಂದ ಮತ್ತೊಂದುಕಡೆ ಹೋಗಿ ಪೋಷಿಸುತ್ತಿದ್ದರು. ಅವುಗಳ ಬಗ್ಗೆ ಪೂಜ್ಯಬಾವನೆ ಇಟ್ಟುಕೊಂಡ್ಡಿದ್ದಾರೆ. ಇಂತ ಹಟ್ಟಿ ಚಳ್ಳಕೆರೆ ತಾಲ್ಲೂಕಿನ ನನ್ನಿವಾಳದ ವರವು ಕಾವಲಿನಲ್ಲಿರುವ 'ಎತ್ತೈಗಳ ಹಟ್ಟಿ'ಯಲ್ಲಿ ಸುಮಾರು ೪೦೦ ರಾಸುಗಳು ಇವೆ. ಇದನ್ನು 'ಮುತ್ತೈಗಳಗೂಡು' ಎಂದು ಕರೆಯುತ್ತಾರೆ. ಇಲ್ಲಿ ಕಿಲಾರಿಗಳು ದನಗಳೊಟ್ಟಿಗೆ ವಾಸಿಸುವುದು ಕಂಡು ಬರುತ್ತದೆ. ಮುತ್ತಿಗಾರಹಳ್ಳಿ ಕಾವಲ್‌ನಲ್ಲಿಯು ಒಂದು ದನಗಳಗೂಡು ಇದೆ. ಇವುಗಳನ್ನು ಶ್ರೀಶೈಲದಿಂದ ಬಂದವು ಎಂಬುದಾಗಿ ಕಿಲಾರಿಗಳು ತಿಳಿಸುತ್ತಾರೆ. ದೀವಳಿಗೆಯಲ್ಲಿ ಮತ್ತು ಕಂಪಳದೇವರ ಜಾತ್ರೆಯಲ್ಲಿ ಈ ದನಗಳನ್ನು ಹರಿಸುತ್ತಾರೆ.

ಹೀಗೆ ಪಶುಪಾಲಕ ಸಂಸ್ಕೃತಿಯ ಕಾಡುಗೊಲ್ಲ ಮತ್ತು ಮ್ಯಾಸಬೇಡರು ವಾಸಿಸುವ ನೆಲೆಗಳಿಗೆ ಹಟ್ಟಿಗಳೆನ್ನುತಾರೆ. 'ಕಾಡುಗೊಲ್ಲರು ವಾಸಿಸುವ ಪ್ರದೇಶಕ್ಕೆ ಗೊಲ್ಲರಹಟ್ಟಿ, ಗೊಲ್ಲರದೊಡ್ಡಿ, ಗೊಲ್ಲರಬೀದಿ, ಓಣಿಗಳೆಂದು ಕರೆಯುತ್ತಾರೆ. 'ಗೊಲ್ಲರಹಟ್ಟಿಗಳು ಒಂದು ರೀತಿಯ ಪುಟ್ಟ ಗಣರಾಜ್ಯಗಳಂತಿರುತ್ತವೆ'.[೨] ಹಾಗೆಯೇ ಮ್ಯಾಸಬೇಡರು ವಾಸಿಸುವ ನೆಲೆಗಳಿಗೆ ಮ್ಯಾಸಬೇಡರ

ಹಟ್ಟಿಗಳು ಎನ್ನುತ್ತಾರೆ.

ಹಟ್ಟಿ–ಸಣ್ಣಸಂತೆ, ಒಂದೇ ಜಗೆಯ ವ್ಯವಸಾಯದ ಅಥವಾ ಜಾತಿಯ ಜನರ ಮನೆಗಳ ನೆಲೆ. ಅದು ಊರಿಗಿಂತ ಸ್ವಲ್ಪ ಅಂತರದಲ್ಲಿರುವ ಭಿಲ್ಲ, ರಾಮೋಶಿ ಮೊದಲಾದವರ ಬಿಡಾರ. ಭಿಲ್ಲ ರಾಮೋಶಿ, ಕೊರಚರಬೀಡು. ಇಂತಹವರ ತಂಡ, ಟೋಳಿ. ಪಟ್ಟಿ–ಅಗಲ ಕಡಿಮೆ ಇದ್ದು ಉದ್ದವಾಗಿರುವ ನೆಲದ ತುಂಡು, ಹೊಲ, ಪಾಡ, ಪಾಡಿ–ಒಕ್ಕಲು ತನದ ಅನುಕೂಲತೆಗಾಗಿ ಊರಿಂದ ಸ್ವಲ್ಪ ದೂರ ಹೊಲದ ಹತ್ತಿರ ಕಟ್ಟಿದ ಗುಡಿಸಲುಗಳು. ಒಕ್ಕಲುತನದವರ ಗುಡಿಸಲು.

ಒಟ್ಟಾರೆಯಾಗಿ, 'ಹಟ್ಟಿಯೆಂದರೆ ಗುಡಿಸಲು, ಹಟ್ಟಿ ಎಂದರೆ ದನಗಳ ಕೊಟ್ಟಿಗೆಗೂ ಹೆಸರು. ಜೀವಧನಂಗಳ ಹಟ್ಟಿ, ಗೋಸ್ಥಾನಕವೆಂದೂ ಕೋಶವು ಹೇಳುತ್ತದೆ. ಗೋಕುಲ, ವ್ರಜ, ಘೋಷ ಎಂಬ ಸಂಸ್ಕೃತ ಪದಗಳಿಗೆ ಇದು ಸಮಾನಾರ್ಥಕವಾಗಿದೆ. ಈ ಕಾರಣದಿಂದಾಗಿ ಹಟ್ಟಿ ಎಂದರೆ ಜನ ಮತ್ತು ದನಗಳ ವಾಸಸ್ಥಾನ, ಬಿಡಾರ, ತುರುಕಾರ ದನಗಾರರ ನಿವಾಸವೆಂಬುದು ಸ್ಪಷ್ಟ.

**೨.೨ ಹಟ್ಟಿ ಪದದ ನಿಷ್ಪತ್ತಿ:**

ಹಟ್ಟಿಗಳನ್ನು ಸ್ಥಾಪಿಸುವ ಪೂರ್ವದಲ್ಲಿ ಕುರಿಗಳಿಗಾಗಿ ರೊಪ್ಪಗಳನ್ನು ನಿರ್ಮಿಸುತ್ತಿದ್ದರು. 'ರೊಪ್ಪ' ದಲ್ಲಿ ಎಲ್ಲ ಕುರಿಗಳನ್ನು ಕೂಡುವುದು. ದನಗಳಿಗೆ 'ದೊಡ್ಡಿ' ಯ ಕಲ್ಪನೆಯು ಇದೇ ತೆರನಾದದ್ದು, ಈ ಪ್ರಾಣಿಗಳೆಲ್ಲ ಒಂದು ಗುಂಪಾಗಿ ಸೇರಿಸುತ್ತಿದ್ದುದನ್ನು ಗಮನಿಸಬಹುದು. ಹೀಗೆ ಅಲೆಮಾರಿ ಬದುಕನ್ನು ನಿರ್ವಹಿಸುತ್ತಿದ್ದವರ ಗುಂಪಿನ ಗಾತ್ರ ಸಾಮಾನ್ಯವಾಗಿ ದೊಡ್ಡದಾಗುತ್ತ ಹೋಯಿತು. ಅವರಲ್ಲಯೇ ಮನೆ, ಕುಟುಂಬ ಕಲ್ಪನೆಗಳು ಶುರುವಾಗಿರಬಹುದು. ಆಗ ಅವರಿಗೆ ಒಂದಡೆ ನೆಲೆಸಿ ಹಟ್ಟಿಯನ್ನು ಕಟ್ಟಿಕೊಳ್ಳುವ, ನೆಲೆಸುವ ಮನಸ್ಥಿತಿಯು ಬಂದ ಮೇಲೆ ಈ ಹಟ್ಟಿ ಪರಿಕಲ್ಪನೆಯು ಹುಟ್ಟಿದೆ ಎಂದು ಅನ್ನಿಸುತ್ತದೆ. ಹೀಗೆ ತನ್ನ ಊರಲ್ಲಿದ್ದಾಗ, ಪ್ರವಾಸ ಹೋದಾಗ ತನ್ನ ಪಶುಗಳನ್ನು ಕಾಯ್ದಿಡಲು ಪಶುವಸತಿಗಳನ್ನು ಕಟ್ಟಿಕೊಂಡ ಈ ವಸತಿಗಳು ಪ್ರಾಣಿಗಳಿಗೆ ತಕ್ಕಂತೆ ಅವುಗಳಲ್ಲಿ ವಾಸಮಾಡುವ ಕಾಲಮಾನ ಮತ್ತು ಉದ್ದಕ್ಕೆ ತಕ್ಕಂತೆ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗಿದೆ.

ಅವರಲ್ಲಿ 'ಕುರಿಗಳ ರೊಪ್ಪ', ದನಗಳ ದೊಡ್ಡಿ, ಹೆಕ್ಕಿಗಳು ಹೀಗೆ ಕುರಿಗಳನ್ನು ಕೂಡಲು ಯಾವ ಮೇಲ್ಹಾವಣೆಯೂ ಇಲ್ಲದ ಕುರಿಗಳ ವಸತಿಯನ್ನು 'ರೊಪ್ಪ' ಎನ್ನುವರು. ಪಶುಪಾಲಕ ಸಂಸ್ಕೃತಿಯಲ್ಲಿ ರೊಪ್ಪ ಮೊದಲು ನಂತರ ಹಟ್ಟಿ, ರೊಪ್ಪದ ಉದ್ದೇಶವೆಂದರೆ ಈ ಸಾಕುಪ್ರಾಣಿಗಳು ಹೊರಹೋಗದಂತೆ ಮತ್ತು ಹೊರಗಿನಿಂದ ಇವುಗಳಿಗೆ ಅಪಾಯ ಬರದಂತೆ ರಕ್ಷಿಸುವುದು ಇದು ಅವುಗಳಿಗೆ ತಾತ್ಕಾಲಿಕ ವಸತಿಯಾಯಿತು. ಹಟ್ಟಿ ಎಂದರೆ ದನಗಳ ಕೊಟ್ಟಿಗೆಗೂ ಹೆಸರು. 'ಹಟ್ಟಿ' ಎಂದರೆ ಜನ ಮತ್ತು ದನಗಳ ವಾಸಸ್ಥಾನ. ಬಿಡಾರ, ತುರುಕಾರ–ದನಗಾರರ ನಿವಾಸವೆಂಬುದು ಸ್ಪಷ್ಟ ತುರುಕಾರ ದನಗಾರರಿಗೇ ಹಟ್ಟಿಕಾರರೆಂದು ಹೆಸರಿದೆ ದನಗಾರಿಕೆಯ ಕಾಲದಲ್ಲಿನ ನಿವಾಸಗಳು ಉಳಿದಿರುವಂತೆ ಬೇಟೆಗಾರಿಕೆಯ ಮಟ್ಟವನ್ನು ಸೂಚಿಸುವ ಹೆಸರುಗಳು ಸ್ಪಷ್ಟವಾಗಿ ದೊರೆಯುತ್ತಿಲ್ಲವೆಂದು ಹೇಳಬೇಕಾಗುತ್ತದೆ. ಹಟ್ಟಿಗಳು 'ಹಟ್ಟಿ' ಎಂಬ ಹೆಸರಿನಿಂದಲೇ ಇದ್ದುವೆಂಬ ಅಭಿಪ್ರಾಯವಲ್ಲ.

ಹಳ್ಳಿಯಿಂದ ಸ್ವಲ್ಪ ದೂರದಲ್ಲಿ ಆದರೆ ಹೊಲದ ಹತ್ತಿರ ನಿರ್ಮಿಸಿದ ಗುಡಿಸಲುಗಳ ಒಂದು ಸಮೂಹ"[೪]. ಅಲ್ಲದೆ ದಾವಣಗೆರೆ ಜಿಲ್ಲೆಯಲ್ಲಿನ 'ಬಾಡ' ಎಂಬ ಊರು ಸಹ ಇದೆ. ಈ ಹಿನ್ನೆಲೆಯಲ್ಲಿ ಪಾಡಿ–ಹಾಡಿ–ಬಾಡ ಎಂಬವು ಹಟ್ಟಿಯ ಮತ್ತೊಂದು ರೂಪವಷ್ಟೆ.

ಕನ್ನಡ ಸಾಹಿತ್ಯ ಪರಿಷತ್ತಿನ ಸಂಕ್ಷಿಪ್ತ ಕನ್ನಡ– ಇಂಗ್ಲಿಷ್ ನಿಘಂಟುವಿನಲ್ಲಿ ಹಟ್ಟಿಗಿರುವ ಅರ್ಥವೆಂದರೆ.

೧ ದನ–ಕುರಿ ಮೊದದವುಗಳನ್ನು ಕೂಡಿಹಾಕುವ ಸ್ಥಳ, ಕೊಟ್ಟಿಗೆ, ರೊಪ್ಪ, cowshed, bure, a place used to shelter cottle, Sheep etc

೨ ಚಿಕ್ಕಹಳ್ಳಿ: ಬಾಡ, Hamlet, small villege

೩ ಗುಡಿಸಲು, Hut

೪ ಮನೆ House

೫ ಮನೆಯ ಮುಂಬಾಗ, ಅಂಗಲ, Court-Yard,

೬ ವಠಾರ, Group of small houses built continuously with in a single enclosure.

ಎಂಬ ಆರು ಬಗೆಯ ಅರ್ಥಗಳಿವೆ. ಅಂದರೆ ರೊಪ್ಪದ ಹಂತದಿಂದ ಒಂದೆಡೆ ವಾಸಿಸುವ ವಠಾರ ಎಂಬ ಪರಿಕಲ್ಪನೆಯವರೆಗೆ ಈ ಹಟ್ಟಿ ಎಂಬ ಪದವು ಅರ್ಥ ವಿನ್ಯಾಸವನ್ನು ಪಡೆದುಕೊಂಡಿದೆ.[೫]

ನರ್ಮದೆಯಿಂದ ಕಾವೇರಿಯವರೆಗೆ ಇರುವ ಪ್ರದೇಶದಲ್ಲಿ ಹಟ್ಟಿಕಾರರ ವಸಾಹತನ್ನು ಸೂಚಿಸುವ ಆನೇಕ ಗ್ರಾಮ ನಾಮಗಳಿವೆ. ನೀಲಗಿರಿಯ ಆಚೆಗೆ ಕೊಯಿಮತ್ತೂರ–ಸೇಲಮ್ ಜಿಲ್ಲೆಯವರೆಗೆ ಹಟ್ಟಿಗಳು ಸಿಗುತ್ತವೆ. 'ಹಟ್ಟಿ' ಎಂಬ ಶಬ್ದವು ತಮಿಳಿನಲ್ಲಿ ಇಲ್ಲ. ದಕ್ಷಿಣದಲ್ಲಿ ಹಟ್ಟಿಗಳು ದೊರೆಯುವವರೆಗೆ ಹಟ್ಟಿಗಳ ವರ್ಚಸ್ಸು ಇತ್ತು. ಆ ಪ್ರದೇಶ ಅವರ ವಶದಲ್ಲಿತ್ತೆಂದು ನಿಶ್ಚಿತವಾಗುತ್ತದೆ. ದಕ್ಷಿಣದಲ್ಲಿ ಹಟ್ಟಿ ಗ್ರಾಮಗಳಿದ್ದ ಕಡೆಗೆ ಈಗ ತಮಿಳರು ಇರುತ್ತಿದ್ದರೂ. ಪ್ರಾಚೀನ ಕಾಲದಲ್ಲಿ ತಮಿಳರು ಅಲ್ಲಿರಲಿಲ್ಲ. ನರ್ಮದೆಯ ದಕ್ಷಿಣಕ್ಕೆ ಮತ್ತು ಪೂರ್ವಕ್ಕೆ ಕೂಡ ಹಟ್ಟಿ ಗ್ರಾಮಗಳು ಇರುವವರೆಗೆ ಆ ಪ್ರದೇಶ ಹಟ್ಟಿಕಾರರ ವಶದಲ್ಲಿತ್ತೆಂಬುದು ನಿಶ್ಚಿತವಾಗಿದೆ. ಬಂಗಾಲದ ಕಡೆ ಇರುವ ಪಟ್ಟಿ, ಪಾಡಿ, ಪಾಟಕ, ಹಟ್ಟಿ, ಊರು, ಸಂತಿ, ಕಂಟೆ, ಗಡ್ಡಿ, ಪೊಲ ಎಂಬವು ಗ್ರಾಮ ನಾಮಗಳಾಗಿವೆ.

ನರ್ಮದಾ–ಗೋದಾವರಿ ನಡುವಣ ಭಾಗದಲ್ಲಿ ಕನ್ನಡ ಮಾತನಾಡುವ ಜನ ಇದ್ದರು. ಅವರ ಜೀವನ ರೀತಿ, ಆರಾಧನೆ, ಆಚರಣೆಗಳು, ವಿಶಿಷ್ಟವಾಗಿದ್ದು ಇವುಗಳನ್ನು ಗ್ರಹಿಸಲು ಇಂದಿನ ಬುಡಕಟ್ಟುಗಳ ಮತ್ತು ಆಚರಣೆಗಳ ಅಧ್ಯಯನವು ಹೆಚ್ಚು ಉಪಯುಕ್ತವಾಗಿದ್ದು ಪತ್ತಿಜನ, ಪಟ್ಟಿಜನ, ಕುರುಬ, ದನಗಾರ, ಜಾಡ, ತುರುವ, ಕುರುಂಬ, ಅಂಡೆಕುರುಬ ಕಾಡುಗೊಲ್ಲ, ಮ್ಯಾಸಬೇಡರು ಪ್ರಧಾನವಾಗಿ ಹಟ್ಟಿ ಸಂಸ್ಕೃತಿಯ ಹಿನ್ನೆಯವರಾಗಿದ್ದಾರೆ.

**೨.೩ ಹಟ್ಟಿ ಸಂಸ್ಕೃತಿಯ ಮೂಲ:**

ಮಾನವ ಜನಾಂಗದ ಇತಿಹಾಸದ ಹೆಜ್ಜೆಗಳನ್ನು ಗುರುತಿಸಲು ಹೊರಟರೆ ಇದು ತುಂಬಾ ದೀರ್ಘವಾದುದೆ? ಎನ್ನುವಂತಹ ಪ್ರಶ್ನೆಗಳು ಐತಿಹಾಸಿಕವಾದಂತಹ ಚರ್ಚೆಗಳಿಗೆ ಗ್ರಾಸವಾಗುವುದು. ಅವನ ಸಾಮಾಜಿಕ ವಿಕಾಸದ ಮೆಟ್ಟಿಲುಗಳಲ್ಲಿ ಹಲವಾರು ಹಂತಗಳಿವೆ. ಅವುಗಳನ್ನು ದಾಟಿ ಅವನು ನಾಗರಿಕತೆಯ ಹಂತಕ್ಕೆ ಬಂದು ತಲುಪಿದ್ದಾನೆ. ಹಾಗೆಂದ ಮಾತ್ರಕ್ಕೆ ಇಡೀ ಜಗತ್ತಿನ ಎಲ್ಲಾ ಕಡೆ ಕಾಣಬರುವ ಸಮುದಾಯಗಳು ನಾಗರಿಕತೆಯ ಘಟ್ಟಕ್ಕೆ ಬಂದು ತಲುಪಿವೆ ಎಂಬುದು ಇದರರ್ಥವಲ್ಲ. ಹಾಗಾಗಿಯೇ ಆದಿಮಾನವನ ಜೀವನ ಕ್ರಮ ಮತ್ತು ಆಧುನಿಕ ನಾಗರಿಕ ಸಮಾಜದ ಜೀವನ ಕ್ರಮಗಳಲ್ಲಿ ತುಂಬಾ ಅಂತರವಿದೆ ಎಂಬುದನ್ನು ಇತ್ತೀಚಿನ ಅಧ್ಯಯನಗಳು ಸಾಕ್ಷೀಕರಿಸುತ್ತವೆ. ನಾಗರಿಕತೆಯ ಗಂಧ ಗಾಳಿಯನ್ನೆ ಅರಿಯದ ನೂರಾರು ಸಮುದಾಯಗಳು ಇಂದಿಗೂ ಆದಿವಾಸಿ ಸ್ವರೂಪವನ್ನು ಹೊಂದಿ ನಾಗರಿಕತೆಯ ಸೋಂಕಿಲ್ಲದೆ ಮೂಲ ಪರಂಪರೆಯನ್ನು ಅನುಸರಿಸಿಕೊಂಡು ಬರುತ್ತಿವೆ. ಮಾನವನು ಪ್ರಾಥಮಿಕ ಸ್ಥಿತಿಯಲ್ಲಿ ಆಹಾರ ಸಂಗ್ರಹಕ್ಕಾಗಿ ಅಲೆಯಬೇಕಾಯಿತು.ಈ ಸಂಗ್ರಹದ ಪ್ರಾಥಮಿಕ ಸ್ಥಿತಿಯಲ್ಲಿ ಎರಡು ಮೆಟ್ಟಿಲುಗಳಿವೆ. ಮೊದಲನೆಯದು ಬೇಟೆಗಾರಿಕೆ, ಎರಡನೆಯದು ದನಗಾರಿಕೆ. ಬೇಟೆಯಾಡಿ ಬದುಕುವುದು ತೀರ ಆರಂಭ ಕಾಲದ ಸ್ಥಿತಿ. ಬಳಿಕ ಮಾನವನಿಗೆ ತನ್ನ ಸುತ್ತಲಿನ ಪ್ರಾಣಿಗಳ ಪರಿಚಯ ಹೆಚ್ಚಾದಂತೆ ಅವುಗಳಲ್ಲಿ ತನಗೆ ಉಪಯುಕ್ತವಾದವುಗಳನ್ನು ಸಾಕಿಕೊಂಡಿರುವುದನ್ನು ಕಲಿತನು. ದನಗಳನ್ನು ಸಾಕಿಕೊಂಡು ಬದುಕುವಾಗಲೂ ಅವುಗಳ ಆಹಾರಕ್ಕಾಗಿ ಮಾನವನಿಗೆ ಅಲೆದಾಟವು ತಪ್ಪಿದ್ದಲ್ಲ, ಗುಡ್ಡ, ಕಾನನ, ನದಿ, ಕೊಳ್ಳಗಳಗುಂಟ ಹುಲ್ಲು ನೀರು ಇದ್ದ ಕಡೆಗೆ ಹುಡುಕುತ್ತ ಹೋಗಬೇಕಾಗುತ್ತಿತ್ತು. ಆರಂಭದ ವಸತಿ ಸೂಚಕವಾದ ಹೆಸರುಗಳು ಊರು, ನಾಡು, ಬೀಡು ಆಗಿರಲಾರವು. ಇವುಗಳಲ್ಲಿ ದನಗಾರಿಕೆ ಮತ್ತು ಬೇಟೆಗಾರಿಕೆಯ ದನಿಯು ಸಿಗುವುದಿಲ್ಲ. 'ಹಟ್ಟಿ' ಎಂಬಲ್ಲಿ ಈ ದನಿಯಿದೆ. ಹಟ್ಟಿ ಎಂದರೆ ಗುಡಿಸಲು, ಹಟ್ಟಿ ಎಂದು ದನಗಳ ಕೊಟ್ಟಿಗೆಗು ಹೆಸರು. ಹಟ್ಟಿಯ ಮೇಲಿನ ಕೆಲವು ಗಾದೆಗಳಿವೆ. "ಹಟ್ಟಿಗೆ ಗತಿಯಿಲ್ಲದವನು ಮಠ ಕಟ್ಟುವನೆ. ಬಿಟ್ಟೀ ಆಳು ಆದರೆ ಹಟ್ಟಿ ಕಟ್ಟಬಾರದೆ".ಮಟ್ಟುತಿಳಿದ ನಾಯಿ ಹಟ್ಟಿಯಲಿ ಇದ್ದೀತೆ? ಇಲ್ಲಿ ಹಟ್ಟಿ ಎಂದರೆ ದನಗಳ ಹಟ್ಟಿ ಎಂದರ್ಥವಾಗುತ್ತದೆ. ಹಟ್ಟಿ ಎಂದರೆ ಜನ ಮತ್ತು ದನಗಳ ವಾಸಸ್ಥಾನ, ಬಿಡಾರ, ತುರುಕಾರ ದನಗಾರರ ನಿವಾಸ ಎಂಬುದು ಸ್ಪಷ್ಟ. ಹೀಗಾಗಿಯೇ ತುರುಕಾರ. ದನಗಾರ ಜನರಿಗೆ ಹಟ್ಟಿಕಾರರೆಂದು ಕರೆಯುತ್ತಾರೆ. ಹಟ್ಟಿಕಾರರಲ್ಲಿ ಕುರುವ, ತುರುವ, ಕುಡುವ, ಮೂರು ಬಗೆಯವರು. ಕುರುವರಲ್ಲಿ ಕುಂತಲ, ಕಳವರ್, ಮಲವರ್ ಇವರೆಲ್ಲರೂ ಬೇರೆ ಬೇರೆ ಹೆಸರುಗಳಿಂದಿದ್ದಾರೆ.

ಕ್ರಿ.ಪೂ ೨೦೦೦ ದ ಸುಮಾರಿಗೆ ಅಂಡೆ, ಜಾಡರುಕಂಡುಬರುವರು. ಇವರುಗಳು ಅವರಲ್ಲಿ ಬೇರೆ ಬಗೆಯವರು. ಅಂಡೆಜಾಡರೆಲ್ಲರು ನರ್ಮದ–ಗೋದಾವರಿ ತೀರದಲ್ಲಿ ಬೀಡುಬಿಟ್ಟವರು. ತುರುವರು ತೆಲುಗು ಭಾಗದಲ್ಲಿ ಬೀಡು ಬಿಟ್ಟವರು. ಅವರು ಮುಂದೆ ಮಿಥಿಳೆ, ನೇಪಾಳಗಳಲ್ಲಿ ನೆಲೆಸಿ ಕರ್ನಾಟಕ ಕ್ಷತ್ರಿಯನೆನಿಸಿದ ನ್ಯಾನದೇವ, ಬಲ್ಲಾಳ ಸೇನಾಧಿಪತಿಗಳ ಪರಂಪರೆಗೆ ಸೇರುತ್ತಾರೆ.

ಖಾನದೇಶ ಮತ್ತು ನಾಸಿಕದ ಸುತ್ತಲು 'ಕಾನಡ'ರೆಂಬ ಹೆಸರಿನ ಹಟ್ಟಿಕಾರರಿದ್ದರೆಂಬುದು ಶಂಬಾರವರ ಅಧ್ಯಯನದಿಂದ ತಿಳಿಯುತ್ತದೆ. ಹಟ್ಟಿಕಾರರು ಅನೇಕ ಉಪಪಂಗಡಗಳಾಗಿ ಕಾಲಕ್ರಮೇಣ ಒಬ್ಬರು ಮತ್ತೊಬ್ಬರಲ್ಲಿ ಬೆರೆತು ಹೋದರು.ಇದಕ್ಕೆ ಶಂಬಾರವರು ಮೂರು ಕಾರಣಗಳನ್ನು ಕೊಡುತ್ತಾರೆ. ಒಂದನೆಯದು ಪರ್ಯಟನ, ಎರಡನೆಯದು ಯುದ್ಧ, ಮೂರನೆಯದು ವ್ಯಾಪಾರ. ಹಟ್ಟಿಕಾರದನಗಾರರೆಂಬ ಹೆಸರುಗಳು ಈಗಿನ ಕರ್ನಾಟಕದಲ್ಲಿ ಮೂಲೆ ಗುಂಪಾಗಿದ್ದರು ಇವುಗಳಿಗೆ ಪ್ರಾಶಸ್ತ್ಯವಿದ್ದ ಕಾಲವೊಂದಿತ್ತು.

ಸರ್ವಜ್ಞ ಕವಿಯು ಹಟ್ಟಿಕಾರ ದನಗಾರರ ಬಗ್ಗೆ ಈ ರೀತಿಯಾಗಿ ಹೇಳುತ್ತಾನೆ. "ತುರುಕರುವು ಇರದೂರು ನರಕಭಾಜನವಕ್ಕು ತುರುಕರು ಉಂಟಾದರೆ ಉಣಲು ಉಂಟು". 'ಜಗಕ್ಕೆಲ್ಲ ತುರುಕರುವೆ ದೈವ' ಎಂಬುದು ಒಂದು ಕಾಲಕ್ಕೆ ಅಕ್ಷರಶಃ ನಿಜವಾಗಿತ್ತು. ಹಟ್ಟಿಕಾರರಲ್ಲಿ ಕುರುಬರು, ಕುರುಕಾರರು ಎಂಬ ಬಗೆಗಳು ಇದ್ದರೂ ಇವರೆಲ್ಲರೂ ದನಗಾರರೇ, ಆಗಿದ್ದರು. ಇವರಿಗೆಲ್ಲಾ ದನವೇ ದೈವ. ದನವೇ ಧನ. ಆದ್ದರಿಂದ ಈ ಹಟ್ಟಿಕಾರರಿಗೆ ದನಗಾರರೆಂಬ ಹೆಸರು. ಹಿಂಡುಕಾರ-ದನಗಾರರೆಂಬ ಮಾತು ಹಳ್ಳಿಗಳಲ್ಲಿ ಈಗಲೂ ಸಿಗುತ್ತದೆ. ಅಂದರೆ (ಜಂಗುಳಿ ಕಾಯುವವ) ಈ ಕನ್ನಡ ದನಗಾರನೆ ಮರಾಠಿಯಲ್ಲಿ ಧನಗಾರನಾದನು. ಖಾನದೇಶ, ನಾಸಿಕ, ರಾಜಮಹಲ ಗುಡ್ಡಗಳು, ಛೋಟಾನಾಗಾಪುರ ಮತ್ತು ಶೋಣನದಿ ತೀರದವರೆಗೂ ಹಟ್ಟಿಕಾರರು ವ್ಯಾಪಿಸಿಕೊಂಡಿದ್ದಾರೆ. ದಕ್ಷಿಣದಲ್ಲಿ ನೀಲಗಿರಿಯಿಂದ ಕುರುಬರಸೀಮೆ ಆರಂಭವಾಗುತ್ತದೆ. ಉತ್ತರಕ್ಕೆ ಗಂಗಾ, ಶೋಣ, ಭದ್ರಾ ನದಿಯವರೆಗೂ ಈ ಜನಾಂಗವು ವ್ಯಾಪಿಸಿಕೊಂಡಿದೆ. ಇವರೆಲ್ಲರೂ ದ್ರಾವಿಡ ಜನಾಂಗಕ್ಕೆ ಸೇರಿದ್ದು ಈ ಹಟ್ಟಿಕಾರರು ಕನ್ನಡ ಶಾಖೆಗೆ ಸೇರಿದವರು. ಆಧುನಿಕ ವಂಶಶಾಸ್ತ್ರಜ್ಞರಾದ ಹ್ಯಾಡೊನ್‌ರವರ ಅಭಿಪ್ರಾಯದಂತೆ ಕುರುಬರು ದ್ರಾವಿಡರು."All authorities are agreed that the oran (kurkh) people are Dravidian people.Who immigrated on to the plains of Chotanagpur"[6] ಛೋಟಾನಾಗಪುರದ ಕುರುಕ(ಕುರುಬ)ರು ಕರ್ನಾಟಕದವರೆ ಅವರಿಗೆ ತಮಿಳು ಮತ್ತು ತೆಲುಗಿಗಿಂತಲೂ ಕನ್ನಡವೇ ಹತ್ತಿರ. ಪಿ.ಟಿ.ಶ್ರೀನಿವಾಸ ಅಯ್ಯಂಗಾರರು ಹೇಳುವ ಹಾಗೆ ತಮಿಳರೂ ಪ್ರಾಚೀನ ಕಾಲದಲ್ಲಿ ಹಟ್ಟಿಕಾರ-ದನಗಾರರೇ ಆಗಿದ್ದರು. ಆ ಜನಾಂಗದ ಪ್ರಾಥಮಿಕ ಅವಸ್ಥೆಯು ಕುರುಂಬಿಕೆಯೇ ಆಗಿತ್ತು. ಈ ಜನಾಂಗವು ಕುರಿಗಳನ್ನು ಸಾಕುತ್ತಿದ್ದು ಅವರಿಗೆ ಕುರುಬರೆಂದು ಹೆಸರು. ಕುರು ಎಂದರೆ 'ಎತ್ತರ' ಅಂದರೆ ಎತ್ತರದ ನಾಡಿನಲ್ಲಿ ಗುಡ್ಡ ಬೆಟ್ಟಗಳಲ್ಲಿ ಇರುವವನೆಂದು ಅರ್ಥ. ಕುರುಬರಿಗೆ ಮೊದಲು ಜೀವನಕ್ಕಾಗಿ ಗುಡ್ಡ, ಬೆಟ್ಟ, ಹುಲ್ಲಿನ ಪ್ರದೇಶಗಳನ್ನು ಹುಡುಕಿಕೊಂಡು ಬದುಕು ಸಾಗಿಸಬೇಕಾಗಿತ್ತು. ಆದ್ದರಿಂದ ಕುರುಬರನ್ನು 'ಮಲೆಯರು' ಎಂದು ಕರೆಯುತ್ತಿದ್ದರು.ಏಕೆಂದರೆ ಅವರು ಗುಡ್ಡದಲ್ಲಿ ವಾಸವಾಗಿದ್ದವರು. ಗಂಗೆಯಿಂದ ಕಾವೇರಿಯವರೆಗೆಹಬ್ಬಿಕೊಂಡಿರುವ ಕನ್ನಡ ಹಟ್ಟಿಕಾರ ದನಗಾರರು ಇದ್ದರೆ. ಕಾವೇರಿಯಿಂದ ಸಿಂಹಳ ದ್ವೀಪದವರೆಗೆ ವ್ಯಾಪಿಸಿರುವ ತಮಿಳರು ಒಂದೇ ಜನಾಂಗ ಎಂಬ ನಂಬಿಕೆಯೂ ಇದೆ. ಪ್ರಾಚೀನ ತಮಿಳು ಸಾಹಿತ್ಯದ ಉಲ್ಲೇಖದ ಪ್ರಕಾರ ಜಾಡರಿಗೆ 'ಮರವ'ರೆಂದು ಹೆಸರಿದೆ. ತಮಿಳಿನಲ್ಲಿ ಒಂದು ಗಾದೆಯಿದೆ 'ಕಳವರು ಸ್ವಲ್ಪ ಉಳ್ಳವರಾಗುತ್ತಲೆ

ಮರವರಾಗುತ್ತಾರೆ'. ತಮಿಳಿನಲ್ಲಿ ಹಟ್ಟಿಕಾರರನ್ನು ಹಟಗಾರರು ಎನ್ನುತ್ತಾರೆ. ಅವರು ಮರದಮ್ಮನನ್ನು ಪೂಜಿಸುತ್ತಾರೆ. ಆದುದರಿಂದಲೇ ಈ ಜನಾಂಗಕ್ಕೆ ಮರವರು, ಜಾಡರು ಎಂದು ಹೆಸರು ಬಂದಿರುವುದು. ಆದುದರಿಂದಲೇ ಮರದಮ್ಮ, ಬನಶಂಕರಿ, ಚೌಡೇಶ್ವರಿ ಅವರ ಕುಲದೇವತೆಯಾಗಿವೆ. ಬನದಮ್ಮನೆಂದರೆ ಪಾರ್ವತಿ–ಪರ್ವತದವಳು, ಗುಡ್ಡದಮ್ಮ–ಮಾಳವ್ವ–ಮಲೆಯವಳು ಮಾಳವ್ವೆಯ ಗಂಡನು ಮಲ್ಲಯ್ಯ ಪಾರ್ವತೀಶ್ವರ, ಮುರುಗೇಂದ್ರ, ಹಟ್ಟಿಕಾರರು ಶಿವನನ್ನು ಈ ಸ್ವರೂಪದಲ್ಲಿ ಆರಾಧಿಸುವುದೇ ಹೆಚ್ಚು. ಪರ್ವತ ಪೂಜೆಯಲ್ಲಿ ಹಟ್ಟಿಕಾರರಿಗೆ ತುಂಬಾ ಪ್ರೀತಿ. ಸಾಮಾನ್ಯವಾಗಿ ಹಟ್ಟಿಕಾರರೆಲ್ಲ ಮಲ್ಲಯ್ಯನ ಭಕ್ತರು. ಚಿತ್ರದುರ್ಗ ಜಿಲ್ಲೆಯ ನನ್ನೀವಾಳ, ಮುತ್ತಿಗಾರಹಳ್ಳಿ ಕಾವಲಿನಲ್ಲಿರುವ ದೇವರತ್ತುಗಳ ಕಿಲಾರಿಗಳು ಸಹ ಇದೇ ಅಂಶವನ್ನು ವ್ಯಕ್ತಪಡಿಸುತ್ತಾರೆ. ಇವು ಶ್ರೀಶೈಲದಿಂದ ಬಂದ ದನಗಳು ಮಲ್ಲಯ್ಯನೇ ನಮ್ಮ ದೈವ ಎಂಬುದಾಗಿ ಹೇಳುತ್ತಾರೆ. ಆದ್ದರಿಂದ ಅವುಗಳನ್ನೇ ಆರಾಧಿಸುತ್ತಾ ಪೂಜಿಸುತ್ತಾರೆ. ಇದೇ ತೆರನಾಗಿ ಮರಾಠಿಗರಲ್ಲಿ ಕಂಡಾರಿ–ಖಂಡೇರಾಯ, ಭೋಟಾನಾಗಪುರದ ಕುರುಕರು ಡೋಂಗರ ದೇವನನ್ನು ಪೂಜಿಸುವರು. ಈ ದೈವಗಳೆಲ್ಲ ಮಲ್ಲಯ್ಯನ ರೂಪಗಳೆ ಆಗಿವೆ.

ಮರವರು, ಜಾಡರು ಎಂಬ ಹೆಸರಿರುವಂತೆ ಈ ಜನಾಂಗದ ಕೆಲವೊಂದು ಭಾಗದಲ್ಲಿ ಕುಂತಲರೂ ಎಂಬ ಇನ್ನೊಂದು ಹೆಸರು ಇದೆ. ಕುಂತಲ ಎಂದರೆ ಕೂಂದಲ, ಕೂದಲರು ಅವರಲ್ಲಿ ಕೂದಲಿಗೆ ವಿಶೇಷ ಮಹತ್ವವಿದೆ. ಹಟ್ಟಿಕಾರರಿಗೆ ಮೀಸೆಯೆಂದರೆ ಪಂಚಪ್ರಾಣ. ಅವರ ಅಪಮಾನವೆಂದರೆ ಮೀಸೆಬೋಳಿಸುವುದು. ಕುಡಿಮೀಸೆ, ಗಲ್ಲಿಮೀಸೆ ಅವರ ಅಭಿಮಾನದ ವಿಷಯ, ಪೌರುಷದ ಲಕ್ಷಣ. ಸ್ಥೂಲವಾಗಿ ದಕ್ಷಿಣಾಪಥಕ್ಕೆ ಕುಂತಲ ದೇಶವೆಂದು ಕೆಲವೊಂದು ಉಲ್ಲೇಖಗಳಿಂದ ಕಂಡುಬರುತ್ತದೆ. ಕರ್ಪೂರ ಮಂಜರಿಯಲ್ಲಿ ವಿದರ್ಭಕ್ಕೆ ಕುಂತಲವೆಂದು ಹೇಳಿದೆ. ಸ್ಟೆನ್‌ಕೊನೊ ಪ್ರಕಾರ ನರ್ಮದೆಯಿಂದ ಕೃಷ್ಣ–ತುಂಗಾಭದ್ರೆಯವರೆಗೆ ಕುಂತಲವಿದ್ದಿತೆಂದು ಹೇಳುತ್ತಾರೆ. ಹಟ್ಟಿಕಾರರ–ದನಗಾರರ ಕುಂತಲರ ನಾಡು ಭಾರತದ ಕಾಲದಲ್ಲಿ ವಿಖ್ಯಾತರಾದ ಗೋವಳಯಾದವರ ದೇಶವು ಒಂದೆಡೆಯಲ್ಲಿಯೇ ಬಂದವು. ತಮಿಳು ಸಾಹಿತ್ಯದ ಪ್ರಕಾರ ಉತ್ತರದಲ್ಲಿ ದ್ವಾರಕ ಭೋಟನಾಗಪುರದಿಂದ ದಕ್ಷಿಣದ ನೀಲಗಿರಿಯವರೆಗೆ, ಪೂರ್ವ ಪಶ್ಚಿಮ ಸಮುದ್ರ ತೀರಗಳೆರಡೂ ಹಟ್ಟಿಕಾರರ ಆರಂಭಕಾಲದಲ್ಲಿ ತುಂಬಾ ಪ್ರಬಲವಾದ ಜನಾಂಗದವರಾಗಿದ್ದರೆಂದು ತಿಳಿದುಬರುತ್ತದೆ. ಅವರಲ್ಲಿ ಕುಂತಲರು, ಅಂಡೆಯವರು, ಇಡೈಯರು, ಮೊದಲಾದವರ ಬಗ್ಗೆ ದಾಖಲೆಯಿದೆ. ಇದು ೮–೯ ನೇಯ ಶತಮಾನದ ರಾಷ್ಟ್ರಕೂಟರ ಕಕ್ಕರಾಜನ ಶಾಸನದಿಂದ ತಿಳಿದುಬರುತ್ತದೆ.

ಪ್ರಾಚೀನ ತಮಿಳು ಸಾಹಿತ್ಯವಾದ 'ಶಿಲಪ್ಪಾದಿಗಾರಂ'ನಲ್ಲಿ ಇಡೈಯರ್, ಅಂಡರ್, ಕುರುಂಬರ್, ವಡುಗರ್ ಎಂದು ಮುಂತಾಗಿ ಕನ್ನಡ ಹಟ್ಟಿಕಾರರ ಉಲ್ಲೇಖಗಳು ಇವೆ. ಈ ಜನಾಂಗವು ಕ್ರಿ.ಶ.ಎರಡನೆಯ ಶತಮಾನಕ್ಕೆ ಮೊದಲೇ ತನ್ನ ಸ್ವತಂತ್ರ ಅಸ್ತಿತ್ವವನ್ನು ಪಡೆದಿತ್ತೆಂದು ತಿಳಿದುಬರುತ್ತದೆ. ದನಗಾರಿಕೆ–ಹಟ್ಟಿಗಾರಿಕೆಯಿಂದ ಉಪಜೀವಿಸುತ್ತಿದ್ದ ಪ್ರಾಚೀನ ಜನಾಂಗಗಳೊಳಗಿನಿಂದಲೇ ಧೀರವೀರರು ಹುಟ್ಟಿ ರಾಜ್ಯ ಕೋಟೆಕೊತ್ತಲಗಳನ್ನು ಕಟ್ಟಿದ ಉದಾಹರಣೆಗಳು ಬೇಕಾದಷ್ಟಿವೆ. ತಮಿಳು ಕಾವ್ಯಗಳಲ್ಲಿ

ಹಟ್ಟಿಕಾರರಿಗೆ 'ಕುರುನಿಲ ಮನ್ನೆಯರ್' ಎಂದು ವರ್ಣಿಸಿದ್ದುಂಟು. ಅಂದರೆ ಚಿಕ್ಕ ಪುಟ್ಟ ರಾಜರು ಎಂದು ಅರ್ಥ.

ಕುರುಬರಲ್ಲಿ ಅಂಡೆ(ಹಂಡೆ)ಯವರೆಂಬ ಒಂದು ಬಣವಿದೆ. ತಾವು ಅಂಡೆಯವರು, ರಾವುತರು, ಸರದಾರರು ಅರಸುಕುಲದವರು ಎಂಬುದನ್ನು ಕುರುಬ ಲೇಖಕರ ಚರಿತ್ರೆಯು ತಿಳಿಸುತ್ತದೆ. ಅವರಿಗೆ ಅಂಡೆಜೀವರೆಂಬ ಹೆಸರಿತ್ತು ಎಂದು ಹೇಳುತ್ತಾರೆ. ಇದು ಹಟ್ಟಿಕಾರರಲ್ಲಿ ಪ್ರಾಚೀನ ಕಾಲದಿಂದಲೂ ಅತಿ ವಿಖ್ಯಾತ ಪಂಗಡ. ಕ್ರಿ.ಶ. ಎರಡನೆಯ ಶತಮಾನದಲ್ಲಿ ಟಾಲಮಿಯು ಸಹ ಅಂಡೆಯರ ಹೆಸರು ಉಲ್ಲೇಖಿಸುತ್ತಾರೆ. ಪಾಲಿ ಗ್ರಂಥದಲ್ಲಿರುವ ಅಂಧ, ಅಂಧಕರೂ ಹಟ್ಟಿಕಾರ ಅಂಡರರೂ ಒಂದೇ ಎಂಬುದನ್ನು ಎಸ್. ಕೃಷ್ಣಸ್ವಾಮಿ ಅಯ್ಯಂಗಾರರು ಹೇಳುತ್ತಾರೆ. ಪಾಣಿನಿಯು ಅಂಧಕ ವೃಷ್ಣಿಗಳನ್ನು 'ಕಾಡಾಡಿಗಳು' ಎಂದು ಕರೆದಿದ್ದಾನೆ. ವೃಷ್ಣಿ ಎಂದರೆ ಟಗರು. ವೃಷ್ಣಗಳು ಎಂದರೆ ಟಗರು ಕುರಿಗಳನ್ನು ಸಾಕಿ ಬದುಕುವವರು. ಅಂಧಕರು, ಅಂಡೆಯವರು ಯಾದವರ ಆಪ್ತರು. ಕೃಷ್ಣನಿಗೆ ವಾರ್ಷ್ಣೇಯನೆಂದು ಹೆಸರು. ಆದುದರಿಂದ ಭಾರತ ಭಾಗವತಾದಿಗಳಲ್ಲಿ ಯಾದವರನ್ನು ಗೋವಳರೆಂದೇ ವರ್ಣಿಸಿದ್ದಾರೆ. ಅವರಲ್ಲಿ ಹಲವರು ಅಂಧಕ ವೃಷ್ಣಿಗಳು ಕುರಿಗಾರರೆಂದು ಒಪ್ಪಿಕೊಳ್ಳಲೇಬೇಕಾಗುತ್ತದೆ. ಭಾರತದ ಯಾದವರು ಹಟ್ಟಿಕಾರ ದನಗಾರರೆಂಬುದು ಈಗಾಗಲೇ ಮಾನ್ಯವಾಗಿದೆ. ತುರುಕಾರರಂತೆ ಕುರಿಗಾರರ ಸಮಾವೇಶವು ಆಗಿದ್ದಿತೆಂದು ಇದರಿಂದ ಗೊತ್ತಾಗುತ್ತದೆ.

ಯದುಗಳ ಹೆಸರು ಋಗ್ವೇದದಲ್ಲಿದ್ದು ಯದುಗಳೊಡನೆ 'ತುರ್ವಶ' ರ ಹೆಸರೂ ಬರುತ್ತದೆ. ಯದು ಮತ್ತು ತುರ್ವಶರು ವ್ಯಕ್ತಿಗಳಲ್ಲಿ ಜನಾಂಗಗಳ ಹೆಸರು ಎಂಬುದು ಕೆಲವರ ಅಭಿಪ್ರಾಯ. ಯದುಗಳು ಗೋವಳರು-ದನಗಾರರೆಂಬ ಭಿನ್ನಾಭಿಪ್ರಾಯವೇ ಇಲ್ಲ. ಆದರೆ ಅವರ ನಿಕಟವರ್ತಿಗಳಾದ ಪರ್ವಶರೂ ದನಗಾರರೇ, ಪುರಾಣಗಳಲ್ಲಿ ತುರ್ವಸುಗಳೆಂಬ ಹೆಸರಿನಿಂದ ವರ್ಣಿಸಲ್ಪಟ್ಟಿದ್ದಾರೆ.

ವಸು ಎಂದರೆ ದನ. ಹಾಗಾದರೆ ತುರು ಎಂದರೆ ಆಕಳು, ವಶಾ ಎಂದರೆ ವೈದಿಕ ಸಾಹಿತ್ಯದಲ್ಲಿ ಆಕಳು ಎಂದರ್ಥ. ಆದ್ದರಿಂದ ಯಾದವರ ಹತ್ತಿರದವರಾದ ತುರ್ವಶರೂ ಗೋವಳರೆ ಅಂತೂ ತುರ್ವರು, ತುರ್ವಶರು, ತುರುಕಾರರು-ಹಟ್ಟಿಕಾರರು. ತಮಿಳು ಕಾವ್ಯಗಳಲ್ಲಿಯೂ ಇಡೈಯರು. ವೇದಕಾಲದ ನಂತರ ಯದುತುರ್ವಶರು ಸಿಂಧೂ ತೀರದಲ್ಲಿ ಕಣ್ಣಿಗೆ ಬೀಳುವುದಿಲ್ಲ. ಮಹಾಭಾರತ ಕಾಲಕ್ಕೆ ಅವರ ಕೇಂದ್ರವು ಗಂಗಾ ಯಮುನಾ ನದಿ ತೀರಕ್ಕೆ ಬಂತು.

ಹಟ್ಟಿಕಾರರು ಪಟ್ಟಿಪಾಳಯಗಳನ್ನು ಕಟ್ಟಿಕೊಂಡಿರುವ ಇಂದಿನ ಪಾಯಿಕ (ಪೈಕ)-ಹಳಪೈಕದವರು ಆಗಿದ್ದಾರೆ. ಅವರಲ್ಲಿ ಹಳಬರು ಶೌರ್ಯ, ಧೈರ್ಯಗಳಿಗಾಗಿ ಬಹಳ ಹೆಸರಾದವರು. ವಿಜಯನಗರದ ಗಂಡುಗಲಿಗಳಲ್ಲಿ ಅವರು ಪ್ರಮುಖರಾಗಿದ್ದರೆಂದು ಎಂಥೋವೆನರು ಹೇಳುತ್ತಾರೆ.

ಕುರುಬರಲ್ಲಿ ನಾವು ಬಲ್ಲಾಳರಾಯನ ಕುಲದವರು. ಈ ಕುರುಬರು ಚಂದ್ರವಂಶಿಗಳೆಂದು ಹೇಳಿಕೊಳ್ಳುವರು. ಅವರೆಲ್ಲ ಹಟ್ಟಿಕಾರ ಜನಾಂಗದವರೇ ಆಗಿರುತ್ತಾರೆ.ಅವರಲ್ಲಿ ಸಾಮಂತ ಕುರುಬರೂ ಉಂಟು. ಅವರಿಗೆ ಬೇರೆಬೇರೆ ಪ್ರದೇಶಗಳಲ್ಲಿ ಗೌಡ, ನಾಯಕರೆಡ್ಡಿ (ದೇಸಾಯಿ) ಎಂಬುದಾಗಿ ಸಲ್ಲುತ್ತಿದ್ದ ಹೆಸರುಗಳು ಇಂದಿಗೂ ಪ್ರಚಲಿತದಲ್ಲಿವೆ.

ಹಟ್ಟಿಕಾರರು ದೃಢ ನಿಶ್ಚಯಿಗಳು ಮತ್ತು ಯುದ್ಧ ಪ್ರಿಯರು. ವಿಂಧ್ಯದಿಂದ ನೀಲಗಿರಿಯವರೆಗಿನ ನಾಡಿನ ವೀರರೆಲ್ಲಾ ಹಟ್ಟಿಕಾರರೇ ಆಗಿದ್ದರು. ಬೇಡಪಡೆಗಳು, ಬಿಲ್ಲರ ದಂಡುಗಳು ಪರಾಕ್ರಮವನ್ನು ಮೆರೆಯುತ್ತಿದ್ದರೂ. ಈ ನಾಡಿನ ಬಹುಸಂಖ್ಯಾತರೂ ಪ್ರಮುಖರೂ ಆದ ಹಟ್ಟಿಕಾರರ ಅಂಕೆಯಲ್ಲಿಯೇ ಇದ್ದು ಕೆಲಸಮಾಡಬೇಕಾಗುತ್ತಿತ್ತು. ರಾವುತರೂ, ಯೋಧರೂ, ಸೇನಾಪತಿಗಳೂ, ಮೇಲ್ತರಗತಿಯವರೇ ಆಗಿರಬೇಕು. ಬೇಡರು, ಬಿಲ್ಲರು ಉನ್ನತ ಅಧಿಕಾರಗಳನ್ನು ಪಡೆದವರಾಗಿದ್ದರು. ಸುರಪುರದ ಒಬ್ಬಿಬ್ಬರ ಹೊರತು ಈ ಜನಾಂಗದ ಅರಸು ಮನೆತನದವರ ಹೆಸರೇ ಕೇಳಲಿಕ್ಕೆ ಸಿಗುವುದಿಲ್ಲ ಎಂಬುವುದು ಬಹು ಮುಖ್ಯವಾದ ಸಂಗತಿಯಾಗಿದೆ.

ದೇಶಗಳಿಗೆ ಹಲವು ಕಾರಣಗಳಿಂದ ಹೆಸರು ಪ್ರಾಪ್ತವಾಗುವುವು ಅವೆಲ್ಲ ಕಾರಣಗಳಲ್ಲಿ ಜನಾಂಗದಿಂದ ದೇಶಕ್ಕೆ ಹೆಸರು ಬರುವ ಪದ್ಧತಿಯು ಇದೆ. ಈ ನಾಡು ಹಟ್ಟಿಕಾರರು ಇರುವ ದೇಶವಾದುದರಿಂದಲೇ ಅದಕ್ಕೆ ಹಟ್ಟಿಯೆಂಬ ಹೆಸರು. ನರ್ಮದಾ ನದಿಯ ಹಟ್ಟಿಕಾರರು ಪ್ರಮುಖರಾಗಿದ್ದಾರೆ. ಇಂಧೂರಿನ ರಾಜರು ಹಟ್ಟಿಕಾರ ಕುಲತಿಲಕರು. ಹಿಂಗೋಲಿ ಮತ್ತು ವರ್ಹಾಟಗಳ ನಾಯಕರು ಹಟ್ಟಿಕಾರ ವಂಶದವರೇ. ಇಲ್ಲಿಯ ಗೌಡರಲ್ಲಿ ಹಟ್ಟಿಕಾರರೇ ಹೆಚ್ಚು. ಹಟ್ಟಿಕಾರ ಜಾತಿಗಳಿಗೆ ವರ್ಹಾಟ, ಆದಿಲಾಬಾದಗಳ ಕಡೆಗೆ 'ಝೂಡೆ' ಎಂದೆನ್ನುವರು.

ಇಲ್ಲಿ ಹಟ್ಟಿಕಾರ ಝೂಢೆಗಳು ಬಹಳ ಪ್ರಮುಖರೂ ಪ್ರಬಲರೂ ಆಗಿದ್ದರು. ಒಂದು ಕಾಲಕ್ಕೆ ಈ ನಾಡಿಗೆ 'ಝೂಡಿಪಟ್ಟಿ' ಎಂದು ಹೆಸರಿತ್ತು. ಆದರೆ ಈ ನಾಡಿಗೆ 'ಝೂಢಪಟ್ಟಿ' ಎಂಬ ಹೆಸರಾಗಲಿ. 'ಝೂಡಿ ಮಂಡಲ' ವೆಂಬುದಾಗಲೀ ಮುಖ್ಯ ಹೆಸರಾಗಿ ನಿಲ್ಲಲಿಲ್ಲ. ಈ ಹಟ್ಟಿಕಾರರು ಝೂಡಿಗಳು–ಜಾಡರು ಕನ್ನಡಜನಾಂಗದವರು.ಅವರು ಮರವರೆಂದು ತಮಿಳು ಸಾಹಿತ್ಯದಲ್ಲಿ ಅಜರಾಮರರಾಗಿರುವವರು. ನರ್ಮದಾ–ಕಾವೇರಿಗಳ ನಡುವಿನ ನಾಡು ಅಥವಾ ವಿಂಧ್ಯ–ನೀಲಗಿರಿಗಳ ಮಧ್ಯದೇಶವು ಆರ್ಯರು ದಕ್ಷಿಣಾಪಥಕ್ಕೆ ಬರುವ ಸುಮಾರಿಗೆ ವಡುಕ–ಹಟ್ಟಿಕಾರ ವಾಸಸ್ಥಾನವಾಗಿತ್ತೆಂದು ಹೇಳಬಹುದು. ಅದರಲ್ಲಿಯೂ ವಿದರ್ಭವು ಮರವ (ಜಾಡರ) ಹೆಸರಿನಿಂದ ವಿಖ್ಯಾತವಾಗಿ ಮರಹಟ್ಟಿ ಎಂದು ಹೆಸರುಗೊಂಡಿತ್ತು. ಸ್ಮಿತ್ ಎಂಬ ಇತಿಹಾಸಕಾರರ ಪ್ರಕಾರ ರಾಷ್ಟ್ರಿಕರು–ರಾಷ್ಟ್ರಕೂಟರು ಅವರು ನಮ್ಮ ನಾಡವರು.

'The indigenous tribes of the deccan' ಇವರು ಇಲ್ಲಿಯ ಜನಾಂಗ. ರಾಷ್ಟ್ರಕೂಟರಿಗೆ ವಲ್ಲಭರೆಂದು, ವಲ್ಲಭನೆಂದರೆ ಗೋವಳನೆಂದು ಮಹಾಭಾರತದಲ್ಲಿ ಹೆಸರಿದೆ. ವಲ್ಲಭರೆಂದರೆ–ನಾಡಗೌಡರು ಪಾಟೀಲರೆಂದು ಕರೆಯುತ್ತಾರೆ.ಅಲ್ಲದೆ 'ಪಟ್ಟಿಲ'ರೆಂದರೆ. ಪಟ್ಟಿಲರು. ಪಾಟೀಲರೆಂದರೆ ಹಟ್ಟಿಕಾರರು ಆಗಿದ್ದರೆ. ವಿಜಯನಗರ ಅರಸರಾದ ಹಕ್ಕಬುಕ್ಕರೂ ಕುರುಬರೆಂದೂ ಕೆಳದಿ ನೃಪವಿಜಯದಲ್ಲಿದೆ. ಕೆಳದಿಯಅರಸರು ಮಲವರೆಂದು ಹೇಳುವುದುಂಟು. ಮಲವರು ಹಟ್ಟಿಕಾರರಲ್ಲಿ ಅಗ್ರೇಸರರು ಎಂಬುದು ಕ್ರಿ.ಶ ಮೂರನೆಯ ಶತಮಾನದ ತಮಿಳುಕಾವ್ಯಗಳಲ್ಲಿ ಅವರ ವರ್ಣನೆಗಳು ಸಿಕ್ಕುತ್ತವೆ. ಈ ನಾಡಿನ ಮೂಲ ಪಟ್ಟಿಗಳು ಯಾರೆಂದರೆ 'ಪಟ್ಟಿಲರು'ಅವರೆ ಹಟ್ಟಿಕಾರ ಗೌಳರು.

ಅವರಿಂದಲೇ ನಮ್ಮ ಪುರಾತನ ಅರಸು ಮನೆತನಗಳು ತಲೆಯೆತ್ತಿದವು. ಗೌಳ-ಗೋಪನೆಂದು ರಾಜನಿಗೆ ಹೆಸರು. ನಿಜವಾದ ಗೌಡ ಅಥವಾ ಪಟೇಲರ ಮನೆತನಗಳು ಬ್ರಾಹ್ಮಣ ಕುಲಮೂಲದವರಲ್ಲ. ಅವು ವಂಶಪರಂಪರಾಗತವಾಗಿ ಪಟ್ಟಿಲ ಅಥವಾ ಗೌಡ ಮೂಲದಲ್ಲಿ ಒಂದೆ ಬುಡಕಟ್ಟಿಗೆ ಸೇರಿದವು. ಅವರು ನಮ್ಮ ಪಾಡಿಯ ಮೊದಲಿಗರು. ನಮ್ಮ ನಾಡಿನ ಮೂಲ ಜನ ಗೌಳರು.ಹೀಗೆ ಪಂಗಡಗಳು ದನಗಾರಿಕೆಯಿಂದ ಕ್ರಮವಾಗಿ ಸಾಮಾಜಿಕ ಪ್ರಗತಿ ಪಥದಲ್ಲಿ ಮುಂದುವರಿದವು. ಗ್ರಾಮಾಧಿಕಾರಿಗಳೂ, ಪ್ರಾಂತಾಧಿಕಾರಿಗಳೂ, ರಾಜ್ಯಾಧಿಕಾರಿಗಳೂ ಆದರು. ಪಟ್ಟಿಲರು ಎಂದರೆ ಹಟ್ಟಿಕಾರ ಗೋವುಳರು. ಇದು ಗೋವಳರ ನಾಡು ಪಟ್ಟಿಗಳ ದೇಶ ಆದ ಕಾರಣ ಎಲ್ಲೆಲ್ಲೂ ಪಟ್ಟಿಯ ವಿವಿಧ ಹೆಸರಿನ ಊರುಗಳಿರುವುದು ಸಹಜ. ಗೋವಳರ-ಗೌಡರ ಹಟ್ಟಿಗಳು ಇವೆ.ಅವರು ಸಾಕಿದ ದನಗಳ ಹೆಸರಿನ ಊರುಗಳೂ ಇವೆ. ಅವುಗಳೆಂದರೆ ನಂದಗಡ, ನಂದಗಾವಿ, ನಂದೀಹಳ್ಳಿ, ನಂದ್ಯಾಲ, ನಂದೂರಬಾರ, ಆವಿನಮಡುವು, ಗೋವನಕೊಪ್ಪ, ತುರುವಕೆರೆ ತುರ್ವಗಲ್ಲು, ಕುರಿಹಟ್ಟಿ ಆಡೂರು, ಗೊಲ್ಲರಹಟ್ಟಿ, ಗೊಲ್ಲರದೊಡ್ಡಿ, ಕುರುಬರಗಟ್ಟಿ ಈ ಊರುಗಳು ಹಾಲುಮತದ ಈ ತುರುಕಾರ-ದನಗಾರರ ಪೀಳಿಗೆಯವರ ನೆಲೆಯನ್ನು ಸೂಚಿಸುತ್ತವೆ. ಮಾನವನು ಬೇಟೆಗಾರಿಕೆಯಿಂದ ದನಗಾರಿಕೆ, ದನಗಾರಿಕೆಯಿಂದ ಒಕ್ಕಲುತನಕ್ಕೆ, ಒಕ್ಕಲುತನದಿಂದ ವ್ಯಾಪರೋದ್ಯೋಗಕ್ಕೆ, ವ್ಯಾಪಾರೋದ್ಯೋಗದಿಂದ ರಾಜ ವ್ಯವಹಾರಕ್ಕೆ ಅರ್ಹತೆಯನ್ನು ಪಡೆಯುತ್ತ ಕ್ರಮವಾಗಿ ತನ್ನ ವಿಕಾಸ ಮಾಡಿಕೊಂಡಿದ್ದುದು ಕಂಡು ಬರುತ್ತದೆ. ಮಾನವನ ವಿಕಾಸ ಕ್ರಮದ ಈ ಘಟ್ಟಗಳು ದನಗಾರಿಕೆಯಹಂತವಾಗಿ ಪಟ್ಟಿ ಶಬ್ದವು ಸ್ಪಷ್ಟವಾಗಿ ಗೋಚರವಾಗುತ್ತದೆ. ಪಟ್ಟುಕೊಂಡಿರುವ ಪಟ್ಟಿ, ಹಟ್ಟಿ, ಗುಡಿಸಲು, ದನಗಳ ದೊಡ್ಡಿ ಎಂಬ ಇದರ ಮೂಲಾರ್ಥದಲ್ಲಿ ಪಟ್ಟಿಕಾರರ(ಹಟ್ಟಿಕಾರರ) ಮೊದಲನೆಯ ಹಂತದಲ್ಲಿ ಧ್ವನಿತವಾಗುತ್ತದೆ. ಮಹಾಭಾರತದ ಅಂಧಕವೃಷ್ಣಿಗಳು ದನಗಾರರು. ಅವರು ಕುರುವಂಶಕ್ಕೆ ಸಂಬಂಧಿಸಿದವರು. ಕುರುವ ಎಂದರೆ ಅವರೆಲ್ಲಾ ಕುರುವರು-ಕುರಿಗಾರರು ಎಂದು ಅರ್ಥ.

"ಶಾತವಾಹನರು ಮತ್ತು ವಿಜಯನಗರದ ರಾಜರು ಮೊದಲಾದವರೆಲ್ಲಾ ಕುರುಂಬ ರಾಯರೆಂದು ತಿಳಿದುಬರುತ್ತದೆ.ಅವರು ತಮ್ಮ ವಂಶಕ್ಕೆ ಸಂಬಂಧ ಪಟ್ಟವರೆಂಬ ಕುರುವರ ಜನಾಂಗದಲ್ಲಿ ದೃಢವಾದ ನಂಬಿಗೆಯಿದೆ. ಕೆಳದಿ ನೃಪವಿಜಯದಲ್ಲಿ ಹರಿಹರ ಬುಕ್ಕರು ಕುರುಬರೆಂದು ಹೇಳಿದೆ. ವಿದ್ಯಾರಣ್ಯ ಕಾಲಜ್ಞಾನದಲ್ಲಿ'ಕುರುವಂಶ ಪ್ರಸೂತಿಜೌ' ಎಂದು ವರ್ಣಿಸಿದೆ. ಯದುತುರ್ವಶರ ಸಂತತಿ ಕುರುವಂಶ ಎಂಬ ಅರ್ಥವು ಕುರಿಗಾರ ಹಟ್ಟಿಕಾರ, ದನಗಾರರ ವಂಶದ ಗೋಪರ ಕುಲವಲ್ಲದೆ ಬೇರೆಯಲ್ಲ"[೬] ದಕ್ಷಿಣ ಕರ್ನಾಟಕದ ಹಟ್ಟಿಕಾರ-ದನಗಾರರಂತೆಯೇ ಉತ್ತರ ಕರ್ನಾಟಕದ ವಿದರ್ಭದ ಹಟ್ಟಿಕಾರರು ಪರಾಕ್ರಮ, ಪೌರುಷದಲ್ಲಿ ಹೆಸರಾದವರು. ಹಟ್ಟಿಕಾರರೆಂದು ಮರಾಠರಲ್ಲಿ ಹಟಗಾರರೆಂದು ಅಲ್ಲದೆ 'ಬಾರಗಿ ದನಗಾರ'ರೆಂದು ಹೆಸರಿದೆ. ವಿಜಯನಗರದ ದಂಡಿನಲ್ಲಿದ್ದ ಪಾಳೆಯಗಾರರಿಗೂ'ಬಾರಗಿಗಳೆಂದು ಮುಸಲ್ಮಾನರು ಹೇಳುತ್ತಿದ್ದರು'. ಎಂಥೋವೆನರು ಹೇಳುವ ಪ್ರಕಾರ ಬಾರ್ಗಿ ಎಂಬುದು ಪರ್ಶಿಯನ್ ಶಬ್ದ. ಬಾರ್ಗಿ ಎಂದರೆ ರಾವುತರು ಎಂದರ್ಥ. ಶಿವಾಜಿಯ ದಂಡಿನಲ್ಲಿ ಮುಖ್ಯವಾಗಿ ಹಟ್ಟಿಕಾರ

ದನಗಾರರೆ ಹೆಚ್ಚಾಗಿದ್ದರು. 'The most trusted of shivaji is foot men and mainly of the bravest mavatha generals among the hatkars were the most distinguished belong to this tribe'[8]. (caste and tribes of bombay vol III p.6 satara gazeteer). ಹಾಗಾಗಿ ಹಟ್ಟಿಕಾರರು ಕರ್ನಾಟಕದಲ್ಲಿ ದನಗಾರಿಕೆಯಿಂದ ಒಕ್ಕಲುತನ, ವಾಣಿಜ್ಯ ಹಾಗೆಯೇ ವಿಕಾಸದ ಹಂತದಲ್ಲಿ ಮುಂದುವರಿದು ಅರಸರಾಗಿ ಆಳ್ವಿಕೆ ಮಾಡುವವರಾಗಿ ಪಾಳೆಪಟ್ಟುಗಳನ್ನು ಕಟ್ಟಿಕೊಂಡು ರಾಜ್ಯಗಳನ್ನು ಕಟ್ಟಿ ಆಳಿದುದಕ್ಕೆ ಹಲವಾರು ನಿದರ್ಶನಗಳಿವೆ. ವಿಜಯನಗರದ ಹಕ್ಕಬುಕ್ಕರು, ಚಿತ್ರದುರ್ಗದ ಪಾಳೆಗಾರರು, ನಾಯಕನಹಟ್ಟಿಯ ಮಲ್ಲಪ್ಪನಾಯಕ ಹೀಗೆ ಹಲವಾರು ನಾಯಕರು ಕೋಟೆ ಕೊತ್ತಲಗಳನ್ನು ಕಟ್ಟಿ ಆಳಿದರು. ಹೀಗೆ ಹಟ್ಟಿ ಸಂಸ್ಕೃತಿಯ ಪರಂಪರೆಯನ್ನು ಮಹಾರಾಷ್ಟ್ರ, ಬಂಗಾಲ, ಅಸ್ಸಾಮ, ಖಾನದೇಶ, ನಾಸಿಕ, ಪಂಜಾಬ, ಸಿಂದ್, ಪ್ರಾಂತಗಳಲ್ಲಿಯೂ ಗುರುತಿಸಬಹುದಾಗಿದೆ.

ಕರ್ನಾಟಕದಲ್ಲಿಯೂ ಹಂಪಿಪರಿಸರವು ಸುರಕ್ಷಿತವಾಗಿರುವ ಬೆಟ್ಟಸಾಲುಗಳನ್ನು ಹೊಂದಿರುವ ಪ್ರದೇಶ. ವೈವಿಧ್ಯಮಯ ಸಸ್ಯ ಸಂಕುಲದ ನೆಲೆ. ಆದಿಮ ಸಮಾಜದ ಅಸ್ತಿತ್ವಕ್ಕೆ ಬೇಕಾಗಿದ್ದ ನೈಸರ್ಗಿಕ ಸಂಪನ್ಮೂಲಗಳನ್ನೊಳಗೊಂಡಿದ್ದ ಸ್ಥಳ. ಎಲ್ಲಿ ನೈಸರ್ಗಿಕ ಸಂಪನ್ಮೂಲಗಳು ಯೋಗ್ಯವಾದ ರೀತಿಯಲ್ಲಿ ದೊರೆಯುತ್ತವೆ ಅಲ್ಲಿ ಉತ್ತಮ ಸಂಸ್ಕೃತಿಯೂ ರೂಪುಗೊಳ್ಳುತ್ತದೆ ಎಂಬ ಮಾತಿದೆ. ಆದಿಕಾಲದ ಮಾನವ ವಿಕಾಸದಲ್ಲಿ ಮಾನವನ ವಸತಿನೆಲೆಗಳಿಗೆ ಯೋಗ್ಯವಾಗಿದ್ದ ಸುರಕ್ಷಿತ ತಾಣ. ಜೀವ ಜಾಲಕ್ಕೆ ಒತ್ತಾಸೆಯಾಗಿ ಹರಿವ ನದಿಗಳುಇದ್ದುದರಿಂದ ನಾಗರಿಕಸಮಾಜಗಳು ಬೆಳೆಯಲು, ಸಾಮ್ರಾಜ್ಯಗಳು ತಲೆ ಎತ್ತಲು ಅನುವು ಮಾಡಿಕೊಟ್ಟಂತಿವೆ.ಹಾಗಾಗಿ ನಿಸರ್ಗದ ಸ್ವರೂಪವೇ ಅಲ್ಲಿನ ಜೀವ ಜಾಲದ ಬದುಕಿನ ಸ್ವರೂಪವನ್ನು ನಿರ್ಧರಿಸುತ್ತದೆ. ಹಿಂದಿನ ಹಂಪಿಯ ಪರಿಸರವು ದಟ್ಟವಾದ ಕಾಡಿನಿಂದಲೇ ಆವೃತ್ತವಾಗಿತ್ತು. ದನಗಾಹಿ ಮತ್ತು ಅಲೆಮಾರಿ ಬೇಟೆ ಸಮುದಾಯಗಳು ಶಿಲಾಯುಗದಿಂದ ಆರಂಭಿಸಿ ಈ ನೆಲೆಯಲ್ಲಿ ರೂಪಾಂತರಗೊಂಡಿವೆ. ವಿಜಯನಗರ ಸಾಮ್ರಾಜ್ಯದಲ್ಲಿ ಪಶುಪಾಲನ ಸಮಾಜದವರೇ ಪ್ರಮುಖ ಪಾತ್ರವಹಿಸಿದ್ದರು. ಅಲ್ಲಿ ಪಶುಪಾಲಕರಾಗಿದ್ದ ಬೇಡರು, ಕುರುಬರು, ಗೊಲ್ಲರು ವಿಜಯನಗರ ಸಾಮ್ರಾಜ್ಯಕ್ಕೂ ಪೂರ್ವದಲ್ಲಿಯೇ ತಮ್ಮ ಅಸ್ತಿತ್ವ ಹೊಂದಿದ್ದರು. ಅವರ ಮೂಲಕವೇ ವಿಜಯನಗರ ಸಾಮ್ರಾಜ್ಯವು ಪ್ರಬಲವಾಗಿತ್ತು. ಅದೇ ಸಮುದಾಯಗಳ ಸಹಾಯದಿಂದಲೇ ಸಾಮ್ರಾಜ್ಯ ಅಸ್ತಿತ್ವಕ್ಕೆ ಬಂದಿತು.

ಒಂದು ಕಾಲಕ್ಕೆ ಹುಲ್ಲುಗಾವಲಿನ ಮೈದಾನಪ್ರದೇಶಗಳನ್ನು, ಬೆಟ್ಟಗುಡ್ಡ ಕಾಡುಗಳನ್ನು ಆಕ್ರಮಿಸುತ್ತಿದ್ದರು. ನಂತರದಲ್ಲಿ ಈ ಸಮುದಾಯಗಳು ಒಕ್ಕಲು ಸಮುದಾಯಗಳಾಗಿ ಕವಲೊಡೆದವು. ಆದುದರಿಂದ ಅವರ ಸಾಮಾಜಿಕ ವ್ಯವಸ್ಥೆಯ ಜೊತೆಗೆ ಆರ್ಥಿಕ ಅವಸ್ಥೆಗಳಿಗೆ ಕಾರಣವಾಯಿತು. ಹಂಪಿಯ ನೈಸರ್ಗಿಕ ನೆಲೆಯು ಇಲ್ಲಿನ ಜನಜೀವನವನ್ನು ನಿರ್ಧರಿಸಿದೆ. ಬದುಕುಳಿಯಲು ಪಶುಪಾಲಕ ಸಮುದಾಯಗಳು ಹಂಪಿಯ ಪರಿಸರವನ್ನು ಆಯ್ಕೆ ಮಾಡಿಕೊಂಡಿವೆ. ಹಂಪಿಯ ನೈಸರ್ಗಿಕ ಪರಿಸರವು ಕಡಿಮೆ ಮಳೆ ಪ್ರದೇಶವಾಗಿರಬಹುದು ಆದರೆ ಫಲವತ್ತಾದ ಪ್ರದೇಶಗಳನ್ನು

ಹೊಂದಿದೆ. ಆದಿಮ ಜನವಸತಿಯ ನೆಲೆಗಳಲ್ಲಿ ಒಂದಾಗಿತ್ತೆಂಬುದು ತಿಳಿದಿರುವ ಸಂಗತಿಯಾಗಿದೆ. ಈ ಪರಿಸರ ಹೇಗೆ ಕರ್ನಾಟಕದ ದನಗಾಹಿ ಮತ್ತು ಒಕ್ಕಲು ಸಮುದಾಯಗಳ ಅಸ್ತಿತ್ವ ಮತ್ತು ವಿಸ್ತರಣೆಗೆ ವಿಶೇಷಕೊಡುಗೆ ನೀಡಿದೆ ಎಂಬುದನ್ನು ಗಮನಿಸಬಹುದು. ಇದು ಬಳ್ಳಾರಿ, ಕೊಪ್ಪಳ, ರಾಯಚೂರು, ಚಿತ್ರದುರ್ಗ, ತುಮಕೂರು, ದಾವಣಗೆರೆ ಕರ್ನಾಟಕದ ಇತರ ಬಯಲು ಪ್ರದೇಶಗಳಿಗೆ ಹಬ್ಬಿದ್ದುದು ಹಂಪಿ ಪರಿಸರದ ಬೆಟ್ಟಗುಡ್ಡಗಳ ನಡುವಿನ ಬಯಲು ಪ್ರದೇಶಗಳಲ್ಲಿ ಪಶುಪಾಲನ ವೃತ್ತಿಯನ್ನು ನಡೆಸಿದೆ. ಆ ನಂತರದಲ್ಲಿ ವ್ಯವಸಾಯದ ಕಡೆಗೆ ಮುಖ ಮಾಡಿದ್ದರ ಪರಿಣಾಮವಾಗಿ, ಹಂಪಿಯ ಬೇಡ, ಗೊಲ್ಲ, ಕುರುಬ ಸಮುದಾಯಗಳ ಮಾತೃನೆಲೆಯಂತೆ ಕಂಡುಬರುತ್ತದೆಂದು ಅವ್ಯಕ್ತಚರಿತ್ರೆಯಲ್ಲಿ ಮೊಗಳ್ಳಿಗಣೇಶ್‌ರವರು ಹೇಳಿರುವುದು ಸಾಕ್ಷ್ಯಾಧಾರವೆಂಬಂತಿದೆ. ಏಕೆಂದರೆ ಅದು ತುಂಗಾಭದ್ರ ನದಿಯ ನೆಲೆಯಾಗಿರುವುದುಒಂದು. ಹಂಪಿಯು ಬೆಟ್ಟ ಗುಡ್ಡ ಹುಲ್ಲುಗಾವಲುಗಳಲ್ಲಿಯೇ ತನ್ನ ಸಾಂಸ್ಕೃತಿಕ ನೆಲೆಯನ್ನು ಸ್ಥಾಪಿಸಿಕೊಂಡಿದ್ದುದು ಎರಡು.ಈ ಎರಡು ಕಾರಣಗಳಿಂದಾಗಿ ನಂತರದಲ್ಲಿ ಈ ಸಮುದಾಯಗಳ ಮೇಲೆ ಹೆಚ್ಚಿದ ಒತ್ತಡದಿಂದಾಗಿ ಮತ್ತು ಭೂಮಿಯನ್ನು ಹೆಚ್ಚಾಗಿ ಕೃಷಿಗೆ ಬಳಸಿದ್ದರ ಪರಿಣಾಮವಾಗಿ ಆ ಸಮುದಾಯಗಳು ವಲಸೆ ಹೋಗಲು ಶುರುಮಾಡಿದವು. ಪಶುಪಾಲಕ ಸಂಸ್ಕೃತಿಯ ಜೊತೆಗೆ ಈ ಸಮುದಾಯಗಳೇ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೆ ಅಸ್ತಿಭಾರ ಹಾಕಿದ್ದವು ಎಂಬುದನ್ನು ನಿರಾಕರಿಸಲಾಗದು. ಒಂದು ಸಮುದಾಯದ ಸಾಮಾಜಿಕ ರಚನೆಯನ್ನು ನಿರ್ಧರಿಸುವಲ್ಲಿ ಒಂದು ಪ್ರದೇಶದ ನಿಸರ್ಗ ಮತ್ತು ಸಾಂಸ್ಕೃತಿಕ ಪರಿಸರ ತುಂಬಾ ಮುಖ್ಯವಾದುದೆಂದು ವೇದ್ಯವಾಗುತ್ತದೆ. ಪಶುಪಾಲಕ ಸಂಸ್ಕೃತಿಯ ಆದಿಮ ಬೇರುಗಳು ಹಂಪಿ ಪ್ರದೇಶದಲ್ಲಿ ದಟ್ಟವಾಗಿವೆ. ಕಾವೇರಿ, ಗೋದಾವರಿ, ಕೃಷ್ಣಾ ನದಿಗಳ ದಂಡೆಯಲ್ಲಿ ಪ್ರಾಚೀನ ಕರ್ನಾಟಕದ ಆದಿ ಸಮುದಾಯಗಳ ವಾಸದ ನೆಲೆಗಳನ್ನು ಗುರುತಿಸಲಾಗಿದೆ. ತುಂಗಭದ್ರ ನದಿಯ ಈ ಪ್ರದೇಶದ ಬೆಟ್ಟ ಗುಡ್ಡ ಕಣಿವೆ ಹಾಗೂ ಹುಲ್ಲುಗಾವಲು ಪ್ರದೇಶಗಳು ಮುಖ್ಯವಾಗಿವೆ.ಹಂಪಿಯು ಪ್ರಾಚೀನ ಕರ್ನಾಟಕದ ಪಶುಪಾಲಕ ಸಮುದಾಯಗಳಾದ ಬೇಡ, ಗೊಲ್ಲ, ಕುರುಬ ಇನ್ನಿತರ ಉಪಪಂಗಡಗಳ ಮೊದಲ ಅಸ್ತಿತ್ವದ ನೆಲೆಯಾಗಿತ್ತು. ವಿಜಯನಗರ ಕಾಲದ ಸಮಾಜದಲ್ಲಿ ಪ್ರಮುಖ ಉತ್ಪಾದಕ ಸಮುದಾಯಗಳಾಗಿ ಬೇಡ, ಗೊಲ್ಲ, ಕುರುಬ ಸಮುದಾಯಗಳಿದ್ದವು. ಒಂದು ಸಾಮಾಜಿಕ ವ್ಯವಸ್ಥೆ ನಿರಂತರ ಸ್ಥಿತ್ಯಂತರಗಳಿಗೆ ಒಳಗಾಗುತ್ತಲೇ ಇರುತ್ತದೆ. ಇದಕ್ಕೆ ಹಂಪಿ ಪರಿಸರದಲ್ಲಿ ನೆಲೆ ಸ್ಥಾಪಿಸಿಕೊಂಡಿದ್ದ ಈ ಸಮುದಾಯಗಳು ಕೆಲವು ಕಾರಣಗಳಿಗೆ ವಲಸೆ ಹೋಗಬೇಕಾಯಿತು ಒಂದು, ಹಂಪಿಯ ಸಾಮಾಜಿಕ ಪರಿಸರದಲ್ಲಿ ಸಾಮ್ರಾಜ್ಯವು ಸ್ಥಾಪನೆಯಾಗಿದ್ದು ಎರಡು, ಇದರ ಪರಿಣಾಮವಾಗಿ ಹಂಪಿಯಲ್ಲಿ ಸಾಂಸ್ಕೃತಿಕ, ರಾಜಕೀಯ, ಆರ್ಥಿಕತೆಯಲ್ಲಿ ಕೆಲವು ಪಲ್ಲಟಗಳಾದವು. ಮೂರು. ಆಂದ್ರ, ಮಹಾರಾಷ್ಟ್ರ, ತಮಿಳುನಾಡುಗಳಿಂದ ವಲಸಿಗರು ಸಾಮ್ರಾಜ್ಯದೊಳಕ್ಕೆ ಬರತೊಡಗಿದರು. ಇವೆಲ್ಲ ಒತ್ತಡಗಳಿಂದಾಗಿ ಬೇಡ ಗೊಲ್ಲ ಕುರುಬ ಮತ್ತು ಉಪಪಂಗಡಗಳು ನೆಲೆಯನ್ನು ಕಳೆದುಕೊಂಡರು. ಅವರು ನಂತರದಲ್ಲಿ ಚಿತ್ರದುರ್ಗ, ದಾವಣಗೆರೆ, ರಾಯಚೂರು, ಬಳ್ಳಾರಿಗಳ ಕಡೆಬಂದಿರಬಹುದೆಂದು

ಊಹಿಸಲು ಸಾಧ್ಯವಿದೆ. ಪಶುಪಾಲಕರಲ್ಲಿ ಪ್ರಬಲರಾಗಿದ್ದ ಕುರುಬರು ಒಕ್ಕಲು ಸಮುದಾಯವಾಗಿ, ರೂಪಾಂತರವಾದರು. ಇದು ಗೊಲ್ಲರಿಗೆ ಒಳಿತಾಯಿತು ಎಂಬಂತೆ ಕಂಡುಬಂದಿತು. ಆದರೆ ಇದು ಕುರುಬ ಮತ್ತು ಮ್ಯಾಸಬೇಡರ ಮಧ್ಯೆ ಅನ್ಯವಾಗಿ ರೂಪುಗೊಂಡ ಗೊಲ್ಲ ಸಮುದಾಯವು ಅವರ ಪೈಪೋಟಿಯನ್ನು ತಾಳದಾಯಿತು. ಚಿತ್ರದುರ್ಗದ ಪರಿಸರಕ್ಕೆ ವಲಸೆ ಹೋಗಿರುವಂತೆ ತೋರುತ್ತದೆ. ಈ ವಿಚಾರದ ಬಗ್ಗೆ ಅವ್ಯಕ್ತ ಚರಿತ್ರೆಯಲ್ಲಿ ಮೊಗಳ್ಳಿ ಗಣೇಶ್‌ರವರು ಅಭಿಪ್ರಾಯಪಟ್ಟಿದ್ದಾರೆ, ಈ ಕೃತಿಯಲ್ಲಿ ಪಶುಪಾಲಕ ಸಮುದಾಯಗಳಲ್ಲಾದ ಪಲ್ಲಟ ಅಥವಾ ಸ್ಥಿತ್ಯಂತರಗಳನ್ನು ವಿಸ್ತೃತವಾಗಿ ವಿಶ್ಲೇಷಿಸಿದ್ದಾರೆ.ಈ ಹಿನ್ನೆಲೆಯಲ್ಲಿ ಒಕ್ಕಲು ಸಂಸ್ಕೃತಿಯ ಮೂಲಕ ಮುಂದೆ ಹೋಗಿದ್ದ ಸಮುದಾಯಗಳು ಊಳಿಗಮಾನ್ಯ ವ್ಯವಸ್ಥೆಯಲ್ಲಿ ಪ್ರಧಾನ ಅಧಿಕಾರ ಪಡೆದುಕೊಂಡವು. ಪಶುಪಾಲನಾ ವೃತ್ತಿಯನ್ನೆ ನಂಬಿ ಗ್ರಾಮಸಂಸ್ಕೃತಿಯ ಅಂಚಿನಲ್ಲಿ ಬದುಕುವ ಗೊಲ್ಲರು ಹಟ್ಟಿಗಳನ್ನು ಕಟ್ಟಿಕೊಂಡು ತುಂಬಾ ಹಿಂದೆ ಉಳಿಯಬೇಕಾಯಿತು. ಹೀಗೆ ಮಾನವನು ಬೇಟೆಗಾರಿಕೆಯಿಂದ ದನಗಾರಿಕೆ, ದನಗಾರಿಕೆಯಿಂದ ಒಕ್ಕಲುತನಕ್ಕೆ, ಒಕ್ಕಲುತನದಿಂದ ವ್ಯಾಪಾರೋದ್ಯೋಗಕ್ಕೆ, ವ್ಯಾಪಾರೋದ್ಯೋಗದಿಂದ ರಾಜ್ಯ ವ್ಯವಹಾರಕ್ಕೆ ಅರ್ಹತೆಯನ್ನು ಪಡೆಯುತ್ತ ಕ್ರಮವಾಗಿ ತನ್ನ ವಿಕಾಸವನ್ನು ಮಾಡಿಕೊಂಡಿರುವುದು ಕಂಡುಬರುತ್ತದೆ. ಮಾನವನ ವಿಕಾಸ ಕ್ರಮದಲ್ಲಿ ದನಗಾರಿಕೆಯಿಂದಲೇ ಮುಂದಿನ ಮಟ್ಟುಗಳು ಬೆಳವಣಿಗೆಯಾಗಿದ್ದು ಎಂಬುದು ಸ್ಪಷ್ಟವಾಗುತ್ತದೆ. ಹೀಗೆ ಪಶುಪಾಲಕ ಸಂಸ್ಕೃತಿಯು ನೇರವಾಗಿ ನದಿಮೂಲ ಸಂಸ್ಕೃತಿಯ ಸಂಬಂಧವನ್ನು ಕೃಷ್ಣ, ಗೋದಾವರಿ, ತುಂಗಭದ್ರ ದಂಡೆಗಳಲ್ಲಿ ವಾಸವಾಗಿದ್ದಂತವುಗಳುಮುಂದೆ ಕೆರೆ ಕಟ್ಟುವ ಕೆಲಸಕ್ಕೂ ಕೈ ಹಾಕಿದವು. ಜಲಾಶಯಗಳನ್ನು ನಿರ್ಮಿಸಿ ಕೃಷಿಯನ್ನುನೆಚ್ಚಿಕೊಂಡವು. ಹೀಗೆ ಭೂಮಿಯು ಕೃಷಿಗೆ ಹೆಚ್ಚು ಬಳಕೆಯಾದ್ದರಿಂದ್ದ ಅವರು ಹಸಿರು ಸಂಸ್ಕೃತಿಯನ್ನು ಅರಸುತ್ತ ಬೇರೆ ಕಡೆಗೆ ಚದುರಿ ದಿಕ್ಕಾಪಾಲಾದರು, ಹಾಗೆ ದಿಕ್ಕಾಪಾಲಾದವರು ಮುಂದೆ ಹಟ್ಟಿಗಳನ್ನು ನಿರ್ಮಿಸಿಕೊಂಡು ಜೀವನ ನಡೆಸುವ ಹಂತಕ್ಕೆ ತಲುಪಿದರು.

**೨.೪. ಹಟ್ಟಿ ಬೆಳವಣಿಗೆ ಮತ್ತು ವಿಕಾಸ:**

ಆರ್ಯರು ಮತ್ತು ಹಟ್ಟಿಕಾರರು ಹತ್ತಿರದವರಾಗಿ, ಹೊಂದಿಕೊಂಡು ಬಾಳಲಾರಂಭಿಸಿದ ಬಳಿಕ ಇವರಿಬ್ಬರ ಭಾಷೆಗಳ ಪರಿಣಾಮ ಒಬ್ಬರ ಮೇಲೊಬ್ಬರ ಮೇಲಾಯಿತು. ಸಂಸ್ಕೃತಕ್ಕಿಂತಲೂ ಪ್ರಾಕೃತದ ಮೇಲೆ ಹಟ್ಟಿಕಾರನ ಮಾತಿನ ಪರಿಣಾಮವು ಹೆಚ್ಚಾಗಿದೆ. ಆಧುನಿಕ ಪ್ರಾಕೃತ ಭಾಷೆಯ ಹಟ್ಟಿಗೆ ಆರ್ಯೀಕರಣಕ್ಕೆ ಒಳಗಾದ ಹಟ್ಟಿಕಾರ ಜನವೇ ಕಾರಣವೆಂದು ಕಂಡುಬರುತ್ತದೆ. 'ಕಾಲಂದೀತೀರದಲ್ಲಿ ಮಧುರಾ-ವೃಂದಾವನದ ಬಳಿಯ ಹಟ್ಟಿಗಳಲ್ಲಿ ವ್ರಜ ಭಾಷೆಯು ತಲೆದೋರಿತೆಂದು ಸಂಶೋಧಕರು ಹೇಳುತ್ತಾರೆ.

ವ್ರಜವೆಂದರೆ ಸಮೂಹ, ವ್ರಜರೆಂದರೆ ಗೋವಳರು, ಅಲೆದಾಡುವವರೂ ಎಂದು ಅರ್ಥವಿದೆ. ಹಾಗಾಗಿ ಕಾಲಿಂದೀ ತೀರದಲ್ಲಿ ಹಟ್ಟಿಗಳನ್ನು ಕಟ್ಟಿಕೊಂಡಿದ್ದ ಗೋವಳರು ಯದು-ತುರ್ವರೆಂಬ ಜಗೆಗೆ ಭಿನ್ನಾಭಿಪ್ರಾಯಗಳಿಲ್ಲ. ಯದು ತುರ್ವರ ವ್ರಜಗಳಲ್ಲು ಈ ಭಾಷೆ ಜನ್ಮತಾಳಿತೊ ಆ ಯದು

ತುರ್ವರೆ ದ್ರಾವಿಡವರ್ಗೀಯ ಹಟ್ಟಿಕಾರರು*. ಈ ಕಾರಣದಿಂದ ಶಂಭಾ ಜೋಷಿಯವರು ಹೇಳುವ ಹಾಗೆ ಈ ಕಾರಣದಿಂದಾಗಿ ಯದುತುರ್ವರು ಕಂನಾಡವರ ಮೊದಲಿಗರು ಮತ್ತು ಆರ್ಯೇತರರು(ಪ್ರಾಕೃತ ಭಾಷೆ).

ಬಾದಾಮಿ, ಬಿಜಾಪುರ, ಖಾನದೇಶ, ನಾಸಿಕಗಳಲ್ಲಿ ಸಂಬಂಧವುಂಟು. ಬಾದಾಮಿ, ಬಿಜಾಪುರ, ಎರೆನಾಡು, ಸೇರಿ ನಿಲ್ಲುವರೇ ನೆರಳಿಲ್ಲದ ನಾಡು. ಬೆಟ್ಟ, ಹಳವುಗಳಿಲ್ಲದವು, ಆದರೆ ಮಹಾರಣ್ಯಗಳಿದ್ದ ವರ್ಣನೆ ಪುರಾಣಗಳಲ್ಲಿದೆ. ಮುಖ್ಯವಾಗಿ ಕಾನದೇಶ ಮತ್ತು ಬಾದಾಮಿ ಊರುಗಳ ಹೆಸರುಗಳಲ್ಲಿ ಸಾಮ್ಯತೆ ಇರುವುದು ಕಂಡು ಬರುತ್ತದೆ. ಖೇಟ, ಖೇಡಗಳು ಇವೆರಡು ನಾಡಿನಲ್ಲಿಯೇ ಹೆಚ್ಚು. ಧೂಳಕೇಡ, ಮಾಲೆಗಾಂವ, ಗುಡ್ಡಾಪುರ, ಐನಾಪುರ, ಸಿಂದಗಿ, ಮರಹಟ್ಟ ನಾಡಿನಿಂದ ಹರಿದು ಬಂದವರು ಕೃಷ್ಣಾ ನದಿಯ ಹತ್ತಿರದಲ್ಲಿ ಹಟ್ಟಿ, ಪಟ್ಟಿ, ವಾಟ, ವಾಡ, ವಾಡಿಗಳನ್ನು ಕಟ್ಟಿಕೊಂಡು ಕಾಲೂರಿದ ಹಳ್ಳಿ, ಪಳ್ಳಿಗಳಿಗೆ ಕೊರತೆಯಿಲ್ಲ. ಹಟ್ಟಿ ಊರುಗಳು ಈ ಭಾಗದಲ್ಲಿಯೇ ವಿಶೇಷ.

ಪತ್ತಿ ಜನರ ಆತ್ಮಿಯದೇವರು ಶಿವನಾಗಿದ್ದನೆಂದು ವೈದಿಕ ಋಷಿಗಳು 'ಪತ್ತಿನಾಂ ಪತಿ' ಎಂದು ಹಾಡಿದರೆಂಬುದರಲ್ಲಿ ಸಂಶಯವಿಲ್ಲ. ಹಟ್ಟಿಗಳ ಪತಿಯಾದವನು ಹಾಟಕೇಶ್ವರ, ಹಾಟಕೇಶ್ವರನ ಕ್ಷೇತ್ರಗಳು ದಕ್ಷಿಣಾಪಥದಲ್ಲಿ ವಿಪುಲವಾಗಿವೆ. ಹಾಗಾಗಿ ಈ ಆಧಾರದ ಮೇಲೆ ಹಟ್ಟಿಕಾರರು ಲಿಂಗ, ನಂದಿ, ಅಥವಾ ಬಸವನನ್ನು ಆರಾಧಿಸುವುದು ಈಗಲೂ ನೋಡಲಿಕ್ಕೆ ಸಿಗುತ್ತದೆ. ಶ್ರೀಶೈಲ ಮಲ್ಲಿನಾಥನಿಗೂ ಹಾಟಕೇಶ್ವರ ಎಂಬ ಹೆಸರಿರುವುದನ್ನು ನೋಡಬಹುದು. ಆದರೆ ಮಲ್ಲಯ್ಯ ಪಶುಪಾಲಕರ ಆರಾಧ್ಯದೈವ. ನಾಸಿಕದ ಸುತ್ತಮುತ್ತಲಿನ ಪ್ರದೇಶಕ್ಕೆ ಮಹಾಭಾರತದ ಕಾಲಕ್ಕೆ ಗೋಪರಾಷ್ಟ್ರವೆಂದು ಹೆಸರಿತ್ತು. ಈ ಭಾಗದ ಗೋದಾವರಿನದಿ-ಗೋಪರಾಷ್ಟ್ರದ ಸಾಕ್ಷಿಯಾಗಿದೆ. ಗೋದಾವರಿ, ಹಾಟಕೇಶ್ವರ, ಗೋಪರಾಷ್ಟ್ರ ಈ ಮೂರು ಸಂಗತಿಗಳಿಂದ ತಿಳಿದು ಬರುವುದೇನೆಂದರೆ ಈ ಭಾಗದಲ್ಲಿ ಹಟ್ಟಿಕಾರರ ವಸತಿ ಸ್ಥಾನಗಳಿದ್ದುವೆಂಬುದಕ್ಕೆ ಇವು ಸಾಕ್ಷ್ಯಾಧಾರಗಳಾಗಿವೆ. ಹಟ್ಟಿಕಾರ ಗೌಳಿಗಳ ವೈಶಿಷ್ಟ್ಯವನ್ನು ತೋರಿಸುವ ವೀರಗಲ್ಲುಗಳು ನಾಸಿಕ ಜಿಲ್ಲೆಯಲ್ಲಿ ಹೇರಳವಾಗಿ ಸಿಕ್ಕುತ್ತವೆಂಬುದು ಅಲ್ಲಿಯ ಗೆಜೆಟಿಯರ್‌ನಿಂದ ವೇದ್ಯವಾಗುತ್ತದೆ. ಕರ್ನಾಟಕದಲ್ಲಿಯೂ ಇಂತಹ ಸ್ಮಾರಕಗಳು ತುಂಬಾ ಸಿಗುತ್ತವೆ.

'ತುರುವಂ ಮಗುಳ್ಚಿ ಪಗೆಯಂ ಕೊಂದು ಸಗ್ಗಮಂ ಸಂದೊನ್' ಹೀಗೆ ಕಲ್ಲಿನ ಮೇಲೆ ಕೊರೆದ ವಾಕ್ಯಗಳಿಂದ ಹಟ್ಟಿಕಾರರ ಧೈರ್ಯ-ಶೌರ್ಯ, ತ್ಯಾಗ ಆತ್ಮಬಲಿದಾನದ ಪ್ರಸಂಗಗಳು ತಿಳಿಯುತ್ತವೆ. ನಾಸಿಕ ಜಿಲ್ಲೆಯ ವೀರಗಲ್ಲುಗಳಿಂದ ಮತ್ತು ಖಾನದೇಶ, ನಾಸಿಕದ ಗೌಳಿಗಳಿಂದ ತೋಚುವುದೇನೆಂದರೆ ಈ ಭಾಗವೆಲ್ಲ 'ಹಟ್ಟಿಕಾರರ ತವರುಮನೆ' ಎಂದು ಪರಿಭಾವಿಸುವುದು ಸೂಕ್ತವಾದುದು. ಹಟ್ಟಿಕಾರರೇ ಈ ಭಾಗದ ಪ್ರಮುಖ ಮತ್ತು ಪ್ರಬಲ ಜನಾಂಗವಿರಬೇಕೆಂದು ತಿಳಿಯುತ್ತದೆ. ಹಟ್ಟಿಕಾರರು ಒಟ್ಟಾರೆಯಾಗಿ ಅವರ ನೆಲೆಗಳು ನದಿದಂಡೆಯ ತೀರಗಳಲ್ಲಿ ಅವರ ವಸತಿಗಳಿದ್ದುವೆಂಬುದು ಸ್ಪಷ್ಟವಾಗುತ್ತದೆ.

ಪಶುಪಾಲಕ ಸಮುದಾಯಗಳು ಹಂಪಿಯ ನಿಸರ್ಗದಲ್ಲಿ ಪ್ರಾಣಿಗಳ ಸಹಜೀವನದೊಂದಿಗೆ ಬೆಟ್ಟಗುಡ್ಡಗಳಲ್ಲಿ ವಾಸವಾಗಿದ್ದು ತಮ್ಮ ಜೀವನವನ್ನು ಕ್ರಮಿಸುತ್ತಿದ್ದವು. ಪಶುಪಾಲಕ ಸಮುದಾಯಗಳಾದ ಬೇಡ, ಕುರುಬ, ಗೊಲ್ಲ ಸಮುದಾಯದವರು ನಿಸರ್ಗದೊಂದಿಗೆ ಅವಿನಾಭಾವ ಸಂಬಂಧ ಹೊಂದಿದೆ.

ಹಂಪಿಗೆ ಮಹಾರಾಷ್ಟ್ರ ಬೇರೆಡೆಗಳಿಂದ ಪಶುಪಾಲಕರು ವಲಸಿಗರಾಗಿ ಬರುವಂತಹುದು ಹೆಚ್ಚಾಯಿತು. ಹೀಗಾಗಿ ಪಶುಪಾಲಕರಲ್ಲಿ ಸಂಘರ್ಷ ಪ್ರಾರಂಭವಾಯಿತು. ಮ್ಯಾಸಬೇಡರಲ್ಲಿ ಉಪಪಂಗಡಗಳಾಗಿ ಊರುಬೇಡರು ಮತ್ತು ಮ್ಯಾಸಬೇಡರು ಎಂದು ಎರಡು ಪಂಗಡಗಳಾದವು. ಒಂದು ವರ್ಗ ಪಶುಪಾಲನೆಯ ಜೀವನಕ್ರಮವನ್ನು ಮತ್ತು ಬೆಟ್ಟಗುಡ್ಡಗಳ ಮರೆಯ ಜೀವನವನ್ನು ಬಿಟ್ಟು ಊರಿನ ಜೀವನಕ್ರಮ ಅಳವಡಿಸಿಕೊಂಡಿತು. ಸಾಮ್ರಾಜ್ಯ ತಲೆಎತ್ತಿದ ನಂತರದಲ್ಲಿ ಈ ಸಮುದಾಯಗಳು ನಿರ್ಣಾಯಕ ಸಮುದಾಯಗಳಾಗಿ ಬೆಳೆಯಲು ಸಾಧ್ಯವಾಗದೇ ಹೋಯಿತು. ಈ ಪರಿಸ್ಥಿತಿಯಲ್ಲಿ ಮ್ಯಾಸಬೇಡರು ಹಿಮ್ಮುಖ ಚಲನೆಯನ್ನು ಹೊಂದಿತು. ಹಾಗೆಯೇ ಗೊಲ್ಲರು ಸಹ ಇದೇ ಜಾಡನ್ನು ತುಳಿದರು. ಹೀಗೆ ಪಶುಪಾಲಕ ಸಮುದಾಯಗಳು ಕೊಪ್ಪಳ, ಚಿತ್ರದುರ್ಗ, ರಾಯಚೂರು ಇತ್ಯಾದಿಗಳ ಕಡೆಗೆ ವಲಸಿಗರಾಗಿ ಕ್ರಮಿಸಬೇಕಾಯಿತು. ಸ್ವಲ್ಪಮಟ್ಟಿಗೆ ಕುರುಬರು ಒಕ್ಕಲುತನವನ್ನು ಆಯ್ಕೆ ಮಾಡಿಕೊಂಡರು. ಆದರೆ ಗೊಲ್ಲರು ಮಾತ್ರ ಪಶುಪಾಲನಾ ವೃತ್ತಿಯನ್ನೆ ನಂಬಿ ಗ್ರಾಮಸಂಸ್ಕೃತಿಯ ಅಂಚಿನಲ್ಲಿ ಬದುಕಲಾರಂಭಿಸಿ ಗೊಲ್ಲರಹಟ್ಟಿಗಳನ್ನು ನಿರ್ಮಿಸಿಕೊಂಡು ಗ್ರಾಮ ವಿಕಾಸದ ರಚನೆಯಲ್ಲಿ ಹಿಂದೆ ಉಳಿಯಬೇಕಾಯಿತು. ಮ್ಯಾಸಬೇಡರ ಪರಿಸ್ಥಿತಿಯು ಇದಕ್ಕೇನು ಹೊರತಾಗಿರಲಿಲ್ಲ. ಹೀಗೆ ದಿಕ್ಕೆಟ್ಟ ಪಶುಪಾಲಕ ಸಮುದಾಯಗಳು ದನಗಳೇ ನಮ್ಮ ಸಂಪತ್ತು, ದೈವ ಎಂದು ನಂಬಿಕೊಂಡು ಸಾಮಾಜಿಕ ಚಲನೆಯಲ್ಲಿ ಮೇಲ್ಮುಖ ಚಲನೆಯನ್ನು ಹೊಂದಲು ಅವಕಾಶವಾಗಲಿಲ್ಲ. ಬಯಲುಸೀಮೆಯ ಜಿಲ್ಲೆಯಾದ ಚಿತ್ರದುರ್ಗವು ಕುರುಚಲು ಪ್ರದೇಶ ಮತ್ತು ಬೆಟ್ಟ ಗುಡ್ಡಗಳು ಇದ್ದುದರಿಂದಾಗಿ ಈ ಸಮುದಾಯಗಳು ಸಹಜ ನೈಸರ್ಗಿಕ ಹಸಿರನ್ನು ಹುಡುಕಿಕೊಂಡು ಬಂದು ಬೀಡು ಬಿಟ್ಟವು. ಮ್ಯಾಸಬೇಡರ ಹಟ್ಟಿಗಳು ಅತಿ ಹೆಚ್ಚಾಗಿ ಚಿತ್ರದುರ್ಗ, ಚಳ್ಳಕೆರೆ, ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ನೆಲೆಸಿವೆ. ಹೊಳಲ್ಕೆರೆ, ಹೊಸದುರ್ಗ, ಹಿರಿಯೂರಿನಲ್ಲಿ ತುಂಬಾ ಕಡಿಮೆ ಇದ್ದಾರೆ. ಹಾಗಯೇ ಕಾಡುಗೊಲ್ಲರು. ಚಿತ್ರದುರ್ಗಜಿಲ್ಲೆಯ ಹಿರಿಯೂರು, ಚಳ್ಳಕೆರೆ, ಹೊಳಲ್ಕೆರೆ, ಹೊಸದುರ್ಗ, ಮೊಳಕಾಲ್ಮೂರುಗಳಲ್ಲಿ ವಾಸವಾಗಿದ್ದಾರೆ. ಈ ಎರಡೂ ಸಮುದಾಯಗಳು ತಮ್ಮದೇ ಆದ ಸಂಪ್ರದಾಯಗಳು, ಆಚರಣೆಗಳು, ನಂಬಿಕೆಗಳು, ಆಚಾರ ವಿಚಾರಗಳು, ದೈವಭಕ್ತಿ, ವಿಧಿ ನಿಷೇಧಗಳು, ಕಟ್ಟಳೆಗಳನ್ನು ಹೊಂದಿದ್ದು ಹಟ್ಟಿಗಳನ್ನು ಕಟ್ಟಿಕೊಂಡು ಪ್ರತ್ಯೇಕವಾಗಿ ವಾಸಿಸುತ್ತಾರೆ. ಕಾಡುಗೊಲ್ಲರ ಹಟ್ಟಿಗಳು ಚಿತ್ರದುರ್ಗದಲ್ಲಿಅಲ್ಲದೆ ಹೆಚ್ಚಾಗಿ ತುಮಕೂರು ಮತ್ತು ಹಾಸನ, ಕೋಲಾರ ಜಿಲ್ಲೆಗಳಲ್ಲೂ ನೆಲೆಸಿದ್ದಾರೆ. ಹಾಗಯೇ ನೆರೆಯ ರಾಜ್ಯವಾದ ಆಂಧ್ರಪ್ರದೇಶದ ಅನಂತರಪುರ ಜಿಲ್ಲೆಯಲ್ಲೂ ಕಾಡುಗೊಲ್ಲರ ಹಟ್ಟಿಯ ನೆಲೆಗಳು ಬಹಳಷ್ಟಿವೆ.

## ೨.೫ ಹಟ್ಟಿ ಮತ್ತು ಸಮುದಾಯಗಳು

ಸಮುದಾಯಗಳ ಅಧ್ಯಯನಗಳು ಸಂಶೋಧನೆಯ ಮಟ್ಟಿಗೆ ತುಂಬಾ ಮಹತ್ವಪೂರ್ಣವಾದುದು. ಇಪ್ಪತ್ತನೇ ಶತಮಾನದಲ್ಲಿ ಸಮುದಾಯಗಳ ಕುರಿತು ಆದ ಸಂಶೋಧನೆಗಳು. ಸಾಕಷ್ಟಿವೆ. ಸಮುದಾಯಗಳ ಅಧ್ಯಯನದಿಂದ ಆದ ಲಾಭವೆಂದರೆ ತಳವರ್ಗದ, ನಿರ್ಲಕ್ಷಿತ, ಅಂಚೀಕೃತ ಗುಂಪುಗಳ (Marzinalised groups) ಚಹರೆಗಳನ್ನು ಸ್ಪಷ್ಟವಾಗಿ ಗುರುತಿಸುವುದು. ಅವರ ಸಂಸ್ಕೃತಿ, ಪರಂಪರೆ, ಜೀವನ ವಿಧಾನಗಳನ್ನು ಅಧ್ಯಯನಕ್ಕೊಳಪಡಿಸುವುದು ಅಗತ್ಯವಿದೆ. ಒಂದು ಸಮುದಾಯ ಹೊಂದಿದ್ದ ಪರಂಪರೆ, ಆಡಳಿತ, ಕಲೆ, ಪಾರಂಪರಿಕ ಜ್ಞಾನ, ನಂಬಿಕೆಗಳು, ಸಂಪ್ರದಾಯಗಳು, ಸಮುದಾಯದ ಸಾಂಸ್ಕೃತಿಕ ವೀರರು, ಒಂದು ಸಮುದಾಯದ ಉಳಿವಿಗೆ ಮಾಡಿದ ಸಾಧನೆ, ಸಮುದಾಯದೊಳಗಿನ ಸಾಂಸ್ಕೃತಿಕ ಸಂಘರ್ಷ ಒಂದು ಸಮುದಾಯ ಅನ್ಯಸಮುದಾಯಗಳೊಂದಿಗೆ ಹೊಂದಿದ ಸಂಬಂದ, ಸಾಮ್ಯತೆಯನ್ನು ಹಲವಾರು ವಿನ್ಯಾಸಗಳಿಂದ ವಿಶ್ಲೇಷಣೆಗೆ ಒಳಪಡಿಸುವುದು ಮುಖ್ಯವಾಗಿದೆ. ಈ ನಿಟ್ಟಿನಲ್ಲಿ, ಮಾಡಿದ ಹಲವಾರು ಅಧ್ಯಯನಗಳು ಸಮುದಾಯದ ಅಭಿವೃದ್ಧಿಗೆ, ಸಾಮಾಜಿಕ ನ್ಯಾಯವನ್ನು ದೊರಕಿಸುವ ದೃಷ್ಟಿಯಿಂದ ಮುಖ್ಯವಾಗಿವೆ. ಸದಾ ಸಮುದಾಯಗಳ ಅಭಿವೃದ್ಧಿ, ಸಮುದಾಯಗಳನ್ನು ಮಾನವ ಶಾಸ್ತ್ರೀಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಬುಡಕಟ್ಟು ಅಧ್ಯಯನ ವಿಭಾಗ ಅವಿರತವಾಗಿ ಶ್ರಮಿಸುತ್ತಿದೆ. ಈ ನಿಟ್ಟಿನಲ್ಲಿ ಹಿ.ಚಿ.ಬೋರಲಿಂಗಯ್ಯರವರು, ಚಲುವರಾಜು, ಕೆ.ಎಂ.ಮೇತ್ರಿಯವರು. ಎ.ಎಸ್.ಪ್ರಭಾಕರ್‌ರವರು, ಗಂಗಾಧರದೈವಜ್ಞರವರು, ಕೇಶವನ್‌ಪ್ರಸಾದ್‌ರವರು ಮಹತ್ವದ ಅಧ್ಯಯನಗಳನ್ನು ಬೆಳಕಿಗೆ ತಂದಿರುವುದು ಗಮನಾರ್ಹ. ಈ ನಿಟ್ಟಿನಲ್ಲಿ ಎ.ಎಸ್.ಪ್ರಭಾಕರ್‌ರವರ ಸಮುದಾಯಗಳ ಅಧ್ಯಯನಕ್ಕೆ ಆಕರ ಗ್ರಂಥವಾಗಿ ಹೊರತಂದ ಆದಿವಾಸಿ ಆಖ್ಯಾನ. ಹಲವಾರು ಸಮುದಾಯಗಳ ಅಧ್ಯಯನವನ್ನೊಳಗೊಂಡ ಕೃತಿಯಾಗಿದೆ. ಯಾವುದೇ ಸಂಶೋಧಕ ಈ ಕೃತಿಯನ್ನು ಸಂಶೋಧನ ಪ್ರಾರಂಭದಲ್ಲಿ ಅಭ್ಯಸಿಸಲೇ ಬೇಕಾದ ಅತ್ಯಗತ್ಯವಾದ ಕೃತಿ. ಹಲವಾರು ಸಂಶೋಧನಕಾರರು ವಿಭಿನ್ನ ನೆಲೆಗಳಲ್ಲಿ ಅಧ್ಯಯನ ಮಾಡಿದ ಹಲವಾರು ಲೇಖನಗಳು ಈ ಕೃತಿಯಲ್ಲಿವೆ. 'ಜುಂಜಪ್ಪ' ಬುಡಕಟ್ಟು ಮಹಾಕಾವ್ಯಮಾಲೆ ಚಲುವರಾಜುರವರ ಸಂಪಾದಕತ್ವದಲ್ಲಿ ಗೊಲ್ಲಸಮುದಾಯದ ಜೀವನಕ್ರಮ, ಪಶುಪಾಲಕ ಸಂಸ್ಕೃತಿಯನ್ನು ಬಿಂಬಿಸುವ ಜುಂಜಪ್ಪ ಹಾಗೂ ಗೊಲ್ಲ ಸಮುದಾಯದ ಸಮಗ್ರ ಸಂಸ್ಕೃತಿಯ ಅಂಶಗಳನ್ನು ಹೊಂದಿರುವಈ ಮಹಾಕಾವ್ಯ ಆ ಸಮುದಾಯದ ನೋವು ನಲಿವುಗಳನ್ನು ಬಿಂಬಿಸುವ ಕಾಡಾಡಿಗಳ ಜೀವದನಿಯ ಪ್ರತಿಬಿಂಬವೇ ಈ ಮಹಾಕಾವ್ಯ

ಸಮುದಾಯ ಎಂಬ ಪದವನ್ನು ಮಾನವಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ಸಂಶೋಧನಕಾರರು ದಿನನಿತ್ಯದ ದೈನಂದಿನ ಸಾಮಾಜಿಕ ಜೀವನದಲ್ಲಿ ಬಳಕೆ ಮಾಡುವುದು ಗೋಚರವಾಗುತ್ತದೆ. ಸಮಾಜಶಾಸ್ತ್ರಜ್ಞರಂತು ಸಮುದಾಯವನ್ನು ಮೂಲಭೂತ ಪರಿಕಲ್ಪನೆಯೆಂದು ಪರಿಭಾವಿಸುತ್ತಾರೆ.

ಹತ್ತಾರು ಕುಟುಂಬಗಳನ್ನೊಳಗೊಂಡ ಚಿಕ್ಕನೆರೆಹೊರೆಯನ್ನು ಸಮುದಾಯವೆಂದು ಸಮಾಜ ಶಾಸ್ತ್ರಜ್ಞರು ವ್ಯಾಖ್ಯಾನಿಸುತ್ತಾರೆ. ಸಮುದಾಯ ಚಿಕ್ಕದಿರಬಹುದು ಇಲ್ಲವೆ ಅಸಂಖ್ಯಾತ ಜನರಿಂದ

ಕೂಡಿದ್ದು ದೊಡ್ಡದಾಗಿರಬಹುದು. ಸಮುದಾಯದ ಅಧ್ಯಯನಗಳಲ್ಲಿ ಭಾಷಾಸಮುದಾಯ, ಜಾತಿಸಮುದಾಯ, ಜನಾಂಗೀಯಸಮುದಾಯ, ಧಾರ್ಮಿಕಸಮುದಾಯ, ಬುಡಕಟ್ಟುಸಮುದಾಯದ ನೆಲೆಗಳಲ್ಲಿ ಅಧ್ಯಯನಗಳಾಗಿವೆ. ಪ್ರಸ್ತುತ ಅಧ್ಯಯನವು ಹಟ್ಟಿ ಸಂಸ್ಕೃತಿಯ ಸಾಂಸ್ಕೃತಿಕ ಹಾಗು ಸಾಮಾಜಿಕ ಅದ್ಯಯನವನ್ನು ಕೇಂದ್ರವಾಗಿಟ್ಟುಕೊಂಡಿದೆ. ಹಟ್ಟಿ ಸಮುದಾಯದಲ್ಲಿನ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಹಟ್ಟಿಗಳ ಅಧ್ಯಯನ ಮಾಡಲಾಗಿದೆ. ಯಾವುದೇ ಸಮುದಾಯವು ಸಾಮಾಜಿಕ ಜೀವನ ಅಥವಾ ಸಾಮಾಜಿಕ ರಚನೆಯ ಮೇಲೆ ಪ್ರಭಾವ ಬೀರುತ್ತದೆ. ಇದುವರೆವಿಗೂ ಸಮುದಾಯದ ಅಧ್ಯಯನಗಳಿಂದ ಕಂಡುಬರುವ ಸಂಗತಿ ಎಂದರೆ ಕುಟುಂಬ, ಧರ್ಮ, ನಂಬಿಕೆ, ಶ್ರದ್ಧೆ, ಆಚಾರ ವಿಚಾರ, ಉದ್ಯೋಗ (ಕಸುಬು)ದ ಮೇಲೆ ಸಂಶೋಧನೆ ನಡೆದಿದ್ದು ಅವುಗಳನ್ನು ಆಧಾರವಾಗಿ ಇಟ್ಟುಕ್ಕೊಂಡಿದೆ. ಪ್ರಸ್ತುತ ಅಧ್ಯಯನದಲ್ಲಿ ಒಂದು ಸಮುದಾಯದ ಭೌತಿಕ ನೆಲೆ ಹಾಗೂ ಸಾಂಸ್ಕೃತಿಕ ಮತ್ತು ಸಾಮಾಜಿಕ ಸ್ಥಿತ್ಯಂತರಗಳ ಬಗ್ಗೆ ಆಧುನಿಕ ಮುಖಾಮುಖಿಯಾಗಿ ಆ ಸಮುದಾಯಗಳು ಹೇಗೆ ಪಲ್ಲಟಗೊಂಡಿವೆ ಎಂಬುದನ್ನು ಚರ್ಚಿಸಲಾಗಿದೆ.

ಹಲವಾರು ಸಂಶೋಧಕರ, ವಿದ್ವಾಂಸರ, ಅಧ್ಯಯನಗಳು ಆಗಿದ್ದರೂ ಪಶುಪಾಲಕ ಸಂಸ್ಕೃತಿಯ ಅಲೆಮಾರಿ ಜನಾಂಗಗಳು ಹೇಗೆ ವಿಕಾಸದ ಹಂತಗಳನ್ನು ದಾಟಿ ಒಂದುಕಡೆ ನೆಲೆಯೂರಿ ಸಮುದಾಯವನ್ನು ರೂಪಿಸಿಕೊಂಡವು ಎಂಬುದನ್ನು ಗ್ರಹಿಸುವಲ್ಲಿ ಪ್ರಸ್ತುತ ಅಧ್ಯಯನವು ಕೇಂದ್ರಿಕರಿಸಿದೆ.

ಸಮುದಾಯವನ್ನು ಹಲವಾರು ಸಮಾಜಶಾಸ್ತ್ರಜ್ಞರು ತಮ್ಮದೇ ಆದ ದೃಷ್ಟಿಕೋನದಲ್ಲಿ ಅರ್ಥೈಸಿದ್ದಾರೆ.

'ನಾವು ನಮ್ಮವರು ಎಂಬ ಭಾವನೆಯೊಂದಿಗೆ ಒಂದು ನಿಶ್ಚಿತ ಭೂಪ್ರದೇಶದಲ್ಲಿ ವಾಸಿಸುವ ಜನಸಮೂಹವನ್ನು ಸಮುದಾಯ ಎಂದಿದ್ದಾರೆ'. 'ಸಾಮಾಜಿಕ ಸಾಮರಸ್ಯವನ್ನು ಹೊಂದಿರುವ ಒಂದು ಸಾಮಾಜಿಕ ನೆಲೆಯೆ ಸಮುದಾಯ' (ಮೆಕೈವರ್ ಮತ್ತು ಪೇಜ್,). ಸಮಾಜಶಾಸ್ತ್ರಜ್ಞರ ಅಭಿಪ್ರಾಯದಂತೆ ಯಾವುದೇ ಸಮುದಾಯ ಎರಡು ಅಂಶಗಳನ್ನು ಹೊಂದಿರುವುದು ಗೋಚರವಾಗುತ್ತದೆ. ಒಂದು ಸ್ಥಾನೀಯತೆ ಮತ್ತೊಂದು ಸಾಮುದಾಯಿಕ ಭಾವನೆ. ಸ್ಥಾನೀಯತೆ ಎಂದರೆ ನೆಲೆ (ಭೌಗೋಳಿಕ ಪ್ರದೇಶ) ಎಂದು, ಸಾಮುದಾಯಿಕ ಭಾವನೆಯೆಂದರೆ 'ನಾವು ನಮ್ಮವರು' ಎನ್ನುವ ಮನೋಭಾವನೆ.

ಪ್ರಾಚೀನ ಕಾಲದಿಂದಲೂ ಹಲವಾರು ಜನಾಂಗಗಳು, ಗುಂಪುಗಳು ಒಂದು ನಿಶ್ಚಿತನೆಲೆಯೊಂದಿಗೆ ಸಮುದಾಯವನ್ನು ರೂಪಿಸಿಕೊಂಡವು. ಯಾವುದೇ ಸಮುದಾಯ ತಮ್ಮದೇ ಆದ ನಿಯಮಗಳು ವಿಧಿನಿಷೇದಗಳು, ನಂಬಿಕೆಗಳು, ಸಂಪ್ರದಾಯಗಳು, ಆಚಾರ ವಿಚಾರಗಳನ್ನು ಮತ್ತು ನಿಯಮಗಳನ್ನು ಹೊಂದಿರುತ್ತದೆ. ಪ್ರತಿಯೊಂದು ಸಮುದಾಯವು ಹಿಂದಿನಿಂದಲೂ ನಡೆದು ಬಂದ ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿಕೊಂಡಿದ್ದಾಗ್ಯೂ ಇತ್ತೀಚೆಗೆ ಸಮುದಾಯಗಳು ಬದಲಾವಣೆಯತ್ತ ಮುಖ ಮಾಡುತ್ತಿರುವುದು ಹಲವಾರು ಸಂಶೋಧಕರ ಅಧ್ಯಯನಗಳಿಂದ ಗೋಚರವಾಗುತ್ತದೆ. ಪ್ರಸ್ತುತದಲ್ಲಿ

ಹಟ್ಟಿ ಸಮುದಾಯದವರು ಹೇಗೆ ಸ್ಥಿತ್ಯಂತರಗೊಂಡಿದ್ದಾರೆಂಬುದನ್ನು ಪರಿಶೋಧಿಸುವುದು ಮುಖ್ಯವಾಗುತ್ತದೆ. ಆ ಮೂಲಕ ಸಮುದಾಯಗಳು ಹಟ್ಟಿಯೊಂದಿಗೆ ಹೇಗೆ ಅವಿನಾಭಾವ ಸಂಬಂಧವನ್ನು ಹೊಂದಿವೆ ಎಂಬುದನ್ನು ಗ್ರಹಿಸುವುದೇ ಪ್ರಸ್ತುತ ಅಧ್ಯಯನದಲ್ಲಿ ಕೇಂದ್ರೀಕರಿಸಲಾಗಿದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಕಾಡುಗೊಲ್ಲ ಮತ್ತು ಮ್ಯಾಸಬೇಡ ಹಟ್ಟಿಗಳು ಪ್ರಧಾನವಾದ ಬುಡಕಟ್ಟು ಸಮುದಾಯಗಳಾಗಿವೆ. ಹಟ್ಟಿಗಳು ಚಿತ್ರದುರ್ಗ ಜಿಲ್ಲೆಯಲ್ಲಿಯೆ ಏಕೆ ಹೆಚ್ಚಿನ ಸಂಖ್ಯೆಯಲ್ಲಿವೆ? ಹಟ್ಟಿಗಳು ಹಟ್ಟಿಗಳಾಗಿಯೇ ಉಳಿದುವೇಕೆ? ಎಂಬುದಾಗಿ ಪ್ರಶ್ನಿಸಿಕೊಂಡರೆ, ಪ್ರಸ್ತುತಅಧ್ಯಯನದಿಂದ ತಿಳಿಯುವಸಂಗತಿ ಎಂದರೆ ಅನ್ಯಸಮುದಾಯಗಳೊಂದಿಗೆ ಹೊಂದಾಣಿಕೆಯಾಗದೇ ತಮ್ಮದೇ ಆದ ಜೀವನಕ್ರಮ, ಸಂಸ್ಕೃತಿ, ಆಚಾರ ವಿಚಾರಗಳು, ನಿಯಮಗಳು, ಮಡಿ ಮೈಲಿಗೆಗಳನ್ನು ಹೊಂದಿರುವುದು. ಅವರು ಜೀವನೋಪಾಯಕ್ಕೆ ನಂಬಿಕೊಂಡಿದ್ದ ಪಾರಂಪರಿಕವಾದ ವೃತ್ತಿ, ಅಲೆಮಾರಿ ಬದುಕಿನ ಚಿತ್ರಣವನ್ನು ಗ್ರಹಿಸಲು ಸಾಧ್ಯವಿದೆ. ಡಾ.ಮೀರಾಸಾಬಿಹಳ್ಳಿ ಶಿವಣ್ಣ ಅವರು ಉಲ್ಲೇಖಿಸಿದ 'ಗ್ರಾಮದ್ಬಹಿವಾಸಿಗಳು' ಎಂಬ ಪದವು ಸೂಕ್ತವೆನಿಸುತ್ತದೆ. ಪ್ರಸ್ತುತ ಅಧ್ಯಯನವು ಕಾಡುಗೊಲ್ಲ ಮತ್ತು ಮ್ಯಾಸಬೇಡ ಸಮುದಾಯದ ಹಟ್ಟಿಗಳನ್ನು ಮಾತ್ರ ಕೇಂದ್ರೀಕರಿಸಿ ಅಧ್ಯಯನ ಮಾಡಲಾಗಿದೆ.

**ಕಾಡುಗೊಲ್ಲ ಪದದ ಹುಟ್ಟು**

ಕಾಡುಗೊಲ್ಲ ಸಮುದಾಯದ ಬಗೆಗೆ ಹಲವಾರು ಸಂಶೋಧಕರು, ಮಾನವ ಶಾಸ್ತ್ರಜ್ಞರು ಹಲವಾರು ಲೇಖನಗಳನ್ನು ಮತ್ತು ಕೃತಿಗಳನ್ನು ರಚಿಸಿದ್ದಾರೆ. ಶುದ್ಧ ಜನಪದ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದ ಜನಸಮುದಾಯಗಳಲ್ಲಿ ಕಾಡುಗೊಲ್ಲರು ಪ್ರಮುಖರು. ಸಂಸ್ಕೃತದ 'ಗೋವಲ' ಶಬ್ದದಿಂದ ಕನ್ನಡದ 'ಗೊಲ್ಲ' ಶಬ್ದ ರೂಪುಗೊಂಡಿರಬೇಕು. ಗೋಪಾಲಕನನ್ನೇ ಗೊಲ್ಲ ಎಂದು ಕರೆಯುತ್ತಾರೆ. ಕಾಡುಗೊಲ್ಲ ಎಂದರೆ ಕಾಡಿನಲ್ಲಿ ವಾಸಿಸುವ ಗೊಲ್ಲನೆಂದು ಅರ್ಥ. ಕಾಡುಗೊಲ್ಲರನ್ನು ಅಡವಿಗೊಲ್ಲರು, ಕರಡಿಗೊಲ್ಲರು, ಹಟ್ಟಿಗೊಲ್ಲರು ಎಂದು ಕರೆಯುವ ವಾಡಿಕೆ ಇರುವುದು ಕಂಡುಬರುತ್ತದೆ. ಎ.ಎ.ಡಿ.ಲೂಯಿಸ್‌ರವರು, ತಮ್ಮ ಕೃತಿ ಆದ 'The tribes of mysore' ದಲ್ಲಿ ಕಾಡುಗೊಲ್ಲರನ್ನು ಪರಿಶಿಷ್ಟ ಬುಡಕಟ್ಟಿಗೆ ಸೇರಿಸಲು ಅರ್ಹರು ಎಂದಿದ್ದಾರೆ. ( Kadu gollas who have a culture and dialectof their own righty deserved to be classified has scheduled tribes in Karnataka).

ಕಾಡುಗೊಲ್ಲರನ್ನು 'ಕಲ್ಲಿಗೊಲ್ಲ'ರೆಂದು ಕರೆಯಲಾಗುತ್ತದೆ. ಜೀ.ಶಂ.ಪರಮಶಿವಯ್ಯರವರು ಹಟ್ಟಿಗಳ ಸುತ್ತಲು ಕಳ್ಳಿಯ ಗಿಡಗಳನ್ನು ಹಾಕಿರುತ್ತಾರದ್ದಾರಿಂದ ಕಳ್ಳಿಗೊಲ್ಲರೆಂಬ ಊಹೆ ಸರಿಯಾದುದ್ದಲ್ಲ. ಕಲ್ಲಿಗೊಲ್ಲರಿರಬೇಕೆಂಬುದಾಗಿ, ಬಸವರಾಜ ದೇವರ ರಗಳೆ, ಯ ಕೆಲವು ಸಾಲುಗಳನ್ನು ಉಲ್ಲೇಖಿಸಿ ಕಲ್ಲಿಗೊಲ್ಲರು ಎಂದು ಸಮರ್ಥಿಸುತ್ತಾರೆ. 'ಹೆಗಲಕಂಬಳಿ ಕಲ್ಲಿ ಹಾಗೂ ಗೋವಳಿಗೋಲು ಅವರ ಮುಖ್ಯ ಸಾಧನಗಳು. ಕಾಡುಗೊಲ್ಲರು ಗೋವುಗಳ ಹಿಂಡನ್ನು ಮೇಯಿಸಲು ಹೋಗುವಾಗ ಕಂಬಳಿ, ಕಲ್ಲಿಯಲ್ಲಿ ಬುತ್ತಿ ಮತ್ತು ಕೋಲನ್ನು ಹಿಡಿದುಕೊಂಡು ಹೋಗುತ್ತಿದ್ದರು. ಬಸವರಾಜದೇವರ ರಗಳೆ ಯ ಈ ಸಾಲಿನಿಂದ ನಮಗೆ ಸ್ಪಷ್ಟನೆ ಸಿಗುತ್ತದೆ. ಅಧ್ಯಯನ ಸಂದರ್ಭದಲ್ಲಿ ಕ್ಷೇತ್ರಕಾರ್ಯಕ್ಕೆ

ಹೋದಾಗ ಅವರು ಹೇಳುವುದೆಂದರ ನಾವು ಕಳ್ಳಿಗೊಲ್ಲರು ಅಲ್ಲ. ನಾವು ಹಟ್ಟಿಗೊಲ್ಲರು ಎನ್ನುವ ಮಾತನ್ನುಹೇಳುತ್ತಾರೆ. ಕೂಡ್ಲಿಗಿ ತಾಲ್ಲೂಕು ಬೆಳ್ಳಿಗಟ್ಟ ಹಳ್ಳಿಯಲ್ಲಿಯ ಸಿರಿಯಣ್ಣ ಕುರಿಹಿಂಡನ್ನು ಮೇಯಿಸಲು ಹೋಗುವಾಗ ಹೆಗಲಿಗೆ ಹಾಕಿಕೊಂಡಿದ್ದನ್ನು ನೋಡಿ ಕೇಳಿದರೆ ಇದು ಕಲ್ಲಿ ಬುತ್ತಿ ಹೊಯ್ಯುವುದು ಎಂದು ಹೇಳುತ್ತಾರೆ. ಹಾಗಾಗಿ ಕಾಡುಗೊಲ್ಲರಿಗೆ ಕಳ್ಳಿ ಹಟ್ಟಿಯ ರಕ್ಷಣೆಗಾದರೆ, ಕಲ್ಲಿ ಬುತ್ತಿಯನ್ನು ಕೊಂಡೊಯ್ಯುವ ಸರಳವಾದ ಸಾಧನ ಎಂಬುದಾಗಿ ನನಗೆ ಸ್ಪಷ್ಟವಾಗುತ್ತದೆ.

ಎ.ಎ.ಡಿ. ಲೂಯಿಸ್ ರವರ Tribes of Mysore ಎಂಬ ಕೃತಿಯಲ್ಲಿ ಮೈಸೂರು ರಾಜ್ಯದ ಇಪ್ಪತ್ತೇಳು ಬುಡಕಟ್ಟುಗಳ ಬಗ್ಗೆ ವಿವರ ನೀಡುತ್ತಾರೆ. ಆ ಬುಡಕಟ್ಟುಗಳಲ್ಲಿ'ಕಾಡುಗೊಲ್ಲ'ರ ಬಗ್ಗೆಯೂ ವಿವರ ನೀಡುತ್ತಾರೆ. ಆದರಲ್ಲಿ ಸ್ಪಷ್ಟವಾಗಿ ಬುಡಕಟ್ಟು ಎಂದೇ ಪರಿಗಣಿಸಿದ್ದಾರೆ. ಕಾಡುಗೊಲ್ಲರಿಗೆ ವಿಶಿಷ್ಟವಾದ ಸಂಸ್ಕೃತಿ ಇದೆ ಎಂದು ಹೇಳುತ್ತಾರೆ. ಅವರು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿದ್ದು ಹೆಚ್ಚಿನ ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕೆಂದು ಲೂಯಿಜ್ ಹೇಳಿರುವುದನ್ನು ತೀ.ನಂ.ಶಂಕರನಾರಯಣ ರವರು ತಮ್ಮ ಪ್ರಬಂಧವಾದ ಕಾಡುಗೊಲ್ಲರ ಸಂಪ್ರದಾಯಗಳು ಹಾಗು ನಂಬಿಕೆಗಳು, ಎಂಬ ಪ್ರಬಂಧದಲ್ಲಿ ಸಮರ್ಥಿಸಿದ್ದಾರೆ. ಕಾಡುಗೊಲ್ಲರು ಎಂಬುದಕ್ಕೆ ಮತ್ತೊಂದು ಸಮರ್ಥನೆಯನ್ನು ಕಾಡುಗೊಲ್ಲರ ಕಾವ್ಯಗಳಲ್ಲಿ ಗುರುತಿಸಬಹುದು. 'ಎತ್ತಪ್ಪನ ಕಥೆಯಲ್ಲಿ ಬರುವ ಸನ್ನಿವೇಶದಲ್ಲಿ ಗುಡ್ಡದ ಬೋರಿಎನ್ನುವ ಬೇಡರ ಹೆಣ್ಣು ಎತ್ತಪ್ಪನನ್ನು ಭೋಗ ಕೇಳುತ್ತಾಳೆ. ಆಗ ಎತ್ತಯ್ಯ ಹೇಳುವ ಮಾತೆಂದರೆ.

ಅಡವಿಯ ಗೊಲ್ಲಾಗೆ ಬೆಡಗಿನ ಸೂಳ್ಯಾಕೆ
ಹಡೆದಮ್ಮ ಕಂಡರೆ ಬಯ್ದಾಳು ಬೋರಮ್ಮ
ನೀನೋಗೆ ನಿನ್ನರಮನೆಗೆ ಎಂದು ಹೇಳುತ್ತಾನೆ
ಅದಕ್ಕೆ ಗುಡ್ಡದ ಬೋರಿ
ಕಾಡುನೆಲ್ಲಿ ಸೊಪ್ಪು ಕೋಡಿಕ್ಕಿ ಉರಿದುಂಬ
ಕಾಡು ಬ್ಯಾಡರಿಗೆಲ್ಲೆ ಕುಲವಯ್ಯೋ ಗೊಲ್ಲಗೌಡ
ನಾನು ನಿನ್ನೀಗೆ ಸ್ತಿಯಾಳು. ಎನ್ನುತ್ತಾಳೆ ಗುಡ್ಡದ ಬೋರಿ'[೧೦].

ಮೇಲಿನ ಕಾವ್ಯದಲ್ಲಿನ ಸಾಲುಗಳಲ್ಲಿ ಅಡವಿಯಗೊಲ್ಲ ಎಂಬುದು ಕಾಡುಗೊಲ್ಲ ಎಂಬುದನ್ನು ಸೂಚಿಸುತ್ತದೆಯೇ ಹೊರತು ಮತ್ತೇನು ಅಲ್ಲ ಎಂಬುದು ಸ್ಪಷ್ಟವಾಗಿದೆ.

ಗೊಲ್ಲರಲ್ಲಿ ಎರಡು ಪಂಗಡಗಳನ್ನು ಗುರುತಿಸಬಹುದೆಂದು ಕೆ.ಎಸ್.ಸಿಂಗ್‌ರವರು ಹೇಳಿದ್ದಾರೆ. There are two major social divisions or groups among the golla. Namely ooru golla and kadu golla. Among the golla there is no Intermarrige between the kadu gollas and ooru gollas. ಗೊಲ್ಲರ ಎರಡು ಪಂಗಡಗಳನ್ನು ಗಮನಿಸಿದರೆ ವಿಕಾಸಕ್ರಮದಲ್ಲಿ ಶಿಕ್ಷಣ ಪಡೆದವರು, ಕೃಷಿಯಲ್ಲಿ ಮುಂದುವರೆದವರು ಸ್ವಲ್ಪಮಟ್ಟಿಗೆ ಊರು, ಗ್ರಾಮಗಳೊಂದಿಗೆ, ನಗರ ಸಮುದಾಯಗಳೊಟ್ಟಿಗೆ

ಮಿಳಿತಗೊಂಡು ಊರುಗೊಲ್ಲರಾಗಿದ್ದಾರೆ. ತಮ್ಮ ದನಕರುಗಳೇ ನಮ್ಮ ಸರ್ವಸ್ವ ಎಂದು ನಂಬಿಕೊಂಡು ಕಾಡುಗಳಲ್ಲಿಯೇ ಉಳಿದರು. ಹಾಗಾಗಿ ಅವರು ಕಾಡುಗೊಲ್ಲರು ಅಥವಾ ಅಡವಿಗೊಲ್ಲರೆನಿಸಿದರು.

ಕಾಡುಗೊಲ್ಲ ಪದದ ವಿಶ್ಲೇಷಣೆಯನ್ನು ಎಂ.ಗುರುಲಿಂಗಯ್ಯ ಮತ್ತು ನಾಗಪ್ಪ ಇವರು ತಮ್ಮ ಕೃತಿಯಾದ 'ಕಾಡುಗೊಲ್ಲ' ಎಂಬುದರಲ್ಲಿ ಕಾಡು ಎಂದರೆ 'ಅಡವಿ''ಕಾನನ' ಎಂದು, ಗೊಲ್ಲ ಎಂದರೆ 'ಗೋವುಗಳನ್ನು ದನಕರುಗಳನ್ನು ಕಾಯುವವನು' ಎಂಬರ್ಥದಲ್ಲಿ ಕಾಡುಗೊಲ್ಲ ಎಂದು ಬಳಸಿದ್ದಾರೆ. ತಾವು ವಾಸಿಸುವ ಸ್ಥಳಗಳಲ್ಲಿ ತಮ್ಮದೇ ಆದ ನೆಲೆಗಳನ್ನು ಅಥವಾ ಹಟ್ಟಿಗಳನ್ನು ರಚಿಸಿಕೊಂಡು ವಾಸಿಸಲು ಪ್ರಾರಂಭಿಸಿದ್ದರಿಂದ ಇವರನ್ನು 'ಹಟ್ಟಿಗೊಲ್ಲರು' ಅಥವಾ ಕಾಡುಗೊಲ್ಲರು ಎಂದು ಕರೆಯುತ್ತಾರೆ. ಅವರು ವಾಸಿಸುವ ಹಟ್ಟಿಗಳನ್ನು ಗೊಲ್ಲರಹಟ್ಟಿ ಅಥವಾ ಕಾಡುಗೊಲ್ಲರ ಹಟ್ಟಿ ಎಂದು ಕರೆಯುತ್ತಾರೆ. ಅವರು ವಾಸಿಸುವ ಹಟ್ಟಿಗಳನ್ನು ಗೊಲ್ಲರಹಟ್ಟಿ ಎಂದು ಕರೆಯುವ ವಾಡಿಕೆ ಇದೆ ಎಂಬುದಾಗಿ ವಿಶ್ಲೇಷಿಸುತ್ತಾರೆ.

ಕ್ಯಾತಪ್ಪ ಮತ್ತು ಎತ್ತಪ್ಪನ ಕಾವ್ಯದೊಳಗೆ ಬರುವ ಗೊಲ್ಲರೆ ಅಭಿವ್ಯಕ್ತಗೊಳಿಸುವ ಅಡವಿಗೊಲ್ಲ ಹಟ್ಟಿಗೊಲ್ಲ ಎಂಬ ಪದಬಳಕೆ ಮೇಲಿನ ಅಭಿಪ್ರಾಯವನ್ನು ಮತ್ತಷ್ಟು ಪುಷ್ಟಿಕರಿಸುವುದು. ಗೊಲ್ಲರು ಮೂಲತಃ ಪಶುಪಾಲಕರಾಗಿದ್ದರಿಂದ ಅವರನ್ನು ಸಂಸ್ಕೃತದಲ್ಲಿ ಗೋಪಾಲ, ಗೋಪಿ ಎಂದು ಕರೆಯಲಾಗುತ್ತಿತ್ತು.ನಂತರ ಸಂಸ್ಕೃತದ ಗೋಪಾಲ. ಪ್ರಾಕೃತದಲ್ಲಿ ಗೋವಾಲಿಯಾಗಿ ನಂತರ ಕನ್ನಡದಲ್ಲಿ 'ಗೋವಳ'ನೆಂದು ರೂಪಾಂತರ ಹೊಂದಿದೆ. ಇದೇ ಮುಂದೆ ಗವಳಿ, ಗೌಳಿ, ಗೊಲ್ಲ ಎಂದು ವಿಕಾಸ ಹೊಂದಿರುವುದಾಗಿ ನಿಘಂಟುಕಾರರ ಅಭಿಮತವಾಗಿದೆ.

'ಗೊಲ್ಲ ಎಂಬ ಶಬ್ದಕ್ಕೆ ಕನ್ನಡ ಸಾಹಿತ್ಯಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಸರಾಫನ (ಖಜಾನೆಯ) ಹಣದ ಚೀಲ ಒಯ್ಯುವ ಸೇವಕ, ದನಕಾಯುವವ, ಒಂದು ದೇಶದ ಹೆಸರು–ಹೀಗೆ ಮೂರು ಭಿನ್ನವಾದ ಅರ್ಥಗಳನ್ನು ಹೇಳಲಾಗಿದೆ. ಕನ್ನಡ ಸಾಹಿತ್ಯಪರಿಷತ್ತಿನ ನಿಘಂಟಿನಲ್ಲಿ ಪ್ರಾಚೀನ ಕಾಲದಲ್ಲಿ ಗೊಲ್ಲರನ್ನು ತುರುಕಾರರೆಂದೂ. ಗೊಲ್ಲ ಹೆಂಗಸರನ್ನು ತುರುಕಾರ್ತಿ, ಗೊಲ್ಲರಹಳ್ಳಿಗಳನ್ನು ತುರುಗಾರಪಳ್ಳಿ, ಗೊಲ್ಲರಹಟ್ಟಿಗಳನ್ನು ತುರುಪಟ್ಟಿ ಎಂಬರ್ಥಗಳನ್ನು ನೀಡಲಾಗಿದೆ'[೧]. ಕಾಲಿಕಾಪ್ರಸಾದ್ ಸಂಪಾದನೆಯ ಬೃಹತ್ ಹಿಂದಿಕೋಶದಲ್ಲಿ ಗೊಲ್ಲರನ್ನು ಹಿಂದಿ ಭಾಷೆಯಲ್ಲಿ ಗ್ವಾಲಾ, ಅಬೀರ್, ಅಹೀರ್ ಎಂದು ಅರ್ಥೈಸಲಾಗಿದ್ದು, ಗೊಲ್ಲರಹಳ್ಳಿಗಳನ್ನು ಅಭೀರ್‌ಪಲ್ಲೀ. ಅಭೀರ್‌ಪಲ್ಲಿಕ್ ಎಂದೂ ಗೊಲ್ಲರ ಹಾಡುಗಳನ್ನು 'ಗ್ವಾಲ್ ಗೀತ್' ಎಂತಲೂ ಕರೆಯಲಾಗಿದೆ.

ಭಾರತದಾದ್ಯಂತ ನೆಲೆಗೊಂಡಿರುವ ಸಮುದಾಯಗಳಲ್ಲಿ ಗೊಲ್ಲ ಸಮುದಾಯವು ಒಂದಾಗಿದೆ. 'ಪಶುಪಾಲನೆಯನ್ನೆ ಪ್ರಧಾನ ವೃತ್ತಿಯಾಗಿಸಿಕೊಂಡು ಕಾಡಡವಿಯಲ್ಲಿ ಬದುಕನ್ನು ಕಟ್ಟಿಕೊಂಡಿರುವ ಈ ಬುಡಕಟ್ಟನ್ನು ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಗೌಳಿ, ಮಣಿಯಾಣಿ, ಗೋವಳ, ಗೋಪ, ತುರುಕಾರ ಅಹಿರ್, ಇಡೆಯಾಸ್. ಕೋನಾರ್, ಗೂರ್ಜರ್, ರೆಡ್ಡಿ ಮುಂತಾದ ಹೆಸರುಗಳಿಂದ ಕರೆಯುವ ವಾಡಿಕೆಯಿದ್ದು, ಇತ್ತೀಚೆಗೆ ಭಾರತದಾದ್ಯಂತ ಯಾದವರೆಂದು ಗುರುತಿಸಲಾಗುತ್ತಿದೆ'[೨]

ಕರ್ನಾಟಕದಲ್ಲಿ ಗೊಲ್ಲರನ್ನು ಅಡವಿಗೊಲ್ಲ, ಹಟ್ಟಿಗೊಲ್ಲ, ಕಾಡುಗೊಲ್ಲ, ಊರುಗೊಲ್ಲರೆಂದು ವಿದ್ವಾಂಸರು ವಿಂಗಡಿಸಿದ್ದಾರೆ. ಆದರೆ ಅಡವಿ, ಕಾಡು, ಹಟ್ಟಿ-ಕಾಡುಗೊಲ್ಲರು ವಿಭಿನ್ನ ಹೆಸರಿನ ಒಂದೇ ಮೂಲದವರೆಂದು ಅಧ್ಯಯನಗಳಿಂದ ಕಂಡುಬರುತ್ತದೆ. ಒಟ್ಟಾರೆಯಾಗಿ ಕಾಡುಗೊಲ್ಲರು ವಾಸಿಸುವ ಪ್ರದೇಶ ಮತ್ತು ಅವರ ವೃತ್ತಿ ಪಶುಪಾಲನೆಯಾಗಿದೆ. ಗೊಲ್ಲರ ಮೂಲ ಪುರುಷರಾದ ಎತ್ತಪ್ಪ ಜುಂಜಪ್ಪನ ಮೌಖಿಕ ಕಾವ್ಯಗಳಲ್ಲಿ ಅವರು ಬಾಳಿ ಬದುಕಿದ ರೀತಿ ನೀತಿಗಳನ್ನು ಕಾಣಬಹುದು. ಅದರಲ್ಲಿ ಅವರು ಅರಣ್ಯ ಸಂಸ್ಕೃತಿಯನ್ನು ರೂಢಿಸಿಕೊಂಡಿರುವಂತೆ. ಕಾಣುತ್ತದೆ. ಆದ್ದರಿಂದ ಅವರನ್ನು ಕಾಡುಗೊಲ್ಲರು ಅಥವಾ ಅಡವಿಗೊಲ್ಲರು ಎಂದು ಪರಿಭಾವಿಸುವುದು ಸೂಕ್ತವಾದುದಾಗಿದೆ.

**ಮ್ಯಾಸಬೇಡ ಪದದ ಹುಟ್ಟು:**

ಕರ್ನಾಟಕದಾದ್ಯಂತ ವಾಸವಾಗಿರುವ ಮ್ಯಾಸಬೇಡರ ಬಗ್ಗೆ ಹಲವಾರು ವಿದ್ವಾಂಸರು ಅಧ್ಯಯನ ಮಾಡಿದ್ದು ಹಲವಾರು ಹೆಸರುಗಳಿಂದ ಗುರುತಿಸಿದ್ದಾರೆ. ಮ್ಯಾಸಬೇಡರು ಮತ್ತು ಕಾಡುಗೊಲ್ಲರು ಮೂಲತಃ ಕಾಡಾಡಿ ಬದುಕಿನೊಂದಿಗೆ ಬೆಳೆದವರು. ಕಾಡಿನಲ್ಲೆ ಹುಟ್ಟಿ ಕಾಡಿನಲ್ಲೆ ಬೆಳೆದ ಸಮುದಾಯಗಳವು. ಕಾಡಿನೊಟ್ಟಿಗೆ ಅವಿನಾಭಾವ ಸಂಬಂಧವನ್ನು ಹೊಂದಿದ್ದು ತಮ್ಮ ಜೀವನ ಕ್ರಮವನ್ನು ವಿಕಸಿಸಿಕೊಂಡಂತಹ ಸಮುದಾಯಗಳು. ಇಂದಿಗೂ ಮ್ಯಾಸಬೇಡರು ಕಾಡಿನ ಅಂಚಿನಲ್ಲಿ ಊರುಗಳಿಗೆ ಹತ್ತಿರದಲ್ಲಿ ಹಟ್ಟಿಗಳನ್ನು ಕಟ್ಟಿಕೊಂಡು ವಾಸಮಾಡುತ್ತಾರೆ. ಮಾನವನ ಸಾಮಾಜಿಕ ಜೀವನದ ವಿಕಾಸದಲ್ಲಿ ಹಂತ ಹಂತವಾಗಿ ಮೇಲೇರಿದ್ದನ್ನು ಚರಿತ್ರೆಯ ಅಧ್ಯಯನದಿಂದ ತಿಳಿಯಬಹುದು. ಮ್ಯಾಸಬೇಡರು ಬೇಟೆ ಹಂತದಿಂದ ಪಶುಪಾಲನೆ, ಕೃಷಿ ಹಂತಕ್ಕೆ ತಲುಪಲು ಹಲವು ವರ್ಷಗಳೇ ಬೇಕಾದವು. ಯಾವುದೇ ಬುಡಕಟ್ಟು ಸಮುದಾಯವು ತಾವು ಮಾಡುವ ವೃತ್ತಿಯೊಂದಿಗೆ ಗುರುತಿಸಿಕೊಳ್ಳುತ್ತದೆ. ಆ ಹಿನ್ನೆಲೆಯಿಂದಲೇ. ಬುಡಕಟ್ಟು ಸಮುದಾಯವನ್ನು ಹೆಸರಿಸಿದಂತೆ ಗೋಚರವಾಗುತ್ತದೆ. ವೃತ್ತಿಯಾಧಾರಿತ ಸಿದ್ಧಾಂತದ ಪ್ರತಿಪಾದಕರಾದ ನೆಸ್‌ಫೀಲ್ಡ್‌ರವರು ವ್ಯಕ್ತಿಯು ಮಾಡುವ ವೃತ್ತಿಯಿಂದಾಗಿಯೇ ಜಾತಿ ಹುಟ್ಟುಕೊಂಡಿದೆ ಎಂಬುದಾಗಿ ತಿಳಿಸುತ್ತಾರೆ. ಮ್ಯಾಸಬೇಡಪದ ನಿಷ್ಪತ್ತಿಯ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಮೂಲತಃ ಕಾಡಿನಲ್ಲಿ ವಾಸವಾಗಿದ್ದುಕೊಂಡು ಆದಿಮ ಹಂತದಲ್ಲಿ ಆಹಾರಕ್ಕಾಗಿ ಬೇಟೆಯ ವೃತ್ತಿಯಿಂದ ಬದುಕುವ ಜನಾಂಗವನ್ನು ಬೇಡರು ಎಂದು ಕರೆಯಾಲಾಗಿದೆ.

'ನಾಯಕ ಜನಾಂಗವನ್ನು The Bedas are an aboriginal tribe of the telugu and canarese districts ಎಂದು ಗುರುತಿಸಿದೆ. 'Beda' ಎಂಬುದು "A Corruption of the Sanskrit word vyadha". ಬೇಡ ಎಂಬ ಪದವು 'ವ್ಯಾಧ' ಎಂಬ ಸಂಸ್ಕೃತ ಪದದ ಸಮಾನಾರ್ಥವಾಗಿದೆ'[೨]. ಬೇಡ ಅಥವಾ ವ್ಯಾಧ ಎಂದರೆ ಬೇಟೆಗಾರ, ಬಿಲ್ಲುಗಾರ, ಶಬರ ಕಿರಾತ, ನಿಷಾದ, ಪುಳಿಂದ ಮೊದಲಾದ ಅರ್ಥಗಳಿವೆ.

'ಬೇಡ' ಶಬ್ದದ ಮುಂದೆಸೇರಿರುವ ಮ್ಯಾಸ ಎಂಬ ಪದವು ಪಶುಗಳನ್ನು ಮೇಯಿಸುವ ವೃತ್ತಿಯಿಂದಲೇ ಬಂದಿರಬೇಕೆಂಬುದನ್ನು ಸೂಚಿಸುತ್ತದೆ. ಪಶುಗಳನ್ನು 'ಮೇಯಿಸಿ' ಈ ಶಬ್ದವೇ ಕ್ರಮೇಣ ಮೇಸು–ಮೈಸು–ಮ್ಯಾಸು–ಮ್ಯಾಸ ಎಂದು ರೂಪಾಂತರಗೊಂಡಂತೆ ಕಾಣುತ್ತದೆಹಾಗಾಗಿ ಬೇಟೆ ಮತ್ತು ಪಶುಪಾಲನೆ ಎರಡು ವೃತ್ತಿಗಳನ್ನು ಹೊಂದಿದ್ದುದ್ದರ ಸಂಕೇತವಾಗಿ ಮ್ಯಾಸಬೇಡ ಎಂಬ ಪದ ಉತ್ಪತ್ತಿಯಾಗಿದೆ. ಮ್ಯಾಸಬೇಡರು ಹುಲ್ಲು ನೀರಿಗಾಗಿ ತಮ್ಮ ದನಗಳನ್ನು ಮೇಯಿಸಲು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುತ್ತಿದ್ದುದರಿಂದ ಅವರು ದನಗಳನ್ನು ಮೇಸೋರು. ಮ್ಯಾಸರು ಆಗಿದ್ದಿರುವಂತೆ ತೋರುತ್ತದೆ. ಬೇಡರಲ್ಲಿ ಕೆಲವರು ರಾಜಕೀಯವಾಗಿ ನಾಯಕ, ಪಾಳೆಯಗಾರ, ಮಾಂಡಲಿಕ, ದೊರೆ, ಗುರಿಕಾರ, ತಳವಾರ, ಸುಬೇದಾರ ಮುಂತಾದ ಸ್ಥಾನಗಳನ್ನು ಪಡೆದು ಜೀವನ ಕ್ರಮಿಸಿದ್ದಾರೆ. ಇನ್ನು ಕೆಲವರು ಕಾಡಿನಲ್ಲೊ, ಕಾಡಿನಂಚಿನಲ್ಲೊ ಜೀವನ ನಡೆಸಲು ಆರಂಭಿಸಿದರು. ಕಾಡಿನಲ್ಲಿ ಉಳಿದು ಕೊಂಡವರು ಬೇಟೆ ಪಶುಪಾಲನೆಯಂತಹ ವೃತ್ತಿಗಳನ್ನೆ ಮುಂದುವರಿಸಿದರು. ಅಲ್ಲದೆ ನಾಗರಿಕತೆಯ ಊರು, ಗ್ರಾಮ, ನಗರಗಳಿಂದ ದೂರ ಉಳಿದರು. ಹೀಗೆ ಕಾಡು ಅಥವಾ ಅರಣ್ಯ ಸಂಸ್ಕೃತಿಯಲ್ಲಿ ಬೆಳೆದವರು ಮ್ಯಾಸ ಬೇಡರು ಆಗಿರಬೇಕು. ಊರಿನಲ್ಲಿ ವಾಸಿಸುವವರು ಊರುಬೇಡರು ಅಥವಾ ಊರುನಾಯಕರು ಆಗಿರಬೇಕೆನಿಸುತ್ತದೆ. ಅದರೆ ಚಿತ್ರದುರ್ಗ ಜಿಲ್ಲೆಯಾದ್ಯಂತ ಕಾಡು ಮತ್ತು ಬೇಡನ ನಂಟು ಉಳಿದುಕೊಂಡು ಬಂದಿದ್ದು. ಜಿಲ್ಲೆಯಾದ್ಯಾಂತ ಇವರು ಮ್ಯಾಸನಾಯಕರು, ಮ್ಯಾಸಬೇಡರು ಎಂದು ಕರೆಯುವ ವಾಡಿಕೆಯೇ ಹೆಚ್ಚಾಗಿದೆ. ಮ್ಯಾಸಬೇಡರ ರಾಜಾಳ್ವಿಕೆ ಇಂದು ಇಲ್ಲದಿದ್ದರೂ ಕೃಷಿಗೆ ಹೊಂದಿಕೊಂಡಂತೆ ತಮ್ಮ ಬುಡಕಟ್ಟು ಸಂಸ್ಕೃತಿಯನ್ನು ಉಳಿಸಿಕೊಳ್ಳುವುದರೊಟ್ಟಿಗೆ ಇಂದು ಸಹ ಕುರಿ, ಮೇಕೆ, ದನಗಳೊಟ್ಟಿಗೆ ವಾಸಿಸುತ್ತಿದ್ದು ರೊಪ್ಪ ಸಂಸ್ಕೃತಿಯನ್ನು ರೂಢಿಸಿಕೊಂಡಿದ್ದಾರೆ. ಬೇಟೆಯನ್ನು ಸಾಂಕೇತಿಕವಾಗಿ ಉಳಿಸಿಕೊಂಡಿದ್ದಾರೆ. ಪಶುಪಾಲನೆಯು ತಮ್ಮ ಜೀವನದ ಅವಿಭಾಜ್ಯ ಅಂಗವಾಗಿ ಹೊಂದಿರುವುದು ಕಂಡುಬರುತ್ತದೆ.ಹೀಗೆ ಮ್ಯಾಸಬೇಡರು ಕಾಲಾಂತರದಲ್ಲಿ ಹಲವಾರು ಹುದ್ದೆಗಳಿಗೆ ಏರಿದ್ದರು, ಸೈನಿಕರಾಗಿ ತಳವಾರರಾಗಿ ಮೀಸಲು ಪಡೆಯವರಾಗಿದ್ದರೂ ಸಹ ಸೈನಿಕ ವೃತ್ತಿಗಿಂತ ಹೆಚ್ಚಾಗಿ ಬೇಟೆ ಮತ್ತು ಪಶುಪಾಲನೆಯನ್ನೆ ಮೂಲ ವೃತ್ತಿಯನ್ನಾಗಿಸಿಕೊಂಡಿದ್ದರು.ಅವರು ತಮ್ಮನ್ನು 'ಮ್ಯಾಸಬೇಡ'ರೆಂಬುದಾಗಿ ಗುರುತಿಸಿಕೊಂಡಂತೆ ತೋರುತ್ತದೆ.

**ಕಾಡುಗೊಲ್ಲರ ಕುಲ ಹಾಗೂ ಬೆಡಗುಗಳು :**

ಜನಾಂಗ, ಜಾತಿಗಳಲ್ಲಿ ಕುಲ ಬೆಡಗುಗಳು ತುಂಬಾ ಮಹತ್ವವಾದವು. ಏಕೆಂದರೆ ಜನಾಂಗದ ಮುಂದುವರಿಕೆಗೆ ಸಂತಾನೋತ್ಪತ್ತಿಯ ಬೆಳವಣಿಗೆಗೆ ಬೇಕಾದ ವಿವಾಹವನ್ನು ಹೊಂದುವಲ್ಲಿ ಕೆಲವು ನಿಯಮಗಳಿವೆ. ಸಂಸ್ಕಾರಗಳಲ್ಲಿ ಪಾಲ್ಗೊಳ್ಳುವಲ್ಲಿ ಯಾರು, ಯಾರೊಂದಿಗೆ ಕಲೆಯುತ್ತಾರೆ, ಯಾರು ಯಾರೊಟ್ಟಿಗೆ ಕೊಡುಕೊಳೆಯನ್ನು ಹೊಂದಬಹುದು ಎಂಬುದನ್ನು ಕುಲ ಮತ್ತು ಬೆಡಗುಗಳನ್ನಾಧರಿಸಿ ಸಾಂಪ್ರದಾಯಿಕವಾಗಿ ಮಾಡುತ್ತಾರೆ.ಅವರು ವಿವಾಹ, ಜಾತ್ರೆ, ಹಬ್ಬಗಳು, ಆಚರಣೆಗಳು ಕಟ್ಟುನಿಟ್ಟಾಗಿ ವಿಧಿಬದ್ಧವಾಗಿ ಅಧಿಕಾರಯುತವಾಗಿ ಕಾರ್ಯಗಳನ್ನು ನಿರ್ವಹಿಸುತ್ತಾರೆ. ಕಾಡುಗೊಲ್ಲ ಮತ್ತು

ಮ್ಯಾಸಬೇಡರಲ್ಲಿ ಕುಲ ಮತ್ತು ಬೆಡಗುಗಳಿಗೆ ಮಹತ್ವಕೊಟ್ಟು ನಡೆದುಕೊಳ್ಳುತ್ತಾರೆ. ಕುಲ, ಬೆಡಗುಗಳಿಂದ ಯಾರು ಯಾರೊಂದಿಗೆ ಅಣ್ಣ ತಮ್ಮಂದಿರು, ಯಾರು ನೆಂಟರಿಷ್ಟರಾಗುತ್ತಾರೆಂಬುದನ್ನು ತಿಳಿದುಕೊಳ್ಳಲು, ಕುಲಗಳು, ಉಪವರ್ಗಗಳು ಅಥವಾ ಬೆಡಗುಗಳು ಮುಖ್ಯವಾಗಿ ಕಾರಣವಾಗುತ್ತವೆ. ಕಾಡುಗೊಲ್ಲರ ಪ್ರತಿಯೊಂದು ಕುಲಪಂಗಡಗಳು ತಮ್ಮದೆ ಆದ ಐತಿಹ್ಯವನ್ನು ಗುರುತಿಸಿಕೊಂಡಿರುತ್ತವೆ. ತಮ್ಮ ಕುಲದ ಮೂಲದ ಬಗ್ಗೆ ಕಥೆ ಅಥವಾ ಐತಿಹ್ಯಗಳನ್ನು ಹಲವಾರು ಸಂಶೋಧಕರು ಗುರುತಿಸಿರುವುದು ಕಂಡುಬರುತ್ತದೆ.

**ಕಾಡುಗೊಲ್ಲರ ಕುಲ ಮತ್ತು ಬೆಡಗುಗಳು :**

| **ಕರಿಯೋಬೇನಹಳ್ಳಿಕಟ್ಟೆಮನೆ ಚಿತ್ತಮುತ್ತಿ ಕುಲದವರು** | **ತಾಳವಟ್ಟ ಕಟ್ಟೆಮನೆ ಚಂದಮುತ್ತಿ ಕುಲದವರು** | **ರಾಮೇನಹಳ್ಳಿಕಟ್ಟೆಮನೆ. ರಾಮೆಗೌಡನ ಕುಲದವರು** |
|---|---|---|
| ಕರಡಿ ಗೊಲ್ಲರು | ಚಂದನೋರು | ಅರೇನವರ ಗೊಲ್ಲರು |
| ಮಾರಮುತ್ತಿ | ಅಜ್ಜೋರು | ಮರೇನವರ ಗೊಲ್ಲರು |
| – | ಪೋಲನೋರು | ಕಂಬಿಯವರ ಗೊಲ್ಲರು |
| | ಸೋಮನೋರು | ಒಡೆಯವರ ಗೊಲ್ಲರು |
| | ಬೊಮ್ಮನೊರು | ಒನಕೆಯವರ ಗೊಲ್ಲರು |
| | ಕೋಣನೋರು | ಮಾಸಿನವರ ಗೊಲ್ಲರು |
| | ಕಟ್ಟಿಗೇರು | ಕಹಳೆಯವರ ಗೊಲ್ಲರು |
| | ಉಪ್ಪುಗೊಳ್ಳೋರು | ಚೀರನೋರು ಗೊಲ್ಲರು |
| | ಸಜ್ಜೇರು | ಬೆಳ್ಳೋರ ಗೊಲ್ಲರು |
| | ದೇವರೋರು | ಬೆಳ್ಳೂರವರು |
| | ಮುದ್ದೇರು | – |
| | ಹುಲ್ಲೋರೇರು | – |
| | ಭೂಮಪ್ಪಗಳು | – |
| | ಯಗಡಿನವರು | – |
| | ಅರಸಿನಕಲ್ಲಿ ಗೊಲ್ಲರು | – |
| | ಅಬ್ಬಿಗೊಳ್ಳೋರು | – |
| | ಸನ್ನೋರುಗೊಲ್ಲರು | – |

ಮೇಲಿನ ಮೂರು ಕುಲಗಳಲ್ಲಿ ಎಲ್ಲಾರೊಂದಿಗೆ ವಿವಾಹವಾಗಲು ಬರುವುದಿಲ್ಲ. ಚಂದಮತ್ತಿ ಕುಲದವರು, ರಾಮೇಗೌಡನ ಕುಲದ ಬೆಡಗಿನ ಜನರು ವಿವಾಹ ಸಂಬಂಧವನ್ನು ಬೆಳೆಸುವ ಹಾಗಿಲ್ಲ. ಏಕೆಂದರೆ ಅವರ ಪ್ರಕಾರ ಎರಡು ಕುಲದವರು ಅಣ್ಣತಮ್ಮಂದಿರಾಗುತ್ತಾರೆ. ಆದರೆ ಈ

ಎರಡು ಕುಲದವರು ಚಿತ್ತಮುತ್ತಿ ಕುಲದಲ್ಲಿ ಬರುವ ಕರಡಿಗೊಲ್ಲ ಪಂಗಡದೊಡನೆ ವಿವಾಹ ಸಂಬಂಧ ಬೆಳೆಸಬಹುದಾಗಿದೆ. ಹಾಗೆಯೆ ಕರಡಿಗೊಲ್ಲರು ಚಂದಮುತ್ತಿ ಮತ್ತು ರಾಮೇಗೌಡನ ಕುಲದಲ್ಲಿ ವಿವಾಹವಾಗಬಹುದು.

ಕರಡಿಗೊಲ್ಲರಲ್ಲಿ ಬರುವ ಎರಡು ಪಂಗಡಗಳೆಂದರೆ ಚಿತ್ತಮುತ್ತಿ, ಮಾರಮುತ್ತಿ ಇಬ್ಬರೂ ಅಣ್ಣ ತಮ್ಮಂದಿರು, ಎರಡು ಪಂಗಡಗಳು ಕರಡಿಗೊಲ್ಲರಿಗೆ ಸೇರುತ್ತವೆ. ಚಿತ್ತಮುತ್ತಿಯನ್ನು ದಂಡಕ್ಕೆ ಒಳಗಾದವರು ಶ್ರೇಷ್ಠಕುಲದವರು, ಕುಲಛಲಕ್ಕೆ ತಪ್ಪದೇ ವಂಶದ ಗೌರವವನ್ನು ಉಳಿಸಿದೋರು, ತಾಳಿಕಟ್ಟದೋರು ಎನ್ನುತ್ತಾರೆ. ಮಾರಮುತ್ತಿ ಕುಲದವರು ತಾಳಿಕಟ್ಟೋರು ದಂಡಕ್ಕೆ ಹೊರಗಾದೋರು ಎನ್ನುತ್ತಾರೆ. ಹೀಗೆ ಒಂದೊಂದು ಪಂಗಡಕ್ಕೆ ಒಂದೊಂದು ಐತಿಹ್ಯವನ್ನು ಹೊಂದಿದ್ದು ಅವರದೇ ಆದ ದೇವರುಗಳನ್ನು ಆರಾಧಿಸುವುದು ಕಂಡುಬರುತ್ತದೆ. ಕೆಲವೊಮ್ಮೆ ಅವರವರಲ್ಲಿಯೇ ತರ್ಕ, ವಾದಗಳು ನಡೆದು ಉಪಪಂಗಡಗಳಾದಂತೆ ಕಾಣುತ್ತದೆ ಆದರೆ ಎಲ್ಲಾ ಗೊಲ್ಲರು ಜಾತ್ರೆ ಹಬ್ಬಗಳಲ್ಲಿ ಅವರವರ ಕರ್ತವ್ಯವನ್ನು ಹಂಚಿಕೊಂಡು ಅಧಿಕಾರಯುತವಾಗಿ ಎಂಬಂತೆ ಕೆಲಸ ಮಾಡುತ್ತಾರೆ, ನಿದರ್ಶನವೆಂದರೆ ಕ್ಯಾತಪ್ಪನ ಜಾತ್ರೆಯಲ್ಲಿ ಸೋಮನೋರಲ್ಲಿ ಬರುವ ಕೋಣನೋರು ಕಳಸ ಇಡ್ತಾರೆ, ಬೋಮ್ಮನೋರು ಗೊಲ್ಲರು ಕಳಸ ಕೀಳ್ತಾರೆ. ಒಟ್ಟಾರೆಯಾಗಿ ಕಾಡುಗೊಲ್ಲರಲ್ಲಿ ಕಟ್ಟೆಮನೆಗಳಿಗೆ ಹೊಂದಿಕೊಂಡಂತೆ ಮೂರು ಕಟ್ಟೆಮನೆಗಳಿಗೆ ಅನುಗುಣವಾಗಿ ಕುಲಗಳು ಅಥವಾ ಉಪಪಂಗಡಗಳು (ಬೆಡಗುಗಳು) ಕಂಡುಬರುತ್ತವೆ. ಕುಲಗಳು ಮತ್ತು ಉಪಪಂಗಡಗಳ ಬಗ್ಗೆ ಕಾಡು ಗೊಲ್ಲರ ಯಜಮಾನರಾದ ದೊಡ್ಡಮಲ್ಲಯ್ಯ ಮತ್ತು ಚನ್ನಮ್ಮನಾಗತಿಹಳ್ಳಿಯ ಓದೋ ಈರಜ್ಜನವರು ಕುಲದ ಮತ್ತು ಉಪಪಂಗಡಗಳ ಬಗ್ಗೆ ಈ ಇಬ್ಬರು ವಕ್ತೃಗಳು ಮಾಹಿತಿ ನೀಡಿರುತ್ತಾರೆ.

**ಮ್ಯಾಸ ಬೇಡರ ಬೆಡಗುಗಳು:**

ಕಾಡು ಗೊಲ್ಲರಂತೆಯೇ ಮ್ಯಾಸಬೇಡರಲ್ಲಿಯೂ ಬೆಡಗುಗಳಿವೆ. ಒಂದು ಜನಾಂಗ ಅಥವಾ ಜಾತಿ ಸಮುದಾಯದ ಸಂಬಂಧಗಳು ಗಟ್ಟಿಗೊಳ್ಳಬೇಕಾದರೆ ಬೆಡಗುಗಳು ತುಂಬಾ ಪ್ರಧಾನವಾದವು. ಬಹುತೇಕವಾಗಿ ಮ್ಯಾಸಬೇಡರಲ್ಲಿ ಬರುವ ಬೆಡಗುಗಳು ತೆಲುಗು ಭಾಷೆಯಲ್ಲಿವೆ. ಇದನ್ನು ಒರೆಹಚ್ಚಿ ನೋಡಿದರೆ ಮ್ಯಾಸಬೇಡರು ಆಂದ್ರಮೂಲದವರು ಎನ್ನುವುದಕ್ಕೆಪುಷ್ಟಿನೀಡುತ್ತದೆ. ಮ್ಯಾಸಬೇಡರಲ್ಲಿ ಬೆಡಗುಗಳು ತಮ್ಮ ಕುಲದ ಮೂಲದ ಸಾಂಸ್ಕೃತಿಕ ವೀರರ ಹೆಸರಿನ ಮೇಲೆ, ಪ್ರಾಣಿಗಳ ಹೆಸರಿನ ಮೇಲೆ ಇರುವುದು ಕಂಡುಬರುತ್ತದೆ. ಅವರಲ್ಲಿಯೂ ಬೆಡಗುಗಳಾನ್ನಾದರಿಸಿಯೇ ವಿವಾಹ ಸಂಬಂಧವೇರ್ಪಡಿಸುವುದು.

ಇಬ್ಬರು ಮ್ಯಾಸಬೇಡರು ಭೇಟಿಯಾದರೆ ಸಾಕು ಮೊದಲು ಬೆಡಗು ವಿಚಾರಿಸಿಕೊಳ್ಳುತ್ತಾರೆ. ಅದರಿಂದ ನಂಟಸ್ಥಿಕೆಯನ್ನು ಬೆಳೆಸುವುದರ ಬಗ್ಗೆ ತಿಳಿದುಕೊಳ್ಳುತ್ತಾರೆ. ಅಣ್ಣತಮ್ಮಂದಿರಾದರೇ ಮಾಮಾ ಇದ್ದಿರೂ ಅಣ್ಣತಮ್ಮಲು ಎನ್ನುತ್ತಾರೆ. ಒಂದೇ ಬೆಡಗಿನವರು ಅಣ್ಣತಮ್ಮಂದಿರಾಗುತ್ತಾರೆ. ಅವರಲ್ಲಿ ಕೊಡುಕೊಳೆ ನಿಷಿದ್ಧವಾಗಿರುತ್ತದೆ.

ಮ್ಯಾಸಬೇಡರಲ್ಲಿ ಸೂರ್ಯವಂಶದವರು ಮತ್ತು ಚಂದ್ರವಂಶದವರು ಎಂಬುದಾಗಿ ಪ್ರಧಾನವಾಗಿ ಎರಡು ಕುಲಗಳು ಕಂಡುಬರುತ್ತವೆ. ಒಂದೇ ಕುಲ ಮತ್ತು ಬೆಡಗುಗಳಲ್ಲಿ ವಿವಾಹವಾದರೆ ಹುಟ್ಟುವ ಮಗು ಸಹ ಆರೋಗ್ಯವಾಗಿರುವುದಿಲ್ಲ ಎಂಬುದು ಆಗಿನ ಕಾಲದ ಬುಡಕಟ್ಟುಗಳಲ್ಲಿಯೇ ಕಂಡುಕೊಂಡಿದ್ದನ್ನು ಆಧುನಿಕ ನಾಗರಿಕ ಸಮಾಜ ಪಾಲಿಸುತ್ತದೆ ಎಂಬಂತೆ ತೋರುತ್ತದೆ. ಯಾವುದೇ ಬುಡಕಟ್ಟು ಸಮುದಾಯದ ಪಾರಂಪರಿಕ ಜ್ಞಾನವನ್ನು ಆಧುನಿಕರು ಎರವಲು ಪಡೆದು ಸಾಮಾಜಿಕ ವ್ಯವಸ್ಥೆಯಲ್ಲಿ ಮುಂದುವರೆಸುತ್ತಿದ್ದಾರೆ.

## ಮ್ಯಾಸ ಬೇಡರ ಕುಲಗಳು ಮತ್ತು ಬೆಡಗುಗಳು

| ಕ್ರ.ಸಂ | ಸೂರ್ಯವಂಶದ ಮಲ್ಲಿನಾಯಕರ ಪಂಗಡದಲ್ಲಿನ ಉಪ ಬೆಡಗುಗಳು: | | | | |
|---|---|---|---|---|---|
| ೦೧ | ವಡೇಲೋರು | ೦೫ | ಪೇಯಿಲೋರು | ೦೯ | ಈಶ್ವರಲೋರು |
| ೦೨ | ಪೆದ್ದಾಳನಾಯಕನೋರು | ೦೬ | ಕಾಟಮಲ್ಲಿನಾಯಕನೋರು | ೧೦ | ರಾಯಬಲ್ಲೋರು |
| ೦೩ | ಬಂಗಾರನೋರು | ೦೭ | ಚಿನ್ನಕಾಟನೋರು | ೧೧ | ಎನುಮಲೋರು |
| ೦೪ | ಓಬನಾಯಕನೋರು | ೦೮ | ಎನುಮಲೋರು | ೧೨ | ಪಲ್ಲೆವರು |

| ಕ್ರಸಂ | ಯರಮಂಚಿನೋರು ಗುಂಪಿನಲ್ಲಿ: | | | | |
|---|---|---|---|---|---|
| ೦೧ | ಯರಮಂಚಿನೋರು | ೦೪ | ಯರಗಟ್ಲಾರು | ೦೭ | ಕದಿನವರು. |
| ೧೨ | ಯರಬೋತ್ತಲರು | ೦೫ | ಸುರಪಾಕಲವರು | ೦೮ | ಅಚ್ಚಪಲ್ಲೋರು |
| ೦೩ | ಯರಗಟ್ನಾಯಕ | ೦೬ | ನಲಗೇತ್ತಲರು | | ೧) ಎದ್ದಲವರು<br>೨) ಪೂವಲವರು<br>೩) ಗುಡ್ಡದ ಎದ್ದಲವರು.<br>೪) ಪಟ್ಟೆಪಲ್ಲಲು |
| | – | | | | |

| ಕ್ರ.ಸಂ | ಚಂದ್ರವಂಶದ ಮಂದಲವರು | | | | |
|---|---|---|---|---|---|
| ೦೧ | ಕಾಮಗೇತ್ತಲರು | ೦೩ | ದ್ಯಾವರಲೋರು. | ೦೫ | ಬುಲ್ಲಡಲು. |
| ೦೨ | ಸಾಕೇಲವರು | ೦೪ | ಬಿದ್ದಲೋರು | ೦೬ | ಮಾಸೇಲೋರು. |
| ೦೭ | ಗಾದಮಲೋರು | | | | |

| ಕ್ರ.ಸಂ | ಮಳೀಲೋರ ಬೆಡಗುಗಳು | | | | |
|---|---|---|---|---|---|
| ೦೧ | ಕಾಲ್ವುಮಳೆಲೋರು | ೦೩ | ಚಿನಕ ಮುತ್ತಿನಮಳೇಲು | ೦೫ | ಮುದ್ದಾಪುರ ಮಳೇಲು |
| ೦೨ | ಮಾಕನಡಕು ಮಳೆಲೋರು | ೦೪ | ಸೋಲುಮಳೇಲು | ೦೬ | ಕವಲುಮಳೇಲು |
| ೦೭ | ಗುಡೇಕೋಟೆಮಳೇಲು | | | | |

| ಕ್ರ.ಸಂ | ಪಾಮಡಲೋರ ಬೆಡಗುಗಳು | | |
|---|---|---|---|
| ೦೧ | ನಲ್ಲಪಾಮಡಲೋರು | ೦೨ | ಪೂಜಾರಳ್ಳಿ ಪಾಮಡಲೋರು |
| ೦೩ | ಯರ ಪಾಮಡಲೋರು | ೦೪ | ಜರಕಡಲು |

| ಕ್ರ.ಸಂ | ಚಂದ್ರವಂಶದ ಇನ್ನಿತರ ಉಪಬೆಡಗುಗಳು: | | | | |
|---|---|---|---|---|---|
| ೦೧ | ಗೊಡಗುದಾಸರು | ೦೮ | ಮುಂಡಾಸುದಾಸರು | ೧೫ | ಮಚ್ಚಲೋರು. |
| ೦೨ | ಜಾಗನೋರು | ೦೯ | ದಡ್ಡಿದಾಸರು. | ೧೬ | ಅಜ್ಜಡಲೋರು |
| ೦೩ | ಗಗ್ರಿದಾಸರು. | ೧೦ | ಜನ್ನೆನೋರು. | ೧೭ | ಗಟ್ಟಿಮುತ್ತೆಲೋರು |
| ೦೪ | ಕರಿನೋರು. | ೧೧ | ಬೋಸಲೋರು | ೧೮ | ಬಿಜ್ಜಡಲು. |
| ೦೫ | ಗಜಗಡ್ಲೋರು | ೧೨ | ಮುದಿಗೊಡ್ಲವರು | ೧೯ | ಬೋಡಿಪಾಲಲು. |
| ೦೬ | ಮಾಸಲೋರು. | ೧೩ | ಬಿದ್ದಲೋರು | - | |
| ೦೭ | ಅಲಕೆರು. | ೧೪ | ಬೋಡದಾಸರು | | |

ಮ್ಯಾಸಬೇಡರಲ್ಲಿ ಬೆಡಗುಗಳು ಹುಟ್ಟಲು ಒಂದೊಂದು ಕಾರಣವಿರುತ್ತದೆ. ಒಂದೊಂದು ಬೆಡಗು ಸಹ ತಮ್ಮದೆ ಆದ ಕಾರ್ಯನಿರ್ವಹಿಸುತ್ತಾರೆ. ದೇವರಸೇವೆ ಇರಬಹುದು ಒಂದು ಬೆಡಗು ದೇವರಿಗೆ ಪೂಜೆಸಲ್ಲಿಸುವವರಾದರೆ ಮತ್ತೊಂದು ಪಂಗಡದವರು ಛತ್ರಿ ಚಾಮರ ಹಿಡಿಯುವವರು. ಮತ್ತೊಬ್ಬರು ಶಂಖ ಊದಿ ಜಾಗಟೆ ಬಾರಿಸುವವರು. ಹೀಗೆ ಮ್ಯಾಸಬೇಡ ಮತ್ತು ಕಾಡುಗೊಲ್ಲರಲ್ಲಿ ತಮ್ಮ ಹಕ್ಕು ಎಂಬಂತೆ ಆಯಾ ಪಂಗಡದವರು ಕರ್ತವ್ಯವನ್ನು ಮಾಡುವುದು ಕಂಡುಬರುತ್ತದೆ. ಜಾತ್ರೆ, ಉತ್ಸವ, ಹಬ್ಬ ಹರಿದಿನಗಳಲ್ಲಿ ಈ ಎರಡು ಪಂಗಡಗಳಲ್ಲಿ ಮಹತ್ವದ ಕಾರ್ಯಗಳನ್ನು ನಿರ್ವಹಿಸುವುದು ಕಂಡುಬರುತ್ತದೆ. ಕುಲ ಅಥವಾ ಬೆಡಗುಗಳು ಬೇರೆ ಆದರೂ ಅವರಲ್ಲಿ ಒಗ್ಗಟ್ಟು ಐಕ್ಯತೆ, ಸಂಘಟನೆ ಅವರಲ್ಲಿ ಎದ್ದು ಕಾಣುವ ಗುಣವಾಗಿದೆ. ಒಟ್ಟಾರೆಯಾಗಿ ಕುಲ ಬೆಡಗುಗಳು ರಕ್ತಸಂಬಂಧವನ್ನು ಗುರುತಿಸಲು ವೈವಾಹಿಕ ಸಂಬಂಧಗಳನ್ನು ಏರ್ಪಡಿಸಲು ಮಹತ್ವದ ಪಾತ್ರವಹಿಸುತ್ತವೆ. ಇತ್ತೀಚಿನ ದಿನಗಳಲ್ಲಿ ಬೆಡಗು,ಕುಲ,ಗೋತ್ರ, ಪಂಗಡಗಳ ಆಧಾರದ ಮೇಲೆಯೆ ವಿವಾಹ ಏರ್ಪಡಿಸುವುದು ಗಮನಿಸಬಹುದಾಗಿದೆ. ಬುಡಕಟ್ಟು ಸಮಾಜವೊಂದು ಅನುಸರಿಸಿಕೊಂಡು ಬಂದ ಪದ್ಧತಿಯನ್ನೆ ಮುಂದುವರಿಸುತ್ತಿರುವುದು ಗೋಚರಿಸುತ್ತದೆ.

ಕರ್ನಾಟಕದಾದ್ಯಂತ ಕಂಡು ಬರುವ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಹಟ್ಟಿಗಳನ್ನು ಕಟ್ಟಿಕೊಂಡಿದ್ದೇಕೆ? ಇಂದಿಗೂ ಹಟ್ಟಿಗಳು ನಮಗೆ ನೋಡಲಿಕ್ಕೆ, ಕೇಳಲಿಕ್ಕೆ ಸಿಗುತ್ತವೆ. ಹಟ್ಟಿಗಳು ಹಟ್ಟಿಗಳಾಗಿಯೆ ಉಳಿದುವೇಕೆ? ಚಿತ್ರದುರ್ಗ ಜಿಲ್ಲೆಯಲ್ಲಿ ಹಟ್ಟಿಗಳು ಹೆಚ್ಚಾಗಿ ಏಕೆ ನಿರ್ಮಿತವಾದವು? ಎಂದು ಪ್ರಶ್ನಿಸಿಕೊಂಡರೆ ಈ ಸಮುದಾಯಗಳು ಹಟ್ಟಿಗಳನ್ನು ನಿರ್ಮಿಸಿಕೊಳ್ಳಲು ಕಾರಣವಾದ

ಒಂದೇ ಒಂದು ಅಂಶವೆಂದರೆ ಈ ಎರಡು ಸಮುದಾಯಗಳು ಅರಣ್ಯ ಸಂಸ್ಕೃತಿಯೊಂದಿಗೆ ಅವಿನಾಭಾವ ಸಂಬಂಧಹೊಂದಿದ್ದು ಪಶುಪಾಲನೆಯನ್ನೆ ನೆಚ್ಚಿಕೊಂಡಿದ್ದು ಕಾಡುಗೊಲ್ಲ ಮತ್ತು ಮ್ಯಾಸಬೇಡರ ಜೀವನವಿಧಾನದಲ್ಲಿ ಸಾಮ್ಯತೆಹೊಂದಿದ್ದು ಈ ಎರಡು ಸಮುದಾಯಗಳು ಒಂದೇ ಹಾದಿಯನ್ನೆ ತುಳಿದವು. ಮಾನವ ಜೀವನದ ವಿಕಾಸ ಕ್ರಮದಲ್ಲಿ ಬೇಟೆ, ಪಶುಪಾಲನೆ ಕೃಷಿಯವರೆಗೆ ಹಂತ ಹಂತವಾಗಿ ಬೆಳೆದುಬಂದಿದ್ದು ಬಹುಕಾಲದವರೆಗೆ ಪಶುಪಾಲನೆಗೆ ಅಂಟಿಕೊಂಡವರು. ಇತ್ತೀಚಿಗಷ್ಟೆ ಸ್ಥಿರವಾಗಿ ನಿಂತು ಕೃಷಿ ಜೀವನಕ್ಕೆ ಒಗ್ಗಿಕೊಂಡವರು. ಆದರೂ ಸಹ ಸಂಪೂರ್ಣವಾಗಿ ಪಶುಪಾಲನೆಯನ್ನು ಬಿಟ್ಟಿಲ್ಲ. ಕೃಷಿ ಇದ್ದರು ಹೆಚ್ಚು ಭೂ ಹಿಡುವಳಿಗಳಿಲ್ಲ. ಪರ್ಯಾಯವಾಗಿ ಪಶು ಸಂಗೋಪನೆಯೇ ಆರ್ಥಿಕ ಜೀವನೋಪಾಯವನ್ನು ಹೊಂದಿರುವುದು ನನ್ನ ಅಧ್ಯಯನದಲ್ಲಿ ಕಂಡು ಬರುತ್ತದೆ.

ಗೊಲ್ಲರಲ್ಲಿ ಎರಡು ಪಂಗಡಗಳು. ಕಾಡುಗೊಲ್ಲರು ಮತ್ತು ಊರುಗೊಲ್ಲರು. ಇದರಲ್ಲಿ ಕಾಡುಗೊಲ್ಲರು ಮಾತ್ರ ಹಟ್ಟಿಗಳಲ್ಲಿಯೇ ವಾಸ ಮಾಡುತ್ತಿದ್ದಾರೆ. ಕಾಡುಗೊಲ್ಲರು ತಮ್ಮದೆ ಆದ ಸಾಮಾಜಿಕ ಜೀವನವನ್ನು ಹೊಂದಿದ್ದು ಸಂಪ್ರಾದಾಯ, ಮೌಲ್ಯಗಳು, ಆಚರಣೆಗಳು, ವಿಧಿ ನಿಷೇಧಗಳಿಗೆ ಬದ್ದರಾಗಿದ್ದು ಅವರನ್ನು ಸ್ಪಷ್ಟವಾಗಿ ಕಾಡುಗೊಲ್ಲರು ಅಥವಾ ಹಟ್ಟಿಗೊಲ್ಲರು ಎಂದು ಗುರುತಿಸಬಹುದಾಗಿದೆ. ಕಾಡುಗೊಲ್ಲರು ಸಾಮಾಜಿಕವಾಗಿ ಆರ್ಥಿಕವಾಗಿ ರಾಜಕೀಯವಾಗಿ ಹಿಂದುಳಿದಿದ್ದು ತದ್ವಿರುದ್ಧವಾಗಿ ಊರುಗೊಲ್ಲರು ಊರು ಮತ್ತು ರಾಜಕೀಯಾಗಿ ಮುಂದುವರೆದಿದ್ದು. ತದ್ವಿರುದ್ಧವಾಗಿ ಊರುಗೊಲ್ಲರು ಊರು ಮತ್ತು ನಗರಗಳಲ್ಲಿ ಸೇರಿ ಸಾಮಾಜಿಕ ಆರ್ಥಿಕ, ರಾಜಕೀಯ, ಔದ್ಯೋಗಿಕವಾಗಿ ಮುಂದುವರೆದಿದ್ದಾರೆ. ಕಾಡುಗೊಲ್ಲರು ತಮ್ಮ ಮೂಲ ಪುರುಷರಾದ ಸಾಂಸ್ಕೃತಿಕ ವೀರರಾದ ಎತ್ತಪ್ಪ ಮತ್ತು ಜುಂಜಪ್ಪನ ಕಟ್ಟು ಕಟ್ಟಳೆಯಂತೆಯೇ ನಡೆಯುತ್ತಿರುವುದು ಗೋಚರವಾಗುತ್ತದೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡ ಸಮುದಾಯಗಳು ಬೇರೆಬೇರೆ ಪ್ರದೇಶದಿಂದ ಬಂದುವಾದರೂ ಈ ಎರಡು ಸಮುದಾಯಗಳ ಮೂಲ ವೃತ್ತಿಯು ಒಂದೇ ಆಗಿತ್ತು. ಐತಿಹ್ಯ ಮತ್ತು ಕಥೆಗಳ ಪ್ರಕಾರ ಉತ್ತರ ಭಾರತದಿಂದ ಬಂದ ಕಾಡುಗೊಲ್ಲರು, ಆಂಧ್ರದ ಶ್ರೀಶೈಲದಿಂದ ಬಂದ ಮ್ಯಾಸಬೇಡರು, ಮೂಲತಃ ಪಶುಪಾಲಕ ಸಮುದಾಯಗಳೇ ಅಗಿದ್ದವು, ನಿಸರ್ಗದೊಂದಿಗೆ ಅವಿನಾಭಾವ ಸಂಬಂಧ ಹೊಂದಿ ವಿಕಾಸಪ್ರಕ್ರಿಯೆಯಲ್ಲಿ ಮುಂದುವರೆಯಲು ಅದೇ ಪಶುಪಾಲಕ ಸಂಸ್ಕೃತಿಯಲ್ಲಿದ್ದ ಕುರುಬಸಮುದಾಯವು ತನ್ನ ಆಯ್ಕೆಯಲ್ಲಿ ಒಕ್ಕಲು ಸಂಸ್ಕೃತಿಯನ್ನು ರೂಢಿಸಿಕೊಂಡಿದ್ದು ಪಶುಪಾಲಕರಲ್ಲೆ ಪ್ರಬಲವಾಗಿರುವುದನ್ನು ಸೂಚಿಸುತ್ತದೆ. ಪಶುಪಾಲಕ ಸಂಸ್ಕೃತಿಯ ಪಲ್ಲಟಗಳಲ್ಲಿ ಕುರುಬರು ವಿಕಾಸವಾಗಲು ಅಂದಿನ ವಿಜಯನಗರದ ಪ್ರಭುತ್ವ ವ್ಯವಸ್ಥೆಯು ಕಾರಣವಿರಬಹುದು. ಆದರೆ ಬೇಡ ಮತ್ತು ಕುರುಬ ಸಮುದಾಯದ ಪೈಪೋಟಿಯಿಂದ ಅನ್ಯವಾಗಿ ರೂಪುಗೊಂಡ ಗೊಲ್ಲಸಮುದಾಯ ನಿಸರ್ಗರಾಧನೆಯ ಪಶುಪಾಲನೆಯನ್ನೆ ಮುಖ್ಯವೃತ್ತಿಯನ್ನಾಗಿ ಮಾಡಿಕೊಂಡ ಗೊಲ್ಲಸಮುದಾಯ ಪೈಪೋಟಿತಾಳಲಾರದೆ ಚಿತ್ರದುರ್ಗದ ಪರಿಸರಕ್ಕೆ ಕ್ರಮಿಸಿತು. ಪಶುಪಾಲನೆಯ

ಭಾವಾನಾತ್ಮಕತೆಯೊಂದಿಗೆ ಸಂಬಂಧ ಹೊಂದಿದ್ದ ಗೊಲ್ಲಸಮುದಾಯ ಭೂಮಿಯಜೊತೆ ಹಕ್ಕು ಸ್ಥಾಪಿಸುವಲ್ಲಿ ಹಿನ್ನಡೆಯಾಯಿತು. ಕಾಡುಗೊಲ್ಲ ಮತ್ತು ಮ್ಯಾಸಬೇಡರು ಅನಿವಾರ್ಯವಾಗಿ ಚಿತ್ರದುರ್ಗದ ಕಡೆ ಕ್ರಮಿಸಬೇಕಾದ ಸಂಗತಿಯೆಂದರೆ, ಒಂದು ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಮತ್ತೊಂದು ಒಕ್ಕಲುತನ ವಿಕಾಸವಾದುದ್ದರಿಂದ ಹುಲ್ಲುಗಾವಲು ಕಡಿಮೆಯಾಗಿ ಪಶು ಆಹಾರಕ್ಕೆ ತೊಂದರೆಯಾಗಿರ ಬಹುದೆಂಬಂತೆ ಕಾಣುತ್ತದೆ. ಪಶು ಪಾಲನ ವೃತ್ತಿಯನ್ನೇ ನಂಬಿ ಗ್ರಾಮ ಸಂಸ್ಕೃತಿಯ ಅಂಚಿನಲ್ಲಿ ಬದುಕಲಾರಂಬಿಸಿದ ಗೊಲ್ಲರಹಟ್ಟಿಗಳು ಗ್ರಾಮ ವಿಕಾಸದ ರಚನೆಯಲ್ಲಿ ತುಂಬಾ ಹಿಂದುಳಿದರು. ಇಂದಿಗೂ ಗೊಲ್ಲರಹಟ್ಟಿಗಳು ಗ್ರಾಮ ಅಥವಾ ಊರಿನಿಂದ ಕನಿಷ್ಟ ಎರಡು ಮೂರು ಕಿಲೋಮೀಟರ್ ದೂರದಲ್ಲಿ ಹಟ್ಟಿಗಳನ್ನು ನಿರ್ಮಿಸಿಕೊಂಡಿದ್ದು ತಮ್ಮದೇ ಆದ ಸಾಂಸ್ಕೃತಿಕ ಮತ್ತು ಸಾಮಾಜಿಕ ಜೀವನವನ್ನು ಹೊಂದಿರುವುದು ಕಂಡು ಬರುತ್ತದೆ.

ಮ್ಯಾಸಬೇಡ ಮತ್ತು ಕುರುಬರು ವಿಕಾಸ ಪ್ರಕ್ರಿಯೆಯಲ್ಲಿ ಪಲ್ಲಟಗೊಂಡು ಬೇರೆ ಬೇರೆ ವೃತ್ತಿಗಳನ್ನು ಆಯ್ಕೆಮಾಡಿಕೊಂಡರು. ಆದರೆ ಕಾಡುಗೊಲ್ಲರು ಮಾತ್ರ ನಿಸರ್ಗರಾಧನೆಯನ್ನೆ ನಂಬಿ ಪಶು ಪಾಲನ ಧರ್ಮಕ್ಕೆ ಅಂಟಿಕೊಂಡಿದ್ದು, ಉತ್ತರಭಾರತದಿಂದ, ಹಂಪಿ ಪರಿಸರಕ್ಕೆ ಬಂದು ನೆಲೆಸಿ ಮತ್ತೆ ಚಿತ್ರದುರ್ಗದ ಕಡೆ ಕ್ರಮಿಸಬೇಕಾಯಿತು. ಪಶು ಪಾಲಕ ಸಮುದಾಯಗಳು ಸದಾ ರೊಪ್ಪ ಸಂಸ್ಕೃತಿ, ನದಿ ಸಂಸ್ಕೃತಿ, ಅರಣ್ಯ ಸಂಸ್ಕೃತಿಯನ್ನು ರೂಢಿಸಿಕೊಂಡಿದ್ದರಿಂದ ಅಲೆಮಾರಿ ಸಮುದಾಯಗಳಾಗಿಯೇ ಉಳಿಯಬೇಕಾಯಿತು. ಹಟ್ಟಿಗಳು ಹಟ್ಟಿಗಳಾಗಿಯೇ ಏಕೆ ಉಳಿದಿವೆಯೆಂದರೆ ತಾವು ನಂಬಿಕೊಂಡು ಬಂದಿದ್ದ ಪಶು ಪಾಲನ ಧರ್ಮ ಸಾಂಸ್ಕೃತಿಕ ವೀರರು ನಡೆದುಕೊಂಡು ಬಂದ ಜೀವನಕ್ರಮ,ಸಂಪ್ರದಾಯಗಳು ತಮ್ಮ ದೇವರುಗಳ ಮೇಲಿನ ನಂಬಿಕೆ ಭಯ ಭಕ್ತಿ ಈ ಸಮುದಾಯಗಳನ್ನು ಅನ್ಯದಾರಿ ತುಳಿಯಲು ಬಿಡಲಿಲ್ಲ. ಹಾಗಾಗಿ ಕಾಡುಗೊಲ್ಲರು ಗ್ರಾಮಧ್ಯಹಿವಾಸಿಗಳಾಗಿ ನಿಶ್ಚಿತಗಡಿಯನ್ನು ರೂಪಿಸಿಕೊಂಡಂತೆ ಕಾಣುತ್ತದೆ. ಪಶು ಪಾಲಕ ಸಮುದಾಯಗಳಲ್ಲಿ ಹಿಂದೆ ಬಿದ್ದ ಗೊಲ್ಲ ಹಾಗೂ ಮ್ಯಾಸಬೇಡರು ಸಾಂಸ್ಕೃತಿಕವಾಗಿ ಅನನ್ಯತೆ ಸಾಧಿಸಿದರೆ ಹೊರತು ಸಾಮಾಜಿಕ ವ್ಯವಸ್ಥೆಯಲ್ಲಿ ಅವಕಾಶವನ್ನು ಪಡೆಯಲಾರದೇ ಹೋದುವು. ಮ್ಯಾಸಬೇಡರಿಗೂ ಸಹ ಸಾಮಾಜಿಕ ಪಲ್ಲಟಗಳಲ್ಲಿ ಅಂತಹ ಅವಕಾಶಗಳೇನೂ ದಕ್ಕಿರಲಿಲ್ಲ, ಹಾಗಾಗಿ ಕಾಡುಗೊಲ್ಲರ ಹಾದಿಯನ್ನೆ ಅವರು ತುಳಿದರು. ಈ ಎರಡು ಸಮುದಾಯಗಳು ವಿಜಯನಗರ ಸಾಮ್ರಾಜ್ಯ ತಲೆ ಎತ್ತಿದ ನಂತರ ಮತ್ತು ಭೂ ಒಡೆತನ ಹೆಚ್ಚು ಖಾಸಗಿಯಾದ್ದರಿಂದ ದಿಕ್ಕೆಟ್ಟ ಪಶು ಪಾಲಕ ಸಮುದಾಯಗಳು ಪಶು ಆಹಾರಕ್ಕಾಗಿ ವಿಸ್ತಾರವಾದ ಆಹಾರದ ಬಯಲನ್ನು ಅರಸುವುದು ಅನಿವಾರ್ಯವಾದಂತೆ ಕಾಣುತ್ತದೆ. ಹಾಗಾಗಿ ಅವರ ಆಯ್ಕೆ ಚಿತ್ರದುರ್ಗ ಜಿಲ್ಲೆಯ ಬಯಲು ಸೀಮೆಯ ಕುರುಚಲು ಕಾಡಿನ ಪ್ರದೇಶಕ್ಕೆ ವಲಸಿಗರಾಗಿ ಕ್ರಮಿಸಿ ನೆಲೆಸಿದರು.

**ಕಾಡುಗೊಲ್ಲರ ಹಟ್ಟಿಗಳು ಹಟ್ಟಿಗಳಾಗಿಯೆ ಏಕೆ ಉಳಿದಿವೆ ಎಂಬುದಕ್ಕೆ ಪ್ರಮುಖ ಆಧಾರಾಂಶಗಳು ಎಂದರೆ.**

- ಮೂಲತಃ ಪಶುಪಾಲನೆಯ ಮೇಲೆಯೇ ಅವಲಂಬಿತರಾಗಿರುವುದು
- ಕಾಡುಗೊಲ್ಲರ ಮೂಲ ಸಾಂಸ್ಕೃತಿಕ ವೀರರು ನಾಡಿನ ಸಂಪರ್ಕವನ್ನು ಹೊಂದದೆ ಪಶುಸಂಪತ್ತನ್ನು ರಕ್ಷಿಸುವ ಸಲುವಾಗಿಯೇ ಸಂಘರ್ಷಗಳೊಂದಿಗೆ ಕಥಾನಕಗಳನ್ನು ಗುರುತಿಸಬಹುದು.
- ಕಾಡುಗೊಲ್ಲರ ದೇವರುಗಳು ಅಂಟು ಮುಂಟಿನಿಂದ ದೂರವಿರುವ ವ್ರತದ (ಬತದ) ದೇವರುಗಳು.
- ಕಾಡುಗೊಲ್ಲರ ಸಂಪ್ರಾದಾಯಗಳು ಆಚರಣೆಗಳು. ನಂಬಿಕೆಗಳು, ವಿಧಿನಿಷೇದಗಳು ತುಂಬಾ ಕಟ್ಟುನಿಟ್ಟಿನಿಂದಿದ್ದು ಅವುಗಳಿಗೆ ಭಂಗಬರದಂತೆ ನಡೆದುಕೊಳ್ಳುವುದು.
- ಕಾಡುಗೊಲ್ಲರು ತುಂಬಾ ಸರಳ ಮತ್ತು ಸಜ್ಜನಿಕೆಯಿಂದಿರುವ ನಾಗರಿಕತೆಯೊಂದಿಗೆ ಸಮ್ಮಿಳಿತಗೊಳ್ಳದೆ ಪ್ರತ್ಯೇಕವಾಗಿ ವಾಸಿಸಲು ಇಚ್ಛಿಸುವುದು.
- ಕಾಡುಗೊಲ್ಲರ ಸಾಮಾಜಿಕ ಜೀವನ ಮತ್ತು ಅವರ ಬಾಳನ್ನು ಹಿಡಿದು ನಡೆಸಿದ ಸಾಂಸ್ಕೃತಿಕ ಮೌಲ್ಯಗಳು ಮತ್ತು ನೀತಿಗಳು.
- ಅಕ್ಷರ ಸಂಸ್ಕೃತಿಯಿಂದ ದೂರವಿದ್ದು ಬೆಟ್ಟ ಗುಡ್ಡಗಳಲ್ಲಿ ನಾಗರಿಕ ಸಮಾಜದಿಂದ ದೂರ ಉಳಿದರು.

ಕಾಡುಗೊಲ್ಲರು ಒಟ್ಟಾರೆಯಾಗಿ ಗ್ರಾಮ ಅಥವಾ ಊರುಗಳಿಂದ ದೂರದಲ್ಲಿ ಹಟ್ಟಿಗಳನ್ನು ನಿರ್ಮಿಸಿಕೊಂಡು ಅಪ್ಪಟ ಬುಡಕಟ್ಟು ಸಂಸ್ಕೃತಿಯನ್ನು ಹೊಂದಿರುತ್ತಾರೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರು ಬುಡಕಟ್ಟು ಸಂಸ್ಕೃತಿಯನ್ನು ಬಿಂಬಿಸುವಲ್ಲಿ ಇಂದಿಗೂ ಚಿತ್ರದುರ್ಗ ಜಿಲ್ಲೆಯ ಎರಡು ಸಮುದಾಯಗಳು ತಮ್ಮ ಅನನ್ಯತೆಯನ್ನು ಉಳಿಸಿಕೊಂಡಿವೆ. ಕಾಡುಗೊಲ್ಲರ ಹಟ್ಟಿಗಳ ಹೆಸರುಗಳು ಸಹ ಸಾಂಸ್ಕೃತಿಕ ವೀರನ ಹೆಸರಿನಿಂದಲೋ ವ್ಯಕ್ತಿಯ ಹೆಸರಿನಿಂದಲೋ ದೇವರಹೆಸರಿನಿಂದಲೋ ಇರುವುದು ಕಂಡುಬರುತ್ತದೆ. ಕಾಡುಗೊಲ್ಲರ ಹಟ್ಟಿಗಳು ಅವರದೇ ಆದ ವ್ಯವಸ್ಥೆಯಲ್ಲಿ ನಿರ್ಮಿಸಿಕೊಂಡಿದ್ದು ಹತ್ತರಿಂದ ಐವತ್ತು ಗುಡಿಸಲುಗಳಿದ್ದು ಹಟ್ಟಿಯ ಮಧ್ಯದಲ್ಲಿ ದೇವಸ್ಥಾನವಿರುತ್ತದೆ. ಹಟ್ಟಿಯ ಸುತ್ತಲು ಕಳ್ಳಿ ಇಲ್ಲವೇ ಕಳ್ಳೆ ಹಾಕಿರುತ್ತಾರೆ. ಇದು ಹಟ್ಟಿಯ ರಕ್ಷಣೆ ಮತ್ತು ಅನ್ಯ ಜಾತಿಯ ಪ್ರವೇಶವನ್ನು ನಿರ್ಭಂದಿಸುತ್ತದೆ.

ಕಾಡುಗೊಲ್ಲರಂತೆಯೇ ಮ್ಯಾಸಬೇಡರು ಸಹ ಪ್ರತ್ಯೇಕವಾಗಿ ವಾಸಿಸುವ ಖಾಸಾ ಬುಡಕಟ್ಟು ಸಮುದಾಯ. ಚಿತ್ರದುರ್ಗ ಜಿಲ್ಲೆಯಲ್ಲಿ ಅತಿ ದಟ್ಟವಾಗಿ ಮ್ಯಾಸಬೇಡರಿದ್ದು ಅವರನ್ನು ಹೆಚ್ಚಿನದಾಗಿ ಮ್ಯಾಸನಾಯಕರೆಂದೇ ಗುರುತಿಸಿಕೊಂಡಿದ್ದಾರೆ. ಮ್ಯಾಸಬೇಡರು ಅಥವಾ ಮ್ಯಾಸನಾಯಕರು ಹಿಂದಿನಿಂದಲೂ ಬೇಟೆ, ಸೈನಿಕ ವೃತ್ತಿ, ತಳವಾರಿಕೆ, ಪಶುಪಾಲನೆ ಮಾಡಿಕೊಂಡು ಬಂದಿದ್ದು

ಕಾಲಗತಿಸಿದಂತೆ ಇವರು ವೃತ್ತಿಯಲ್ಲೂ ಬದಲಾವಣೆ ಮಾಡಿಕೊಂಡು ಇತ್ತೀಚೆಗಷ್ಟೆ ಸಣ್ಣ ಪ್ರಮಾಣದ ವ್ಯವಸಾಯವನ್ನು ಹೊಂದಿದ್ದಾರೆ. ಮ್ಯಾಸಬೇಡರು ಕಾಡುಗೊಲ್ಲರಂತೆಯೇ ಮೂಲತಃ ಬೇಟೆ ಮತ್ತು ಪಶುಪಾಲನೆಯನ್ನು ಹೊಂದಿರುವ ಇವರು ಹಟ್ಟಿಗಳನ್ನು ನಿರ್ಮಿಸಿಕೊಂಡಿದ್ದು ಗುಡ್ಡ ಬೆಟ್ಟ, ಕಾಡಿನಂಚಿನಲ್ಲಿ ವಾಸಿಸುತ್ತಾರೆ. ಅವರ ಸಾಮಾಜಿಕ ಸ್ಥಿತಿಗತಿಗಳು ಅಷ್ಟೇನು ಉತ್ತಮವಾಗಿರಲಿಲ್ಲವೆನಿಸುತ್ತದೆ. ಏಕೆಂದರೆ ಮ್ಯಾಸಬೇಡರು ಸಹ ಅಂದಿನ ದಿನಗಳಲ್ಲಿ ಪಶುಪಾಲನೆಯನ್ನೆ ಜೀವನೋಪಾಯವನ್ನು ಹೊಂದಿದ್ದು ಕುರಿಸಾಕಾಣಿಕೆಯಲ್ಲಿ ಹೆಚ್ಚು ಆಸ್ತೆವಹಿಸಿದ್ದರಿಂದ ಆಂಧ್ರಪ್ರದೇಶದಿಂದ ಬಂದ ಅವರು ವಿಜಯನಗರ ಪತನಾನಂತರದಲ್ಲಿ ದಿಕ್ಕೆಟ್ಟ ಪಶುಪಾಲಕ ಸಮುದಾಯಗಳು ಚಿತ್ರದುರ್ಗದ ಕಡೆ ಬಂದು ನೆಲೆಸಿ ಹಟ್ಟಿಗಳನ್ನು ನಿರ್ಮಿಸಿಕೊಂಡವು. ಸಾಮಾನ್ಯವಾಗಿ ಊರಹೊರಗೆ ಹಟ್ಟಿ ನಿರ್ಮಿಸಿಕೊಂಡು ಜೀವನ ಸಾಗಿಸುವ ಬೇಡ ನಾಯಕರ ಬದುಕಿನ ಕ್ರಮ ಅಪ್ಪಟ ಬುಡಕಟ್ಟು ಲಕ್ಷಣಗಳನ್ನು ಹೊಂದಿರುತ್ತದೆ.

ಮ್ಯಾಸಬೇಡರ ಸಮುದಾಯವನ್ನು ವಿವಿಧ ಆಯಾಮಗಳಲ್ಲಿ ನೋಡುವುದಾದರೆ ಮ್ಯಾಸನಾಯಕರು ದೈಹಿಕವಾಗಿ ದಷ್ಟಪುಷ್ಟರಾಗಿದ್ದು ಮ್ಯಾಸಬೇಡರು ಪರಾಕ್ರಮಿಗಳು ಆಗಿದ್ದರು. ಮ್ಯಾಸಬೇಡರನ್ನು ಅಂದಿನ ರಾಜರುಗಳು, ಸೈನಿಕರಾಗಿ, ಮೀಸಲುಪಡೆಯವರಾಗಿ, ಬಿಲ್ಲಾಳುಗಳಾಗಿ ಯುದ್ಧ ಸಂಧರ್ಭಗಳಲ್ಲಿ ಹೋರಾಡಲು ಬಳಸಿಕೊಳ್ಳುತ್ತಿದ್ದರು. ಶ್ರೇಣಿ ವ್ಯವಸ್ಥೆಯಲ್ಲಿ ಉತ್ತಮವಾದ ಸ್ಥಾನವಿಲ್ಲದಿದ್ದರು ಅವರ ಸೇವೆಯು ಅನಿವಾರ್ಯತೆ ಇದ್ದಂತೆ ತೋರುತ್ತದೆ. ಸಾಮ್ರಾಜ್ಯಗಳ ಸ್ಥಾಪನೆಗೆ ಕಾರಣರಾದ ಬೇಡರು ವಿಜಯನಗರದ ಕಾಲದಲ್ಲಿ ಅನೇಕ ಹುದ್ದೆಗಳನ್ನು ಹೊಂದಿದ್ದರು. ಪಾಳೆಯಗಾರರಾಗಿ ಸಾಮಂತರಾಗಿ ಅಧಿಕಾರವನ್ನು ಬೇಡ ಜನಾಂಗದವರು ಹೊಂದಿದ್ದರು ಎಂಬುದು ಹಲವಾರು ಅಧ್ಯಯನಗಳಿಂದ ತಿಳಿದುಬರುತ್ತದೆ. ಕಾಡುಗೊಲ್ಲರಿಗೆ ಹೋಲಿಸಿದರೆ ಮ್ಯಾಸಬೇಡರು ಸ್ವಲ್ಪಮಟ್ಟಿಗೆ ಅಧಿಕಾರ ಅಂತಸ್ತು, ಸ್ಥಾನಮಾನಗಳನ್ನು ಹೊಂದಿದ್ದರೆಂಬುದಾಗಿ ತಿಳಿಯುತ್ತದೆ. ಬೇಡರಲ್ಲಿ ಕೆಲವರು ರಾಜಕೀಯವಾಗಿ ನಾಯಕ, ಪಾಳೆಯಗಾರ, ಮಾಂಡಲಿಕ ದೊರೆ, ಗುರಿಕಾರ, ತಳವಾರ, ಸುಬೇದಾರ ಮುಂತಾದ ಸ್ಥಾನಮಾನಗಳನ್ನು ಹೊಂದಿ ಜೀವನ ನಡೆಸಲು ಆರಂಭಿಸಿದರು. ಇನ್ನೂ ಕೆಲವರು ಕಾಡಿನಲ್ಲೋ ಕಾಡಿನಂಚಿನಲ್ಲೋ ಉಳಿದುಕೊಂಡರು. ಊರು, ನಗರ ರಾಜಧಾನಿಗಳ ಸಂಪರ್ಕದಿಂದ ಬೆಳೆದವರು ತಮ್ಮ ಹಿಂದಿನ ಸಂಸ್ಕೃತಿಯನ್ನು ಬಿಟ್ಟು ಊರು ಸಂಸ್ಕೃತಿಗೆ ಹೊಂದಿಕೊಂಡರು. ಆದರೆ ಕಾಡು ಸಂಸ್ಕೃತಿಗೆ ಹೊಂದಿಕೊಂಡವರು ಬೇಟೆ, ಪಶುಪಾಲನೆಯಂತಹ ವೃತ್ತಿಗಳನ್ನು ಮುಂದುವರೆಸಿದರು ಅಲ್ಲದೆ ನಾಗರಿಕ ಸಂಪರ್ಕದಿಂದ ದೂರ ಉಳಿದರು, ಈಗಲೂ ಕಾಡು ಮತ್ತು ಬೇಡನ ನಂಟು ಇಂದಿಗೂ ಉಳಿದುಕೊಂಡು ಬಂದಿದೆ. ಮ್ಯಾಸನಾಯಕರು ಹೆಚ್ಚಾಗಿ ಪಶುಪಾಲನೆ ಕುರಿ, ಮೇಕೆ ಸಾಕಾಣಿಕೆಯನ್ನು ಮಾಡಿಕೊಂಡು ಬಂದಿರುವರು.

ಚಿತ್ರದುರ್ಗ ಜಿಲ್ಲೆಯ ಅನೇಕ ಹಟ್ಟಿಗಳಲ್ಲಿ ಹಿಂದಿನ ಬುಡಕಟ್ಟು ಸಂಸ್ಕೃತಿಯನ್ನೆ ಹೊಂದಿದ್ದ ಅನೇಕ ಮ್ಯಾಸಬೇಡ ಕುಟುಂಬಗಳಿವೆ. ಮ್ಯಾಸಬೇಡರು ವಿಜಯನಗರದ ಅರಸರ ಕಾಲದಲ್ಲಿ ಬಹಳಷ್ಟು ಮಂದಿ ಪಾಳೆಯಗಾರರಾಗಿ ಹುಟ್ಟಿಕೊಂಡರು. ವಿಸ್ತಾರವಾದ ಸಾಮ್ರಾಜ್ಯದಲ್ಲಿ ಆಡಳಿತದ

ಉಸ್ತುವಾರಿ, ಕಂದಾಯ ವಸೂಲಿ ಮೊದಲಾದ ಉದ್ದೇಶಗಳಿಗೆ ಬಲಿಷ್ಟ ಪ್ರಭಾವವುಳ್ಳ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಈ ಸಾಮಂತ ಅಧಿಕಾರಿಗಳೇ ಕ್ರಮೇಣ ಪಾಳೆಯಗಾರರೆನಿಸಿಕೊಂಡರು. ವಿಜಯನಗರ ಸಾಮ್ರಾಜ್ಯದ ಗಟ್ಟಿಯಾದ ತಳಪಾಯವೆಂದರೆ ಈ ಪಾಳೆಗಾರರೆ ಆಗಿದ್ದರು. ವಿಜಯನಗರದ ಅರಸರು ಪಾಳೆಪಟ್ಟುಗಳು ಬೆಳೆಯಲು ಅವಕಾಶ ಕಲ್ಪಿಸಿದರು. ೧೫೬೫ ರ ತಾಳಿಕೋಟೆ ಕದನದ ನಂತರ ಈ ಪಾಳೆಯ ಪಟ್ಟುಗಳು ಸ್ವತಂತ್ರವಾಗಿ ದೊರೆಗಳಾಗಿ ರಾಜರಾಗಿ ಆಳ್ವಿಕೆಮಾಡಲು ಕೋಟೆಗಳನ್ನು ನಿರ್ಮಿಸಿಕೊಂಡರು.

‘ಬೇಡನಾಯಕರ ಗಣರಾಜ್ಯಗಳಂತಿದ್ದ ಬೇಡಪಟ್ಟುಗಳು ಕಾಲಕ್ರಮೇಣ ಸಂಸ್ಥಾನಗಳಾಗಿ ರೂಪುಗೊಂಡವು. ಅವುಗಳ ಅಧಿಕಾರಿಗಳನ್ನು ಪಾಳೆಯಗಾರರೆಂದು ಕರೆಯಲಾಯಿತು. ಸುಮಾರು ಹತ್ತನೆ ಶತಮಾನದಲ್ಲಿ ಈ ರೀತಿ ಸ್ಥಾಪನೆಯಾಗಿ ಪ್ರಖ್ಯಾತ ಹೊಂದಿದ ಪಾಳೆಯಪಟ್ಟುಗಳಲ್ಲಿ ಆನೆಗೊಂದಿಯೇ ಮೊದಲನೆಯದು’[೧೪].

ವಿಜಯನಗರೋತ್ತರ ಕಾಲದಲ್ಲಿ ಸ್ವತಂತ್ರಗೊಂಡ ಹೊಸದಾಗಿ ಸ್ಥಾಪನೆಗೊಂಡ ಪಾಳೆಪಟ್ಟುಗಳಲ್ಲಿ ಬೇಡಜನಾಂಗದ ಪಾಳೆಪಟ್ಟುಗಳೇ ಅಧಿಕವಾಗಿದ್ದವು. ಚಿತ್ರದುರ್ಗ ಜಿಲ್ಲೆ ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದ ಜಿಲ್ಲೆಯಾಗಿದ್ದು ಬೇಡ ಸಂಸ್ಥಾನಗಳಲ್ಲಿ ಚಿತ್ರದುರ್ಗವು ಬಲಿಷ್ಟವಾಗಿತ್ತು. ಈ ಜಿಲ್ಲೆಯಲ್ಲಿ ಒಟ್ಟು ಏಳು ಪಾಳೆಯಗಾರರು ಆಡಳಿತ ನಡೆಸಿದುದು ಕಂಡುಬರುತ್ತದೆ. ಅವರೆಂದರೆ ಚಿತ್ರದುರ್ಗ, ಹರತಿ, ಸಂತೆಬೆನ್ನೂರು, ನಾಯಕನಹಟ್ಟಿ, ಮತ್ತೋಡು, ರಾಯದುರ್ಗ, ಬೇಲೂರು. ಚಿತ್ರದುರ್ಗದ ನಾಯಕರು ಒಟ್ಟು ಮುನ್ನೂರಹನ್ನೊಂದು ವರ್ಷಗಳ ಕಾಲ ಆಳಿದರೆಂದು ಅವರನ್ನು ಕುರಿತು ಚರಿತ್ರೆ ಹೇಳುತ್ತದೆ. ಚಿತ್ರದುರ್ಗ ನಾಯಕರ ಅರಸರ ಮೂಲ ವ್ಯಕ್ತಿ ಮತ್ತಿತಿಮ್ಮಣ್ಣ ನಾಯಕನಿಂದ ರಾಜವೀರ ಮದಕರಿನಾಯಕನವರೆಗೆ ಚಿತ್ರದುರ್ಗವನ್ನು ಸುವ್ಯವಸ್ಥಿತವಾಗಿ ಆಳ್ವಿಕೆ ನಡೆಸಿದ ಕೀರ್ತಿ ಬೇಡಜನಾಂಗಕ್ಕೆ ಸಲ್ಲುವುದು.

‘ಚಿತ್ರದುರ್ಗ ಜಿಲ್ಲೆಯಲ್ಲಿ ಚಳ್ಳಕೆರೆ ತಾಲ್ಲೂಕಿನ ನಾಯಕನಹಟ್ಟಿಯು ವಿಜಯನಗರೋತ್ತರ ಕಾಲದ ಚಿಕ್ಕ ಸಂಸ್ಥಾನವಾಗಿದ್ದು, ಇಲ್ಲಿ ಆಳಿದ ನಾಯಕರು ಹಟ್ಟಿನಾಯಕರೆಂದೇ ಪ್ರಸಿದ್ಧಾರಾಗಿದ್ದಾರೆ. ಈ ಹಟ್ಟಿ ಪಾಳೆಯಗಾರ ಮನೆತನದ ಮೂಲ ಪುರುಷ ಕಾಟೆಮಲ್ಲಪ್ಪನಾಯಕ, ನಾಯ್ಕನಹಟ್ಟಿ ಬಖೈರು ಅವರ ಇತಿಹಾಸವನ್ನು ತಿಳಿಸುವಲ್ಲಿ ಪ್ರಮುಖ ದಾಖಲೆಯಾಗಿದೆ. ಕ್ರಿ.ಶ. ೧೬೨೦ ರಿಂದ ೧೬೮೦ರವರೆಗಿನ ಶಾಸನಗಳು ಹಟ್ಟಿ ಪಾಳೆಯಗಾರರಿಗೆ ಸಂಬಂಧಿಸಿವೆ’[೧೫]

ಈ ಶಾಸನಗಳಿಂದ ಹಟ್ಟಿ ಪಾಳೆಯಗಾರರ ಕುರಿತಂತೆ ಕೆಲವು ಮಾಹಿತಿಗಳನ್ನು ತಿಳಿಯಬಹುದು. ಕಾಟೆಮಲ್ಲನಾಯಕನು ಶ್ರೀಶೈಲ ಸಮೀಪದ ಕರ್ರಮಲೆ, ಬಿಳಿಮಲೆಗಳ ಕಾಡಿನಿಂದ ಇಂದಿನ ನಾಯಕನಹಟ್ಟಿ ಪ್ರದೇಶಕ್ಕೆ ಕಂಪಳದೇವರು ಮತ್ತು ತನ್ನ ದನಕರು ಹಾಗೂ ೫೦೦ ಜನ ಪರಿವಾರದೊಡನೆ ವಲಸೆ ಬಂದನು ಎಂಬುದಾಗಿ ನಾಯಕನಹಟ್ಟಿ ಬಖೈರನ್ನು ವಿಶ್ಲೇಶಿಸಿದಾಗ ಗೊತ್ತಾಗುತ್ತದೆ.

'ಎಂ.ವಿ.ಚಿತ್ರಲಿಂಗಯ್ಯನವರು ಕ್ರಿಶ ೧೫೨೯ ರಲ್ಲಿ ಅಚ್ಯುತ ದೇವರಾಯ ಅದೇ ತಾನೆ ಅಧಿಕಾರಕ್ಕೆ ಬಂದಿದ್ದನು. ನಾಯಕನಹಟ್ಟಿ ಬಖೈರನ್ನು ವಿಶ್ಲೇಷಣೆ ಮಾಡುತ್ತ ಕಾಟಮಲ್ಲ ನಾಯಕನಿಗೂ ವಿಜಯನಗರದ ಅರಸನಿಗೂ ಕೆಲದಿನಗಳ ಕಾಲ ಒಳ್ಳೆಯಸಂಬಂಧವಿರಲಿಲ್ಲವೆಂದೂ ಕಾಣಿಸುತ್ತದೆ. ಅವರ ಹೇಳಿಕೆಯ ಪ್ರಕಾರ ಕಾಟಮಲ್ಲನಾಯಕನನ್ನು ಎರಡು ಬಾರಿ ಬಂಧಿಸಲು ಪ್ರಯತ್ನಿಸುತ್ತಾನೆ. ಬಂಧಿಸಲು ವಿಫಲನಾದಾಗ ಮಲ್ಲನಾಯಕನ ಧೈರ್ಯವನ್ನು ಮೆಚ್ಚಿ ತನ್ನ ಕಂಪಳದೊಡನೆ ಕುಂದುರ್ಪೆ ಗುಡ್ಡದ ಬಳಿ ನೆಲೆಸಲು ಮತ್ತು ರಾಜ್ಯವನ್ನು ಅನುಭವಿಸಿಕೊಂಡು ಹೋಗಲು ಅಪ್ಪಣೆಕೊಡುತ್ತಾನೆ[೧೬]. ನಂತರ ಅವನ ತಮ್ಮಂದಿರು ಕುಂದರ್ಪೆ ಸೇರಿದಂತೆ ಸುತ್ತಲ ಸೀಮೆಗಳಾದ ರತ್ನಗಿರಿ, ಮಿಡಿಗೇಶಿ, ಹೊಸಕೋಟೆ, ನಿಡುಗಲ್ಲು, ಶಂಕರಕಲ್ಲು ಸ್ಥಳಗಳಲ್ಲಿ ಚದುರಿಹೋಗಿ ನೆಲೆಸುತ್ತಾರೆ. ಕ್ರಮೇಣ ಈ ನೆಲೆಗಳೇ ಪಾಳೆಪಟ್ಟುಗಳಾಗಿ ವಿಕಾಸಗೊಂಡಂತೆ ಕಾಣುತ್ತದೆ. ಕಾಲಾನಂತರದಲ್ಲಿ ಮಲ್ಲನಾಯಕನು ಹಟ್ಟಿಯನ್ನು ತೊರೆದು ಕುಂದರ್ಪೆಯಿಂದ ಗೋಸಿಕೆರೆಗೆ ಬರುತ್ತಾನೆಂದು ತೋರುತ್ತದೆ.

'ಸೂರ್ಯದೇವರ ಪಾಪನಾಯಕನಿಗೂ ಹರತಿ–ನಿಡಗಲ್ಲು ಮನೆತನದ ಚಿಕ್ಕಪ್ಪನಾಯಕನ ಮಗನಾದ ಒಂದನೆಯ ಹೊಟ್ಟಳನಾಯಕನಿಗೂ ನಡೆಯುವ ಜಿದ್ದಿನಲ್ಲಿ ಪಾಪನಾಯಕ ಗೆಲ್ಲುತ್ತಾನೆ. ಪಾಪನಾಯಕನ ಮಗನಾದ ಕಾಕಳನಾಯಕ ಯುದ್ಧದಲ್ಲಿ ಆನೆಗೊಂದಿ ರಾಜರಿಗೆ ಸಹಾಯ ಮಾಡುತ್ತಾನೆ. ಅದಕ್ಕಾಗಿ ಆನೆಗೊಂದಿಯ ರಾಜರು ಮಲ್ಲಪ್ಪನಾಯಕನಿಗೆ ಉಂಬಳಿ ಶಾಸನ ಹಾಕಿಕೊಡುತ್ತಾನೆ[೧೭].

ನಂತರದಲ್ಲಿ ಮಲ್ಲಪ್ಪನಾಯಕನು ಗೋಸಿಕೆರೆಯಿಂದ ತನ್ನ ಕಂಪಳವನ್ನು ಹನ್ನೆರಡು ಪೆಟ್ಟಿಗೆ ದೇವರುಗಳೊಂದಿಗೆ ಈಗಿನ ನಾಯಕನಹಟ್ಟಿ ಇರುವ ಜಾಗಕ್ಕೆ ತಂದು ನೆಲೆಸುತ್ತಾನೆ, ಅವನು ನೆಲೆಸಿದ್ದರಿಂದಾಗಿಯೇ ಆ ಸ್ಥಳವನ್ನು ನಾಯಕನಹಟ್ಟಿ ಎಂದು ಕರೆಯಲಾಯಿತು.

ಚಿತ್ರದುರ್ಗ ಜಿಲ್ಲೆಯಲ್ಲಿ ಹೀಗೆ ಹಟ್ಟಿಗಳು ನೆಲೆಯೂರುವುದಕ್ಕೆ ಹಲವಾರು ಕಾರಣಗಳುಂಟು, ಬೇಡ ಜನಾಂಗದ ಸಾಂಸ್ಕೃತಿಕ ವೀರರಾದ ಜಗಳೂರು ಪಾಪನಾಯಕ ಮತ್ತು ಗಾದರಿಪಾಲನಾಯಕರು ಹಟ್ಟಿ ಮನೆತನಕ್ಕೆ ಸೇರಿದವರು. ಮೊದಮೊದಲು ಪಾಳೆಯಗಾರರು ಆಳ್ವಿಕೆಯನ್ನು ನಡೆಸಿ ಉನ್ನತ ಸ್ಥಾನಮಾನಗಳನ್ನು ಪಡೆದದ್ದು ಬಿಟ್ಟರೆ ಇತ್ತೀಚಿನ ದಿನಮಾನಗಳಲ್ಲಿ ಮ್ಯಾಸಬೇಡರು ಆಡಳಿತದಲ್ಲಿ, ರಾಜಕೀಯ ವ್ಯವಸ್ಥೆಯಲ್ಲಿ ಯಾವುದೇ ಸ್ಥಾನಮಾನಗಳು ಹೊಂದಲಿಲ್ಲ ಎಂಬುದು ವಿಷಾಧನೀಯ. ಮ್ಯಾಸಬೇಡರು ಬೇಟೆ, ಪಶುಪಾಲನೆ, ಕುರಿಸಾಕಾಣಿಕೆ ಸಣ್ಣ ಪ್ರಮಾಣದ ವ್ಯವಸಾಯ, ಕೃಷಿ ಕೂಲಿಕಾರ್ಮಿಕರಾಗಿ ಅತಂತ್ರ ಸ್ಥಿತಿಯಲ್ಲಿ ಇತ್ತ ಆರ್ಥಿಕವಾಗಿ ಪ್ರಬಲವಾಗದೆ ಜೀವನ ಸವೆಸುತ್ತಿರುವುದು ಕಂಡು ಬರುತ್ತದೆ. ಈಗಲೂ ಹಟ್ಟಿಗಳಲ್ಲಿ ಮತ್ತು ಗ್ರಾಮಗಳಲ್ಲಿ ಪ್ರತ್ಯೇಕವಾಗಿ ವಾಸಿಸುವ ಅವರು ಅತ್ಯಂತ ಸರಳ ಮತ್ತು ನಿರಾಡಂಬರ ಜೀವನವನ್ನು ನಿರ್ವಹಿಸುತ್ತಿದ್ದಾರೆ. ಹಟ್ಟಿಗಳನ್ನು ಕಟ್ಟಿಕೊಂಡಿದ್ದೆ ತಮ್ಮ ಸಂಸ್ಕೃತಿ ಮತ್ತು ಪಾವಿತ್ರ್ಯತೆಯನ್ನು ಸಂರಕ್ಷಿಸಿಕೊಳ್ಳುವ ಸಲುವಾಗಿ ಎಂಬಂತೆ ತೋರುತ್ತದೆ. ಹಟ್ಟಿಗಳು ಸಾಂಸ್ಕೃತಿಕ ವೀರರ ಹೆಸರಿನಲ್ಲಿ ಇಲ್ಲವೆ ಜನಾಂಗದ ಹಿರಿಯ ವ್ಯಕ್ತಿಗಳ ಹೆಸರಿನಲ್ಲಿರುವುದು

ಕಂಡುಬರುತ್ತದೆ. ದೊರೆಹಟ್ಟಿ, ಚನ್ನಬಸಯ್ಯನಹಟ್ಟಿ, ಗಡ್ಡದಾರ ಹಟ್ಟಿ, ಕಾಟವ್ವನಹಳ್ಳಿ, ಕಂಪಳದೇವರಹಟ್ಟಿ, ಗೋನೂರು, ಸಾಸಲಹಟ್ಟಿ, ಬಚ್ಚಬೋರನಹಟ್ಟಿ, ಕಾಡುಗೊಲ್ಲ ಮತ್ತು ಮ್ಯಾಸಬೇಡರಿಗೂ ಹಟ್ಟಿಗಳೇ ವಾಸ್ತವ್ಯದ ನೆಲೆಯಾಗಿ ಕಂಡುಬರುತ್ತವೆ. ಕಾಡುಗೊಲ್ಲರ ಹಟ್ಟಿಗಳಲ್ಲಿ ಹುಣಸೆಕಟ್ಟೆ ಗೊಲ್ಲರಹಟ್ಟಿ, ಚಿತ್ರದೇವರ ಹಟ್ಟಿ, ಕಳ್ಳಿಹಟ್ಟಿ, ಗೊಲ್ಲರಹಟ್ಟಿ, ನಂದನ ಹೊಸೂರು ಗೊಲ್ಲರಹಟ್ಟಿ, ಆವಿನಹಟ್ಟಿ ಹೀಗೆ ಹಟ್ಟಿಯ ಹೆಸರು ದೇವರ ಹೆಸರಿನಲ್ಲೋ, ವ್ಯಕ್ತಿಯ ಹೆಸರಿನಲ್ಲೊ ಸಾಂಸ್ಕೃತಿಕ ವೀರನ ಹೆಸರಿನಲ್ಲೋ ಇರುವುದು ಕಂಡುಬರುತ್ತದೆ, ಒಂದು ಸಮುದಾಯದ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನವು ಅವರು ಹೊಂದಿರುವ ವೃತ್ತಿ, ಸಂಪ್ರದಾಯಗಳು, ಜೀವನಪದ್ಧತಿ ಇವುಗಳೊಂದಿಗೆ ಸದಾ ತಳುಕು ಹಾಕಿಕೊಂಡಿದ್ದು, ಕಾಡುಗೊಲ್ಲ ಮತ್ತು ಮ್ಯಾಸಬೇಡರು ಬುಡಕಟ್ಟು ಲಕ್ಷಣಗಳನ್ನು ಉಳಿಸಿಕೊಂಡು ಬಂದಿದ್ದಾರೆ.

**ಕಾಡುಗೊಲ್ಲರ ಐತಿಹಾಸಿಕ ಹಿನ್ನೆಲೆ:**

ಕಾಡುಗೊಲ್ಲರ ಮೂಲ ಮತ್ತು ಪರಂಪರೆ ಕುರಿತು ಸಂಶೋದಕರಲ್ಲಿ ಭಿನ್ನಾಭಿಪ್ರಾಯಗಳಿವೆ. ಕಾಡುಗೊಲ್ಲರ ಬಗೆಗೆ ಮಾನವಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ವಿದ್ವಾಂಸರುಗಳು ಅಧ್ಯಯನ ಮಾಡಿ ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಪ್ರತಿಯೊಂದು ಸಮುದಾಯಕ್ಕೂ ಇರುವ ಹಿನ್ನೆಲೆಯ ಹಾಗೆ ಕಾಡುಗೊಲ್ಲ ಸಮುದಾಯಕ್ಕೂ ತನ್ನದೆ ಆದ ಪೌರಾಣಿಕ ಐತಿಹಾಸಿಕ ಸಾಮಾಜಿಕ ಹಿನ್ನೆಲೆಯಿದೆ. ಪೌರಾಣಿಕ–ಐತಿಹಾಸಿಕ ಹಿನ್ನೆಲೆಯು ಕಾಡುಗೊಲ್ಲ ಸಮುದಾಯದ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನವನ್ನು ತಿಳಿಸುತ್ತದೆ. ಕಾಡುಗೊಲ್ಲ ಸಮುದಾಯದ ಉಗಮ ಅಥವಾ ಮೂಲದ ಬಗ್ಗೆ ಪೌರಾಣಿಕವಾದ ಹಿನ್ನೆಲೆಯನ್ನು ಈ ಸಮುದಾಯದ ಸಾಂಸ್ಕೃತಿಕ ವೀರರ ಸಾಹಸಗಾಥೆಗಳಿಂದ ತಿಳಿದುಕೊಳ್ಳಬಹುದಾಗಿದೆ.

‘ಕಾಡುಗೊಲ್ಲರ ಸಾಂಸ್ಕೃತಿಕ ವೀರರಾದ ಎತ್ತಪ್ಪ, ಜುಂಜಪ್ಪ, ದೇವರದಯಾಮಾರ, ಕಾಟಪ್ಪ, ಚಿಕ್ಕಣ್ಣ, ಚಿತ್ತಯ್ಯ, ಮುಂತಾದ ವೀರರ ಬಗ್ಗೆ ತಮ್ಮದೆ ಆದ ಇತಿಹಾಸವಿದೆ. ಈ ಸಮುದಾಯವು ಸೂರ್ಯ, ಚಂದ್ರರಿಂದಲೇ ಹುಟ್ಟಿದೆ ಎಂಬ ಐತಿಹ್ಯವಿದೆ. ಸೂರ್ಯನ ವಂಶದಿಂದ ಚಿತ್ತಮುತ್ತಿ ಜನಿಸಿದರೆ ಚಂದ್ರನ ವಂಶದಿಂದ ಚಂದಮುತ್ತಿ ಜನಿಸಿದ ಎಂಬ ಪ್ರತೀತಿ ಇದೆ ಎಂಬುದಾಗಿ ಅಭಿಪ್ರಾಯಿಸುತ್ತಾರೆ’[೧೮].

‘ಕಾಡುಗೊಲ್ಲರು ಉತ್ತರ ಭಾರತದ ದೆಹಲಿ ಮತ್ತು ಸುತ್ತಮುತ್ತಲಿನ ಪ್ರದೇಶದಿಂದ ದಕ್ಷಿಣಭಾರತಕ್ಕೆ ವಲಸೆ ಬಂದವರು ಎಂಬುದಾಗಿ ಸಣ್ಣೋಬಯ್ಯರವರು ತಿಳಿಸಿದ್ದಾರೆ. ಉತ್ತರ ಭಾರತದಲ್ಲಿ ಗೊಲ್ಲರನ್ನು ಯಾದವರೆಂದು ಕರೆಯುತ್ತಾರೆ. ಯಾದವರ ಪ್ರಮುಖ ಪ್ರದೇಶಗಳಾದ ಆಯೋಧ್ಯೆ, ದ್ವಾರಕೆ, ದೇವಗಿರಿ. ಪ್ರದೇಶಗಳು ಕೂಡ ಉತ್ತರ ಭಾರತದಲ್ಲೆ ಬರುತ್ತವೆ’[೧೯]. ಪ್ರಸ್ತುತವಾಗಿ ಕಾಡುಗೊಲ್ಲರ ಬಗೆಗಿನ ಕಥೆಗಳು ಪುರಾಣಗಳು ಐತಿಹ್ಯಗಳು ಕೂಡ ದೆಹಲಿಯ ಮೂಲವನ್ನೆ ಸೂಚಿಸುತ್ತವೆ.

ಕಾಡುಗೊಲ್ಲರ ಮೂಲ ಪುರುಷರಾದ ಸೂರ್ಯವಂಶದ ಚಿತ್ತಮುತ್ತಿ ಚಂದ್ರವಂಶದ ಚಂದಮುತ್ತಿ ಅವರು ದೆಹಲಿ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಪಶುಪಾಲನೆ ಮತ್ತು ಹೈನುಗಾರಿಕೆಯಲ್ಲಿ ತೊಡಗಿದ್ದು, ಇವರಿಬ್ಬರ ಹೆಣ್ಣುಮಕ್ಕಳು ದೆಹಲಿ ಪಟ್ಟಣದಲ್ಲಿ ಹಾಲು ಮೊಸರು ಮಾರುತ್ತಿರುವಾಗ ಈ ಹೆಣ್ಣುಮಕ್ಕಳ ಸೌಂದರ್ಯಕ್ಕೆ ದೆಹಲಿಯ ನವಾಬ ಮೋಹಿತನಾಗಿ ಅವರನ್ನೆ ಮದುವೆಯಾಗಬೇಕೆಂದು ಚಿತ್ತಮುತ್ತಿ ಮತ್ತು ಚಂದಮುತ್ತಿಗೆ ಹೇಳಿ ಕಳುಹಿಸುತ್ತಾನೆ. ಈ ನವಾಬನ ದುಡುಕುತನಕ್ಕೆ ಚಂದಮುತ್ತಿ ಬಂಧುಗಳಾದ ಬಲ್ಲಾಳು ಸೋಮಗೊಂಡನಗೌಡ, ಭೂಮಮುತ್ತಿ, ಚಿತ್ತಮುತ್ತಿ, ರಾಮಚಂದ್ರಮುತ್ತಿ. ಅರೇರಾಯಗೊಂಡ, ಮರೆರಾಯಗೊಂಡ, ಎಗಡಿಮುತ್ತಿ, ಅಜ್ಜಿಮುತ್ತಿ, ಅತ್ತೆರಾಯ, ಮುತ್ತೆರಾಯ, ಕರಡಿ ಬುಳ್ಳನಾಯ್ಕ, ಬಾಲಮುತ್ತನಾಯ್ಕ ಮೊದಲಾದವರು ಉದ್ರೇಕಿತರಾಗಿ ಹಾಲಿನಂತಹ ಕುಲ ನೀರಾಗಬಾರದು ಗೋಕುಲದ ಹೆಣ್ಣುಮಕ್ಕಳನ್ನು ತುರುಕರಿಗೆ ಕೊಟ್ಟು ಮದುವೆ ಮಾಡುವುದು ನಮ್ಮ ಗೊಲ್ಲಾಳಿಕೆಗೆ ಅಪಮಾನವೆಂದು ತಿಳಿದು ದೆಹಲಿ ಪಟ್ಟಣವನ್ನು ಬಿಟ್ಟು ಸಾರ್ವಾಡೇಶ್ವರ ಸ್ವಾಮಿಗಳ ನೇತೃತ್ವದಲ್ಲಿ ದಕ್ಷಿಣ ಭಾರತದ ಕಡೆ ವಲಸೆ ಹೋಗಲು ನಿರ್ಧರಿಸಿದರುಈ ವಿಷಯತಿಳಿದ ನವಾಬ ದೆಹಲಿ ಬಿಟ್ಟು ಹೋಗುವ ಗೊಲ್ಲರು ಇಲ್ಲಿರುವ ಹದ್ದು ಕಾಗೆಗಳನ್ನು ಒಯ್ಯುವರೆ? ಎಂದು ತಿರಸ್ಕಾರದ ಮಾತಾನಾಡಿದ ನವಾಬನಿಗೆ ಸವಾಲಾಗಿ ಬರಡು ಕುರಿಗಳನ್ನು ಕಡಿದು ಗಾಡಿಗೆ ತುಂಬಿದಾಗ ಹದ್ದು ಕಾಗೆಗಳೆಲ್ಲ ಮಾಂಸದ ಬಂಡಿಯನ್ನು ಹಿಂಬಾಲಿಸಿ ಹೊರಟುವಂತೆ ಆದ್ದರಿಂದ ದೆಹಲಿ ಪಟ್ಟಣದಲ್ಲಿ ಹದ್ದು ಕಾಗೆಗಳು ಇಂದಿಗೂ ಕಡಿಮೆ ಎಂದು ಹೇಳುತ್ತಾರೆ[೨೦].

ದೆಹಲಿಯಿಂದ ಹೊರಟ ಕಾಡುಗೊಲ್ಲರ ಹದಿನೆಂಟು ಜಾತಿ ಹನ್ನೆರಡು ಕೈವಾಡದವರು ದಕ್ಷಿಣ ಭಾರತದ ಕಡೆಗೆ ಹೊರಟು ಸರ್ವಾಡೇಶ್ವರ ಸ್ವಾಮಿಗಳ ನೇತೃತ್ವದಲ್ಲಿ ಮಧ್ಯಪ್ರದೇಶದ ಗೋಂಡಾರಣ್ಯದ ಹತ್ತಿರ ಬಂದಾಗ ನರ್ಮದಾ ನದಿ ತುಂಬಿ ಹರಿಯುತ್ತಿತ್ತು ನವಾಬನ ಸೈನಿಕರು ಬೆನ್ನಟ್ಟಿ ಬರುತ್ತಿದ್ದರು. ಹಿಂದಕ್ಕೆ ತಿರುಗಿ ಹೋಗುವಂತಿರಲಿಲ್ಲ. ಸರ್ವಾಡೇಶ್ವರ ಸ್ವಾಮಿಗಳ ಶಿಷ್ಯ ಜಲಧಿಬೊಪ್ಪರಾಯನ ಭಕ್ತಿಗೆ ಮೆಚ್ಚಿ ನದಿ ಎರಡು ಭಾಗವಾಗಿ ಮಧ್ಯದಲ್ಲಿ ದಾರಿ ಮಾಡಿಕೊಡುತ್ತಾಳೆ. ನಂತರ ನದಿ ಕೂಡಿಕೊಳ್ಳುತ್ತದೆ. ನವಾಬನ ಸೈನಿಕರು ನದಿ ದಾಟಲಿಕ್ಕೆ ಸಾಧ್ಯವಾಗುವುದಿಲ್ಲ. ಹಾಗೆಯೇ ಜಲದಿ ಬೊಪ್ಪರಾಯನ ಮೆಚ್ಚಿದ ಗಂಗಾದೇವಿ ಪುನಃ ಅವನನ್ನು ಬದುಕಿಸುತ್ತಾಳೆಂಬುದಾಗಿ ತಿ.ನಂ.ಶಂಕರನಾರಾಯಣರವರು ಹೇಳುತ್ತಾರೆ. ಆದರೆ ಸಣ್ಣೋಬಯ್ಯರವರು ನವಾಬರ ಸೈನಿಕರು ಬೆನ್ನಟ್ಟಿ ಬಂದಾಗ ಗೋಂಡಾರಣ್ಯದಲ್ಲಿ ಬೇಟೆಯಾಡಿ ಜೀವಿಸುತ್ತಿದ್ದ ಬೇಡರು ಬಿಲ್ಲು, ಬಾಣ, ಕವಣೆಕಲ್ಲುಗಳಿಂದ ನವಾಬನ ಸೈನ್ಯವನ್ನು ಹಿಮ್ಮೆಟ್ಟಿಸಿ ಗೊಲ್ಲ ಕಂಪಳಕ್ಕೆ ರಕ್ಷಣೆ ಕೊಡುತ್ತಾರೆ, ಅಂದಿನಿಂದ ಗೊಲ್ಲರು ಮತ್ತು ಬೇಡರು ಅಣ್ಣ ತಮ್ಮಂದಿರಾಗಿ ಸರ್ವಾಡೇಶ್ವರ ಸ್ವಾಮಿಗಳನ್ನು ಗುರುಗಳೆಂದು ಸ್ವೀಕರಿಸುತ್ತಾರೆ. ನಂತರದಲ್ಲಿ ಮಧ್ಯಪ್ರದೇಶದಿಂದ ಹೊರಟ ಗೊಲ್ಲರ ಕಂಪಳ ಮಹಾರಾಷ್ಟ್ರದ ಮಾರ್ಗವಾಗಿ ಬಂದು ಅನಂತರ ಗುತ್ತಿ ಮಾಪಲ್ಲಿ. ರೇಪಲ್ಲಿ ಪ್ರದೇಶಗಳಲ್ಲಿ ನೆಲೆಸಿದರು. ಕಾಲಕ್ರಮೇಣ ಆಂಧ್ರದ ಗಡಿಭಾಗಗಳಿಂದ ವಿಜಯನಗರದ ಸುತ್ತಮುತ್ತ ಪಶುಪಾಲನೆ ವೃತ್ತಿ ಕೈಗೊಂಡರು.

ಸರ್ವಾಡೇಶ್ವರ ಸ್ವಾಮಿಗಳ ನೇತೃತ್ವದಲ್ಲಿ ಬಂದಂತಹ ಕಾಡುಗೊಲ್ಲರು ಚಿತ್ರದುರ್ಗ ತುಮಕೂರು ಬಳ್ಳಾರಿ ಮಂಡ್ಯ, ಮೈಸೂರು, ಹಾಸನ ಮೊದಲಾದ ಜಿಲ್ಲೆಗಳಲ್ಲಿ ಹರಡಿಕೊಂಡರು. ಕಾಡುಗೊಲ್ಲರ ಭಕ್ತರ ಅಪೇಕ್ಷೆಯಂತೆ ಚಿತ್ರದುರ್ಗ ಜಿಲ್ಲೆಯ ರಾಮನಹಳ್ಳಿಯಲ್ಲಿ ರಾಮಲಿಂಗ, ಕೂಡ್ಲಹಳ್ಳಿಯಲ್ಲಿ ಪಾರ್ಥಲಿಂಗ ಗೋಸೀಕೆರೆ ಮತ್ತು ಹರ್ತಿಕೋಟೆಯಲ್ಲಿ ವೀರಭದ್ರಸ್ವಾಮಿ, ಕರಿಯೋಬೇನಹಳ್ಳಿಯಲ್ಲಿ ಚಂದಮುತ್ತಿ ದೈವಗಳು ನಿಂತವು. ಹಾಗಾಗಿಯೇ ತಾಳವಟ್ಟ ಮತ್ತು ರಾಮೇಗೌಡ ನಿಂತಸ್ಥಳವನ್ನು ರಾಮನಹಳ್ಳಿ ಎಂದು ಹೆಸರಿಟ್ಟರು. ಕರಿಯೋಬೆನಹಳ್ಳಿ, ತಾಳವಟ್ಟ ಮತ್ತು ರಾಮನಹಳ್ಳಿ ಎಂಬ ಮೂರು ಹಟ್ಟಿಗಳನ್ನು ಕಾಡುಗೊಲ್ಲರು ಕಟ್ಟೆಮನೆಗಳೆಂದು ಕರೆದುಕೊಂಡರು. ಎಡ್ಗರ್‌ಥರ್‌ಸ್ಟನ್‌ರವರು ಕಾಡುಗೊಲ್ಲರನ್ನು ಕುರಿತಾದ ತಮ್ಮ ಅಧ್ಯಯನದಲ್ಲಿ ಕಾಡುಗೊಲ್ಲರು ಉತ್ತರ ಭಾರತದಿಂದ ಬಂದವರೆಂದು ದಾಖಲಿಸಿದ್ದಾರೆ. ಜೊತೆಗೆ ಕಾಡುಗೊಲ್ಲರ ಸಂಪ್ರದಾಯಗಳು ಕಾಡುಕುರುಬರ ಸಂಪ್ರದಾಯಗಳನ್ನು ಹೋಲುತ್ತವೆ ಎಂದು ಮತ್ತು ಅವರು ಉತ್ತರ ಭಾರತದಿಂದ ಬಂದವರು ಎಂಬ ಅಂಶಕ್ಕೆ ಪುಷ್ಟಿ ನೀಡಿದ್ದಾರೆ.

ಬಿ.ವಿ.ನಾಗರಾಜ ಅವರು ಕಾಡುಗೊಲ್ಲರ ಕುರಿತಾಗಿ ಅಧ್ಯಯನ ಮಾಡಿದ್ದು 'ಗೊಲ್ಲರಹಟ್ಟಿ' ಎಂಬ ಗ್ರಂಥದಲ್ಲಿ ಕಾಡುಗೊಲ್ಲರು ದೆಹಲಿ ಮತ್ತು ಸುತ್ತಮುತ್ತಲಿನ ಗ್ರಾಮ ಪಟ್ಟಣಗಳಲ್ಲಿ ವಾಸಿಸುತ್ತಿದ್ದರು ಎಂಬುದಾಗಿ ಹೇಳುತ್ತಾರೆ. ಗೊಲ್ಲರು ಮೊಗಲರ ಆಳ್ವಿಕೆಯ ಹಿಂಸೆತಾಳಲಾರದೆ ಆ ಬುಡಕಟ್ಟಿನ ಎಲ್ಲರೂ ದಕ್ಷಿಣ ಭಾರತಕ್ಕೆ ವಲಸೆ ಬಂದರು. ದಕ್ಷಿಣ ಭಾರತದ ಕರ್ನಾಟಕ ರಾಜ್ಯದ ಪ್ರಮುಖ ಬಯಲು ಪ್ರದೇಶಗಳಾದ ಚಿತ್ರದುರ್ಗ, ತುಮಕೂರು, ಬಳ್ಳಾರಿ, ಬೆಂಗಳೂರು, ರಾಯಚೂರು, ಕೋಲಾರ, ಹಾಸನ, ಮುಂತಾದ ಜಿಲ್ಲೆಗಳಲ್ಲಿ ವಾಸಿಸಲು ಅವರು ಪ್ರಾರಂಭಿಸಿದರು ಎಂದು ಅಭಿಪ್ರಾಯಿಸುತ್ತಾರೆ.[೨]

ಈ ಮೇಲಿನಂತೆ ಕಾಡುಗೊಲ್ಲರು ಉತ್ತರಭಾರತದ ಅಥವಾ ದೆಹಲಿಯ ಸುತ್ತಮುತ್ತಲಿನ ಮೂಲದವರು ಎಂಬ ನಂಬಿಕೆಗಳು, ಕಥೆಗಳು, ದಾಖಲೆಗಳು ಇವೆ. ಆ ನಂಬಿಕೆಯಿದ್ದರೂ ಕಾಡುಗೊಲ್ಲರು ಕರ್ನಾಟಕದ ಮೂಲನಿವಾಸಿಗಳು ಎಂಬುದಾಗಿ ಹಲವಾರು ಉಲ್ಲೇಖಗಳಿಂದ ತಿಳಿದು ಬರುತ್ತದೆ.

ಶಾಸನಗಳಿಂದ ಉಲ್ಲೇಖಿತವಾಗಿರುವ ಅಂಶಗಳನ್ನು ಗಮನಿಸಿದಾಗ ಕಾಡುಗೊಲ್ಲರು ಕರ್ನಾಟಕದ ಮೂಲದವರೇ ಎಂಬುದಾಗಿ ಮನವರಿಕೆಯಾಗುತ್ತದೆ. ಕ್ರಿ.ಶ ೪ನೇ ಶತಮಾನದ ಕದಂಬರ ಆಳ್ವಿಕೆಯ ಕಾಲದಲ್ಲಿ ಕೆತ್ತಲಾಗಿರುವ ಶಾಸನಗಳಲ್ಲಿ ಆನೇಕ ಗ್ರಾಮಗಳು ಉಲ್ಲೇಖಿತವಾಗಿದ್ದು, ಈ ಗ್ರಾಮದ ಹೆಸರುಗಳು ಸಾಮಾನ್ಯವಾಗಿ ಪಲ್ಲಿ, ಪಟ್ಟಿ, ಖೇಟ ಎಂದು ಅಂತ್ಯವಾಗಿರುವುದು ಗಮನಿಸಬಹುದು. ಪಟ್ಟಿ, ಖೇಟಗಳು ಅರಣ್ಯವಾಸಿಗಳ ತಾಣಗಳಾಗಿದ್ದವು ಎಂದು ತಿಳಿಯಬಹುದು.

ಕ್ರಿ.ಶ ೧೨ನೇ ಶತಮಾನದಲ್ಲಿ ಗೊಲ್ಲಜನಾಂಗದ ಶರಣ 'ಗುಂಡುಬ್ರಹ್ಮಯ್ಯ' ಎಂಬುವನು ಇದ್ದನು ಅವನು ತನ್ನ ಮಹಿಮೆಯಿಂದ ಓರಂಗಲ್ಲು ಕೋಟೆ ಮತ್ತು ಗೋಲ್ಕೊಂಡ ಕೋಟೆಗಳು

ಕಟ್ಟಿದನು. ಈ ಕಾರಣಕ್ಕಾಗಿ ಅಂದಿನ ಮುಸ್ಲಿಂ ದೊರೆಯು ಗೋಲ್ಕೊಂಡ ಎಂದು ಹೆಸರಿಟ್ಟನು. ಈಗಿನ ಗೋಲ್ಕೊಂಡ ಎಂಬುದು ಗೊಲ್ಲನಕೋಟೆ ಎಂದಾಗಿತ್ತು ಎಂದು ಊಹಿಸಬಹುದು. ಆ ಸಮಯದಲ್ಲಿ ಓರಂಗಲ್ಲು ಗಣಪತಿ ಎಂಬ ರಾಜನ ಆಳ್ವಿಕೆಗೆ ಒಳಪಟ್ಟದ್ದು ರಾಜನ ಕಾಲಮಾನ ಕ್ರಿ.ಶ ೧೮೮೯ ಆಗಿದ್ದಿತು ಎಂದು ಹುಲ್ಲೂರ ಶ್ರೀನಿವಾಸ ಜೋಯಿಸರು ಅಭಿಪ್ರಾಯಿಸುತ್ತಾರೆ.

ಕ್ರಿ.ಶ ೯೧೫ರ ಕಾಲದ ನಂಜನಗೂಡಿನ ಶಾಸನ ಸಂಖ್ಯೆ ೧೩೯ರಲ್ಲಿ 'ಪೆರೋಳ್ಟೆ' ಎಂಬ ಪದ ಉಲ್ಲೇಖಿತವಾಗಿದೆ. ಪೆರೋಳ್ಟೆ ಎಂದರೆ ಊರಿನ ವಸತಿಗೃಹಗಳ ಸುತ್ತ 'ವಾಸಸ್ಥಳಗಳ ಸುತ್ತ ಸಾಧಾರಣವಾಗಿ ದೊಡ್ಡ ಗಾತ್ರದ ಬೇಲಿ ಸುತ್ತುವರಿದಿರುವುದನ್ನು ಪೆರೋಳ್ಟೆ ಎಂದು ಕರೆಯಬಹುದು. (ಬಳ್ಟೆ–ಬಟ್ಟೆ–ಬೇಲಿ) ಎಂಬುದಾಗಿ ಡಾ.ಎಂ.ಚಿದಾನಂದ ಮೂರ್ತಿಯವರು ಅಭಿಪ್ರಾಯಪಡುತ್ತಾರೆ.[೨೨] ಪೆರೋಳ್ಟೆ ಎಂಬ ಪದವೇ 'ಪಾರಿಬೇಲಿ' ಎಂಬುದಾಗಿ ಜನಸಾಮಾನ್ಯರ ಭಾಷೆಯಲ್ಲಿ ವಿಕಾಸವಾಗಿರುವ ಸಾಧ್ಯತೆ ಇದೆ.

ಕ್ರಿ.ಶ ೧೩೩೦ರ ಅವಧಿಯ ಕೊಳ್ಳೆಗಾಲ ತಾಲ್ಲೂಕಿನ ಸಿಂಗನಲ್ಲೂರು ಗ್ರಾಮದಲ್ಲಿ ದೊರಕಿರುವ ಶಾಸನವಿದೆ. ಅದರಲ್ಲಿ ಅಂದಿನ ಹಳ್ಳಿ ಹಿರಿಯೂರು ಎಂಬ ಗ್ರಾಮದಲ್ಲಿ ಬಳಕೆಯಲ್ಲಿದ್ದ ಹದಿನೆಂಟು ಜಾತಿಗಳ ಬಗ್ಗೆ ಉಲ್ಲೇಖವಿದೆ. ಆ ಜಾತಿಗಳಲ್ಲಿ 'ಗೊಲ್ಲಗೌಡನೂ' ಒಂದು ಜಾತಿಗೆ ಸೇರಿದ್ದವನು ಎಂದು ಪ್ರಸ್ತಾಪಿಸಲಾಗಿದೆ.

ಕರ್ನಾಟಕದ ಕೈಫಿಯತ್ ಸಂಪುಟದಲ್ಲಿ ಗೊಲ್ಲಜನಾಂಗದ ಜೀವನವಿಧಾನಕ್ಕೆ ಸಂಬಂಧಿಸಿದ ಅನೇಕ ಮಾಹಿತಿಗಳು ಸಿಗುತ್ತವೆ. ದರೋಜಿ ಕೈಫಿಯತ್ತಿನಲ್ಲಿ ಗೊಲ್ಲ ಜನಾಂಗದ ಕಲ್ಯಾಣಪಟ್ಟಣದ ಸಿಂಧೂ ಬಲ್ಲಾಳರಾಯನು ಕಂಪಲಿ ಬಳಿ ಸೋಮೇಶ್ವರ ದೇವರಿಗೆ ತನ್ನ ಭಕ್ತಿಯ ಕುರುಹಾಗಿ ಗುಡಿಯನ್ನು ಕಟ್ಟಿಸಿಕೊಟ್ಟ ವಿಷಯ ತಿಳಿದುಬರುತ್ತದೆ.

ಹಳೆಕುರುಗೋಡಿನಲ್ಲಿ (ಬಳ್ಳಾರಿ ಜಿಲ್ಲೆ) ಜನರಿಗೆ ಆರಾಧ್ಯ ದೈವವಾಗಿರುವ ಆಂಜನೇಯ ದೇವರ ಗುಡಿ ಇದೆ ೧೫೯೦ ರಲ್ಲಿ ಅದರ ಸಮೀಪದಲ್ಲಿ ಗೊಲ್ಲರ ಯಲ್ಲಪ್ಪ ಎಂಬುವವನು ನಾಲ್ಕೂ ಬುರುಜಿನ ಕಿಲ್ಲೆ ಕಟ್ಟಿಸಿಕೊಂಡನು. ಮೊಘಲ್ ಆಳ್ವಿಕೆಯ ಸಮಯದಲ್ಲಿ ಮೊಘಲ್ ದೊರೆಗಳ ಅಧಿಕಾರದ ಅಧೀನಕ್ಕೆ ಅವನು ಒಳಪಟ್ಟಿದ್ದನು. ಈ ವಿಚಾರವನ್ನು ಕುರುಗೋಡು ಕೈಫಿಯತ್ ವಿವರಿಸುತ್ತದೆ. ಕನ್ನಡದ ಮೊಟ್ಟಮೊದಲ ಗದ್ಯಕೃತಿಯಾದ ಶಿವಕೋಟ್ಯಾಚಾರ್ಯರ 'ವಡ್ಡಾರಾಧನೆ'ಯಲ್ಲಿ (ಕ್ರಿ.ಶ ೯೨೦) ಗೊಲ್ಲಗೇರಿಯ ಬಗೆಗೆ ವಿವರಣೆ ಇದೆ. ಕನ್ನಡದ ಆದಿಕವಿ ಪಂಪನ ಚಂಪೂಕಾವ್ಯ ಕೃತಿಯಾದ ವಿಕ್ರಮಾರ್ಜುನ ವಿಜಯದಲ್ಲಿ 'ಗೋವಳ' ಎಂಬ ಶಬ್ದದ ಬಳಕೆ ಆಗಿರುವುದು ಕಂಡುಬರುತ್ತದೆ. ಪೊನ್ನಕವಿ (ಕ್ರಿ.ಶ ೯೨೦)ಯ ರಚಿತ 'ಶಾಂತಿನಾಥ ಪುರಾಣದಲ್ಲಿ' ಗೊಲ್ಲಣಿಗೆ ಎಂಬ ಪದ ಬಳಕೆಯನ್ನು ಗುರುತಿಸಬಹುದು. ಗೊಲ್ಲರು ಹೆಣೆದ ಬೆರಗುಗಳನ್ನು ಗೊಲ್ಲಣಿಗೆ ಎಂದು ಕರೆಯುವುದುಂಟು. ಅವು ಈ ಜನಾಂಗದಲ್ಲಿ ಬಳಕೆಯಲ್ಲಿರುವುದು ಕಂಡುಬರುತ್ತದೆ.

ಕಾಡುಗೊಲರ್ಲ ಭಾಷೆ ಅಚ್ಚಗನ್ನಡವಾಗಿದೆ. ಉದಾಹರಣೆಗೆ ಕಾಡುಗೊಲ್ಲರ ಬೆಡಗುಗಳಾದ ಕಲ್ಲೇರು, ಪನ್ನೋರು, ಅಜ್ಜೇರು, ಕಂಬೇರು, ಸೋಮನೋರು. ವ್ಯಕ್ತಿಯ ಹೆಸರುಗಳಲ್ಲಿ ಸಿರಿಯಣ್ಣ, ಪಾತಣ್ಣ, ಚಿಕ್ಕಣ್ಣ, ಚಿತ್ತಣ್ಣ, ಕಲ್ಲಿಬುಳ್ಳಣ್ಣ, ಜಂಪಣ್ಣ ಇವೆಲ್ಲಾ ಹೆಸರುಗಳನ್ನು ನೋಡಿದರೆ ಕಾಡುಗೊಲ್ಲರು ಕರ್ನಾಟಕದ ಕನ್ನಡ ಮೂಲದವರೆಂಬುದಾಗಿ ಸ್ಪಷ್ಟವಾಗುತ್ತದೆ. ಅವರ ಭಾಷಿಕ ರಚನೆಯು ತುಂಬ ವಿಭಿನ್ನವಾಗಿದೆ. ಅದನ್ನು ಅವರ ಐತಿಹ್ಯ ಪುರಾಣಗಳು ಅವುಗಳಲ್ಲಿ ಕೇತೇದೇವರ ಪುರಾಣ, ಜುಂಜಪ್ಪ ಮತ್ತು ಎತ್ತಪ್ಪನವರ ಅದ್ಭುತ ಪವಾಡಗಳು ಮುಂತಾದವುಗಳಿಂದ ಗಮನಿಸಬಹುದು. ಈ ಹಿನ್ನೆಲೆಯನ್ನು ಗಮನಿಸಿದಾಗ ಕಾಡುಗೊಲ್ಲರ ಸಾಂಸ್ಕೃತಿಕ ಮತ್ತು ಸಾಮಾಜಿಕ ಪರಂಪರೆಯನ್ನು ಹಲವಾರು ಆಧಾರಗಳ ಮೂಲಕ ಅರ್ಥೈಸಿಕೊಳ್ಳಬಹುದು.

ಗೊಲ್ಲ ಸಮುದಾಯದವರು ಭಾರತದಾದ್ಯಂತ ವಾಸವಾಗಿದ್ದು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಗುರುತಿಸಲ್ಪಡುತ್ತಾರೆ. ಉತ್ತರ ಭಾರತದ ಬಿಹಾರ, ಉತ್ತರಪ್ರದೇಶ, ಪಂಜಾಬ್ ಮತ್ತು ಇತರೆ ಭಾಗಗಳಲ್ಲಿ ಅವರನ್ನು ಅಹಿರ್, ಜಾತ್, ಸಿಂಗ್, ಯಾದವ ಮುಂತಾದ ಹೆಸರುಗಳಿಂದ ಕರೆಯುತ್ತಾರೆ, ಕೇರಳದಲ್ಲಿ ಅವರು ಯಾದವ ಮತ್ತು ಮಣಿಯಾಣಿಗಳೆಂದು ಕರೆಯುತ್ತಾರೆ. ತಮಿಳುನಾಡಿನಲ್ಲಿ ಇಡಯನ್, ಕೋನಾರ್ ಗಳೆಂದು ಗುರುತಿಸಿಕೊಂಡಿದ್ದಾರೆ. ಆಂಧ್ರಪ್ರದೇಶದಲ್ಲಿ ರೆಡ್ಡಿ, ಗೊಲ್ಲ ಮುಂತಾದ ಹೆಸರುಗಳಿಂದ ಕರೆಯುತ್ತಾರೆ, ಕರ್ನಾಟಕದಲ್ಲಿ ಗೊಲ್ಲ ಎಂಬ ವಾಡಿಕೆಯಿದೆ. ಈ ಎಲ್ಲಾ ಬೇರೆ ಬೇರೆ ರಾಜ್ಯಗಳ ಗೊಲ್ಲ ಸಮುದಾಯದವರು ಆಯಾ ರಾಜ್ಯದ ಪ್ರಾದೇಶಿಕ ಬಳಕೆಯ ಹೆಸರಿನ ಜೊತೆಗೆ ಭಾರತದಾದ್ಯಂತ 'ಯಾದವ' ಎಂಬ ಹೆಸರಿನೊಂದಿಗೆ ಗುರುತಿಸಿಕೊಳ್ಳುವುದು ಕಂಡುಬರುತ್ತದೆ.

**ಮ್ಯಾಸಬೇಡರ ಐತಿಹಾಸಿಕ ಹಿನ್ನೆಲೆ:**

ಬೇಡ ಜನಾಂಗವು ಅತ್ಯಂತ ಪ್ರಾಚೀನ ಹಿನ್ನೆಲೆಯನ್ನು ಹೊಂದಿದೆ. ಅದಕ್ಕೆ ಬೇಟೆಯ ವೃತ್ತಿ ಎಷ್ಟು ಹಳೆಯದೊ ಬೇಡನು ಅಷ್ಟೇ ಹಳಬ, ಬೇಡರ ದೈಹಿಕ ಸದೃಢತೆ, ಧೈರ್ಯ ಸಾಹಸಗಳಿಗೆ ಹೆಸರಾದವರು. ಅವರ ಇತಿಹಾಸ ಬಹಳ ಪ್ರಾಚೀನವಾದುದು. ಕಾಡು ಮತ್ತು ಬೇಟೆಯ ಸಂಬಂಧದೊಂದಿಗೆ ಬೆಳೆದ ಬೇಡನದು ಮೂಲ ಸಂಸ್ಕೃತಿ. ಆದಿಕವಿ ಎಂದು ಹೆಸರಾದ ಮಹರ್ಷಿ ವಾಲ್ಮೀಕಿ ಬೇಡ ಜನಾಂಗದವನು. ಬೇಡ ಎಂದರೆ A tribe of forest people living by the chase ಎಂಬ ಅರ್ಥವುಂಟು[೨]. ಬೇಟೆಯ ಮೂಲಕವೇ ಗುರುತಿಸಿಕೊಂಡವರನ್ನು ಬೇಡರು ಎಂದು ಕರೆದರು. ಪುಳಿಂದ, ಶಬರ, ಕಿರಾತ, ನಿಷಾದ ಇವು ಬೇಡ ಪದದ ಪರ್ಯಾಯಪದಗಳಾಗಿವೆ.

ಭಾರತದಲ್ಲಿ ಬೇಡರನ್ನು ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಕರ್ನಾಟಕದಲ್ಲಿ ನಾಯಕ ವಾಲ್ಮೀಕಿ, ಬೇಡ, ತಳವಾರ, ಪರಿವಾರನಾಯಕ ಎಂದು ಕರೆಯುತ್ತಾರೆ. ಆಂಧ್ರದಲ್ಲಿ ಬೋಯಾ, ಕಿರಾತಕ, ನಿಷಾದ, ಬಿಲ್ಲ, ಚೆಂಚು ಎಂದು ಕರೆಯುತ್ತಾರೆ. ತಮಿಳುನಾಡಿನಲ್ಲಿ ವೇಡನ್, ನಾಯಕ, ನಾಯಕರ್, ನಾಯಕ್ಸ, ವೇತುಕನ್ ಎಂದು, ಉತ್ತರ ಪ್ರದೇಶದಲ್ಲಿ ಜಾಟ್, ಪಂಜಾಬಿನಲ್ಲಿ ಬಿಲ್,

ಬಾಲಮೀಕಿ, ವಾಲ್ಮೀಕಿನಾಯಕ, ಯಾಂಗ್, ಕೇರಳದಲ್ಲಿ ನಾಯಕ್, ಕಾಶ್ಮೀರದಲ್ಲಿ ಡೋಗ್ರಾ, ಸಿಲೋನಿನ ದ್ವೀಪದಲ್ಲಿ ವೆಡ್ಡರೆಂದು ಕರೆಯುತ್ತಾರೆ. ಹಾಗಾಗಿ ಇವರೆಲ್ಲರೂ ಒಂದೇ ಬುಡಕಟ್ಟಿಗೆ ಸೇರಿದವರು[೨೪].

ಬೇಡ ಜನಾಂಗದ ಬಗೆಗೆ ಕೃತಯುಗದಿಂದಲೇ ತಿಳಿಯುತ್ತದೆ. ಕೃತಯುಗದಲ್ಲಿ ನಳಚಕ್ರವರ್ತಿ ಸತ್ಯಪರಿಪಾಲನೆಗಾಗಿ ಸಾಕಷ್ಟು ಕಷ್ಟಗಳನ್ನು ಅನುಭವಿಸಿ ಪುರಾಣ ಪ್ರಸಿದ್ಧನಾಗಿದ್ದಾನೆ. ಅವನು ನಿಷಾದ ದೇಶದ ನಿಷಾದರ ದೊರೆಯಾಗಿದ್ದನು. ನಿಷಾದರು ಬೇಡಜನಾಂಗಕ್ಕೆ ಸೇರಿದವರೆಂದು ವ್ಯಕ್ತಪಟ್ಟಿದೆ. ನಳಚಕ್ರವರ್ತಿ ಬಳಿ ಕೆಲವು ಬೇಡರು ಸಿಪಾಯಿಗಳಾಗಿ ಸೇವೆಸಲ್ಲಿಸುತ್ತಿದ್ದರೆಂಬುದಕ್ಕೆ ನಳಚರಿತ್ರೆಯು ಆಧಾರ ಒದಗಿಸುತ್ತದೆ. ವೇನ ಮತ್ತು ಮಹರ್ಷಿವಾಲ್ಮಿಕಿ ಇದೇ ಯುಗಕ್ಕೆ ಸೇರಿದವರು. ತ್ರೇತ್ರಾಯುಗದ ಶ್ರೀ ರಾಮಚಂದ್ರನಿಗೆ ತಾನು ತಿಂದಬೋರೆಹಣ್ಣುಗಳನ್ನು ತಿನ್ನಿಸಿ ತೃಪ್ತಳಾಗಿ ಶರೀರವನ್ನು ತ್ಯಜಿಸಿದ ಮಹಾಭಕ್ತೆ ಶಬರಿ. ಶ್ರೀ ರಾಮಚಂದ್ರನ ಪರಮ ಸ್ನೇಹಿತ ಬೇಡರದೊರೆ ಗುಹ. ದ್ವಾಪರಯುಗದ ಧರ್ಮವ್ಯಾಧ ಮತ್ತು ಏಕಲವ್ಯ, ಬೇಡರಕಣ್ಣಪ್ಪ ಪುರಾಣ ಪ್ರಸಿದ್ಧ ಪುರುಷರಾಗಿರುವರು. ಯಾವುದೇ ಸಮುದಾಯ ತನ್ನ ಗುರುತು ಹಾಗೂ ಶ್ರೇಷ್ಟತೆಗಳನ್ನು ತನ್ನದೇ ಆದ ಐತಿಹಾಸಿಕ ಮತ್ತು ಸಾಂಸ್ಕೃತಿಕ ವೈಶಿಷ್ಟ್ಯತೆಗಳ ಮೂಲಕವೇ ಹೇಳಿಕೊಳ್ಳುತ್ತದೆಂಬುದು ವಾಸ್ತವವಾದ ಸಂಗತಿ. ಹಾಗೆಯೆ ಪೌರಾಣಿಕ ಮತ್ತು ಐತಿಹಾಸಿಕ ಅಂಶಗಳನ್ನು ತನ್ನ ಸಮರ್ಥನೆಗೆ ಹಿನ್ನೆಲೆಯಾಗಿ ಬಳಸಿಕೊಳ್ಳುವುದು ಸಾಮಾನ್ಯ ಉಪಕ್ರಮ. ಇದಕ್ಕೆ ಬೇಡ ಸಮುದಾಯವು ಹೊರತಲ್ಲ.

ಬೇಡ ಜನಾಂಗದ ಮೂಲ ಪುರುಷರ ಬಗ್ಗೆ ನಿಖರವಾಗಿ ಹೇಳಲಾಗದಿದ್ದರು ಕೆಲವು ಐತಿಹ್ಯ ನಂಬಿಕೆಗಳು ಈ ಬಗ್ಗೆ ಮಾಹಿತಿಯನ್ನು ನೀಡುತ್ತವೆ. ಧ್ರುವಚಕ್ರವರ್ತಿಗೆ ಅಂಗನೆಂಬ ಮಗನಿದ್ದನು.ಈ ಅಂಗನಿಗೆ ವೇನನೆಂಬ ಮಗ ಜನಿಸಿದನು. ಅವನಿಗೆ ಇಬ್ಬರು ಮಕ್ಕಳು. ಹಿರಿಯವನಾದ ಬಾಹುಕ ವಿಲಕ್ಷಣ ರೂಪದವನು. ಎರಡನೆ ಮಗ ಪೃಥು ಚಕ್ರವರ್ತಿಯಾಗುವ ಎಲ್ಲಾ ಲಕ್ಷಣಗಳನ್ನು ಹೊಂದಿದ್ದನು. ಅವನು ಚಕ್ರವರ್ತಿಯಾಗಿ ಪ್ರಖ್ಯಾತಿ ಪಡೆದನು. ಬಾಹುಕನು ಜ್ಯೇಷ್ಠ ಪುತ್ರನಾದರೂ ಅಧಿಕಾರ ವಂಚಿತನಾಗಿ ನೊಂದು ತನ್ನ ಸಹವರ್ತಿಗಳೊಡನೆ ಕಾಡು ಸೇರಿ ಅಲ್ಲಿಯೇ ಜೀವನವನ್ನು ಮುಂದುವರಿಸಿದನು. ಅವರನ್ನು ವ್ಯಾಧರೆಂದು ಕರೆಯಲಾಯಿತು[೨೫].

ಇನ್ನೊಂದು ಕಥೆಯ ಪ್ರಕಾರ ಆದಿಮೂಲನಾದ ಭಗವಂತನು ಬೇಡರ ಚಂಚುಲಕ್ಷ್ಮೀಯನ್ನು ಮದುವೆಯಾಗುವ ಮೂಲಕ ಬೇಡರ ವಂಶವನ್ನು ಬೆಳೆಸಿದನೆಂದು ಹೇಳಲಾಗಿದೆ. ವಾಲ್ಮಿಕಿ ಮತ್ತು ಸನಾತನೆ ಎಂಬ ದಂಪತಿಗಳಿಗೆ ಕಾಮಗೇತಿ, ಮಂದ, ಮುಳ್ಳ, ಮುಚ್ಚ, ಮೀನಗ, ಮಲ್ಲ, ಮಲ್ಯ ಎಂಬ ಏಳು ಮಕ್ಕಳು ಜನಿಸಿದರು. ವಾಲ್ಮೀಕಿಯು ಈ ಏಳು ಮಕ್ಕಳೊಡನೆ ಕಿರಾತ ವೃತ್ತಿಯಲ್ಲಿ ತೊಡಗಿದ್ದನು. ಕಾಮಗೇತಿಗೆ ಕಣ್ಣಪ್ಪನೆಂಬುವನು ಜನಿಸಿದನು. ೬೩ ಪುರಾತನರಲ್ಲಿ ಅವನು ಒಬ್ಬ. ಅವನ ವಂಶ ವೃದ್ಧಿಯಾಗಿ ೨೮ ಬೆಡಗುಗಳಾದವು. ಇಂದಿಗೂ ಬೇಡರು ವಾಲ್ಮೀಕಿಗಳೆಂದು, ವಾಲ್ಮೀಕಿ ವಂಶಜರೆಂದು, ಕನ್ನಯ್ಯನ ಮಕ್ಕಳೆಂದು, ಕನ್ನಯ್ಯನ ಕುಲದವರೆಂದು ಕರೆದುಕೊಳ್ಳುತ್ತಾರೆ.

ಮಹಾರಾಷ್ಟ್ರದಲ್ಲಿ ಬೇಡರು ತಮ್ಮನ್ನು ರಾಮನ ವಂಶಸ್ಥರೆಂದು ಕರೆದುಕೊಳ್ಳುತ್ತಾರೆ. ಈಗಲೂ ಅಲ್ಲಿ ಬೇಡರಿಗೆ ರಾಮೋಶಿಗಳೆಂದು ಕರೆಯುವರು, ರಾಮಾಯಣ ಬೇಡ ಜನಾಂಗದ ಚರಿತ್ರೆಯಾಗಿದೆಯೆಂದು ಅಭಿಪ್ರಾಯಪಡಲಾಗಿದೆ.

ಬೇಡರು, ಆರ್ಯರು ಭಾರತಕ್ಕೆ ಬರುವ ಪೂರ್ವದಲ್ಲೇ ಗಂಗಾನದಿ ಬಯಲಿನ ಅನೇಕ ಶಿಖರಾಗ್ರಗಳಲ್ಲಿ ತಮ್ಮ ವಸತಿಗಳನ್ನು ನಿರ್ಮಿಸಿಕೊಂಡಿದ್ದು ಸಪ್ತಶಿಖರಗಳ ಅಧಿಪತಿಗಳಾಗಿದ್ದರು. ಅವರು ತಮ್ಮ ಕಸುಬಾಗಿದ್ದ ಬೇಟೆ ಮತ್ತು ಪಶುಪಾಲನೆಯಿಂದ ಜೀವಿಸುತ್ತಿದ್ದರು. ಬೇಡರ ಮೂಲವೃತ್ತಿ ಬೇಟೆಯ ನಂತರ ಪಶುಪಾಲನೆಯಾಗಿತ್ತು. ಬೇಡರು ಅಲೆಮಾರಿಗಳಾದರೂ ತಾತ್ಕಾಲಿಕವಸತಿ ವ್ಯವಸ್ಥೆಗೆ ನದಿ ಬಯಲು ಪ್ರದೇಶಗಳನ್ನು ಆರಿಸಿಕೊಳ್ಳುತ್ತಿದ್ದರು. ಸೂರ್ಯ ಚಂದ್ರ ಮತ್ತು ಸಾಲಿಗ್ರಾಮಗಳ ಆರಾಧಕರಾದ ಬೇಡರು ಸೂರ್ಯನಾರಾಯಣಗೆ ಪ್ರಥಮ ಆದ್ಯತೆಕೊಟ್ಟು ಪೂಜಿಸುತ್ತಿದ್ದರು. ಇಂದಿಗೂ ಬೇಡರು ಯಾವುದೇ ಶುಭಕಾರ್ಯ ಮಾಡುವಾಗ ಸೂರ್ಯಾರಾಧನೆಗೆ ಹೆಚ್ಚು ಮಹತ್ವ ಕೊಡುತ್ತಾರೆ. ಅವರು ವಲಸೆ ಹೋಗುವಾಗ ಬೆತ್ತದ ಪುಟ್ಟಿ ಹಾಗೂ ದೇವರ ಗುಬ್ಬಗಳನ್ನು ಹೊತ್ತುಕೊಂಡು ಹೋಗುತ್ತಿದ್ದರು. ಈ ಪುಟ್ಟಿಯನ್ನು ಒಯ್ಯುವ ಒಂದು ಗುಂಪಿಗೆ ಕಂಪಳ ಎಂದು ಕರೆಯುತ್ತಿದ್ದರು. ಒಂದು ಸಮುದಾಯ ಬೇಟೆ ಮತ್ತು ಪಶುಪಾಲನೆಗಾಗಿ ಆಯ್ಕೆ ಮಾಡಿಕೊಂಡ ಪ್ರದೇಶಕ್ಕೆ ಮತ್ತೊಂದು ಬುಡಕಟ್ಟು ಸಮುದಾಯ ಅತಿಕ್ರಮಿಸಿದರೆ ತಮ್ಮ ಹಕ್ಕುಗಳೆಂಬಂತೆ ಸಂಘರ್ಷಗಳು ಉಂಟಾಗುತ್ತಿದ್ದವು. ಸಮುದಾಯವನ್ನು ರಕ್ಷಿಸಿಕೊಳ್ಳಲು ಅವರಲ್ಲಿ ಐಕ್ಯತೆ ಪ್ರಬಲವಾಗಿದ್ದು ಗುಂಪು ಗುಂಪಾಗಿ ವಾಸಿಸುತ್ತಿದ್ದರು. ಇಂತಹ ಚಿಕ್ಕ ಸಮುದಾಯಗಳನ್ನೇ ಹಟ್ಟಿ ಎಂದು ಕರೆಯುತ್ತಿದ್ದರು. ಕಾಲಕ್ರಮೇಣ ಆರ್ಯರ ಆಕ್ರಮಣ ಹಾಗೂ ಪ್ರವಾಹಗಳ ಸೆಳೆತಕ್ಕೆ ಈ ಆದಿವಾಸಿ ಬುಡಕಟ್ಟುಗಳು ಸಿಕ್ಕಿದವು, ಅವು ದಿಕ್ಕು ತೋಚದೆ ತಮಗೆ ಸರಿಬಂದ ಕಡೆ ವಲಸೆಹೋಗಲು ಪ್ರಾರಂಭಿಸಿದರು. ಅದೇ ಸಂದರ್ಭದಲ್ಲಿ ಬೇಡರ ಕಂಪಳ ದಕ್ಷಿಣ ಭಾರತಕ್ಕೆ ವಲಸೆ ಬಂದು ಈಗಿನ ಅಂಧ್ರಪ್ರದೇಶದ ಶ್ರೀಶೈಲ, ಕದರಿ, ತಿರುಪತಿ, ಯರ್ರಮಲೆ, ನಲ್ಲಮಲೆ, ಅಹೋಬಲ ಕಡೆ ಬಂದಿತು ಹಾಗೂ ತಮಿಳುನಾಡು, ಕೇರಳ, ಲಂಕಾದ್ರಿ ಪರ್ವತಗಳವರೆಗೂ ಬೇಡರ ಕಂಪಳ ಹರಡಿಕೊಂಡು ಬೇಟೆ ಮತ್ತು ಪಶುಪಾಲನೆ ವೃತ್ತಿಯಲ್ಲಿ ತೊಡಗಿದರು.

ಆಂಧ್ರಪ್ರದೇಶದಲ್ಲಿ ನೆಲೆನಿಂತ ಬೇಡರ ತಂಡ ಅಡವಿಚೆಂಚರು ಕಾಡುಚೆಂಚರು, ಮತ್ತು ಬಾಯೋಳು ಎಂದು ಕರೆದುಕೊಂಡರು. ನಲ್ಲಾಮಲೈ ಬೆಟ್ಟಗಳಲ್ಲಿ ವಾಸಿಸುತ್ತಿದ್ದ ಚೆಂಚರು ಶ್ರೀಶೈಲಕ್ಕೆ ಹೋಗುವ ದಾರಿಯಲ್ಲಿ ಯಾತ್ರಾರ್ಥಿಗಳಿಗೆ ತೊಂದರೆಕೊಟ್ಟು ದೋಚುತ್ತಿದ್ದರು. ಅವರು ಯಾತ್ರಾರ್ಥಿಗಳ ಒಡವೆಗಳನ್ನು ಕೊಳ್ಳೆ ಹೊಡೆಯುತ್ತಿದ್ದರೆಂಬುದಾಗಿ ಎಡ್ಗರ್ ಥರ್ಸ್ಟನ್ ಬರೆಯುತ್ತಾರೆ. ಹಲವಾರು ಐತಿಹ್ಯಗಳ ಪ್ರಕಾರ ಬೇಡನಾಯಕರು ಆಂಧ್ರದ ಗುಡ್ಡಗಾಡು ಪ್ರದೇಶವಾದ ಶ್ರೀಶೈಲದ ಕಡೆಯಿಂದ ಬಂದವರೆಂದು ಹೇಳುತ್ತಾರೆ. ನಾಯಕನಹಟ್ಟಿ ಪಾಳೆಯಗಾರರ ಬಖೈರಿನಲ್ಲಿ ಆಂಧ್ರಪ್ರದೇಶದ ಶ್ರೀಶೈಲದ ಕಡೆಯಿಂದ ಬಂದ ಒಂದು ತಂಡ ಚಿತ್ರದುರ್ಗ ಜಿಲ್ಲೆ ಜಗಳೂರು ಪ್ರದೇಶದ ಜನಿಗೇನ ಹಳ್ಳಿಯಲ್ಲಿ ಬಂದು ನೆಲೆಸಿತು. ಈ ಬೇಡನಾಯಕರ ಗುಂಪಿನ ಯಜಮಾನ ಕಾಟಮಲ್ಲಪ್ಪ

ನಾಯಕ. ಇದು ಅರಣ್ಯ ದೇವತೆಯಾದ ಶ್ರೀಶೈಲಮಲ್ಲಿಕಾರ್ಜುನನದೆ ಹೆಸರು ಇರಬಹುದು ಎಂದು ಊಹಿಸಬಹುದು. ಭಾಷಾ ಆದಾರದ ಮೇಲೆ ನೋಡುವುದಾದರೆ ತೆಲಗುಮಿಶ್ರಿತ ಕನ್ನಡ ಮಾತನಾಡುತ್ತಾರೆ. ಇಂದಿಗೂ ಆಂಧ್ರದಿಂದಲೇ ಬಂದವರೆಂದು ಹೇಳಿಕೊಳ್ಳುವ ತಮಿಳುನಾಡಿನ ಮಧುರೈ ಕಡೆಯ ಪಾಳೆಯಗಾರ ನಾಯಕರಾಗಲೀ ಸಿರುಮಲೈ ಕಡೆಯ ಬೇಡನಾಯಕರಾಗಲಿ ಮಾತನಾಡುವುದು ತೆಲುಗನ್ನೇ, ಕಾಟಮಲ್ಲನಾಯಕನು ಜನಿಗೇನಹಳ್ಳಿಗೆ ಬಂದು ನೆಲೆಸಿದ ನಂತರದಲ್ಲಿ ನಾಯಕನಹಟ್ಟಿ ಬಖೈರಿನ ಪ್ರಕಾರ ಈ ಗುಂಪಿನಲ್ಲಿ ಇಬ್ಬರು ಬೇಡಶರಣರಿದ್ದರು. ಅವರಿಗೆ ಸಂತತಿ ಇರಲಿಲ್ಲ. ಅವರೆಂದರೆ ಗಾದ್ರಿಪಾಲನಾಯಕ ಮತ್ತೊಬ್ಬ ಪಾಪನಾಯಕ. ಇವರಿಬ್ಬರನ್ನು ಚಿತ್ರದುರ್ಗದ ಬೇಡನಾಯಕರು ಆರಾಧ್ಯದೈವವಾಗಿ ಪೂಜಿಸುತ್ತಾರೆ. ಮ್ಯಾಸಬೇಡರ ಮೂಲ ಸೃಷ್ಟಿಯ ಬಗೆಗೆ ಹಲವಾರು ಕಥೆಗಳು, ಪುರಾಣಗಳು, ಕಂಡು ಬಂದಿದ್ದು ಅಧ್ಯಯನಕಾರರು ಶೋಧಿಸಿದ್ದಾರೆ. ಒಂದು ಸಮುದಾಯ ಕುಲ ಬೆಡಗುಗಳು ಹುಟ್ಟಲಿಕ್ಕೆ ಕಥೆಗಳು ಪುರಾಣಗಳು ಮೂಲನೆಲೆಯನ್ನು ತಿಳಿಸಲು ಮುಖ್ಯ ಆಧಾರಗಳಾಗುತ್ತವೆ.

ಮ್ಯಾಸಬೇಡರ ಹುಟ್ಟಿನ ಒಂದು ಕಥೆಯ ಪ್ರಕಾರ ಒಮ್ಮೆ ಬ್ರಹ್ಮ, ವಿಷ್ಣು, ಮಹೇಶ್ವರ ಈ ಮೂವರು ಪ್ರಪಂಚದ ಮೇಲೆ ಬರುತ್ತಾ ಇದ್ದಾಗ ಭೂಮಿಯ ಮೇಲೆ ಬರಿ ಅರಣ್ಯವೆ ಇದ್ದಿತು. ಒಂದು ಜೀವರಾಶಿಯಾಗಲಿ. ನರಮಾನವರಾಗಲೀ ಇರಲಿಲ್ಲ. ತ್ರಿಮೂರ್ತಿಗಳು ಬೊಮ್ಮಗೊಂಡನಕೆರೆ ಕಮರದ ಕಾವಲಿನಲ್ಲಿ ಇಳಿದರು. ಬೆಳಾಗಾಗುತ್ತಲೆ ಮುಖತೊಳೆದುಕೊಂಡು ಬ್ರಹ್ಮ ವಿಷ್ಣು ಹಣೆಗೆ ನಾಮ ಇಟ್ಟುಕೊಂಡರು. ನಾಮವಿಡುವಾಗ ಶುದ್ದ ಗೋವಿನಮೂತ್ರ ಬೇಕಾಯಿತು. ಆಗ ಬ್ರಹ್ಮ ಒಂದು ಒಂಟಿಕೊಂಬಿನ ಬಲ್ಲಾವನ್ನು ಪಂಪಾದ್ರಿ ಎಂಬ ಬಸವನನ್ನು ಸೃಷ್ಟಿಸಿಬಿಟ್ಟ ಆಗ ಬ್ರಹ್ಮ ವಿಷ್ಣು ನಾಮಧರಿಸಿ ಮಹೇಶ್ವರ ವಿಭೂತಿ ಧರಿಸಿಕೊಂಡನು. ಮಹೇಶ್ವರನು ವಿಭೂತಿ ಧರಿಸುವಾಗ ವಿಭೂತಿಯ ಒಂದು ಧೂಳು ಬ್ರಹ್ಮನು ಸೃಷ್ಟಿಸಿದ ಒಂಟಿಕೊಂಬಿನ ಬಲ್ಲಾವಿನ ಗೊರಸಿನಲ್ಲಿ ಸಿಕ್ಕಿಹಾಕಿಕೊಂಡಿತು. ತ್ರಿಮೂರ್ತಿಗಳು ಆ ಕಾನನವನ್ನು ಬಿಟ್ಟು ಹೋಗುವಾಗ ಅಯ್ಯೋ ಒಂಟಿಕೊಂಬಿನ ಬಲ್ಲಾವನ್ನು ಪಂಪಾದ್ರಿ ಬಸವನನ್ನು ನೋಡಿಕೊಳ್ಳುವರಾರು ಎಂಬ ಪ್ರಶ್ನೆ ಬಂದಿತು. ಅದಕ್ಕೆ ಆ ಬ್ರಹ್ಮ ಆ ಜೀವರಾಶಿಗಳನ್ನು ಸಲಹುವವನು ಅವುಗಳಿಂದಲೇ ಹುಟ್ಟುವನು ಚಿಂತೆಮಾಡಬೇಡಿ ಬನ್ನಿ ಎಂದು ಆಕಾಶಮಾರ್ಗವಾಗಿ ಹೋದರು.

ಒಂಟಿಕೊಂಬಿನ ಬಲ್ಲಾವು ಮತ್ತು ಪಂಪಾದ್ರಿಬಸವ ಆ ಕಾಡಿನಲ್ಲಿಯೆ ಮೇವು ಮೇಯ್ದುಕೊಂಡು ನೀರು ಕುಡಿದುಕೊಂಡು ಇದ್ದವು. ಹೀಗಿರಲು ಒಂಟಿಕೊಂಬಿನ ಬಲ್ಲಾವಿನ ಗೊರಸಿನಲ್ಲಿ ಸಿಕ್ಕಿಕೊಂಡಿದ್ದ ವಿಭೂತಿಯ ಧೂಳು ಒಂಭತ್ತು ತಿಂಗಳು ಒಂಭತ್ತು ದಿನ ಒಂಭತ್ತುಘಳಿಗೆಯಲ್ಲಿ ಬೆಳೆದು ಗರ್ಭ ಒಡೆದು ಶಿಶುಜನನವಾಯಿತು. ಹುಟ್ಟಿದ ಶಿಶು ಗಂಡುಮಗುವಾಗಿದ್ದು ಕೊಳದತಡಿಯಲ್ಲಿ ಮಗುವು ಅಳುತಿತ್ತು. ವಾಯುಮಾರ್ಗದಲ್ಲಿ ಹೋಗುತ್ತಿರುವ ಶಿವ ಪಾರ್ವತಿಯರಿಗೆ ಕೇಳಿಸಿತು. ಪಾರ್ವತಿಯು ಬಂದು ಶಿಶುವಿಗೆ ಒಕ್ಕಳ ಹುರಿಕೊಯ್ದು ಹಣೆಗೆ ಸುಟಿಗೆ ಹಾಕಿ ಕೊಳದ ಹತ್ತಿರ ಮಲಗಿಸಿ ಅದಕ್ಕೆ 'ಚಟ್ಲುಗೊಟ್ಲು ಮಲ್ಲನಾಯಕ' ಎಂದು ಹೆಸರಿಟ್ಟಳು. ಈ ಮಗುವು ಗಿಡಮರಗಳ ಮಧ್ಯದಲ್ಲಿ

ಹುಟ್ಟಿದ್ದರಿಂದ ಶಿಶುವಿಗೆ ಆ ಹೆಸರು ಇಟ್ಟಂತೆ ತೋರುತ್ತದೆ. ಆ ಜಾಗದಲ್ಲಿಯೆ ಒಂದು ಮರವಿತ್ತು. ಆದರಲ್ಲಿ ತುಡುಬೇಜೇನು ಕಟ್ಟಿತ್ತು. ಆ ಜೇನುಗೂಡಿನಿಂದ ಅಳುತ್ತಿರುವ ಮಗುವಿನ ಬಾಯಿಗೆ ತೊಟ್ಟು ತೊಟ್ಟಾಗಿ ಜೇನು ಶಿಶುವಿನ ಬಾಯಿಗೆ ಬಿದ್ದಾಗ ಮಗು ಅಳುವುದನ್ನು ನಿಲ್ಲಿಸಿತು.

ಶಿಶುವಾಗಿದ್ದ ಚೆಟ್ಲುಗೊಟ್ಲು ಮಲ್ಲಿನಾಯಕನು ಬೆಳೆದು ಒಂಟಿಕೊಂಬಿನ ಬಲ್ಲಾವನ್ನು ಪಂಪಾದ್ರಿಬಸವನನ್ನು ಸಾಕಿಕೊಂಡು ಕಾಲಮಾಡಿದನು, ದನಕರುಗಳ ಸಂತತಿ ಬೆಳೆಯಿತು. ಹೀಗೆ ಇರುವಾಗ ಗಂಧರ್ವಕನ್ನೆಯರು ಕಮರದ ಕಾನಿಗೆ ಸರೋವರದಲ್ಲಿ ನೀರಾಟವಾಡಿ ಸ್ನಾನ ಮಾಡಿಕೊಂಡು ಹೋಗುತ್ತಿದ್ದರು. ಒಮ್ಮೆ ಗಂಧರ್ವ ಕನ್ಯೆಯೊಬ್ಬಳು ಚೆಟ್ಲುಗೊಟ್ಲು ಮಲ್ಲಿನಾಯಕನನ್ನು ನೋಡಿ ಮೋಹಗೊಂಡು ಲಗ್ನವಾಗಿ ವನಾಂತರದಲ್ಲಿಯೇ ಇದ್ದು ಬಿಟ್ಟಳು. ಆಗ ಅ ಗಂಧರ್ವಕನ್ಯೆಗೂ ಚೆಟ್ಲುಗೊಟ್ಲು ಮಲ್ಲಿನಾಯಕನಿಗು ಒಬ್ಬ ಮಗಳು ಹುಟ್ಟಿದಳು. ಅವಳ ಹೆಸರು ಚಂಚುಲಕ್ಷ್ಮೀ ಅವಳು ಕೂಡ ವನಾಂತರದಲ್ಲಿಯೇ ತಿರುಗಾಡಿಕೊಂಡು ಬೆಳೆಯುತ್ತಿದಳು.

ಒಮ್ಮೆ ವಿಷ್ಣುವು ನರಸಿಂಹನ ಅವತಾರತಾಳಿ ಹಿರಣ್ಯಕಶಿಪುವನ್ನು ಕೊಂದು ಕರುಳನ್ನು ಮಾಲೆಯಾಗಿ ಮಾಡಿಕೊಂಡನು. ಆಗ ಅವನು ಧರಿಸಿದ್ದ ತನ್ನರೂಪಿನ ವಿಕಾರವನ್ನು ಅಹಂಕಾರವನ್ನು ಅಡಗಿಸಿಕೊಳ್ಳಲಾಗದೆ ಓಡೋಡಿ ಬೊಮ್ಮಗೊಂಡನಕೆರೆ ಅರಣ್ಯಮಾರ್ಗವಾಗಿ ಬಂದನು. ಅಲ್ಲಿದ್ದ ಚಂಚುಲಕ್ಷ್ಮೀ ಇದೇನು ಹೀಗೆ ಆಹಾಕಾರ ಮಾಡಿಕೊಂಡು ಬರುತ್ತಿರುವುದು ಎಂದು ಗಮನಿಸಿದಳು ಆಗ ನರಸಿಂಹನು ಚಂಚುಲಕ್ಷ್ಮಿಯನ್ನು ತನ್ನ ರೂಪು, ಶಕ್ತಿ ಕಳೆದರೆ ಸಾಕೆಂದು ಒಪ್ಪಿಕೊಂಡನು. ಆಗ ಚಂಚುಲಕ್ಷ್ಮೀ ರೌದ್ರಾವತಾರದ ನರಸಿಂಹನಿಗೆ ಆರತಿ ಎತ್ತಿ ಕುಂಕುಮ ಬಂಡಾರದ ನೀರಿಟ್ಟಳು. ರೂಪು ಶಮನವಾಯಿತು. ನರಸಿಂಹನು ಚಂಚುಲಕ್ಷ್ಮಿಯ ಜೊತೆಯಲ್ಲಿಯೆ ಸಂಸಾರ ಮಾಡಿಕೊಂಡಿದ್ದನು. ನಂತರ ಅವನು ಸ್ವಲ್ಪ ಕಾಲವಿದ್ದು ದೇವಲೋಕಕ್ಕೆ ಹೊರಟುಹೋದನು.

ಚಂಚುಲಕ್ಷ್ಮಿಗೆ ನರಸಿಂಹನಿಂದ ಹುಟ್ಟಿದ ಮೂವರು ಮಕ್ಕಳು, ಪೆದ್ದಪ್ಪನಾಯಕ, ಕೋರಿಯರಮಂಚನಾಯಕ, ಕೋರಿಪಾಪನಾಯಕ ಅವರ ತಂದೆ ನರಸಿಂಹನೇ ಆಗಿದ್ದನು. ಆದುದರಿಂದ ಅವನೇ ಅವರ ಮುಂದಿನ ವಂಶಕ್ಕೆಲ್ಲ ಮನೆದೇವರಾದನು. ಹೀಗೆ ಬೇಡರ ವಂಶ ಬೆಳೆಯುತ್ತಾ ಹೋದಂತೆ ಬೇಡರ ಕಂಪಳವು ಹೆಚ್ಚುತ್ತಾ ಹೋಯಿತು. ಬೇಡಗಂಪಳ ಹೆಚ್ಚಾದಾಗ ಮೂರು ಭಾಗವಾಯಿತು. ಕಾಮಗೇತಿ, ನಲಗೇತಿ, ಬುಲ್ಲಡಲವರು ಎಂದು ಮೂರು ಭಾಗವಾಯಿತು. ಕಾಮಗೇತಿಯವರು ನಾಯಕನಹಟ್ಟಿ, ನಲಗೇತಿಯವರು ನನ್ನಿವಾಳ, ಬುಲ್ಲಡಲವರು ಗೋನೂರಿನಲ್ಲಿ ಒಂದೊಂದು ಗುಂಪಾಗಿ ಹೊರಟು ನೆಲಸತೊಡಗಿದರು. ಮೂರು ಸ್ಥಳಗಳಲ್ಲಿ ನೆಲೆಸಿದ ಬೇಡಗಂಪಳಕ್ಕೆ ಗಟ್ಟಿಮುತ್ತೆನಾಯಕ, ಬೋಸೆನಾಯಕ, ಮೀಸಲುನಾಯಕ ಯಜಮಾನರಾದರು[೨]. ಒಟ್ಟಾರೆಯಾಗಿ, ಬೇಡಜನಾಂಗವು ಪೌರಾಣಿಕ ಹಾಗೂ ಚಾರಿತ್ರಿಕ ಹಿನ್ನೆಲೆಯಿಂದ ಗುರುತಿಸಿಕೊಂಡು ಅತ್ಯಂತ ಪ್ರಾಚೀನ ಜನಾಂಗಗಳಲ್ಲಿ ಒಂದಾಗಿದೆ. ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಬೇಡರು ಇದ್ದಾರೆಂಬುದು ಚಾರಿತ್ರಿಕ ಅಂಶಗಳಿಂದ ತಿಳಿದು ಬರುತ್ತದೆ. ಬೇಟೆಯಂತಹ ಸಾಹಸ ಪ್ರವೃತ್ತಿ

ಮತ್ತು ಪಶುಪಾಲನೆಗೆ ಅವರು ಕೊಟ್ಟ ಪೂಜನೀಯ ಸ್ಥಾನ ಇಂದೂ ಕೂಡ ಕಂಡುಬರುತ್ತದೆ. ಹಾಗಾಗಿ ಬೇಡರ ಐತಿಹಾಸಿಕ ಹಿನ್ನೆಲೆ ಜನಾಂಗಿಕವಾಗಿ ತುಂಬಾ ಮಹತ್ವ ಪಡೆದುಕೊಂಡಿದೆ.

**೨.೬ ಹಟ್ಟಿ ಸಮುದಾಯದ ನೆಲೆ ಮತ್ತು ಜನಸಂಖ್ಯೆ:**

ಪ್ರತಿಯೊಂದು ಸಮುದಾಯಗಳಿಗೆ ತನ್ನದೇ ಆದ ಮೂಲ ಮತ್ತು ಪ್ರಸಾರದ ನೆಲೆಗಳಿರುತ್ತವೆ. ಹಾಗೆಯೇ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಬಗ್ಗೆ ಕುರಿತಾದ ಐತಿಹಾಸಿಕ ಹಿನ್ನಲೆಯಿದೆ. ಕರ್ನಾಟಕದ ಪ್ರಮುಖ ಬುಡಕಟ್ಟುಗಳಾದ ಕಾಡುಗೊಲ್ಲರು ಮತ್ತು ಮ್ಯಾಸಬೇಡರು ರಾಜ್ಯದ ತುಂಬೆಲ್ಲ ಹರಡಿಕೊಂಡಿದ್ದರೂ ಚಿತ್ರದುರ್ಗ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ

ಕಾಡುಗೊಲ್ಲರ ಮೂಲ ಸ್ಥಳ ಹುಡುಕ ಹೊರಟರೆ ದೆಹಲಿ ಮತ್ತು ಸುತ್ತಮುತ್ತಲಿನ ಪ್ರದೇಶ ಗ್ರಾಮ ಪಟ್ಟಣಗಳಲ್ಲಿ ವಾಸಿಸುತ್ತಿದ್ದರು ಎಂಬುದಾಗಿ ಐತಿಹ್ಯಗಳಿಂದ ತಿಳಿದು ಬರುತ್ತದೆ. ಈ ಬಗ್ಗೆ ಸಂಶೋಧಕರಲ್ಲೂ ಭಿನ್ನಾಭಿಪ್ರಾಯಗಳಿವೆ ಮೊಘಲರ ಹಿಂಸೆ ತಾಳಲಾರದೆ ಬುಡಕಟ್ಟಿನ ಪ್ರಮುಖರನ್ನೊಳಗೊಂಡಂತೆ ಎಲ್ಲರೂ ದಕ್ಷಿಣ ಭಾರತಕ್ಕೆ ವಲಸೆ ಬಂದು ವಿಜಯನಗರದ, ತುಂಗಭದ್ರಾ ನದಿಯ ದಂಡೆಯಲ್ಲಿ ತಂಗಿ ನಂತರ ಬಯಲುಸೀಮೆಯ ಪ್ರದೇಶಗಳಾದ ಚಿತ್ರದುರ್ಗ, ತುಮಕೂರು, ಬಳ್ಳಾರಿ, ಬೆಂಗಳೂರು ಗ್ರಾಮಾಂತರ ರಾಯಚೂರು ಹಾಸನ ಕೋಲಾರ ಮುಂತಾದ ಜಿಲ್ಲೆಗಳಲ್ಲಿ ವಾಸಿಸಲು ಪ್ರಾರಂಭಿಸಿದರು. ಆಂಧ್ರಪ್ರದೇಶದ ಅನಂತಪುರಂ ಜಿಲ್ಲೆಯಲ್ಲಿಯೂ ಕಾಡುಗೊಲ್ಲರು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಹಿರಿಯೂರು, ಚಳ್ಳಕೆರೆ, ಹೊಸದುರ್ಗ ಮತ್ತು ಹೊಳಲ್ಕೆರೆ ತಾಲ್ಲೂಕುಗಳಲ್ಲಿ ಹೆಚ್ಚಿನ ಸಂಖ್ಯೆಯ ಕಾಡುಗೊಲ್ಲರಿದ್ದಾರೆ. ಕಾಡುಗೊಲ್ಲರು ಚಿತ್ರದುರ್ಗ, ಬಳ್ಳಾರಿ, ತುಮಕೂರು ಬಯಲುಪ್ರದೇಶಗಳಲ್ಲಿ ಪಶುಪಾಲನೆ ಮತ್ತು ಕುರಿಸಾಕಣೆಗೆ ಯೋಗ್ಯವಾದ ಕುರುಚಲು ಕಾಡುಗಳಿದ್ದುದರಿಂದ ಈ ಭಾಗಗಳಿಗೆ ವಲಸೆ ಬಂದು ತಮ್ಮ ನೆಲೆಗಳನ್ನು ಸ್ಥಾಪಿಸಿಕೊಂಡರು.ಇದು ವಾಸ್ತವವೂ ಇದ್ದಿರಬೇಕು ಏಕೆಂದರೆ ಬಯಲು ಸೀಮೆಯ ಪ್ರದೇಶಗಳಲ್ಲಿ ಕುರುಚಲು ಕಾಡುಗಳು ಮತ್ತು ಹುಲ್ಲು ನೀರು ಇದ್ದುದರಿಂದ ವಾಸಕ್ಕೆ ಯೋಗ್ಯವಾದ ಸ್ಥಳಗಳಾಗಿದ್ದು ಹಟ್ಟಿಗಳನ್ನು ಹಾಕಿಕೊಂಡಿರಬೇಕು.

ಚಿತ್ರದುರ್ಗ ಜಿಲ್ಲೆಯ ಅಧ್ಯಯನ ಕ್ಷೇತ್ರದ ಕಾಡುಗೊಲ್ಲರ ಹಟ್ಟಿಯ ನೆಲೆಗಳು




ಗೊಲ್ಲರ ಹಟ್ಟಿಗಳು

ಚಿತ್ರದುರ್ಗ ಜಿಲ್ಲೆಯ ಅಧ್ಯಯನಕ್ಷೇತ್ರದ ಮ್ಯಾಸಬೇಡರ ಹಟ್ಟಿಗಳು



## ಚಿತ್ರದುರ್ಗ ಜಿಲ್ಲೆಯ ಅಧ್ಯಯನಕ್ಷೇತ್ರದ ಮ್ಯಾಸಬೇಡ ಮತ್ತು ಕಾಡುಗೊಲ್ಲರ ಹಟ್ಟಿಗಳು



೧೮೭೬ ಹಾಗು ೧೮೭೯ ರಲ್ಲಿ ಬಿ.ಎಲ್.ರೈಸ್‌ರವರು A Gazzetteer compiled dor govt, Mysore. The kadugollas are tumkuru distict and a many in chitradurga district ಎಂದು ಉಲ್ಲೇಖಿಸಿರುವುದು ಕಂಡುಬರುತ್ತದೆ. Edgar Thurston and K.Rangachari (1909) ಯವರು castes and Tribes of southern India ಗ್ರಂಥದಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಮಾತ್ರ ಇರುವುದಾಗಿ ಉಲ್ಲೇಖಿಸಲಾಗಿದೆ. H.V.Nanjundaiah and L.K Aiyer(1930) ರಚಿಸಿದ 'The mysore Tribes and castes ಗ್ರಂಥದಲ್ಲಿ kadugollas(wild cowherds) are scatterd over districts of bangalore, Tumkur and chitraduga ಈ ಜಿಲ್ಲೆಗಳಲ್ಲಿ ವಾಸಿಸುತ್ತಾರೆಂಬುದಾಗಿ ಉಲ್ಲೇಖಿಸುತ್ತಾರೆ. A.A.D.Luiz ರವರು 'Tribes of Mysore' ಎನ್ನುವ ಗ್ರಂಥದಲ್ಲಿ (1963) ಕಾಡುಗೊಲ್ಲರು ಬೆಳಗಾಂ, ಬೆಂಗಳೂರು, ಬಿಜಾಪುರ, ಬಳ್ಳಾರಿ, ಧಾರವಾಡ, ತುಮಕೂರು, ಚಿತ್ರದುರ್ಗ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ವಾಸವಿದ್ದಾರೆ ಎಂದು ನಮೂದಿಸಲಾಗಿದೆ[೨೭].

ಕರ್ನಾಟಕದಲ್ಲಿ ಕಾಡುಗೊಲ್ಲರಿಗೆ ಚಿತ್ರದುರ್ಗ ಜಿಲ್ಲೆ ಪ್ರಮುಖ ಧಾರ್ಮಿಕ ಸಾಂಸ್ಕೃತಿಕ ಕೇಂದ್ರವಾಗಿದೆ. ಹಿರಿಯೂರು ತಾಲ್ಲೂಕು ಕರಿಓಬೇನಹಳ್ಳಿ, ತಾಳವಟ್ಟಿ ಮತ್ತು ಚಿತ್ರದುರ್ಗ ಜಿಲ್ಲೆಯ ರಾಮನಹಳ್ಳಿ ಎಂಬ ಮೂರು ಕಟ್ಟೆ ಮನೆಗಳು ಚಿತ್ರದುರ್ಗ ಜಿಲ್ಲೆಯಲ್ಲೇ ಬರುತ್ತವೆ. ಪಂಚಲಿಂಗಗಳಿರುವ ಚಿತ್ರಹಳ್ಳಿ ಚನ್ನಮ್ಮನಾಗತಿಹಳ್ಳಿ, ರಾಮನಹಳ್ಳಿ ಇಕ್ಕನೂರು, ಕೂಡಲಹಳ್ಳಿ ಸಹ ಚಿತ್ರದುರ್ಗ ಜಿಲ್ಲೆಯಲ್ಲಿ ಬರುತ್ತವೆ. ಈ ಪಂಚಲಿಂಗಗಳು ಮತ್ತು ಕಟ್ಟೆಮನೆಗಳು ಇರುವ ಸುತ್ತ ಮುತ್ತಲ ಪ್ರದೇಶಗಳಲ್ಲಿ ಕಾಡುಗೊಲ್ಲರು ದಟ್ಟವಾಗಿ ವಾಸಿಸುತ್ತಾರೆ.

ಕಾಡುಗೊಲ್ಲರಂತೆಯೇ ಮತ್ತೊಂದು ಕರ್ನಾಟಕದ ಖಾಸ ಬುಡಕಟ್ಟು ಸಮುದಾಯವೆಂದರೆ ಮ್ಯಾಸಬೇಡರು. ಕರ್ನಾಟಕದಾದ್ಯಂತ ಹಬ್ಬಿ ಕೊಂಡಿರುವ ಈ ಸಮುದಾಯವು ತಾವು ಆಂಧ್ರಮೂಲದವರು ಶ್ರೀಶೈಲಪ್ರದೇಶದಿಂದ ಬಂದವರು ಎಂಬುದಾಗಿ ಹೇಳಿಕೊಳ್ಳುತ್ತಾರೆ. ಪಶುಪಾಲನೆ ಮಾಡಿಕೊಂಡು ಜೀವನ ನಡೆಸುತ್ತಿರುವಾಗ ಒಮ್ಮೆ ಶ್ರೀಶೈಲ ಪ್ರದೇಶದಲ್ಲಿ ಭೀಕರಬರಗಾಲ ಬಂದಾಗ ನಾಯಕನಹಟ್ಟಿ ಪಾಳೆಯಗಾರರ ಮೂಲಪುರುಷ ಕಾಟೇಮಲ್ಲನಾಯಕನು ಶ್ರೀಶೈಲ ಪ್ರದೇಶದಿಂದಲೇ ಬಂದವನಾಗಿದ್ದಾನೆ. ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಬೇಡರು ನೆಲೆಸಿರುವುದನ್ನು ಕಾಣಬಹುದು. ಚಿತ್ರದುರ್ಗ, ಬಳ್ಳಾರಿ ರಾಯಚೂರು, ಕೊಪ್ಪಳ, ಗುಲ್ಬರ್ಗಾ, ತುಮಕೂರು, ದಾವಣಗೆರೆ, ಕೋಲಾರ ಜಿಲ್ಲೆಗಳಲ್ಲಿ ಅಧಿಕ ಜನಸಂಖ್ಯೆಯಲ್ಲಿರುವುದು ಕಂಡುಬರುತ್ತದೆ.[೨೮]

ಚಿತ್ರದುರ್ಗ ಜಿಲ್ಲೆಯಲ್ಲಿ ಮ್ಯಾಸನಾಯಕರೇ ಅಧಿಕ ಸಂಖ್ಯೆಯಲ್ಲಿ ನೆಲೆಸಿದ್ದಾರೆ. ಮೊಳಕಾಲ್ಮೂರು, ಚಿತ್ರದುರ್ಗ ಚಳ್ಳಕೆರೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದರೆ ಹೊಳಲ್ಕೆರೆ, ಹಿರಿಯೂರು, ಹೊಸದುರ್ಗ ತಾಲ್ಲೂಕುಗಳಲ್ಲಿ ಕಡಿಮೆ ಸಂಖ್ಯೆಯ ಮ್ಯಾಸನಾಯಕರು ಕಂಡುಬರುತ್ತಾರೆ. ಮ್ಯಾಸಬೇಡರ ಕಟ್ಟೆಮನೆಗಳು ಚಿತ್ರದುರ್ಗ ಜಿಲ್ಲೆಯಲ್ಲಿ ಇವೆ. ನನ್ನಿವಾಳ, ನಾಯಕನಹಟ್ಟಿ, ಗೋನೂರು ಇಲ್ಲಿವೆ. ಮ್ಯಾಸಬೇಡರ ಧಾರ್ಮಿಕ ಕೇಂದ್ರವೆಂಬಂತೆ ಮೊಳಕಾಲ್ಮೂರು ತಾಲ್ಲೂಕಿನ ಕಂಪಳ ದೇವರಹಟ್ಟಿಯ

ಕಂಪಳ ದೇವರು(ಚಿಕ್ಕುಂತಿ) ಗೌರಸಂದ್ರಮಾರಮ್ಮ, ನುಂಕಿಮಲೆ ಸಿದ್ದೇಶ್ವರ, ನಾಯಕನಹಟ್ಟಿ ತಿಪ್ಪೇಸ್ವಾಮಿ ಈ ಭಾಗದಲ್ಲಿ ನೆಲೆಸಿರುವುದನ್ನು ನೋಡಿದರೆ ಮ್ಯಾಸಬೇಡರ ನೆಲೆಗಳು ಚಿತ್ರದುರ್ಗ ಜಿಲ್ಲೆಯಲ್ಲಿ ಅಧಿಕ ಸಂಖ್ಯೆಯಲ್ಲಿರುವುದು ಕಂಡುಬರುತ್ತವೆ. ಚಿತ್ರದುರ್ಗ ಜಿಲ್ಲೆಯ ಪೂರ್ವ ದಿಕ್ಕಿನಲ್ಲಿ ಆಂಧ್ರದ ಗಡಿ ಭಾಗವಿರುವುದರಿಂದ ಆಂಧ್ರದ ಕರ್ನೂಲು, ರಾಯದುರ್ಗ, ಅನಂತಪುರಂ ಜಿಲ್ಲೆ ಇರುವುದರಿಂದ ಇಂದಿಗೂ ಮ್ಯಾಸಬೇಡರ ವ್ಯಾವಹಾರಿಕ ಭಾಷೆ ತೆಲುಗು ಆಗಿದ್ದು ಕನ್ನಡವನ್ನೂ ಸಹ ಬಳಸುತ್ತಾರೆ. ಒಂದಂಶವೆಂದರೆ, ಅದೆ ಹೊಳಲ್ಕೆರೆ, ಹೊಸದುರ್ಗದಲ್ಲಿರುವ ಮ್ಯಾಸನಾಯಕರು ಹೆಚ್ಚಾಗಿ ಕನ್ನಡವನ್ನೆ ಬಳಸುತ್ತಾರೆ.

ಹೀಗೆ ಕರ್ನಾಟಕದಾದ್ಯಂತ ಕಾಡುಗೊಲ್ಲ ಮತ್ತು ಮ್ಯಾಸಬೇಡ ಬುಡಕಟ್ಟು ಸಮುದಾಯಗಳು ಹರಡಿವೆ. ಆದರೆ ಚಿತ್ರದುರ್ಗ ಜಿಲ್ಲೆಯಲ್ಲಿ ಈ ಎರಡು ಬುಡಕಟ್ಟು ಸಮುದಾಯದವರು ಕೆಲವು ಅಂಶಗಳಲ್ಲಿ ಸಾಮ್ಯತೆಯನ್ನು ಹೊಂದಿವೆ. ಈ ಬುಡಕಟ್ಟುಗಳು ಪಾರಂಪರಿಕ ಕಸುಬನ್ನು ಮುದುವರಿಸಿಕೊಂಡು ಜೀವನವನ್ನು ಸವೆಸುತ್ತಿರುವುದು ಕಂಡುಬರುತ್ತದೆ.

**ಜನಸಂಖ್ಯೆ:**

ಕರ್ನಾಟಕ ರಾಜ್ಯದಲ್ಲಿ ಗೊಲ್ಲ ಜನಾಂಗದ ಜನಸಂಖ್ಯೆ ನಿಖರವಾಗಿ ಎಷ್ಟು ಎಂಬುದು ಜನಗಣತಿಯ ವರದಿಯಲ್ಲಿ ಕಾಣಸಿಗುವುದಿಲ್ಲ. ಕಾರಣವೆಂದರೆ ಭಾರತದಲ್ಲಿ ಜನಗಣತಿಯನ್ನು ಜಾತಿವಾರು ಮಾಡಲಾಗುವುದಿಲ್ಲ, ಆದರೆ ಬೇರೆ ಪರಿಶಿಷ್ಟ ಪಂಗಡ, ಪರಿಶಿಷ್ಟ ಜಾತಿಯವರ ಜನಸಂಖ್ಯೆ ನಿಖರವಾಗಿ ಕಂಡುಬರುತ್ತದೆ.

ಕರ್ನಾಟಕ ಸರ್ಕಾರ ನೇಮಕ ಮಾಡಿದ ರಾಜ್ಯದ ಎರಡನೇ ಹಿಂದುಳಿದ ವರ್ಗದ ಆಯೋಗ ೧೯೮೬ ರಲ್ಲಿ ನಡೆಸಿದ ಸಾಮಾಜಿಕ ಆರ್ಥಿಕ ಶೈಕ್ಷಣಿಕ ವರದಿಯ ಪ್ರಕಾರ ರಾಜ್ಯದ ಗೊಲ್ಲಸಮುದಾಯದಜನಸಂಖ್ಯೆ ೫,೮೫,೩೧೪ ರಷ್ಟಿದೆ. ಅಂದರೆ ರಾಜ್ಯದ ಜನಸಂಖ್ಯೆಯ ಪ್ರತಿಶತ ೧.೫೦ ಗೊಲ್ಲಜನಾಂಗದವರಿದ್ದಾರೆ ಎಂದು ತಿಳಿದುಬರುತ್ತದೆ. ಈ ಆಯೋಗದ ವರದಿಯ ಪ್ರಕಾರ ಗೊಲ್ಲಜನಾಂಗದವರು ಕರ್ನಾಟಕರಾಜ್ಯದ ಚಿತ್ರದುರ್ಗ, ತುಮಕೂರು ಬೆಂಗಳೂರು, ಬಳ್ಳಾರಿ, ರಾಯಚೂರು, ಕೋಲಾರ, ಧಾರವಾಡ, ಹಾಸನ ಜಿಲ್ಲೆಗಳಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ.

## ಕೋಷ್ಟಕ-೧೦

### ಎರಡನೇ ಹಿಂದುಳಿದ ವರ್ಗದ ಆಯೋಗದ ಪ್ರಕಾರ ೧೯೮೬ ಜಿಲ್ಲಾವಾರು ಗೊಲ್ಲ ಜನಾಂಗದ ಜನಸಂಖ್ಯೆ

| ಜಿಲ್ಲೆಯ ಹೆಸರು | ಜನಸಂಖ್ಯೆ | ಶೇಕಡ | ಜಿಲ್ಲೆಯ ಹೆಸರು | ಜನಸಂಖ್ಯೆ | ಶೇಕಡ |
|---|---|---|---|---|---|
| ಬೆಂಗಳೂರು | ೬೭೭೫೭ | ೧೨.೯೩ | ಗುಲ್ಬರ್ಗ | ೧೨೫೮೦ | ೨.೪೦ |
| ಬೆಳಗಾಂ | ೪೨೮೨೭ | ೮.೧೭ | ಹಾಸನ | ೧೪೩೧೨ | ೨.೭೩ |
| ಬಳ್ಳಾರಿ | ೩೬೫೮೦ | ೬.೯೮ | ಮಡಿಕೇರಿ | ೧೫೩೮ | ೦.೨೯ |
| ಬೀದರ್ | ೪೩೦೧ | ೦.೮೨ | ಕೋಲಾರ | ೪೫೩೬೨ | ೮.೬೫ |
| ಬಿಜಾಪುರ | ೫೮೦೨ | ೧.೧೧ | ಮೈಸೂರು | ೬೮೨೮ | ೧.೩೦ |
| ಚಿಕ್ಕಮಗಳೂರು | ೭೯೬೧ | ೧.೫೨ | ತುಮಕೂರು | ೧೦೫೧೪೧ | ೨೦.೦೬ |
| ಚಿತ್ರದುರ್ಗ | ೧೧೧೧೯೪ | ೨೧.೧೯ | ಮಂಡ್ಯ | ೩೫೯೩ | ೦.೬೯ |
| ದಕ್ಷಿಣ ಕನ್ನಡ | ೪೭೭೭ | ೦.೯೧ | ರಾಯಚೂರು | ೨೨೩೧೬ | ೪.೨೬ |
| ಧಾರವಾಡ | ೧೫೫೫೯ | ೨.೯೭ | ಶಿವಮೊಗ್ಗ | ೧೧೬೮೨ | ೨.೨೩ |
| ಉತ್ತರ ಕನ್ನಡ | ೪೨೨೦ | ೦.೮೦ | – | – | – |

ಕರ್ನಾಟಕ ರಾಜ್ಯದ ಜಿಲ್ಲಾವಾರು ಗೊಲ್ಲ ಜನಾಂಗದ ಜನಸಂಖ್ಯೆಯನ್ನು ಅವಲೋಕಿಸಿದರೆ ಯಾವ ಯಾವ ಜಿಲ್ಲೆಯಲ್ಲಿ ಎಷ್ಟು ಪ್ರಮಾಣದ ಜನಸಂಖ್ಯೆ ನಲೆಸಿದೆ ಎಂದು ಈ ಮೆಲ್ಕಂಡ ಕೋಷ್ಟಕದಿಂದ ತಿಳಿಯುತ್ತದೆ. ಚಿತ್ರದುರ್ಗ ಜಿಲ್ಲೆಯಲ್ಲಿ ೧,೧೧,೧೯೪ ಜನಸಂಖ್ಯೆ ಇದ್ದು ಮೊದಲನೇ ಸ್ಥಾನದಲ್ಲಿದೆ ಮತ್ತು ತುಮಕೂರು ಜಿಲ್ಲೆಯಲ್ಲಿ ೧,೦೫,೧೪೧ ಜನಸಖ್ಯೆ ಇದ್ದು ಎರಡನೇ ಸ್ಥಾನದಲ್ಲಿರುವುದು ತಿಳಿಯುತ್ತದೆ. ಹಾಗೆಯೆ ಬೀದರ್ ನಲ್ಲಿ ೪,೩೦೧ ಜನಸಂಖ್ಯೆ ಇದ್ದು, ಮಂಡ್ಯದಲ್ಲಿ ೩,೫೯೩ ಜನಸಂಖ್ಯೆ ಇದ್ದು ರಾಜ್ಯದ ಕೊನೆಯ ಸ್ಥಾನದಲ್ಲಿರುವುದು ಕಂಡುಬಂದಿದೆ[೨೯].

ಕರ್ನಾಟಕ ರಾಜ್ಯ ಹಿಂದುಳಿದ ವರ್ಗದ ಆಯೋಗದ ಪ್ರಕಾರ ಈ ವರದಿಯಲ್ಲಿ ರಾಜ್ಯದಲ್ಲಿ ೧,೧೪೧ ಗೊಲ್ಲರ ಹಟ್ಟಿಗಳಿವೆ ಎಂದು ಉಲ್ಲೇಖವಿದೆ. ರಾಜ್ಯದ ಎಲ್ಲ ಜಿಲ್ಲೆಗಳಿಗಿಂತಲೂ ಚಿತ್ರದುರ್ಗ ಜಿಲ್ಲೆಯಲ್ಲಿ ಹೆಚ್ಚು ಗೊಲ್ಲರ ಜನಸಂಖ್ಯೆ ಇರುವುದು ಕಂಡುಬರುತ್ತದೆ. ಆದರೆ ಈ ವರದಿಯಲ್ಲಿ ಕಾಡುಗೊಲ್ಲ ಮತ್ತು ಊರುಗೊಲ್ಲರು ಎಂಬುದಾಗಿ ಪ್ರತ್ಯೇಕವಾಗಿ ಗುರುತಿಸಿಲ್ಲ.

ಕರ್ನಾಟಕದಾದ್ಯಂತ ಮ್ಯಾಸಬೇಡರು ಹರಡಿಕೊಂಡಿದ್ದು ರಾಜ್ಯದ ಬಹುದೊಡ್ಡ ಬುಡಕಟ್ಟು ಸಮುದಾಯವಾಗಿದೆ. ಆಂಧ್ರಪ್ರದೇಶದ ಕರ್ನೂಲ್, ಅನಂತಪುರಂ ಜಿಲ್ಲೆಗಳಲ್ಲಿ ಹೆಚ್ಚಿನದಾಗಿ ಕಂಡುಬರುತ್ತಾರೆ. ಚಿತ್ರದುರ್ಗ ಪೂರ್ವದಿಕ್ಕಿಗೆ ಆಂಧ್ರದ ಗಡಿಭಾಗಗಳಿರುವುದರಿಂದ ಹೆಚ್ಚು ಸಂಖ್ಯೆಯಲ್ಲಿ ನೆಲೆಸಿದ್ದಾರೆ. ಚಿತ್ರದುರ್ಗ, ರಾಯಚೂರುಗಳಲ್ಲಿ ಹೆಚ್ಚಿನ ಸಂಖ್ಯೆಯ ಬೇಡನಾಯಕರಿದ್ದಾರೆ.

ಮ್ಯಾಸಬೇಡರು ಚಿತ್ರದುರ್ಗ, ಬಳ್ಳಾರಿ, ರಾಯಚೂರುಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನೆಲಸಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಮೊಳಕಾಲ್ಮೂರು, ಚಳ್ಳಕೆರೆ ತಾಲ್ಲೂಕುಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದರೆ, ಹೊಳಲ್ಕೆರೆ, ಹಿರಿಯೂರು ಮತ್ತು ಹೊಸದುರ್ಗ ತಾಲ್ಲೂಕುಗಳಲ್ಲಿ ಕಡಿಮೆ ಸಂಖ್ಯೆಯ ಮ್ಯಾಸಬೇಡರು ಕಂಡುಬರುತ್ತಾರೆ.

**ಕೋಷ್ಟಕ-೧೧**

**೧೯೨೧ರ ಮೈಸೂರು ಜನಗಣತಿ ಪ್ರಕಾರ ಚಿತ್ರದುರ್ಗ ಜಿಲ್ಲೆಯ ತಾಲ್ಲೂಕುಗಳಲ್ಲಿ ಮ್ಯಾಸಬೇಡರ ಜನಸಂಖ್ಯೆ.**

| ಕ್ರಸಂ | ತಾಲ್ಲೂಕಿನ ಹೆಸರು | ಜನಸಂಖ್ಯೆ | ಶೇಕಡ |
|---|---|---|---|
| ೧ | ಚಿತ್ರದುರ್ಗ | ೧೯೧೪೦ | ೨೬.೩೪ |
| ೨ | ಚಳ್ಳಕೆರೆ | ೨೨೮೬೮ | ೩೧.೪೭ |
| ೩ | ಮೊಳಕಾಲ್ಮೂರು | ೧೧೦೦೪ | ೧೫.೧೪ |
| ೪ | ಹೊಳಲ್ಕೆರೆ | ೭೩೮೦ | ೧೦.೧೫ |
| ೫ | ಹೊಸದುರ್ಗ | ೪೭೪೬ | ೬.೫೩ |
| ೬ | ಹಿರಿಯೂರು | ೭೫೨೫ | ೧೦.೩೫ |
| ಒಟ್ಟು | | ೭೨೬೬೩ | ೧೦೦.೦೦ |

ಈ ಅಂಕಿ ಅಂಶಗಳನ್ನು ಗಮನಿಸಿದಾಗ ಹೊಳಲ್ಕೆರೆ, ಹೊಸದುರ್ಗ, ಹಿರಿಯೂರು ಬಿಟ್ಟರೆ ಮಿಕ್ಕ ಮೂರು ತಾಲ್ಲೂಕುಗಳಲ್ಲಿ ಅಧಿಕ ಜನಸಂಖ್ಯೆ ಇರುವುದು ಕಂಡುಬರುತ್ತದೆ. ೧೯೭೨ ರ ಹಾವನೂರು ಆಯೋಗದ ವರದಿಯಂತೆ ಚಿತ್ರದುರ್ಗ ಜಿಲ್ಲೆಯಲ್ಲಿ ಎರಡು ಲಕ್ಷದ ಮೂವತ್ತು ಮೂರು ಸಾವಿರಕ್ಕೂ ಮಿಕ್ಕು ನಾಯಕರ ಜನಸಂಖ್ಯೆಯಿದೆ[೨೦].

**ಕೋಷ್ಟಕ-೧೨**

**೨೦೧೧-೧೨ ನೇ ಸಾಲಿನ ಜನಗಣತಿಯ ಪ್ರಕಾರ ಚಿತ್ರದುರ್ಗ ಜಿಲ್ಲೆಯಲ್ಲಿ ಪರಿಶಿಷ್ಟ ಪಂಗಡದ ಜನಸಂಖ್ಯೆ**

| ಕ್ರಸಂ | ತಾಲೂಕಿನ ಹೆಸರು | ಜನಸಂಖ್ಯೆ | ಶೇಕಡ |
|---|---|---|---|
| ೧ | ಚಿತ್ರದುರ್ಗ | ೧೯೬೭೨೯ | ೪೨.೨೦ |
| ೨ | ಚಳ್ಳಕೆರೆ | ೧೦೭೬೪೦ | ೨೬.೭೮ |
| ೩ | ಹಿರಿಯೂರು | ೨೮೦೨೮ | ೬.೯೭ |
| ೪ | ಹೊಳಲ್ಕೆರೆ | ೨೫೫೯೫ | ೬.೩೨ |
| ೫ | ಹೊಸದುರ್ಗ | ೧೮೩೫೪ | ೪.೫೭ |
| ೬ | ಮೊಳಕಾಲ್ಮೂರು | ೫೨೯೦೮ | ೧೩.೧೬ |
| ಒಟ್ಟು | | ೪೦೧೯೫೪ | ೧೦೦.೦೦ |

ಚಿತ್ರದುರ್ಗ ಜಿಲ್ಲೆಯಲ್ಲಿ ಮ್ಯಾಸಬೇಡರು ನಲೆಸಿರುವ ಜನಸಖ್ಯೆಯನ್ನು ತಾಲ್ಲೂಕುವಾರು ವಿಂಗಡಣೆಯಾಗಿರುವುದನ್ನು ಅವಲೋಕಿಸಿದರೆ ಚಳ್ಳಕೆರೆಯಲ್ಲಿ ೧,೦೭,೬೪೦ ಜನಸಂಖ್ಯೆ ಇದ್ದು ಇದು ಮೊದಲನೆ ಸ್ಥಾನದಲ್ಲಿದೆ. ಹಾಗೆಯೆ ಚಿತ್ರದುರ್ಗದಲ್ಲಿ ೬,೯೬೨೯ ಜನಸಂಖ್ಯೆ ಇದ್ದು ಇದು ಎರಡನೇ ಸ್ಥಾನದಲ್ಲಿರುವುದು ತಿಳಿಯುವುದು. ಅನುಕ್ರಮವಾಗಿ ಶೇಕಡವಾರು ೪೨.೨೦ ಮತ್ತು ೨೬.೭೮ ಇರುತ್ತದೆ.

- ೨೦೧೧ ರ ಜನಗಣತಿ ಪ್ರಕಾರ ಚಿತ್ರದುರ್ಗ ಜಿಲ್ಲೆಯ ಒಟ್ಟು ಜನಸಂಖ್ಯೆ–೧೬,೫೯,೪೫೬
- ೨೦೧೧ ರ ಜನಗಣತಿ ಪ್ರಕಾರ ಚಿತ್ರದುರ್ಗ ಜಿಲ್ಲೆಯಲ್ಲಿ ಪ.ವರ್ಗದವರ ಒಟ್ಟು ಜನಸಂಖ್ಯೆ–೩೦೨೫೫೪
- ೨೦೧೧ ರ ಪ್ರಕಾರ ಪ.ವರ್ಗದವರ ಒಟ್ಟು ಜನಸಂಖ್ಯೆಗೆ ಶೇಕಡ ಪ್ರಮಾಣ–೧೮.೨೩ ರಷ್ಟು ಅಂಕಿಸಂಖ್ಯೆಗಳ ಇಲಾಖೆ ವರದಿಮಾಡಿರುತ್ತದೆ.[೧೧]

ಒಟ್ಟಾರೆಯಾಗಿ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಅತಿದಟ್ಟವಾಗಿ ನೆಲೆಸಿರುವ ಬುಡಕಟ್ಟು ಸಮುದಾಯಗಳಾಗಿವೆ. ಅವು ಪ್ರತ್ಯೇಕ ಹಟ್ಟಿಗಳನ್ನು ಕಟ್ಟಿಕೊಂಡು ಮೂಲ ಸಂಸ್ಕೃತಿಯನ್ನು ಪೋಷಿಸಿಕೊಂಡು ಪಾರಂಪರಿಕ ಜೀವನವನ್ನು ಮುಂದುವರಿಸಿಕೊಂಡು ಬರುತ್ತಿರುವ ಬುಡಕಟ್ಟು ಸಮುದಾಯಗಳಾಗಿವೆ.

**ಅಡಿಟಿಪ್ಪಣಿಗಳು**

೧. ಚಲುವರಾಜು, ಜುಂಜಪ್ಪ, ಬುಡಕಟ್ಟು ಮಹಾಕಾವ್ಯಮಾಲೆ. ೧೯೯೭. ಸಂಪಾದಕರ ಮಾತು.

೨. ಗುರುಲಿಂಗಯ್ಯ .ಎಂ. ಮತ್ತು ನಾಗಪ್ಪ.ವಿ ಕಾಡುಗೊಲ್ಲ–ಅಲೆಮಾರಿ ಸಮುದಾಯಗಳ ಅಧ್ಯಯನಮಾಲೆ. ೨೦೦೮, ಪುಟ; ೧೩.

೩. ಶಂಬಾಜೋಶಿ, ಶಂಬಾಕೃತಿ ಸಂಪುಟ, ೨. ಕಂನಡ– ಕಂನುಡಿ,೧೯೯೯. ಪುಟ; ೧೪೨.

೪. ಅದೇ – ಪುಟ: ೧೫೩.

೫. ಸಂಕ್ಷಿಪ್ತ ಕನ್ನಡ – ಇಂಗ್ಲೀಷ್ ನಿಘಂಟು, ಕನ್ನಡ ಸಾಹಿತ್ಯ ಪರಿಷತ್. ಪುಟ ; ೧೫೬೪.

೬. ಶಂಬಾಜೋಶಿ,ಶಂಬಾಕೃತಿ ಸಂಪುಟ, ೧. ಕಂನಾಡು– ಕರ್ನಾಟ, ೧೯೯೯. ಪುಟ; ೨೭೩.

೭. ಶಂಬಾಜೋಶಿ, ಶಂಬಾಕೃತಿ ಸಂಪುಟ,೨ಕಂನಡ–ಕಂನುಡಿ,೧೯೯೯. ಪುಟ; ೧೭೭.

೮. caste and tribes of bombay vol III satara gazetteer p.6.

೯. ಶಂಬಾಜೋಶಿ, ಶಂಬಾಕೃತಿ ಸಂಪುಟ, ೨ ಕಂನಡ–ಕಂನುಡಿ.೧೯೯೯. ಪುಟ ; ೨೩೯.

೧೦. ಮೀರಾಸಾಬಿಹಳ್ಳಿ ಶಿವಣ್ಣ, ಕಾಡುಗೊಲ್ಲ ಬುಡಕಟ್ಟುವೀರರು, ೨೦೦೫ ಪುಟ ; ೪೫.

೧೧. ಮಲ್ಲಿಕಾರ್ಜುನ ಕಲಮರಹಳ್ಳಿ. ಗೊಲ್ಲರ ಇತಿಹಾಸ ಕಥನ, ೨೦೧೧. ಪುಟ ; ೨.

೧೨. ಗುರುಲಿಂಗಯ್ಯ. ಎಂ. ಕರ್ನಾಟಕದ ಗೊಲ್ಲಸಮುದಾಯ–ಸಮಾಜೋ–ಸಾಂಸ್ಕೃತಿಕ ಅಧ್ಯಯನ, ೨೦೦೫, ಪುಟ; ೨.

೧೩. ನಂಜುಂಡಯ್ಯ ಹೆಚ್.ವಿ. ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್. Mysore castes and tribes 1928, ಪುಟ; 197.

೧೪. ವೀರನಾಯಕರು. ಹೆಚ್.ವಿ. ಕ್ಷಾತ್ರಾಂಶ ಪ್ರಭೋದ, ೧೯೮೭. ಪುಟ ; ೮.

೧೫. ಬಿ.ಎಲ್.ರೈಸ್ ಎಫಿಗ್ರಫಿಯ ಕರ್ನಾಟಕ ಚಿತ್ರದುರ್ಗ ಜಿಲ್ಲೆ, ೧೯೦೩.

೧೬. ಕರಿಶೆಟ್ಟಿ ರುದ್ರಪ್ಪ. ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ, ೧೯೯೫, ಪುಟ; ೧೦೫.

೧೭. ಅದೇ– ಪುಟ; ೧೦೨.

೧೮. ಗುರುಲಿಂಗಯ್ಯ. ಎಂ. ಮತ್ತು ನಾಗಪ್ಪ. ವಿ. ಕಾಡುಗೊಲ್ಲ–೨೦೦೮, ಪುಟ; ೯.

೧೯. ಸಣ್ಣೋಬಯ್ಯ.ಎಸ್.ಕೆ. ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳು,೨೦೦೨. ಪುಟ ; ೨೬.

೨೦. ಅದೇ – ಪುಟ; ೨೬.

೨೧. ನಾಗರಾಜ. ಬಿ.ವಿ. ಗೊಲ್ಲರಹಟ್ಟಿ, ೧೯೯೮, ಪುಟ ; ೪.

೨೨. ಚಿದಾನಂದಮೂರ್ತಿ.ಎಂ.ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೭೯, ಪುಟ ; ೩೫೫.

೨೩. ಅದೇ – ಪುಟ; ೨೯೬.

೨೪. ದುರುಗಪ್ಪ ಎಂ.ಕೆ. ವಿಜಯನಗರೋತ್ತಕಾಲಿನ ಬೇಡ ಜನಾಂಗ, ೨೦೧೦ ಪುಟ ; ೧೦.

೨೫. ಚಿದಾನಂದಮೂರ್ತಿ. ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೭೯, ಪುಟ ; ೨೯೬.

೨೬. ಕೃಷ್ಣಮೂರ್ತಿ ಹನೂರು. ಮ್ಯಾಸಬೇಡರು, ೧೯೯೩ ಪುಟ ; ೧೭೪.

೨೭. ಚಿಕ್ಕಪ್ಪಯ್ಯ. ಶ್ರೀ ಭರಮಗಿರಿ ಈರಣ್ಣ ಸ್ವಾಮಿಸ್ಮರಣ ಸಂಚಿಕೆ, ೨೦೧೩. ಪುಟ ; ೩೫.

೨೮. ದುರುಗಪ್ಪ .ಎಂ.ಕೆ. ವಿಜಯನಗರೋತ್ತರಕಾಲೀನ ಬೇಡ ಜನಾಂಗ ಅಧ್ಯಯನ, ೨೦೧೦, ಪುಟ ; ೧೦.

೨೯. ಗುರುಲಿಂಗಯ್ಯ .ಎಂ.ಕರ್ನಾಟಕದ ಗೊಲ್ಲ ಸಮುದಾಯ. ಸಮಾಜೋ-ಸಾಂಸ್ಕೃತಿಕ ಅಧ್ಯಯನ, ೨೦೦೫ ಪುಟ ; ೬.

೩೦. ಕೃಷ್ಣಮೂರ್ತಿ ಹನೂರು. ಮ್ಯಾಸಬೇಡರು, ೧೯೯೩, ಪುಟ ; ೧೮.

೩೧. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು. ಚಿತ್ರದುರ್ಗ ಜಿಲ್ಲಾ ಅಂಕಿ ಅಂಶಗಳ ನೋಟ ೨೦೧೧-೧೨, ಪುಟ : 12.

# ಅಧ್ಯಾಯ : ಮೂರು

# ಹಟ್ಟಿ ಸಂಪ್ರದಾಯಗಳು ಮತ್ತು ಆಚರಣೆಗಳು

# ಅಧ್ಯಾಯ: ಮೂರು

# ಹಟ್ಟಿ ಸಂಪ್ರದಾಯಗಳು ಮತ್ತು ಆಚರಣೆಗಳು

## ಪ್ರಸ್ತಾವನೆ

ವಿಜ್ಞಾನ, ತಂತ್ರಜ್ಞಾನ, ಪ್ರಜಾಪ್ರಭುತ್ವ ಮತ್ತು ಅಧಿಕಾರದ ವಿಕೇಂದ್ರಿಕರಣ ನಾಗಲೋಟದಲ್ಲಿ ಸಾಗುವ ಸಂದರ್ಭದಲ್ಲಿ ಹಟ್ಟಿಗಳನ್ನು ಸೈದ್ಧಾಂತಿಕ ನೆಲೆಗಟ್ಟಿನಲ್ಲಿ ನೋಡುವುದು ಅನಿವಾರ್ಯವಾಗಿದೆ. ಬುಡಕಟ್ಟು ಅಥವಾ ಹಟ್ಟಿ ಸಂಸ್ಕೃತಿಯ ಅನನ್ಯತೆಯನ್ನು ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿ ಗಮನಿಸಬೇಕಿದೆ. ಅವರ ಬದುಕಿನ ಕ್ರಮದ ವೇಗವನ್ನು ಅವಲೋಕಿಸಿದರೆ ಅವರು ಹಿಂದಿನಿಂದಲೂ ಉಳಿಸಿ ಬೆಳೆಸಿಕೊಂಡು ಬಂದಿರುವ ಹಟ್ಟಿ ಸಂಸ್ಕೃತಿಯ ನೆಲೆ ಉಳಿದಿದೆಯ ಅಥವಾ ಅಳಿದಿದೆಯೆ? ಎನ್ನುವ ಚರ್ಚೆಗೆ ಬರುವುದು ಮುಖ್ಯವಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಹಟ್ಟಿ ಸಂಸ್ಕೃತಿ ಭಾಗವಾಗಿರುವ ಕುಟುಂಬದ ಸದಸ್ಯರು, ಜನನ ಮತ್ತು ನಾಮಕರಣ ಹೆರಿಗೆ ಪದ್ಧತಿಯಲ್ಲಿಯ ನಡವಳಿಕೆಗಳು, ಮಗು ಜನಿಸಿದಾಗ, ಹೆಣ್ಣು ಋತುಮತಿಯಾದಾಗ ಮಡಿ ಮೈಲಿಗೆ, ವಿಧಿ ನಿಷೇಧಗಳು, ಆಚರಣೆಗಳು, ವಿವಾಹ ಬಯಸುವ ವಿಧಾನ, ವರದಕ್ಷಿಣೆಯ ವಿವರ, ಕೂಡಿಕೆ ವಿವಾಹ ಪದ್ದತಿ, ಗೋತ್ರ ಅಥವಾ ಪಂಗಡದ ವಿವರ, ಬೆಡಗಿನ ವಿವರ, ಮಹಿಳೆ ಗರ್ಭವತಿಯ ಆಚರಣೆಗಳು, ಶವ ಸಂಸ್ಕಾರದ ವಿಧಿ ವಿಧಾನಗಳು, ಶವವನ್ನು ಹೂತ ಮೇಲೆ ಇರುವ ಸಂಸ್ಕಾರಗಳು ಶವವನ್ನು ಸಾಗಿಸುವ ವಿಧಾನ ಇತ್ಯಾದಿ ಹಟ್ಟಿ ಸಂಸ್ಕೃತಿಯ ಬದುಕಿನ ಭಾಗಗಳು. ನಗರೀಕರಣ ಮತ್ತು ಜಾಗತೀಕರಣದ ಸಂದರ್ಭದಲ್ಲೂ ಸಹ ಪ್ರಸ್ತುತ ಅಧ್ಯಯನಕ್ಕೆ ಮುಖ್ಯವೆನಿಸುತ್ತವೆ. ಹಾಗಾಗಿ ಅಂತಹ ಆಚರಣೆ ವಿಧಾನಗಳಿಗೆ ಪ್ರಸ್ತುತ ಅಧ್ಯಯನ ಕೇಂದ್ರೀಕರಿಸಿದೆ.

### ೩.೧ ಜೀವನಾವರ್ತ ಆಚರಣೆಗಳು

**ಲಿಂಗ ಮತ್ತು ವಯಸ್ಸಿನ ವಿವರ :** ಲಿಂಗವು ಮನುಷ್ಯನಿಗೆ ಪ್ರಾಥಮಿಕ ಅಂಶವಾಗಿದ್ದು ಇದು ಸಾಮಾಜಿಕವಾಗಿ ಅತ್ಯಂತ ಚಿಕ್ಕ ಘಟಕವಾದ ಕುಟುಂಬದಲ್ಲಿ ಅದರ ರಚನೆಯಲ್ಲಿ ಪ್ರಮುಖ ಪಾತ್ರವಹಿಸಿದೆ. ಬದುಕಿನ ಎಲ್ಲಾ ಹಂತಗಳ ಆಗುಹೋಗುಗಳಲ್ಲಿ ಪ್ರಥಮವೂ ಹಾಗೂ ಪ್ರಮುಖ ಪಾತ್ರ ವಹಿಸುವುದು. ಹಟ್ಟಿ ಸಂಸ್ಕೃತಿಯ ಸಂದರ್ಭದಲ್ಲಿ "ವಯಸ್ಕರಿಗೆ" ಎಂದು ಬಳಕೆಮಾಡಿರುವುದು. ಭಾರತದ ಸಂವಿಧಾನದಲ್ಲಿ ಜನಗಣತಿಯ ಮತ್ತು ಮಾನವಾಭಿವೃದ್ಧಿ ವರದಿಯಲ್ಲಿ ವಯಸ್ಕರರು

ಎಂದರೆ ಸೂಚಿಸಿರುವುದು ೧೮ ವರ್ಷದ ಮೇಲ್ಪಟ್ಟಿರುವವರಿಗೆ. ಆದಕ್ಕಾಗಿ ಪ್ರಸ್ತುತ ಅಧ್ಯಯನದಲ್ಲಿ ೧೮ ವರ್ಷ ಮೇಲ್ಪಟ್ಟವರನ್ನು ವಯಸ್ಕರು ಎಂದು ಬಳಸಿಕೊಳ್ಳಲಾಗಿದೆ.

**ಕೋಷ್ಟಕ -೧೩**

**ಲಿಂಗ ಮತ್ತು ವಯಸ್ಸಿನ ವಿವರ**

| ಗೊಲ್ಲರಹಟ್ಟಿ | | | | | ಮ್ಯಾಸಬೇಡರಹಟ್ಟಿ | | | | ಒಟ್ಟು | |
|---|---|---|---|---|---|---|---|---|---|---|
| ವಯಸ್ಸು | ಗಂಡು | ಶೇಕಡ | ಹೆಣ್ಣು | ಶೇಕಡ | ಗಂಡು | ಶೇಕಡ | ಹೆಣ್ಣು | ಶೇಕಡ | ಒಟ್ಟು | ಶೇಕಡ |
| ೨೧-೨೫ | ೨ | ೧.೪೦ | ೦ | ೦.೦೦ | ೧ | ೪.೭೬ | - | ೦.೦೦ | ೩ | ೧.೭೨ |
| ೨೬-೩೦ | ೬ | ೪.೨೦ | ೦ | ೦.೦೦ | ೩ | ೧೪.೨೯ | - | ೦.೦೦ | ೯ | ೫.೧೭ |
| ೩೧-೩೫ | ೫ | ೩.೫೦ | ೦ | ೦.೦೦ | | ೦.೦೦ | - | ೦.೦೦ | ೫ | ೨.೮೭ |
| ೩೬-೪೦ | ೧೨ | ೮.೩೯ | ೨ | ೨೨.೨೨ | ೨ | ೯.೫೨ | - | ೦.೦೦ | ೧೬ | ೯.೨೦ |
| ೪೧-೪೫ | ೧೩ | ೯.೦೯ | ೩ | ೩೩.೩೩ | ೩ | ೧೪.೨೯ | - | ೦.೦೦ | ೧೯ | ೧೦.೯೨ |
| ೪೬-೫೦ | ೧೯ | ೧೩.೨೯ | ೦ | ೦.೦೦ | ೨ | ೯.೫೨ | ೧ | ೧೦೦.೦೦ | ೨೨ | ೧೨.೬೪ |
| ೫೧-೫೫ | ೧೪ | ೯.೭೯ | ೦ | ೦.೦೦ | ೬ | ೨೮.೫೭ | - | ೦.೦೦ | ೨೦ | ೧೧.೪೯ |
| ೫೬-೬೦ | ೨೮ | ೧೯.೫೮ | ೨ | ೨೨.೨೨ | | ೦.೦೦ | - | ೦.೦೦ | ೩೦ | ೧೭.೨೪ |
| ೬೧-೬೫ | ೧೦ | ೬.೯೯ | ೦ | ೦.೦೦ | ೨ | ೯.೫೨ | - | ೦.೦೦ | ೧೨ | ೬.೯೦ |
| ೬೫ ಕ್ಕಿಂತ ಮೇಲ್ಪಟ್ಟವರು | ೩೪ | ೨೩.೭೮ | ೨ | ೨೨.೨೨ | ೨ | ೯.೫೨ | - | ೦.೦೦ | ೩೮ | ೨೧.೮೪ |
| ಒಟ್ಟು | ೧೪೩ | ೧೦೦.೦೦ | ೯ | ೧೦೦.೦೦ | ೨೧ | ೧೦೦.೦೦ | ೧ | ೧೦೦.೦೦ | ೧೭೪ | ೧೦೦.೦೦ |

**ರೇಖಾನಕ್ಷೆ-೨ ಲಿಂಗ ಮತ್ತು ವಯಸ್ಸಿನ ವಿವರ**




ಕೋಷ್ಟಕದ ಸಂಖ್ಯೆ ೧೩ ರಲ್ಲಿ ವ್ಯಕ್ತವಾಗುವ ಅಂಶವೆಂದರೆ ಲಿಂಗಕ್ಕೆ ಸಂಬಂಧಿಸಿದಂತೆ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕಿನ ಮಾಹಿತಿಗಳನ್ನು ಶೇಕರಿಸಲಾಗಿದೆ. ಅದರ ಅನ್ವಯ

ಮೇಲಿನ ಕೋಷ್ಟಕ ತಿಳಿಸುವುದೇನೆಂದರೆ, ಕಾಡುಗೊಲ್ಲರಲ್ಲಿ ೬೫ರ ವಯಸ್ಸಿಗಿಂತ ಮೇಲ್ಪಟ್ಟ ವಯಸ್ಸಿನವರ ಪುರುಷರ ಪ್ರಮಾಣ ಶೇಕಡ ೨೩.೭೮ ರಷ್ಟು ಕಂಡು ಬಂದಿದೆ. ಮ್ಯಾಸಬೇಡರ ಹಟ್ಟಿಯಲ್ಲಿಯೂ ಸಹ ೫೧ ರಿಂದ ೫೫ ವಯಸ್ಸಿನವರು ಶೇಕಡ ೨೮.೫೭ ರಷ್ಟು ಕಂಡುಬಂದಿರುವುದು ತಿಳಿಯುತ್ತದೆ. ಕಾಡುಗೊಲ್ಲರಲ್ಲಿ ೪೧ ರಿಂದ ೪೫ರ ವಯಸ್ಸಿನ ಮಹಿಳೆಯರು ೩೩.೩೩ ರಷ್ಟು ಕಂಡುಬಂದರೆ, ಮ್ಯಾಸಬೇಡರಲ್ಲಿ ೪೬ ರಿಂದ ೫೦ ರ ವಯಸ್ಸಿನ ಮೇಲ್ಪಟ್ಟರವರ ಮಹಿಳೆಯರ ಪ್ರಮಾಣ ಶೇಕಡ ೧೦೦ ರಷ್ಟು ಇರುವುದು ಕಂಡುಬಂದಿದ್ದು ಒಟ್ಟಾರೆ ಎರಡು ಹಟ್ಟಿಗಳಲ್ಲಿ ೬೫ರ ವಯಸ್ಸಿನ ಮೇಲ್ಪಟ್ಟವರು ಶೇಕಡ ೨೧.೮೪ರಷ್ಟು ಕಂಡುಬಂದಿದೆ.

**ಕುಟುಂಬದ ಸದಸ್ಯರು:**

ಕುಟುಂಬವು ಸಾಮಾಜಿಕ ಸಂರಚನೆಯಲ್ಲಿ ಅತ್ಯಂತ ಪ್ರಮುಖ ಘಟ್ಟವಾಗಿದೆ. ಸಾಮಾಜೀಕರಣ ಮತ್ತು ವ್ಯಕ್ತಿತ್ವ ವಿಕಾಸದಲ್ಲಿ ತನ್ನದೇ ಆದ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಈ ಕೋಷ್ಟಕ ಕುಟುಂಬದ ಗಾತ್ರವನ್ನು ಗುರುತಿಸುತ್ತದೆ. ಇದರ ಆಧಾರದ ಮೇಲೆ ಕುಟುಂಬದ ಪ್ರಕಾರವನ್ನು ತಿಳಿಸುತ್ತದೆ. ಚಿತ್ರದುರ್ಗದ ಆರು ತಾಲ್ಲೂಕುಗಳಲ್ಲಿ ಕಾಡುಗೊಲ್ಲರ ಕುಟುಂಬ ಮತ್ತು ಮ್ಯಾಸಬೇಡರ ಕುಟುಂಬಗಳು ವಿಭಕ್ತ ಕುಟುಂಬ ಹಾಗೂ ಅವಿಭಕ್ತ ಕುಟುಂಬ ಇರುವ ಅಂಶವನ್ನು ತಿಳಿಸುತ್ತದೆ.

**ಕೋಷ್ಟಕ – ೧೪**

**ಕುಟುಂಬದ ಸದಸ್ಯರ ವಿವರ**

| ಕ್ರಮ ಸಂಖ್ಯೆ | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ೧ | ೧ | ೦.೬೬ | ೦ | ೦.೦೦ | ೧ | ೦.೫೭ |
| ೨ | ೫ | ೩.೨೯ | ೦ | ೦.೦೦ | ೫ | ೨.೮೭ |
| ೩ | ೧೦ | ೬.೫೮ | ೪ | ೧೮.೧೮ | ೧೪ | ೮.೦೫ |
| ೪ | ೪೧ | ೨೬.೯೭ | ೪ | ೧೮.೧೮ | ೪೫ | ೨೫.೮೬ |
| ೫ | ೪೨ | ೨೭.೬೩ | ೪ | ೧೮.೧೮ | ೪೬ | ೨೬.೪೪ |
| ೬ ಕ್ಕಿಂತ ಮೇಲ್ಪಟ್ಟು | ೫೩ | ೩೪.೮೭ | ೧೦ | ೪೫.೪೫ | ೬೩ | ೩೬.೨೧ |
| ಒಟ್ಟು | ೧೫೨ | ೧೦೦.೦೦ | ೨೨ | ೧೦೦.೦೦ | ೧೭೪ | ೧೦೦.೦೦ |

ಕೋಷ್ಟಕದ ಸಂಖ್ಯೆ ೧೪ ರಲ್ಲಿ ವ್ಯಕ್ತವಾಗುವ ಅಂಶವೆಂದರೆ ಕುಟುಂಬ ಸದಸ್ಯರಿಗೆ ಸಂಬಂಧಿಸಿದಂತೆ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕಿನ ಮಾಹಿತಿಗಳನ್ನು ಸಂಗ್ರಹಿಸಿದೆ. ಅದರ ಅನ್ವಯ ಮೇಲಿನ ಕೋಷ್ಟಕ ತಿಳಿಸುವುದೇನೆಂದರೆ, ಚಿತ್ರದುರ್ಗ ಜಿಲ್ಲೆಯಲ್ಲಿ ಆರು ತಾಲ್ಲೂಕುಗಳಿಂದ ಕಾಡುಗೊಲ್ಲರ ಕುಟುಂಬದ ಗಾತ್ರ ೬ ಜನ ಸದಸ್ಯರಿಗಿಂತ ಮೇಲ್ಪಟ್ಟವರು ಶೇಕಡ ೩೪.೮೭ ರಷ್ಟು ಕಂಡು ಬಂದರೆ ಮ್ಯಾಸಬೇಡರ ಕುಟುಂಬದಲ್ಲಿ ಸದಸ್ಯರು ೬ ಜನ ಸದಸ್ಯರಿಗಿಂತ ಮೇಲ್ಪಟ್ಟವರ

ಪ್ರಮಾಣ ಶೇಕಡ ೪೫.೪೫ ರಷ್ಟು ಕಂಡುಬರುವುದು. ಒಟ್ಟಾರೆ ಎರಡು ಹಟ್ಟಿಗಳಲ್ಲಿ ೬ ಜನ ಸದಸ್ಯರಿಗಿಂತ ಮೇಲ್ಪಟ್ಟವರು ಶೇಕಡ ೩೬.೨೧ ರಷ್ಟು ಕಂಡುಬರುವುದು. ಈ ಹಿನ್ನೆಲೆಯಲ್ಲಿ ವಿಭಕ್ತ ಕುಟುಂಬಗಳು ಹೆಚ್ಚಿರುವುದು ಕಂಡುಬರುತ್ತದೆ.

**ಅ) ಜನನ ಮತ್ತು ನಾಮಕರಣ:**

ಕಾಡುಗೊಲ್ಲರು ಮತ್ತು ಮ್ಯಾಸಬೇಡರಲ್ಲಿ ಮಗು ಹುಟ್ಟುವ ಸಂದರ್ಭದಲ್ಲಿ ಆಚರಿಸುವ ಸಂಪ್ರದಾಯಗಳು ತುಂಬಾ ವಿಶೇಷವಾಗಿ ಹಾಗೂ ಕಟ್ಟುನಿಟ್ಟಾಗಿದೆ. ಅದು ಹೇಗೆಂದರೆ ತುಂಬು ಗರ್ಭಿಣಿಗೆ ನವಮಾಸಗಳು ತುಂಬಿ ಹೆರಿಗೆ ನೋವು ಆರಂಭವಾದ ತಕ್ಷಣವೇ ಹಟ್ಟಿಯಿಂದ ಹೊರಗಡೆ ದೂರದಲ್ಲಿ ಅರ್ಧಗೋಳಾಕಾರದ ಚಿಕ್ಕ ಗುಬ್ಬವನ್ನು (ಗುಡಿಸಲು) ನಿರ್ಮಿಸುತ್ತಾರೆ. ನಂತರ ಅವಳನ್ನು ಅಲ್ಲಿಯೇ ಬಿಟ್ಟು ಎಲ್ಲರು ಹಟ್ಟಿಯೊಳಕ್ಕೆ ಹೋಗುತ್ತಾರೆ. ಆಕೆಗೆ ಹೆರಿಗೆಯ ಸಂದರ್ಭದಲ್ಲಿ ಸಹಾಯ ಮಾಡಲು ಬೇಡರ ಕುಲಕ್ಕೆ ಸೇರಿದ ಒಬ್ಬ ಸೂಲಗಿತ್ತಿಯನ್ನು ನೇಮಿಸುತ್ತಾರೆ. ಆದರೆ ಪ್ರಸ್ತುತದಲ್ಲಿ ಈಗ ಕಾಡುಗೊಲ್ಲರ ಹಿರಿಯ ಮಹಿಳೆಯೇ ಹೆರಿಗೆಯ ಸಂದರ್ಭದಲ್ಲಿ ಸಹಾಯ ಮಾಡುತ್ತಿರುವುದನ್ನು ಗಮನಿಸಬಹುದು. ಅವಳು ಆ ಗರ್ಭಿಣಿಗೆ ಹೆರಿಗೆ ಮಾಡಿಸಿ ಹೊರಟು ಹೋಗುತ್ತಾಳೆ. ಹೆರಿಗೆಯಾದ ದಿನದಿಂದ ಮೂರು ತಿಂಗಳುಗಳ ಕಾಲ ಮಳೆ, ಗಾಳಿ, ಬಿಸಿಲು ಏನೆ ಬಂದರೂ ತಡೆದುಕೊಂಡು ಬಾಣಂತಿ ತನ್ನ ಮಗುವನ್ನು ಸಂರಕ್ಷಣೆ ಮಾಡಿಕೊಂಡು ಆ ಗುಬ್ಬದಲ್ಲಿಯೇ ಇರಬೇಕಾಗುತ್ತದೆ. ಪ್ರತಿನಿತ್ಯ ಬಾಣಂತಿಗೆ ಬೇಕಾದ ಅಡುಗೆಯ ಪದಾರ್ಥಗಳನ್ನು ಒಂದು ಮೊರದಲ್ಲಿಟ್ಟು ಆ ಮೊರವನ್ನು ಅವರ ಮನೆಯವರು ದೂರದಿಂದಲೇ ನೂಕುತ್ತಾರೆ. ಆ ಪದಾರ್ಥಗಳಿಂದ ಬಾಣಂತಿ ತನ್ನ ಆಹಾರವನ್ನು ತಾನೇ ತಯಾರು ಮಾಡಿಕೊಳ್ಳಬೇಕು. (ಇತ್ತೀಚಿಗೆ ಮನೆಯಲ್ಲಿಯೇ ಪ್ರತಿನಿತ್ಯ ಮಾಡುವ ಅಡುಗೆಯನ್ನೇ ಕೊಡುವ ಪದ್ಧತಿಯನ್ನು ಕಾಣಬಹುದು) ಕೆಲವು ಪ್ರದೇಶಗಳಲ್ಲಿ ಆಹಾರ ಪದಾರ್ಥಗಳನ್ನು ಪ್ರತಿನಿತ್ಯ ಕೊಡುವ ಬದಲಾಗಿ ಮೂರು ತಿಂಗಳಿಗೆ ಆಗುವಷ್ಟನ್ನು ಮೊದಲೇ ಆ ಗುಬ್ಬದಲ್ಲಿ ಇಟ್ಟಿರುತ್ತಾರೆ. ಹೆರಿಗೆಯಾದ ಮೇಲೆ ಎರಡನೆಯ ದಿನ ಅಗಸರ ಸಮುದಾಯದವರನ್ನು  ಕರೆಯಿಸಿ ಬಾಣಂತಿಯು ಇರುವ ಜಾಗದಿಂದ ಸ್ವಲ್ಪ ದೂರದಲ್ಲಿ ಒಂದಿಷ್ಟು ನೆಲವನ್ನು ಸಗಣಿಯಿಂದ ಸಾರಿಸುತ್ತಾರೆ. ಅಗಸ ಸಮುದಾಯದ ಹೆಣ್ಣುಮಗಳು ಬಾಣಂತಿಯಿರುವ ತಾತ್ಕಾಲಿಕ ಗುಬ್ಬವನ್ನು ಅದರ ಮೊದಲಿನ ಜಾಗದಿಂದ ಎತ್ತಿ ಸಗಣಿ ಸಾರಿಸಿದ ಜಾಗದಲ್ಲಿ ಇಡುತ್ತಾಳೆ. ಬಾಣಂತಿ ತನ್ನ ಮಗುವಿನೊಂದಿಗೆ ಸ್ಥಳ ಬದಲಾಯಿಸಿದ ಗುಡಿಸಿಲಿನೊಳಕ್ಕೆ ಬರುತ್ತಾಳೆ. ಅಗಸ ಸಮುದಾಯದ ಹೆಣ್ಣುಮಗಳು ತಂದಿದ್ದ ಮಡಿಬಟ್ಟೆಗಳನ್ನು ಉಟ್ಟುಕೊಂಡು ತಾನು ಮೊದಲು ಉಟ್ಟಿದ್ದ ಮೈಲಿಗೆಯ ಬಟ್ಟೆಗಳನ್ನು ಅವಳಿಗೆ  ಕೊಡುತ್ತಾಳೆ. ಅಲ್ಲಿಗೆ ಎರಡನೆಯ ದಿನದ ಸೂತಕವನ್ನು ಕಳೆದಂತಾಯಿತು.

ಇದೇ ರೀತಿ ಮೂರನೆಯ ದಿನ, ಐದನೆಯ ದಿನ ಒಂಬತ್ತನೆಯ ದಿನ ಬಾಣಂತಿ ಇರುವ ಗುಬ್ಬವನ್ನು ಬೇರೆ ಕಡೆಗಳಲ್ಲಿ ಸಗಣಿ ಸಾರಿಸಿದ ಜಾಗಕ್ಕೆ ಎಳೆದು ಅದರ ಜಾಗವನ್ನು ಬದಲಾಯಿಸಿ, ಬಾಣಂತಿಗೆ ಮಡಿಬಟ್ಟೆಗಳನ್ನು ಕೊಟ್ಟು ಸೂತಕವನ್ನು ಕಳೆಯುತ್ತಾರೆ. ಒಂಬತ್ತನೆಯ ದಿನದ

ಸೂತಕವನ್ನು ಕಳೆದ ಮೇಲೆ ಹದಿನೈದು ದಿನದವರೆಗೂ ಗುಬ್ಬದ ಜಾಗವನ್ನು ಬದಲಾಯಿಸುವುದಿಲ್ಲ. ಜೊತೆಗೆ ಬಾಣಂತಿಗೆ ಮಡಿಬಟ್ಟೆಗಳನ್ನು ಸಹ ಕೊಡುವುದಿಲ್ಲ. ಹದಿನೈದನೆಯ ದಿನ ಬಾಣಂತಿ ಇರುವ ಗುಬ್ಬದ ಜಾಗವನ್ನು ಬದಲಾಯಿಸಿ, ಮಡಿಬಟ್ಟೆಗಳನ್ನು ನೀಡಿ ಹದಿನೈದನೆಯ ದಿನದ ಸೂತಕವನ್ನು ಕಳೆದುಕೊಳ್ಳುತ್ತಾರೆ. ಅದೇ ರೀತಿ ಮೂವತ್ತನೆಯ ದಿನದಂದು ಇದೇ ರೀತಿ ಮಾಡಿ ಮಡಿ ಬಟ್ಟೆಗಳನ್ನು ಕೊಟ್ಟು ಒಂದು ತಿಂಗಳ ಸೂತಕವನ್ನು ಕಳೆದುಕೊಳ್ಳುತ್ತಾರೆ. ಜೊತೆಗೆ ಬಾಣಂತಿ ಇರುವ ಜಾಗವನ್ನು ಬದಲಾಯಿಸುತ್ತಾರೆ. ಅರವತ್ತು ದಿನಗಳು ಕಳೆದ ಮೇಲೆ ಮೇಲಿನ ಶಾಸ್ತ್ರದ ರೀತಿಯಲ್ಲಿಯೇ ಎರಡು ಮತ್ತು ಮೂರನೆ ತಿಂಗಳ ಸೂತಕವನ್ನು ಕಳೆಯುತ್ತಾ, ಆಕೆ ಉಪಯೋಗಿಸುತ್ತಿದ್ದ ಮಡಿಕೆಗಳನ್ನು ಒಡೆದು ದೂರ ಎಸೆಯುತ್ತಾರೆ. ಆ ನಂತರ ಬಾಣಂತಿ ಮಗುವಿನೊಂದಿಗೆ ಹಟ್ಟಿಯನ್ನು ಪ್ರವೇಶಿಸುತ್ತಾಳೆ. ಇದು ಇತ್ತೀಚಿನ ದಿನಗಳಲ್ಲಿ ಐದು, ಒಂಬತ್ತು, ಹನ್ನೊಂದು, ಇಪ್ಪತ್ತೊಂದು ದಿನಗಳಿಗೆ ಸೀಮಿತಗೊಂಡಿರುತ್ತದೆ. ಇಲ್ಲವೆ ಆಸ್ಪತ್ರೆಗಳಲ್ಲಿಯೇ ಇದ್ದು ಐದನೇ ದಿನದಲ್ಲಿ ಹಟ್ಟಿ ಉದಿಯಲ್ಲಿ 'ಜೆನ್ನಿಗೆ' ಹಾಕಿಸಿಕೊಂಡು ದೇವಸ್ಥಾನಕ್ಕೆ ಹೋಗಿ ತಮ್ಮ ಮನೆಗೆ ಬರುತ್ತಾರೆ. ಈ ಹಿನ್ನೆಲೆಯಲ್ಲಿ 'ಸೂರಪ್ಪನ ಹಟ್ಟಿಯ ಜಯಮ್ಮ ಹೇಳುವುದೆಂದರೆ ನಮ್ಮ ಸಂಪ್ರದಾಯದಲ್ಲಿ ಹೀಗೆ ಇಪ್ಪತ್ತೊಂದು ದಿನ ಇರಬೇಕು. ನಮ್ಮ ನೆರಳು ಸಹ ಬೇರೆಯವರಿಗೆ ಬೀಳುವ ಹಾಗಿಲ್ಲ ಹಾಗೇನಾದರು ಬಿದ್ದರೆ ಅವರು ಸಹ ಮೈಲಿಗೆಯಾಗುತ್ತಾರೆ. ಹಟ್ಟಿ ಪ್ರವೇಶಿಸಲು ಅವರಿಗೆ ನಿಷಿದ್ಧವಿದೆ ಮತ್ತೆ ಅವರು ಸ್ನಾನ ಮಾಡಿಯೇ ಹೋಗಬೇಕೆಂದು ಹೇಳುತ್ತಾರೆ.'

ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಐಮಂಗಲ ಹೋಬಳಿಯ ದಿಂಡಾವರದ ದುಗ್ಗಾಣಿ ಹಟ್ಟಿಯಲ್ಲಿ ಬಾಣಂತಿ ಅನ್ನಪೂರ್ಣ ಮತ್ತು ಮಗು ಹಟ್ಟಿಯಿಂದ ಹೊರಗೆ ಚಿಕ್ಕ ಗುಬ್ಬದಲ್ಲಿ ಇಪ್ಪತ್ತೊಂದು ದಿನದಿಂದ ವಾಸವಾಗಿರುವುದು ಕಂಡುಬಂದಿತು, ಆದ್ದರಿಂದ ಈ ವಿಚಾರವಾಗಿ ಆ ಮಹಿಳೆಯೊಂದಿಗೆ ಚರ್ಚಿಸಿದಾಗ ಹೆರಿಗೆ ಅದ ಹೆಣ್ಣು ನಮ್ಮ ದೇವರಿಗೆ 'ಅಂಟು ಮುಂಟು' ಎಂಬುದಾಗಿ ನಂಬಿರುತ್ತಾರೆ. ಇದರ ಜೊತೆಗೂ ಜಿಟಿ ಜಿಟಿ ಮಳೆ, ಗಾಳಿ, ಬಿಸಿಲೆನ್ನದೆ ಇಪ್ಪತ್ತೊಂದು ದಿನ ಇಲ್ಲೇ ಇರುವುದು ಇದೊಂದು ಶಾಪವಾಗಿದೆ. ಇದನ್ನು ಏನಾದರು ಮಾಡಿ ಬದಲಾವಣೆ ಮಾಡಬೇಕೆಂದು ಹಟ್ಟಿಯ ಹೆಂಗಸರ ನೊಂದ ಮನಸ್ಸಿನಿಂದ ಹೇಳುತ್ತಾರೆ. ಇಂತಹ ಸ್ಥಿತಿ ಎಲ್ಲ ಗೊಲ್ಲರ ಹಟ್ಟಿಗಳಲ್ಲಿಯೂ ಕಾಣಬಹುದಾಗಿದೆ.

ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳಲ್ಲಿ ಕಾಡುಗೊಲ್ಲರು ಹೆರಿಗೆಯಾದ ನಂತರ ೨೧ ದಿನಗಳ ತನಕ ಹಟ್ಟಿಯೊಳಗೆ ಬರುವಂತಿಲ್ಲ ಎನ್ನುವಂತಹ ಪದ್ಧತಿಯು ಇನ್ನೂ ಆಚರಣೆಯಲ್ಲಿರುವುದು ಕಂಡುಬರುತ್ತದೆ. ಅದರಂತೆಯೇ ಮ್ಯಾಸಬೇಡರ ಹಟ್ಟಿಯಲ್ಲಿ ಹೆರಿಗೆಯಾದ ನಂತರ ೮ ರಿಂದ ೯ ದಿನಗಳ ತನಕ ಹಟ್ಟಿಯೊಳಗೆ ಬರುವಂತಿಲ್ಲ ಎನ್ನುವುದು ಕಂಡುಬರುವುದು. ಈ ಹಿನ್ನೆಲೆಯಲ್ಲಿ ಈಗಲೂ ಸಹ ಹಳೆಯ ಆಚರಣೆಗಳನ್ನು ಅನುಸರಿಸುತ್ತಿರುವುದು ಪ್ರಸ್ತುತ ಅಧ್ಯಯನದಿಂದ ಕಂಡುಬಂದಿದೆ.

**ಹೆರಿಗೆಗೆ ಸಂಬಂಧಿಸಿದ ಆಚರಣೆಯ ಮುಖ್ಯ ನಿಷೇಧಗಳು**

- ಹಟ್ಟಿಯ ಹೊರಗಡೆ ಗುಡಿಸಲು ನಿರ್ಮಿಸಿಕೊಂಡು ವಾಸಿಸಬೇಕು
- ಹೆರಿಗೆಯಾದ ಮೂರು ತಿಂಗಳು ಹಟ್ಟಿಯ ಒಳಗೆ ಬರುವಂತಿಲ್ಲ.
- ತಾಯಿ ಮಗುವನ್ನು ಯಾರೂ ಮುಟ್ಟುವಂತಿಲ್ಲ.
- ದೇವಾಲಯದೊಳಗೆ ಪ್ರವೇಶವಿಲ್ಲ.
- ತಾಯಿ ಮತ್ತು ಮಗುವಿನ ನೆರಳು ದೇವರ ಹಾಗೂ ಯಾವ ಜನರ ಮೇಲೂ ಬೀಳುವಂತಿಲ್ಲ.

ಹೀಗೆ ಹೆರಿಗೆಗೆ ಸಂಬಂಧಿಸಿದ ನಿಷೇಧಗಳಿಂದ ಸಂಪ್ರದಾಯಕ್ಕೆ ಬದ್ಧರಾಗಿದ್ದಾರೆ, ಹಟ್ಟಿಗಳನ್ನು ಕಟ್ಟಿಕೊಂಡು ಪ್ರತ್ಯೇಕವಾಗಿ ವಾಸಿಸುವ ಅವರು ಹಟ್ಟಿ ಸಂಸ್ಕೃತಿಯ ಮೂಲ ಆಚರಣೆಗಳನ್ನು ಆಚರಿಸುತ್ತಿದ್ದು, ಅವರು ಬುಡಕಟ್ಟು ಸಂಸ್ಕೃತಿಯನ್ನು ಹೊಂದಿದ್ದು ಮೂಲ ಆಚರಣೆಗಳನ್ನು ಉಳಿಸಿಕೊಂಡಿದ್ದಾರೆ.

**ಮಗು ಜನಿಸಿದ ನಂತರದ ಆಚರಣೆಗಳು :**

ಹಟ್ಟಿ ಪ್ರವೇಶಿಸುವಾಗ ಅಷ್ಟರಲ್ಲಿ ಮಗುವಿನ ತಂದೆ 'ಜೆನ್ನಿಗೆ' ಕುರಿಯ ಹಾಲನ್ನು ತಂದಿರುತ್ತಾನೆ. ಬಾಣಂತಿ ಮತ್ತು ಮಗುವಿಗೆ ಪೂಜಾರಿ ಹಾಲನ್ನು ಕುಡಿಸುತ್ತಾನೆ. ಜೆನ್ನಿಗೆ ಹಾಲನ್ನು ಕುಡಿಸುವ ಈ ಪ್ರಕ್ರಿಯೆಗೆ ಗೊಲ್ಲರು ಹೊರ ಜೆನ್ನಿಗೆ ಎನ್ನುತ್ತಾರೆ. ಅನಂತರ ಮಗುವನ್ನು ಕರೆದುಕೊಂಡು ಬಾಣಂತಿ ಹಟ್ಟಿಯೊಳಗಿನ ದೇವಸ್ಥಾನವನ್ನು ಪ್ರದಕ್ಷಿಣೆ ಹಾಕಿ ಬೇಲಿಯ ಬಾಗಿಲ ಬಳಿ ಬಂದಾಗ ಪೂಜಾರಿ ಅವಳಿಗೆ ಮತ್ತು ಮಗುವಿಗೆ ಜೆನ್ನಿಗೆ ಹಾಲನ್ನು ಕುಡಿಸುತ್ತಾನೆ. ಇದನ್ನು ಕಿರು ಜೆನ್ನಿಗೆ ಎಂದು ಕರೆಯುತ್ತಾರೆ. ಇದಾದ ನಂತರ ದೇವಸ್ಥಾನದ ಒಳಗೆ ಬಂದಾಗಲೂ ಪೂಜಾರಿ ಮಗುವಿಗೆ ಮತ್ತು ತಾಯಿಗೆ ಜೆನ್ನಿಗೆ ಹಾಲನ್ನು ಕುಡಿಸುತ್ತಾನೆ ಇದನ್ನು ಒಳ ಜೆನ್ನಿಗೆ ಎನ್ನುತ್ತಾರೆ. ಇದಾದ ನಂತರ ಮಗುವಿನ ತಂದೆ ಏಳು ಕಟ್ಟು ವೀಳ್ಯೆದೆಲೆ, ಏಳು ಸೇರು ಅಡಿಕೆಯನ್ನು ಪೂಜಾರಿಗೆ ಕೊಡುತ್ತಾನೆ. ಆಗ ಪೂಜಾರಿ ಮಗುವಿಗೆ ಹೆಸರಿಡುತ್ತಾನೆ. ಬಾಣಂತಿ ಏಳು ಕಾಸುಗಳನ್ನು ದೇವರಿಗೆ ಕಟ್ಟುತ್ತಾಳೆ. ನಂತರ ಪೂಜಾರಿ ದೇವರಿಗೆ ಪೂಜೆ ಮಾಡಿ ಎಲ್ಲರಿಗೂ "ವೀಳ್ಯೆದೆಲೆ ಮತ್ತು ಅಡಿಕೆಯನ್ನು ಹಂಚುತ್ತಾನೆ. ಅನಂತರ ಮಗು ಮತ್ತು ಬಾಣಂತಿಯನ್ನು ಕರೆದುಕೊಂಡು ಮಗುವಿನ ತಂದೆ ತನ್ನ ಮನೆಗೆ ಹೋಗುತ್ತಾನೆ. ಮನೆಯಲ್ಲಿ ಅಂದು ಹಬ್ಬದಡುಗೆ ಮಾಡಿ ನಾಲ್ಕಾರು ಜನರಿಗೆ ಊಟ ಹಾಕಿ ಸಂಭ್ರಮಿಸುತ್ತಾರೆ.

ಮಗು ಜನಿಸಿದ ನಂತರದ ಆಚರಣೆಗಳಿಗೆ ಸಂಬಂಧಿಸಿದಂತೆ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕಿನ ಮಾಹಿತಿಗಳನ್ನು ಸಂಗ್ರಹಿಸಲಾಯಿತು, ಅದರ ಅನ್ವಯ ಕಾಡುಗೊಲ್ಲರಲ್ಲಿ ಹುಟ್ಟಿದ ಮಗುವಿಗೆ ಪೂಜಾರಿಯೇ ನಾಮಕರಣ ಮಾಡುತ್ತಾನೆ, ಅದರಂತೆಯೇ ಮ್ಯಾಸಬೇಡರ ಹಟ್ಟಿಯಲ್ಲಿ

ಮಗು ಜನಿಸಿದ ನಂತರ ನಾಮಕರಣವನ್ನು ಸೋದರ ಅತ್ತೆ ಮಾಡುತ್ತಾಳೆ ಎನ್ನುವುದು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಮ್ಯಾಸಬೇಡರಲ್ಲಿ ಇಷ್ಟು ಕಟ್ಟುನಿಟ್ಟಾದ ಕ್ರಮಗಳಿಲ್ಲದಿದ್ದರೂ ಜನನ ಸಂದರ್ಭದಲ್ಲಿ ಅವರದೇ ಆದ ಕೆಲವು ವಿಶೇಷ ಕಟ್ಟುಪಾಡುಗಳಿರುವುದನ್ನು ಗಮನಿಸಬಹುದು. ಅವರು ಕಾಡುಗೊಲ್ಲರಂತೆ ಬಾಣಂತಿಯನ್ನು ಪ್ರತ್ಯೇಕ ಗುಬ್ಬದಲ್ಲಿ ಇಡುವುದಿಲ್ಲ. ಆದರೂ ಮೈಲಿಗೆಯ ದೃಷ್ಟಿಯಿಂದ ಹೆಣ್ಣು ಮಗಳು ಗರ್ಭಿಣಿಯಾಗಿ ಮಗುವನ್ನು ಪಡೆಯುವ ಸಮಯವನ್ನು ಇವರು ಮೈಲಿಗೆ ಅಥವಾ ಸೂತಕವೆಂದು ಭಾವಿಸುವುದರಿಂದ, ಗರ್ಭಿಣಿಯನ್ನು ಒಂಬತ್ತು ತಿಂಗಳು ತುಂಬುವಾಗಲೇ ಮನೆಯ ಹೊರಗಡೆ ಬೇವಿನಸೊಪ್ಪು ಮತ್ತು ಹೊಂಗೆಸೊಪ್ಪು ಬೆರೆಸಿ ಕಟ್ಟಿದ ಗುಬ್ಬದಲ್ಲಿ ಕರೆತಂದು ಕೂರಿಸುವರು. ಆ ಸಂದರ್ಭದಲ್ಲಿ ಹೆಣ್ಣುಮಕ್ಕಳೆಲ್ಲಾ ಈ ವಿಶೇಷಕ್ಕೆ ಸಂಬಂಧಿಸಿದ ಪದ(ಹಾಡು)ಗಳನ್ನು ಹಾಡುತ್ತಾ ಆಕೆಯನ್ನು ಕರೆತರುವರು.

ತಾಯಿ ಮಗುವಿಗೆ ಜನ್ಮ ನೀಡಿದ ತರುವಾಯ ಬೇವಿನ ಸೊಪ್ಪು ಬೆರೆಸಿದ ನೀರು ಕಾಯಿಸಿ ತಾಯಿಗೆ ಸ್ನಾನ ಮಾಡಿಸುತ್ತಾರೆ. ಸ್ನಾನ ಆದ ಮೇಲೆ ನೀರಿಗೆ ಬೆರೆಸಿದ್ದ ಬೇವಿನಸೊಪ್ಪು ತೆಗೆದು ಅದರಿಂದಲೇ ಬಾಣಂತಿಗೆ ಇಳಿ(ದೃಷ್ಟಿ) ತೆಗೆಯುವರು. ಇಳಿ ತೆಗೆದು ಅದೇ ಸೊಪ್ಪನ್ನು ಬಾಣಂತಿಯ ಕೈಗೆ ಕೊಟ್ಟು ಸೂರ್ಯನಿಗೆ ಕೈಮುಗಿಯುವಂತೆ ಬೇಡ ಹೆಂಗಸರು ಸೂಚಿಸುತ್ತಾರೆ. ಬೇಡರಲ್ಲಿ ಸೂರ್ಯನಿಗೆ ಕೈಮುಗಿಯುವುದು ಅವರ ಸಂಪ್ರದಾಯದಲ್ಲಿ ತುಂಬಾ ಮಹತ್ವ ಪಡೆದುಕೊಂಡಿದೆ.

ಹುಟ್ಟಿದ ಮಗು ಗಂಡಾದರೆ ಕಾಯಿಸಿದ ಸೂಜಿಯಲ್ಲಿ ಬಲ ಹುಬ್ಬು, ಬಲಎದೆಗೆ, ಬಲತೆಕ್ಕೆಯ ಭಾಗದಲ್ಲಿ ಸುಡುವರು. ಹೆಣ್ಣಾದರೆ ಎಡಹುಬ್ಬು, ಎಡಎದೆ, ಎಡತಕ್ಕೆಗೆ ಸುಡುವರು. ಹೊಕ್ಕುಳು ಹುರಿ ಕತ್ತರಿಸಿ ಗಂಟು ಹಾಕುವರು. ಹೆರಿಗೆಯಾದ ದಿನದಿಂದ ಮೂರು, ಐದು, ಏಳು, ಒಂಬತ್ತು, ಹನ್ನೊಂದು ದಿನಗಳಲ್ಲಿ ಮುಟ್ಟು ಹೊರಡಿಸುವ ಆಚರಣೆ ಇರುತ್ತದೆ. ಹನ್ನೊಂದನೆಯ ದಿನದ ಮೈಲಿಗೆ ಕಳೆಯುವವರೆಗೂ ಬಾಣಂತಿ ಮಗುವಿನೊಡನೆ ಅದೇ ಗುಡಿಸಿಲಿನಲ್ಲಿಯೇ ಇರಬೇಕು. ತದನಂತರ ಹನ್ನೊಂದನೆಯ ದಿನದ ಮೈಲಿಗೆ ಕಳೆದ ನಂತರ ಮಗುವಿನೊಡನೆ ತಾಯಿ ಸ್ನಾನ ಮಾಡಿ ಮನೆಯೊಳಕ್ಕೆ ಬರುವಳು. ಆಮೇಲೆ ಮೂರು ತಿಂಗಳವರೆಗೆ ಮಗುವನ್ನು ಮೊರದೊಳಗೇ ಇಟ್ಟು ಸಾಕುವ ಪದ್ಧತಿ ಬೇಡರಲ್ಲಿದೆ. ಹಾಗೇಯೇ ಅನೇಕ ರೀತಿಯ ಭವಿಷ್ಯದ ಭಯಂಕರ ಕಾಯಿಲೆಗಳ ನಿಷೇಧಕ್ಕೆ ಕೆಲವೊಂದು ಪೂರ್ವಯೋಜಿತ ಮದ್ದುಗಳನ್ನು ಮಗುವಿಗೆ ಕುಡಿಸುತ್ತಾರೆ. ಮಗುವನ್ನು ಮೂರು ತಿಂಗಳವರೆಗೆ ಮೊರದಲ್ಲಿ ಪೋಷಿಸಿ, ಮೂರು ತಿಂಗಳ ನಂತರ ಬಿದಿರು ತೊಟ್ಟಿಲು ಉಪಯೋಗಿಸುವರು. ಹಾಗೆ ತೊಟ್ಟಿಲಿಗೆ ಶಿಶುವನ್ನು ಮೊದಲಿಗೆ ತೊಟ್ಟಿಲಿಗೆ ಹಾಕಿದಾಗ ಬೇಯಿಸಿದ ಹುರುಳಿಯನ್ನು ಗಂಟುಕಟ್ಟಿ ಮಗುವಿಗೆ ಪಕ್ಕಕ್ಕೆ ಇಡುತ್ತಾರೆ. ಹೆಣ್ಣು ಮಗುವಾದರೆ ಮೂರು ಗಂಟು, ಗಂಡು ಮಗುವಾದರೆ ಐದು ಗಂಟನ್ನು ಕಟ್ಟಿ ಮಗುವಿನ ಪಕ್ಕಕ್ಕೆ ಇಡುವುದುಂಟು. ತೊಟ್ಟಿಲೊಳಗೆ ಇಟ್ಟು ಈ ಬೆಂದ ಹುರುಳಿ ಗಂಟನ್ನು ಸೋದರತ್ತೆಯ ಕೈಯಲ್ಲಿ ಮುಟ್ಟದೆ

ಬಾಯಲ್ಲೇ ಕಚ್ಚಿಕೊಂಡು ಮಗುವಿನ ಹೆಸರು ಹೇಳುತ್ತಾ ಮೂರು ಸಾರಿ ಹೊರಗೆ ಹೋಗಿ ಒಳಗೆ ಬರುತ್ತಾಳೆ. ಗುಗ್ಗರಿ ಗಂಟುಗಳನ್ನು ಹೊತ್ತು ಮೂರು ಬಾರಿ ಮನೆಯ ಹೊಸ್ತಿಲನ್ನು ದಾಟುವಾಗ ಅಲ್ಲಿರುವ ಸಂಬಂಧಿಕರು ಸಂತೋಷಕ್ಕೆಂದು ಆಕೆಗೆ ಹೊಡೆಯುವುದುಂಟು. ಹೀಗೆ ಹೊರಗೆ ಹೋಗಿ ಒಳಗೆ ಬಂದು ಮಾಡುವಾಗ ಸೋದರತ್ತೆ ಮಗುವಿಗೆ ಇಟ್ಟ ಹೆಸರೇ ಮುಂದೆ ಶಾಶ್ವತವಾಗಿ ಉಳಿಯುತ್ತದೆ.

ಬುಡಕಟ್ಟು ಜನರು ಸಾಮಾನ್ಯವಾಗಿ ತಮ್ಮ ಸಂತೋಷ ಹಾಗೂ ದುಃಖದ ಸಂದರ್ಭಗಳನ್ನು ಪ್ರಕೃತಿಯ ಮುಂದೆಯೇ ನಿವೇದಿಸಿಕೊಳ್ಳುವುದುಂಟು. ಅಲ್ಲಿ ತಮ್ಮ ಕಷ್ಟಕ್ಕೆ, ನೋವಿಗೆ ಸ್ಪಂದನೆ ಪರಿಹಾರ ದೊರೆಯಬಹುದೆಂಬ ನಂಬಿಕೆ ಈ ಜನಗಳಿಗಿದೆ. ಹಾಗಾಗಿಯೇ ತಮ್ಮ ಸಂತಾನ ಫಲದಂತಹ ಸಂತೋಷದ ವಿಷಯವನ್ನು ಪ್ರಕೃತಿಯೊಂದಿಗೆ ಹಂಚಿಕೊಳ್ಳುವ ಸಲುವಾಗಿಯಾದರೂ ಈ ಬುಡಕಟ್ಟು ಜನ ಹಟ್ಟಿಯಿಂದ ಹೊರಗಡೆ ಗುಡಿಸಲನ್ನು ನಿರ್ಮಿಸಿ ಅಲ್ಲಿ ಅದಕ್ಕೊಂದು ಸೂತಕದ ಅಥವಾ ಮೈಲಿಗೆಯ ಹೆಸರನ್ನಿಟ್ಟು ಪ್ರಕೃತಿಯಲ್ಲಿಯೇ ಮಗು ಜನನವಾಗಲಿ ಎಂಬ ಉದ್ದೇಶ ಈ ಎರಡು ಬುಡಕಟ್ಟು ಜನರಲ್ಲಿರಬಹುದು. ಪ್ರಕೃತಿಯನ್ನೇ ಆರಾಧಿಸುವ ಅವರು ಹುಟ್ಟುಸಾವನ್ನು ಕೂಡ ಪ್ರಕೃತಿಯೊಂದಿಗೆ ಲೀನಗೊಳಿಸಿಕೊಳ್ಳುತ್ತಿರುವ ಪ್ರಕ್ರಿಯೆ ಅವರ ಆಚರಣೆಗಳಲ್ಲಿದೆ. ಎನ್ನುವ ಸತ್ಯಾಸತ್ಯತೆಗಳನ್ನು ಪ್ರಸ್ತುತ ಅಧ್ಯಯನ ದಾಖಲಿಸಿರುವುದು ಕಂಡುಬಂದಿದೆ.

**ಆ) ಋತುಮತಿ:**

ಋತುಮತಿ, ಹೆರಿಗೆ ಮೊದಲಾದವು ಕೃಷಿಮೂಲ ಸಂಸ್ಕೃತಿಗಳಲ್ಲಿ ಫಲವಂತಿಕೆಯ ಸಂಕೇತಗಳು. ಆದರೆ ಬುಡಕಟ್ಟು ಸಮುದಾಯಗಳಲ್ಲಿ ಇವು ಮೈಲಿಗೆಯ ಸಂಗತಿಗಳು. ಕಾಡುಗೊಲ್ಲರಲ್ಲಿ ಹೆಣ್ಣುಮಗಳು ಮೈನೆರೆದ ಸಂದರ್ಭದಲ್ಲಿ ಹೆಂಗಸರು ಅವಳನ್ನು ಹಟ್ಟಿಯಿಂದ ಹೊರಗೆ ನೆಲೆಸುವಂತೆ ಹೇಳುತ್ತಾರೆ. ಆಗ ಗಂಡಸರು-ಹೆಂಗಸರು ಹೊಂಗೆಸೊಪ್ಪು ಮತ್ತು ಬೇವಿನಸೊಪ್ಪು ಹೊದಿಸಿದ ಹಸಿರು ಚಪ್ಪರವನ್ನು ಕಟ್ಟಿ ಮೈನೆರೆದ ಹುಡುಗಿಯನ್ನು ಅಲ್ಲಿ ಬಿಡುತ್ತಾರೆ. ಅಗಸರ ಮಹಿಳೆ ಮಡಿಮಾಡಿ ತಂದುಕೊಟ್ಟ ಬಟ್ಟೆಗಳನ್ನು ಉಡಲು ತಂದುಕೊಡುತ್ತಾರೆ. ಆ ದಿನ ರಾತ್ರಿಯೆಲ್ಲ ಎಚ್ಚರವಾಗಿರಲೆಂಬ ಉದ್ದೇಶದಿಂದ ಅವಳೊಡನೆ ಮಾತನಾಡಲು ಒಬ್ಬ ಹೆಂಗಸನ್ನು ಕೂಡಿಸುತ್ತಾರೆ. ಮೂರು ನಾಲ್ಕು ಜನ ಹೆಂಗಸರು ಒಸಗೆಯ ಪದಗಳನ್ನು ಹಾಡುತ್ತಾರೆ. ಅವಳಿಗೆ ಉತ್ತುತ್ತಿ, ದ್ರಾಕ್ಷಿ, ಬಾಳೆಹಣ್ಣು, ಕೊಬರಿ, ಕಡಲೆ, ಹೂವು, ಹಣ್ಣುಗಳಿಂದ ಮಡಿಲು ತುಂಬುತ್ತಾರೆ. ಆ ದಿನ ಅವಳಿಗೆ ಸಿಹಿಯನ್ನು ಮಾಡಿ ಊಟಕ್ಕೆ ಹಾಕುತ್ತಾರೆ. ಮೂರನೆಯ ದಿನ ಹಸಿರು ಚಪ್ಪರದ ಜಾಗವನ್ನು ಬದಲಾಯಿಸುತ್ತಾರೆ. ಉಳಿದೆಲ್ಲಾ ಕಾರ್ಯಗಳು ಮೊದಲನೆಯ ದಿನದಂತೆಯೇ ನಡೆಯುತ್ತವೆ. ಐದು ದಿನಗಳ ಕಾಲ ಈ ಕಾರ್ಯವನ್ನು ಪುನರಾವರ್ತನೆ ಮಾಡುತ್ತಾರೆ.

ಆರನೆಯ ದಿನ ಮೈನೆರೆದ ಹುಡುಗಿಗೆ ನೀರು ಹಾಕಿ ಮಡಿ ಬಟ್ಟೆಗಳನ್ನು ಕೊಟ್ಟು ಅವಳನ್ನು ಮಂದೆಯಲ್ಲಿ ಬಿಡುತ್ತಾರೆ. ಹಟ್ಟಿಯ ಹೊರಗೆ ಮುಟ್ಟಾದ ಹೆಂಗಸರು ಇರುವುದಕ್ಕೋಸ್ಕರ ಪ್ರತ್ಯೇಕವಾದ

ಜಾಗವನ್ನು ನಿಗಧಿಗೊಳಿಸಿರುತ್ತಾರೆ. ಆ ಜಾಗವನ್ನು 'ಮಂದೆ' ಎಂದು ಕರೆಯುತ್ತಾರೆ[೯]. ಈ ಮಂದೆಯಲ್ಲಿ ಅವಳು ಏಳು ದಿನಗಳ ಕಾಲ ವಾಸಮಾಡಬೇಕು. ಹದಿಮೂರನೆಯ ದಿನ ಮಂದೆಯನ್ನು ಬಿಟ್ಟು ಹೊರಕ್ಕೆ ಬರುತ್ತಾಳೆ. ಅಂದು ಅವಳನ್ನು ಹಟ್ಟಿಯ ಮೂಡಲ ಹುದಿಯ ಸಮೀಪದಲ್ಲಿ ಕೂರಿಸಿ ನೀರು ಹಾಕುತ್ತಾರೆ. ಆಗ ಅವಳಿಗೆ ಅಗಸರಲು ತಂದುಕೊಟ್ಟ ಮಡಿಬಟ್ಟೆಗಳನ್ನು ಕೊಡುತ್ತಾರೆ. ಅಲ್ಲಿ ಅವಳಿಗೆ ಹಸಿರು ಚಪ್ಪರವನ್ನು ಹಾಕಿಕೊಡುತ್ತಾರೆ. ಆ ಹಸಿರು ಚಪ್ಪರದಲ್ಲಿ ಅವಳು ಒಂಬತ್ತು ದಿನಗಳ ಕಾಲ ಇರಬೇಕು. ಒಟ್ಟು ಇಪ್ಪತ್ತೊಂದು ದಿನಗಳ ಅವಧಿಯಲ್ಲಿ ಅವಳು ಮಂದೆಯಲ್ಲಿ ಏಳುದಿನ, ಮಂದೆಗೆ ಬರುವ ಮೊದಲು ಹಸಿರು ಚಪ್ಪರದಲ್ಲಿ ಐದು ದಿನಗಳು, ಮಂದೆಯನ್ನು ಬಿಟ್ಟ ನಂತರ ಹಸಿರು ಚಪ್ಪರದಲ್ಲಿ ಒಂಬತ್ತು ದಿನಗಳು, ಒಟ್ಟು ಇಪ್ಪತ್ತೊಂದು ದಿನಗಳು ಇರಬೇಕು. ಇಪ್ಪತ್ತೆರಡನೆಯ ದಿನ ಅವಳಿಗೆ ನೀರು ಹಾಕಿ ಮಡಿ ಬಟ್ಟೆಯನ್ನು ಕೊಟ್ಟು ಹಟ್ಟಿಯ ಒಳಕ್ಕೆ ಕರೆದುಕೊಳ್ಳುತ್ತಾರೆ. ಅಂದು ಮನೆಯಲ್ಲಿ ಸಿಹಿಯನ್ನೊಳಗೊಂಡ ಹಬ್ಬದೂಟ ಮಾಡುತ್ತಾರೆ.

**ಋತುಮತಿಯಾದ ಸಮಯದಲ್ಲಿನ ನಿಷೇಧಗಳು**

- ಋತುಮತಿಯಾದ ೨೧ ದಿವಸ ಹಟ್ಟಿಯ ಒಳಗೆ ಬರುವಂತಿಲ್ಲ.
- ಆಹಾರವನ್ನು ಸ್ವೀಕರಿಸುವಾಗ ದೂರ ನಿಂತು ಸ್ವೀಕರಿಸಬೇಕು.
- ಬೇರೆಯವರ ನೆರಳು ಬೀಳುವಂತಿಲ್ಲ.
- ಋತುಮತಿಯಾದ ಹೆಣ್ಣು ಹಸಿರು ಮರದ ಹೊಂಗೆ ಮತ್ತು ಬೇವು ಎಲೆಗಳಿಂದ ಕಟ್ಟಿದ ಗುಡಿಸಲಿನಲ್ಲಿ ವಾಸಿಸಬೇಕು.

ಹೀಗೆ ಋತುಮತಿ ಮತ್ತು ಋತುಚಕ್ರಕ್ಕೆ ಸಂಬಂಧಿಸಿದಂತೆ, ಮೇಲಿನ ಎಲ್ಲಾ ತರಹದ ನಿಷೇಧಗಳಿಗೆ ಬದ್ಧರಾಗಿರಬೇಕು.

ಹೆಣ್ಣು ಋತುಮತಿಯಾದಾಗ ಮಡಿ-ಮೈಲಿಗೆಯ ವಿಧಿ ನಿಷೇಧಗಳಿಗೆ ಸಂಬಂಧಿಸಿದಂತೆ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕಿನ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅಲ್ಲಿಯ ಸ್ಥಿತಿಯನ್ನು ಅವಲೋಕಿಸಿದಾಗ ಅದರ ಅನ್ವಯ ಕಾಡುಗೊಲ್ಲರ ಹೆಣ್ಣು ಋತುಮತಿಯಾದಾಗ ೨೧ ದಿವಸ ಹಟ್ಟಿಯೊಳಗೆ ಬರುವಂತಿಲ್ಲ ಎನ್ನುವುದು ಕಂಡುಬರುವುದು. ಮ್ಯಾಸಬೇಡರಹಟ್ಟಿಯಲ್ಲಿ ಹೆಣ್ಣು ಋತುಮತಿಯಾದಾಗ ಮಡಿ-ಮೈಲಿಗೆಯ ವಿಧಿ ನಿಷೇಧಗಳು ಋತುಮತಿಯಾದ ನಂತರ ಹಟ್ಟಿಯ ಹೊರಗೆ ಹಸಿರು ಹೊಂಗೆ, ಬೇವು ಎಲೆಗಳಿಂದ ಕಟ್ಟಿದ ಗುಡಿಸಲಲ್ಲಿ ವಾಸಿಸುವುದು ಕಂಡುಬರುವುದು. ಈ ಹಿನ್ನೆಲೆಯಲ್ಲಿ ಮಡಿ ಮೈಲಿಗೆಯ ಆಚರಣೆಯು ಪ್ರಸ್ತುತದಲ್ಲಿಯೂ ಇರುವುದು ಈ ಅಧ್ಯಯನದಿಂದ ಕಂಡುಬರುತ್ತದೆ.

ಒಟ್ಟಾರೆ ಅಧ್ಯಯನ ಕ್ಷೇತ್ರದಲ್ಲಿ ಹಟ್ಟಿ ಸಂಸ್ಕೃತಿಯನ್ನು ಸೈದ್ಧಾಂತಿಕವಾಗಿ ವಿಶ್ಲೇಷಿಸಿದರೆ ಬೇಡರಲ್ಲಿ ಹೆಣ್ಣುಮಕ್ಕಳು ಮೈನೆರೆತರೆ ಮನೆಯ ಮುಂದೆಯೇ ಹೊಂಗೆ ಮತ್ತು ಬೇವಿನ ಸೊಪ್ಪನ್ನು ಸೇರಿಸಿ ಒಂದು ಚಿಕ್ಕ ಗುಡಿಸಲನ್ನು ಕಟ್ಟುತ್ತಾರೆ. ಅದರಲ್ಲಿ ಋತುಮತಿಯಾದ ಹೆಣ್ಣುಮಕ್ಕಳು ಹತ್ತು

ದಿನಗಳ ಕಾಲ ಕೂರಬೇಕು. ಆ ಹತ್ತು ದಿನಗಳ ಕಾಲ ಆಕೆ ಗುಡಿಸಲಿನೊಳಗೆ ಸೂತಕದ ಹೆಂಗಸಾಗಿ ಇರುತ್ತಾಳೆ. ಆಕೆಗೆ ಇಷ್ಟವಾದ ಸಿಹಿ ಅಡುಗೆಗಳನ್ನು ಮಾಡಿ ಬಡಿಸಲಾಗುತ್ತದೆ. ಹಾಗೇಯೇ ನೆಂಟರಿಷ್ಟರು ಆಕೆಗೆ ಬೇಕಾಗುವ ಆಹಾರ ಪದಾರ್ಥಗಳನ್ನು ತಯಾರಿಸಿ ತಂದುಕೊಡುವುದು ಉಂಟು. ಈ ಆಹಾರ ಪದಾರ್ಥಗಳು ಬಹುಪಾಲು ಸಿಹಿ ತಿನಿಸುಗಳಾಗಿದ್ದು ಹೆಚ್ಚಾಗಿ ಎಳ್ಳು ಬೆಲ್ಲದಿಂದಲೇ ಮಾಡಿದ ಖಾದ್ಯಗಳಾಗಿರುತ್ತವೆ. ಅದನ್ನು ಒಸಗೆ ಎನ್ನುತ್ತಾರೆ. ಹೀಗೆ ಹತ್ತು ದಿನಗಳು ಕಳೆಯುತ್ತವೆ. ಹನ್ನೊಂದನೆಯ ದಿನ ವಾದ್ಯ ಸಹಿತ ಊರ ಹೊರಗೆ ಕರೆದುಕೊಂಡು ಹೋಗಿ ತಂಗಟೆ ಗಿಡ ಮುಟ್ಟಿಸುತ್ತಾರೆ. ಅಷ್ಟೆ ಅಲ್ಲದೆ ಆ ಗಿಡವನ್ನು ಅವಳಿಂದ ಅತ್ತಿಂದಿತ್ತ ಇತ್ತಿಂದತ್ತ ಮೂರು ಬಾರಿ ದಾಟಿಸುವರು. ಆ ತಂಗಟೆ ಗಿಡದ ಸ್ಥಳದಿಂದ ದೇವಸ್ಥಾನಕ್ಕೆ ಕರೆದುಕೊಂಡು ಬಂದು ಪೂಜೆ ಮಾಡಿಸುತ್ತಾರೆ. ಪೂಜೆ ಮುಗಿದ ಬಳಿಕ ಆಕೆಯನ್ನು ಮನೆಗೆ ಕರೆದುಕೊಂಡು ಬರುವುದುಂಟು. ಮನೆಯ ಮುಂದೆ ಕುರಿಯ ಒಣಪಿಕ್ಕೆಯೊಂದಿಗೆ ಸೌದೆಯಿಟ್ಟು ಬೆಂಕಿ ಹಾಕಲಾಗಿರುತ್ತದೆ. ಈ ಬೆಂಕಿಯಲ್ಲಿ ಬೇವಿನ ಕಡ್ಡಿಯನ್ನು ಇಟ್ಟು ಹುಡುಗಿಯ ನಾಲಿಗೆಗೆ ಸುಡುವರು. ಅಲ್ಲಿಗೆ ಮೈನೆರೆತ ಹೆಣ್ಣು ಸೂತಕ ಕಳೆದುಕೊಂಡು ಮನೆಯ ಒಳಕ್ಕೆ ಸೇರಿಕೊಳ್ಳುತ್ತಾಳೆ. ನಂತರದಲ್ಲಿ ಮನೆಯ ಒಳಗೆ ಬಂದ ಹೆಣ್ಣು ಅಲ್ಲಿಂದ ಹಾಲು, ವೀಳ್ಯೆದೆಲೆ, ಗಂಧದಕಡ್ಡಿಯನ್ನು ಎಡೆಯಲ್ಲಿಟ್ಟುಕೊಂಡು ನೀರು ಇರುವ ಕಡೆ ಗಂಗಮ್ಮನ ಪೂಜೆಗೆಂದು ಬರುವಳು, ಅಲ್ಲಿ ಗಂಗಾದೇವತೆಗೆ ಪೂಜೆ ಸಲ್ಲಿಸಿ ವೀಳೆಯದೆಲೆಯನ್ನು ನೀರಿನಲ್ಲಿ ತೇಲಿಬಿಡಲಾಗುತ್ತದೆ. ಮೈನೆರೆದ ಹೆಣ್ಣುಮಗಳ ಜೊತೆಗೆ ಹೋದ ಐದು ಜನ ಮುತ್ತೈದೆಯರು ಅವಳಿಗೆ ಗಂಗಮ್ಮನ ಪೂಜೆ ಮಾಡಿಸಿ ಎಲೆ ಅಡಿಕೆ, ಬಾಳೆಹಣ್ಣು, ಚಿಗುಳಿ ಉಂಡೆಯಿಂದ ಸೆರಗು ತುಂಬಿ ಅವಳಿಗೂ ಒಂದು ಕೊಡ ನೀರು ಹೊರಿಸಿಕೊಂಡು, ಐದು ಜನ ಮುತ್ತೈದೆಯರು ಕೊಡದಲ್ಲಿ ನೀರು ಹೊತ್ತುಕೊಂಡು ಬರುವರು.

ಹಿಂದಿನ ದಿನಗಳಲ್ಲಿ ಬೇಡನಾಯಕರು ಪೂರ್ಣವಾಗಿ ಅಡವಿ ಸಂಚಾರಿಗಳೇ ಆಗಿದ್ದಾಗ ಹೆಣ್ಣುಮಗಳು ಮೈನೆರೆದಲ್ಲಿ ನೆರವೇರಿಸುತ್ತಿದ್ದ ಆಚರಣೆ ಬೇರೊಂದು ಬಗೆಯಲ್ಲಿ ಇದ್ದುದಾಗಿ ಹಿರಿಯ ಬೇಡ ವಕ್ತೃಗಳು ತಿಳಿಸುತ್ತಾರೆ. ಋತುಮತಿಯಾದ ಹೆಣ್ಣನ್ನು ಮನೆಯಿಂದ ಹೊರಗೆ ಬೇವಿನ ಸೊಪ್ಪಿನ ಗುಡಿಸಲಲ್ಲಿ ಕೂಡಿಸಿ ಅವಳ ಮುಂದೆ ಒಂದು ಕಲ್ಲು ಮರಿಗೆಯನ್ನು ಇರಿಸುತ್ತಿದ್ದರು. ಆ ಕಲ್ಲು ಮರಿಗೆ ಊಟ ಮಾಡುವುದಕ್ಕಾಗಿ ಇರುತಿತ್ತು. ಮನೆಯ ಹಿರಿಯ ಹೆಂಗಸರು ಅನ್ನ ತಂದು ಆ ಕಲ್ಲು ಮರಿಗೆಯ ಮೇಲೆ ಇಟ್ಟರೆ ಋತುಮತಿಯಾದಾಕೆ ಮೊದಲನೆಯ ದಿನ ಕಿರುಬೆರಳಿನಿಂದ ಒಂದೊಂದೇ ಅಗಳು ತೆಗೆದುಕೊಂಡು ಬಾಯಿಗಿಟ್ಟುಕೊಳ್ಳಬೇಕು. ಎರಡನೆಯ ದಿನ ಕಿರುಬೆರಳಿನೊಂದಿಗೆ ಇನ್ನೊಂದು ಬೆರಳು ಉಪಯೋಗಿಸಬಹುದು. ಮೂರನೆಯ ದಿನ ಮೂರು ಬೆರಳು, ನಾಲ್ಕನೆಯ ದಿನ ನಾಲ್ಕು, ಐದನೆಯ ದಿನ ಕೈಯನ್ನು ಪೂರ್ಣವಾಗಿ ಉಪಯೋಗಿಸಿ ಊಟ ಮಾಡಬಹುದಿತ್ತು. ಹನ್ನೆರಡನೆಯ ದಿನ ಹುಡುಗಿಯ ಸೋದರ ಮಾವ ಆಕೆ ಕುಳಿತಿದ್ದ ಬೇವಿನ ಗುಡಿಸಲನ್ನು ಹಟ್ಟಿಯಾಚೆ ಕೊಂಡು ಹೋಗಿ ಒಂದು ತಂಗಟೆ ಗಿಡ ಸುತ್ತಿಸಿ ಮನೆಯೊಳಕ್ಕೆ ಕರೆದುಕೊಳ್ಳುತಿದ್ದರು[೨] ಈ ಪದ್ಧತಿ ಈಗ ಇಲ್ಲ.

ಇ) ವಿವಾಹ:

ಕಾಡುಗೊಲ್ಲರಲ್ಲಿ ಸಾಂಪ್ರದಾಯಿಕವಾಗಿ ವಿವಾಹ ಐದು ದಿನಗಳ ಕಾಲ ನಡೆಯುತ್ತದೆ. ನಿಶ್ಚಿತಾರ್ಥ, ಅರುಣೆ ತರುವ ಮತ್ತು ಚಪ್ಪರ ಹಾಕುವ ಶಾಸ್ತ್ರ, ಮದಲಿಂಗನಶಾಸ್ತ್ರ, ಧಾರೆ, ಓದೋಅಕ್ಕಿ ಶಾಸ್ತ್ರ, ಬೂವಮಾಡುವ ಶಾಸ್ತ್ರ, ಜಾಡಿ ತೀರಿಸುವ ಶಾಸ್ತ್ರ ಮತ್ತು ಪ್ರಸ್ತ- ಈ ಕ್ರಮದಲ್ಲಿ ಮದುವೆ ನಡೆಯುತ್ತದೆ.

**ಕೋಷ್ಟಕ -೧೫**
**ವಿವಾಹ ಬಯಸುವ ವಿಧಾನ**

| - | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| - | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಸಂಪ್ರದಾಯಕವಾಗಿ | ೧೪೯ | ೯೮.೦೩ | ೨೨ | ೧೦೦.೦೦ | ೧೭೧ | ೯೮.೨೮ |
| ಆಧುನಿಕವಾಗಿ | ೨ | ೧.೩೧ | ೦ | ೦ | ೨ | ೧.೧೫ |
| ನೊಂದಾಯಿತ ವಿವಾಹ | ೧ | ೦.೬೫ | ೦ | ೦.೦೦ | ೧ | .೫೭ |
| ಅಂತರ್‌ಜಾತಿ ವಿವಾಹ | ೦ | ೦.೦೦ | ೦ | ೦.೦೦ | ೦ | ೦.೦೦ |
| **ಒಟ್ಟು** | ೧೫೨ | ೧೦೦.೦೦ | ೨೨ | ೧೦೦.೦೦ | ೧೭೪ | ೧೦೦.೦೦ |

**ರೇಖಾನಕ್ಷೆ-೩ ವಿವಾಹ ಬಯಸುವ ವಿಧಾನ:**




ಕೋಷ್ಟಕದ ಸಂಖ್ಯೆ ೧೫ ರಲ್ಲಿ ವ್ಯಕ್ತವಾಗುವ ಅಂಶವೆಂದರೆ ವಿವಾಹ ಬಯಸುವ ವಿಧಾನಕ್ಕೆ ಸಂಬಂಧಿಸಿದಂತೆ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕಿನ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅದರ ಅನ್ವಯ ಮೇಲಿನ ಕೋಷ್ಟಕ ತಿಳಿಸುವುದೇನಂದರೆ, ಚಿತ್ರದುರ್ಗ ಜಿಲ್ಲೆಯಲ್ಲಿ ಆರು ತಾಲ್ಲೂಕುಗಳಿಂದ ಕಾಡುಗೊಲ್ಲರ ವಿವಾಹ ಬಯಸುವ ವಿಧಾನ ಸಂಪ್ರದಾಯಕವಾಗಿ ಎನ್ನುವುದರ ಪ್ರಮಾಣ ಶೇಕಡ

೯೮.೦೩ ರಷ್ಟು ಕಂಡುಬರುವುದು. ಮ್ಯಾಸಬೇಡರಹಟ್ಟಿಯಲ್ಲಿ ಸಂಪ್ರದಾಯಕವಾಗಿ ಎನ್ನುವುದಕ್ಕೆ ಶೇಕಡ ೧೦೦ ರಷ್ಟು ಕಂಡುಬರುವುದು. ಒಟ್ಟಾರೆ ಎರಡು ಹಟ್ಟಿಗಳಿಂದ ಸಂಪ್ರದಾಯಕವಾಗಿ ಎನ್ನುವುದಕ್ಕೆ ಶೇಕಡ ೯೮.೨೮ರಷ್ಟು ಕಂಡುಬರುವುದು.

**ವರದಕ್ಷಿಣೆಯ ವಿವರ:**

ವರದಕ್ಷಿಣೆ ಪದ್ಧತಿಯು ವಿವಾಹದೊಳಗೆ ನಡೆಯುವ ಒಂದು ಸಂಪ್ರದಾಯ ಪದ್ಧತಿಯಾಗಿ ನಡೆದುಕೊಂಡು ಬಂದಿರುವುದು ಒಂದು ವಾಡಿಕೆಯಾಗಿದೆ. ಅದು ಉಡುಗೊರೆಯಾಗಿಯೂ ಇರುವುದು ಪ್ರಸ್ತುತ ಅಧ್ಯಯನದಲ್ಲಿ ಕಂಡುಬಂದಿದೆ. ಅಂದರೆ ವಧುವಿನ ಕಡೆಯವರು ವರನ ಕಡೆಯವರಿಗೆ ವಸ್ತು ರೂಪದಲ್ಲಿ ವಿವಾಹ ಸಂದರ್ಭದಲ್ಲಿ ಕೊಡುವ ಪದ್ಧತಿಯು ಕಂಡುಬಂದಿದ್ದು. ವರದಕ್ಷಿಣೆಗೆ ಸಂಬಂಧಿಸಿದಂತೆ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕಿನ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅದರ ಅನ್ವಯ ಕಾಡುಗೊಲ್ಲರ ಸಮುದಾಯದ ವಿವಾಹದ ಸಂದರ್ಭದಲ್ಲಿ ವರದಕ್ಷಿಣೆ ಅಥವಾ ಉಡುಗೊರೆಯಾಗಿ ಒಡವೆಗಳನ್ನು ಹೆಚ್ಚಾಗಿ ನೀಡುವ ಪದ್ದತಿ ಇದೆ, ಅದರಂತೆ ಈ ಪದ್ಧತಿ ಮ್ಯಾಸಬೇಡರ ಹಟ್ಟಿಗಳಲ್ಲಿ ಹಣದ ರೂಪದಲ್ಲಿ ವರದಕ್ಷಿಣೆಯನ್ನು ನೀಡುವ ಪದ್ಧತಿಯು ಕಂಡುಬರುತ್ತದೆ.

**ಕೂಡಿಕೆ ವಿವಾಹ ಪದ್ಧತಿ:**

ವಿವಾಹ ಪದ್ಧತಿ ಎನ್ನುವುದು ಮೊದಲಿನಿಂದಲೂ ರೂಢಿಸಿಕೊಂಡು ಬಂದಿರುವ ಅಂಶವನ್ನು ಅನೇಕ ಅಧ್ಯಯನಗಳು ಗುರುತಿಸಿರುವುದು ಕಾಣಬಹುದು. ಅದರಲ್ಲಿ ಬಹುಪ್ರಕಾರದ ಪದ್ಧತಿಗಳನ್ನು ರೂಢಿಸಿಕೊಂಡು ಬಂದಿರುವುದು, ಆ ಪದ್ಧತಿಗಳು ಇವೆಯೆ? ಎನ್ನುವ ಅಂಶಗಳನ್ನು ಪ್ರಶ್ನಿಸಿದರೆ ಕೂಡಿಕೆ ವಿವಾಹ ಪದ್ಧತಿ, ಸೀರುಡಿಕೆ ಪದ್ಧತಿ, ಬಹುಪತ್ನಿತ್ವ ಪದ್ಧತಿ ಮೊದಲು ಇತ್ತು ಎಂಬುದು ಹಲವು ಅಧ್ಯಯನಗಳಲ್ಲಿ ಕಂಡು ಬರುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಈ ನಾಲ್ಕು ಪದ್ಧತಿಗಳು ಈಗ ಇಲ್ಲದಿರುವುದು ಕಂಡು ಬಂದಿದೆ.

**ಸಮುದಾಯದ ಮದುವೆ ಕಾರ್ಯವನ್ನು ನೆರವೇರಿಸುವವರ ವಿವರ:**

ವಿವಾಹ ಪದ್ಧತಿ ಎನ್ನುವುದು ಮೊದಲಿನಿಂದಲೂ ರೂಢಿಸಿಕೊಂಡು ಬಂದಿರುವ ಅಂಶವನ್ನು ಅನೇಕ ಅಧ್ಯಯನಗಳು ಗುರುತಿಸಿರುವುದು ಕಂಡುಬಂದಿದೆ. ಹಿಂದೆ ಯಾವುದೇ ಸಮುದಾಯ ಅಥವಾ ಧರ್ಮಗಳಲ್ಲಿ ಒಂದು ವಿವಾಹ ನಡೆಯುತ್ತದೆ ಅಂದರೆ ಅದನ್ನು ಸಮಾಜದ ಒಬ್ಬ ಮುಖ್ಯಸ್ಥರು ನಡೆಸುವುದು ತಿಳಿಯುತ್ತದೆ. ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ಎರಡು ಹಟ್ಟಿಗಳ ಮದುವೆ ಕಾರ್ಯಗಳು ಯಾರು ನಡೆಸುವರು ಎನ್ನುವುದನ್ನು ಈ ಕೆಳಕಂಡ ಕೋಷ್ಟಕ ತಿಳಿಸುತ್ತದೆ.

## ಕೋಷ್ಟಕ – ೧೬

### ಸಮುದಾಯದ ಮದುವೆ ಕಾರ್ಯವನ್ನು ನೆರವೇರಿಸುವವರ ವಿವರ

| – | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| – | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಪೂಜಾರಿಗಳು | ೯೯ | ೬೫.೧೩ | ೬ | ೨೭.೨೭ | ೧೦೫ | ೬೦.೩೪ |
| ಪುರೋಹಿತರು | ೨ | ೧.೩೨ | ೩ | ೧೩.೬೩ | ೫ | ೨.೮೭ |
| ಹಟ್ಟಿಯ ಯಜಮಾನರು | ೪೭ | ೩೦.೯೨ | ೧೩ | ೫೯.೦೯ | ೬೦ | ೩೪.೪೮ |
| ಹಟ್ಟಿಯಗೌಡರು | ೪ | ೨.೬೩ | ೦ | ೦.೦೦ | ೪ | ೨.೨೯ |
| **ಒಟ್ಟು** | ೧೫೨ | ೧೦೦.೦೦ | ೨೨ | ೧೦೦.೦೦ | ೧೭೪ | ೧೦೦.೦೦ |

**ರೇಖಾನಕ್ಷೆ-೪ ಸಮುದಾಯದ ಮದುವೆ ಕಾರ್ಯವನ್ನು ನೆರವೇರಿಸುವವರ ವಿವರ:**




ಕೋಷ್ಟಕದ ಸಂಖ್ಯೆ ೧೬ ರಲ್ಲಿ ವ್ಯಕ್ತವಾಗುವ ಅಂಶವೆಂದರೆ ವಿವಾಹ ಬಯಸುವ ವಿಧಾನಕ್ಕೆಸಂಬಂಧಿಸಿದಂತೆ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕಿನ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅದರ ಅನ್ವಯ ಮೇಲಿನ ಕೋಷ್ಟಕ ತಿಳಿಸುವುದೇನಂದರೆ, ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳಿಂದ ಕಾಡುಗೊಲ್ಲರ ಸಮುದಾಯದ ಮದುವೆಕಾರ್ಯವನ್ನು ಪೂಜಾರಿಗಳು ನಡೆಸುವರು ಎನ್ನುವುದಕ್ಕೆ ಶೇಕಡ ೬೫.೧೩ ರಷ್ಟು ಕಂಡುಬರುವುದು. ಮ್ಯಾಸಬೇಡರಹಟ್ಟಿಯಲ್ಲಿ ಸಮುದಾಯದ ಮದುವೆಕಾರ್ಯವನ್ನು ನೆರವೇರಿಸುವವರು ಹಟ್ಟಿಯಯಜಮಾನರು ಎನ್ನುವುದಕ್ಕೆ ಶೇಕಡ ೫೯.೦೯ ರಷ್ಟು ಕಂಡುಬರುವುದು. ಒಟ್ಟಾರೆ ಎರಡು ಹಟ್ಟಿಗಳಿಂದ ಸಮುದಾಯದ ಮದುವೆಕಾರ್ಯವನ್ನು ನೆರವೇರಿಸುವವರು ಪೂಜಾರಿಗಳು ಮತ್ತು ಯಜಮಾನರು ಎನ್ನುವುದು ಶೇಕಡ ೬೦.೩೪ ರಷ್ಟು ಕಂಡುಬರುವುದು.

**ಕಾಡುಗೊಲ್ಲ ಹಾಗೂ ಮ್ಯಾಸಬೇಡರ ಸಮುದಾಯದ ವಿವಾಹದ ಆಚರಣೆಗಳು :**

ಭಾರತ ದೇಶ ಹೇಗೆ ಹಳ್ಳಿಗಳ ದೇಶವೋ ಹಾಗೆಯೆ ಜಾತಿಗಳ ತವರು ಎಂದೇ ಹೆಸರಾಗಿದೆ. ಆಯಾ ಜಾತಿಗಳಲ್ಲಿ ವಿವಾಹಕ್ಕೆ ಮನೆದೇವರುಗಳ ಹಿನ್ನೆಲೆಯಲ್ಲಿ ಬೆಡಗುಗಳನ್ನು ಕಟ್ಟಿಕೊಂಡಿರುವುದು ಹಿಂದಿನಿಂದಲೂ ನಡೆಸಿಕೊಂಡು ಬಂದಿರುವುದು ಅನೇಕ ಅಧ್ಯಯನಗಳು ಗುರುತಿಸಿವೆ. ಈ ಹಿನ್ನೆಲೆಯಲ್ಲಿ ಈ ಎರಡು ಸಮುದಾಯಗಳಲ್ಲಿ ವಿವಾಹ ಸಂದರ್ಭದಲ್ಲಿ ಬೆಡಗುಗಳನ್ನಾಧರಿಸಿಯೇ ವಿವಾಹ ಸಂಬಂಧಗಳನ್ನು ಬೆಳೆಸುತ್ತಾರೆ.

ಕಾಡುಗೊಲ್ಲರಲ್ಲಿ ಮದುವೆ ಗಂಡಿನ ಅಥವಾ ಹೆಣ್ಣಿನ ಮನೆಯಲ್ಲಿಯೇ ನಡೆಯಬೇಕೆಂಬ ನಿಯಮವಿಲ್ಲ. ಅವರವರ ಸೌಲಭ್ಯ ಅನುಕೂಲಕ್ಕೆ ತಕ್ಕಂತೆ ನಡೆಯುತ್ತದೆ. ಹೆಣ್ಣನ್ನು ನೋಡಲು ಗಂಡಿನ ಕಡೆಯವರು ಹೆಣ್ಣಿನ ಮನೆಗೆ ಮೊದಲು ಬರುತ್ತಾರೆ. ಸಾಮಾನ್ಯವಾಗಿ ಸಂಜೆ ವೇಳೆಯಲ್ಲಿ ಹೆಣ್ಣು ನೋಡಲು ಬರುತ್ತಾರೆ. ಒಬ್ಬ ಮುತ್ತೈದೆ ಬಳಿ ಸೀರೆ ಉಟ್ಟುಕೊಂಡು ಸುಣ್ಣದ ಬೊಟ್ಟು ಹಚ್ಚಿರುವ ಮಡಿಕೆಯಲ್ಲಿ ಅಕ್ಕಿ, "ವೀಳ್ಯೆದೆಲೆ, ಬಾಳೆಹಣ್ಣು ಇಟ್ಟು ಅದಕ್ಕೆ ಬಿಳಿ ಬಟ್ಟೆಯನ್ನು ಕಟ್ಟಿರುತ್ತಾರೆ. ಆಕೆ ಆ ಮಡಿಕೆಯನ್ನು ಹೊತ್ತು ಮುಂದೆ ಬರುತ್ತಾಳೆ. ಮನೆಯಿಂದ ಹೊರಡುವ ಮೊದಲು ದೇವರಿಗೆ ನಮಸ್ಕರಿಸಿ ಹೊರಡುತ್ತಾರೆ. ಹೆಣ್ಣಿನ ಮನೆಯವರು ಹಣತೆಯನ್ನು ಹಚ್ಚಿಟ್ಟು ಗಂಡಿನವರ ಬರುವಿಕೆಗಾಗಿ ಕಾಯುತ್ತಿರುತ್ತಾರೆ. ಗಂಡಿನವರು ಮನೆಗೆ ಬಂದ ತಕ್ಷಣ ಹಣತೆಯನ್ನು ನೋಡಬೇಕು ಅದು ಶುಭಶಕುನ ಎಂಬ ನಂಬಿಕೆ ಗೊಲ್ಲರಲ್ಲಿದೆ. ಗಂಡು ಹೆಣ್ಣು ನೋಡುವ ಪ್ರಕ್ರಿಯೆ ಮುಗಿದ ಬಳಿಕ ಮದುವೆ ಮಾಡುವ ದಿನಾಂಕ, ಸ್ಥಳ, ಕೊಡುವುದು, ತೆಗೆದುಕೊಳ್ಳುವುದನ್ನು ಮಾತನಾಡುತ್ತಾರೆ. ಹೆಣ್ಣಿಗೆ ಸಮಾನ್ಯವಾಗಿ ಕಾಲಿಂದಿಗೆ, ಪಿಲ್ಲಿ, ತೋಳುಬಂದಿ ಮೊದಲಾದ ಒಡವೆಗಳನ್ನು ಗಂಡಿಗೆ ಮುಂಗೈಬದ್ದು, ತೋಳಿಗೆ ಬಟ್ಟಿನ ಸಲಿಗೆ, ಕಿವಿಯ ಮೇಲ್ಭಾಗಕ್ಕೆ ಮರಾಠಿಮುರ, ಕಿವಿಗೆ ಹತ್ತ ಕಡಕು, ತಲೆಗೆ ಏಳು ಮೊಳದ ಪಾಗು, ಹೆಗಲ ಮೇಲಕ್ಕೆ ಕರಿಕಂಬಳಿ, ಸೊಂಟಕ್ಕೆ ಕಂಚಿನ ದಟ್ಟಿ, ಕಾಲಿಗೆ ಚಪ್ಪಲಿಯನ್ನು ಕೊಡುತ್ತಾರೆ. ಇಷ್ಟೆಲ್ಲವನ್ನು ರಾತ್ರಿ ಇತ್ಯರ್ಥ ಮಾಡುತ್ತಾರೆ. ಅವರು ಮಾತನಾಡುವಾಗ ಬೆಕ್ಕು ಕಡಿದಾಡುವುದು, ಹೆಣ್ಣಿನ ಮನೆಯಲ್ಲಿ ಮಾಂಸದಡಿಗೆ ಮಾಡುವುದು, ದೀಪ ಹಾರಿಹೋಗುವುದು, ಮನೆಯಲ್ಲಿನ ಹಾಲಿನ ಮಡಿಕೆಯನ್ನು ಬೆಕ್ಕು ಬೀಳಿಸುವುದು ಇಂತಹ ಅಪಶಕುನಗಳು ನಡೆಯಬಾರದು. ಇಷ್ಟೆಲ್ಲಾ ಆದ ತರುವಾಯ ಹೆಣ್ಣನ್ನು ಕೂಲಂಕುಶವಾಗಿ ಪರೀಕ್ಷಿಸಿ ಗಂಡಿನವರು ಮನೆಗೆ ವಾಪಸ್ಸಾಗುತ್ತಾರೆ. ಗಂಡಿನ ಮನೆಯವರು ಹೊರಟು ಹೋದ ನಂತರ ಹೆಣ್ಣಿನ ಮನೆಯವರೂ ಕೂಡ ಬಿಳಿ ಸೀರೆ ಧರಿಸಿರುವ ಒಬ್ಬ ಮುತ್ತೈದೆಯ ತಲೆಯ ಮೇಲೆ ಸುಣ್ಣದ ಬೊಟ್ಟಿಟ್ಟ ಮಡಿಕೆಯನ್ನು ಹೊರಿಸಿಕೊಂಡು, ಅವಳ ಹಿಂದೆ ಐದು ಜನ ಗಂಡಸರು ಗಂಡಿನ ಮನೆಗೆ ಬರುತ್ತಾರೆ. ಎರಡು ಕಡೆಯವರು ಯಾವಾಗ ಮದುವೆ ಮಾಡಲು ಅನುಕೂಲವೋ ಆವಾಗ ಮಾಡುವುದೆಂದು ನಿರ್ಧರಿಸಿಕೊಳ್ಳುತ್ತಾರೆ. ಅವರು ವಾರ, ತಿಥಿ, ನಕ್ಷತ್ರ ಯಾವುದನ್ನು ನೋಡುವುದಿಲ್ಲ. ಅದಕ್ಕಿಂತ ಗಂಡು ಹೆಣ್ಣಿನ ಮನೆಗಳ ಅನುಕೂಲವನ್ನು ನೋಡಿಕೊಂಡು ಮದುವೆ ಮಾಡುತ್ತಾರೆ.

ಇದಾದ ನಂತರ ಅರುಣೆ ತರುವ ಶಾಸ್ತ್ರ ಮತ್ತು ಚಪ್ಪರ ಹಾಕುವುದು. ಅರುಣೆ ಎಂದರೆ ಒಂದು ವಿಶೇಷ ರೀತಿಯ ಮಡಿಕೆ. ಅದನ್ನು ಅರಿವೇಣಿ ಎಂತಲೂ ಕರೆಯುತ್ತಾರೆ. ಈ ಅರಿವೇಣಿಯ ಶಾಸ್ತ್ರ ಕಾಡುಗೊಲ್ಲರ ಮದುವೆಯಲ್ಲಿ ತುಂಬಾ ಮುಖ್ಯವಾದುದು. ಅರುಣೆ ತರುವುದಕ್ಕೆ ಕೆಲವರು, ಚಪ್ಪರಕ್ಕೆ ಬೇಕಾದ ಗೂಟ ತರುವುದಕ್ಕೆ ಕೆಲವರು ಹೋಗುತ್ತಾರೆ. ಅರುಣೆ ತರುವುದಕ್ಕೆ ಹೋಗುವವರು ಒಂದು ಬುಟ್ಟಿಗೆ ಮೂರು ಸೇರು ಅಕ್ಕಿಯನ್ನು, ಇನ್ನೊಂದಕ್ಕೆ ಐದು ಸೇರು ಅಕ್ಕಿಯನ್ನು ಹಾಕುತ್ತಾರೆ. ಒಂದು ಮಡಿಕೆಗೆ ಒಂದು ಕಟ್ಟು ವೀಳ್ಯೆದೆಲೆ, ಅಡಿಕೆ, ಒಂಬತ್ತು ಅಚ್ಚು ಬೆಲ್ಲ, ಒಂಬತ್ತು ಬೆಳ್ಳುಳ್ಳಿ, ಅರಶಿಣಕೊನೆ, ಒಂಬತ್ತು ತೊಂಡಲು ಅಂದರೆ ಕಣಿಗಲ ಎಲೆಯನ್ನು ಸುತ್ತು ಮಾಡಿದ ಎಲೆಯ ಗಂಟು, ಇವುಗಳನ್ನು ಹಾಕುತ್ತಾರೆ. ಜೊತೆಗೆ ಒಂದು ಸೇರು ಬೇಳೆಕಾಳು, ಒಂದು ತೆಂಗಿಕಾಯಿಯನ್ನು ಇಡುತ್ತಾರೆ. ಒಂದು ಸಣ್ಣ ಕುಡಿಕೆಗೆ ಎಣ್ಣೆಯನ್ನು ತುಂಬಿ ಆ ಮಡಿಕೆಯಲ್ಲಿಡುತ್ತಾರೆ. ಇವುಗಳನ್ನು ಅರುಣೆ ತರುವುದಕ್ಕೆ ಹೋಗುವವರು ತೆಗೆದುಕೊಂಡು ಹೋಗುತ್ತಾರೆ.

ಚಪ್ಪರಕ್ಕೆ ಬೇಕಾದ ವಸ್ತುಗಳನ್ನು ತರುವುದಕ್ಕೆ ಹೋಗುವವರನ್ನು ಒಂದು ಕಡೆ ಕೂರಿಸಿ ಅವರಿಗೆ ಷಾಜವನ್ನು ಕೊಡುತ್ತಾರೆ. ಷಾಜ ಎಂದರೆ ಮರ್ಯಾದೆ ಎಂದರ್ಥ. ಅಂದರೆ ಹೆಣ್ಣಿನ ಚಪ್ಪರಕ್ಕೆಂದು ಐದು ಸೇರು ಅಕ್ಕಿ, ಗಂಡಿನ ಚಪ್ಪರಕ್ಕೆಂದು ಮೂರು ಸೇರು ಅಕ್ಕಿ, ಒಂದೊಂದು ಚಪ್ಪರಕ್ಕೆಂದು ಮೂರು ಮೂರು ತೆಂಗಿನಕಾಯಿ, ಐದೈದು ಅಚ್ಚುಬೆಲ್ಲ, ಐದೈದು ಉತ್ತುತ್ತಿ, ಐದೈದು ಬೆಳ್ಳುಳ್ಳಿ, ಐದೈದು ಅರಿಶಿಣ ಕೊನೆ ಇವುಗಳನ್ನು ಷಾಜವಾಗಿ ಕೊಡುತ್ತಾರೆ. ಅಲ್ಲದೆ ಕೊಡಲಿ ಮತ್ತು ಕುಡುಗೋಲು ಎರಡನ್ನು ಒಂದೆಡೆ ಇಟ್ಟು ಪೂಜಿಸುತ್ತಾರೆ. ಅನಂತರ ಚಪ್ಪರಕ್ಕೆ ಬೇಕಾದ ಸಾಮಗ್ರಿಯನ್ನು ತರಲು ಕುಲಸ್ಥರಲ್ಲಿ ಕೆಲವರು ಹೋಗುತ್ತಾರೆ.

ನಂತರ ಐದು ಜನ ಮುತ್ತೈದೆಯರನ್ನು ಒಂದೆಡೆ ಕೂರಿಸಿ ವೀಳ್ಯೆದೆಲೆ ಕೊಟ್ಟು ಅವರ ಮೇಲೆ ಹೆಡಿಗೆಗಳನ್ನು ಹೊರಿಸಿ ಕಳುಹಿಸುತ್ತಾರೆ. ಅವರಲ್ಲಿ ಇಬ್ಬರು ಮಡಿಕೆಯನ್ನು ಹೊತ್ತರೆ ಉಳಿದವರು ಕಳಶ ಮತ್ತು ಪಂಚಾರತಿ ಇತರ ಸಾಮಗ್ರಿಗಳನ್ನಿಡಿದುಕೊಂಡು ಬರುತ್ತಾರೆ. ಅರುಣೆಗೆ ಹೋಗುವವರು ಕುಂಬಾರನ ಮನೆಗೆ ಹೋಗಿ ತಾವು ತೆಗೆದುಕೊಂಡು ಬಂದಿದ್ದ ಹೆಡಿಗೆಗಳನ್ನು ಕುಂಬಾರನಿಗೆ ನೀಡಿ ಅಲ್ಲಿ ಒಂದು ಗುಂಡುಕಲ್ಲನ್ನು ಪೂಜಿಸುತ್ತಾರೆ. ಹೆಡಿಗೆಗಳನ್ನು ತೆಗೆದುಕೊಂಡ ಕುಂಬಾರನು ಐದು ಮಡಿಕೆಗಳನ್ನು ಕೊಡುತ್ತಾನೆ. ಆ ಮಡಿಕೆಗಳನ್ನು ಪೂಜಿಸಿ ಅವುಗಳನ್ನು ತೆಗೆದುಕೊಂಡು ಬರುತ್ತಾರೆ. ಅವರು ಬರುವ ವೇಳೆಗೆ ಅರಣೆಯನ್ನು ಪೂಜಿಸುವ ಸಲುವಾಗಿ ಬಾಳೆಪಟ್ಟೆಯಿಂದ ಮಾಡಿದ ಒಂದು ಚಿಕ್ಕ ಗುಡಿಸಲನ್ನು ಹೆಣ್ಣಿನ ಮನೆಯ ಮುಂದೆ ಕಟ್ಟಿರುತ್ತಾರೆ, ಅದನ್ನು ಅರುಣೆಗುಡ್ಲು ಎನ್ನುತ್ತಾರೆ. ಮುತ್ತೈದೆಯರು ಐದು ಮಡಿಕೆಗಳನ್ನು ತಂದ ಮೇಲೆ ಅವುಗಳ ಮೇಲೆ ಸುಣ್ಣದಿಂದ ಚಿತ್ತಾರವನ್ನು ಬಿಡಿಸುತ್ತಾರೆ. ಈ ಮಡಿಕೆಗೆ ಐದು ಉತ್ತುತ್ತಿ, ಐದು ಅರಿಶಿಣ ಕೊಂಬು, ಐದಚ್ಚು ಬೆಲ್ಲ, ಐದು ತೊಂಡಲು, ಐದು ಕೊಬ್ಬರಿ ಬಟ್ಟಲು, ಇವೆಲ್ಲವನ್ನು ಹಾಕಿ ಅದರ ಮೇಲೆ ಅಕ್ಕಿಯನ್ನು ಹಾಕಿರುತ್ತಾರೆ. ಒಂದು ಸಣ್ಣ ಮಿಳ್ಳೆಯಲ್ಲಿ ಎಣ್ಣೆಯನ್ನು ಹಾಕಿ ಅದನ್ನು ಅಕ್ಕಿಯ ಮೇಲಿಟ್ಟು ಅದಕ್ಕೆ ಬಿಳಿ ಬಟ್ಟೆಯಿಂದ ಕಟ್ಟಿರುತ್ತಾರೆ. ಈ ರೀತಿಯ ಮಡಿಕೆಯನ್ನು ಅರುಣೆ ಎಂದು

ಕರೆದು ಅದನ್ನು ಅರುಣೆಗುಡ್ಲುವಿನಲ್ಲಿಡುತ್ತಾರೆ. ಉಳಿದ ನಾಲ್ಕು ಮಡಿಕೆಗಳನ್ನು ಅದರ ಸುತ್ತಲೂ ಇಟ್ಟಿರುತ್ತಾರೆ. ಅದಕ್ಕೆ ಯಾವ ರೀತಿಯ ಮೈಲಿಗೆಯೂ ಆಗಬಾರದೆಂದು ಒಬ್ಬರನ್ನು ಕಾವಲಿಟ್ಟಿರುತ್ತಾರೆ.

ಇಷ್ಟಾದ ನಂತರ ಚಪ್ಪರಕ್ಕೆ ಬೇಕಾದ ಸಾಮಗ್ರಿ ತರಲು ಹೋದವರು ಬರುತ್ತಾರೆ. ಬಂದಾಗ ಚಪ್ಪರವನ್ನು ಹಾಕುತ್ತಾರೆ. ಆ ದೊಡ್ಡ ಚಪ್ಪರದ ಕೆಳಗೆ ಹೆಣ್ಣಿಗೊಂದು ಮತ್ತು ಗಂಡಿಗೊಂದು ಎಂದು ಚಿಕ್ಕ ಚಪ್ಪರಗಳನ್ನು ಹಾಕಿರುತ್ತಾರೆ. ಐದು ಕಳ್ಳಿಯ ಗೂಟಗಳನ್ನು ನೆಟ್ಟು ಹೆಣ್ಣಿನ ಚಪ್ಪರವನ್ನು ಹಾಕಿದರೆ, ಗಂಡಿನ ಚಪ್ಪರವನ್ನು ತೆಂಗಿನಗರಿ, ಅತ್ತಿಯ ಕೊನೆ, ಹಾಲದ ಕೊನೆಯಿಂದ ಹಾಕುತ್ತಾರೆ.

ಚಪ್ಪರದ ಪ್ರಕ್ರಿಯೆ ಮುಗಿದ ನಂತರ ಮದಲಿಂಗನ ಶಾಸ್ತ್ರವನ್ನು ಮಾಡುತ್ತಾರೆ. ಇದು ಎರಡನೆಯ ದಿನ ನಡೆಯುವ ಕಾರ್ಯ. ಗಂಡನ್ನು ಹೆಣ್ಣಿನ ಮನೆಗೆ ವಾದ್ಯ ಸಹಿತ ಕರೆತರುತ್ತಾರೆ. ಮೊದಲು ಗಂಡಿನ ಮನೆಯಲ್ಲಿ ಗಂಡನ್ನು ದೇವಸ್ಥಾನದ ಬಳಿಗೆ ಕರತಂದು ಅಲ್ಲಿ ಅವನನ್ನು ಮದಲಿಂಗನನ್ನಾಗಿ ಮಾಡುತ್ತಾರೆ. ಮನೆಗೊಬ್ಬರಂತೆ ಗಂಡಿನ ತಲೆಗೆ ಹಟ್ಟಿಯ ಜನ ಹಾಲೊತ್ತುತ್ತಾರೆ. ಅನಂತರ ವಾದ್ಯ ಸಹಿತ ಹೆಣ್ಣಿನ ಮನೆಗೆ ಕರೆತರುತ್ತಾರೆ.

ಈ ಕಡೆ ಹೆಣ್ಣಿನ ಮನೆಯಲ್ಲಿಯೂ ಕೂಡ ಹೆಣ್ಣಿನ ತಲೆಗೆ ಹಾಲು ಒತ್ತಿ ಸ್ನಾನ ಮಾಡಿಸಿರುತ್ತಾರೆ. ಅಷ್ಟೆ ಅಲ್ಲದೆ ಅವಳಿಂದ ಕಳಶ ಪೂಜೆ ಮಾಡಿಸುತ್ತಾರೆ. ಅನಂತರ ಹೆಣ್ಣಿನ ಮನೆಯ ಹೊರಭಾಗದ ನೆಲದಲ್ಲಿ ನಾಲ್ಕು ಗುಂಡಿಗಳನ್ನು ತೋಡಿ ಅದರಲ್ಲಿ ಭತ್ತವನ್ನು ಹಾಕಿ ನಾಲ್ಕು ಜನ ಮುತ್ತೈದೆಯರಿಗೆ ಒನಕೆ ಕೊಟ್ಟು ಕುಟ್ಟಿಸುತ್ತಾರೆ. ಜೊತೆಗೆ ಹೆಣ್ಣಿನ ಮನೆಯ ಬಳಿ ಹಸೆಯನ್ನು ಹಚ್ಚುತ್ತಾರೆ. (ಹಸೆ ಎಂದರೆ ಕರಿಯ ಕಂಬಳಿಯನ್ನು ಗದ್ದುಗೆಯನ್ನಾಗಿ ಹಾಸಿ ಅದರ ಮೇಲೆ ಅಕ್ಕಿಯಿಂದ ಹಸೆಯನ್ನು ಬರೆಯುತ್ತಾರೆ). ಇದರ ಮೇಲೆ ಒಂದು ಮಣೆಯನ್ನು ಹಾಕಿ ಅದರ ಮೇಲೆ ಒಂದು ಬಿಳಿ ಬಟ್ಟೆಯನ್ನು ಹಾಸುತ್ತಾರೆ. ಅದರ ಸುತ್ತಲೂ ಕರಿಯ ಕಂಬಳಿಯನ್ನು ಹಾಸುತ್ತಾರೆ. ಹಸೆಯ ಮೇಲೆ ಕಳಶ, ಕನ್ನಡಿ, ಇಟ್ಟು ನಾಲ್ಕು ಮೂಲೆಗೆ ನಾಲ್ಕು ಬೆಲ್ಲದ ಉಂಡೆ, ನಾಲ್ಕು ಬೆಳ್ಳುಳ್ಳಿ, ಜೀರಿಗೆ, ಮೆಣಸು ಮೊದಲಾದವುಗಳನ್ನು ಇಟ್ಟು ಪೂಜಿಸುತ್ತಾರೆ. ಇದನ್ನು ಮೊದಲನೆಯ ಹಸೆ ಎಂದು ಕರೆಯುತ್ತಾರೆ. ಅದರಂತೆ ಅದೆಲ್ಲವನ್ನೂ ತೆಗೆದು ಮೊದಲಿನಂತೆಯೇ ಕರಿಯ ಕಂಬಳಿಯನ್ನು ಹಾಸಿ ಎರಡನೆಯ ಹಸೆಯನ್ನು ಬರೆಯುತ್ತಾರೆ. ಮದುಮಗಳನ್ನು ಕೂರಿಸಿ ಅಕ್ಕಿಯಿಂದ ಸ್ಯಾಸೆವು ಇಡುತ್ತಾರೆ. ಇದೇ ರೀತಿ ಗಂಡಿಗೂ ಮತ್ತು ಹೆಣ್ಣಿಗೂ ಐದು ಸಾರಿ ಮಾಡುತ್ತಾರೆ.

ಮದಲಿಂಗನ ಶಾಸ್ತ್ರದ ನಂತರ ಎರಡು ದಿನ ಹಸೆ ಹಾಡುಗಳ ಮೂಲಕ ಎರಡು ದಿನ ಕಾಲ ತಳ್ಳುತ್ತಾರೆ. ಐದನೆಯ ದಿನ ಹೆಣ್ಣಿನ ಮನೆಯಲ್ಲಿ ಹೆಣ್ಣಿಗೂ ಮತ್ತು ಬಿಡದಿ ಮನೆಯಲ್ಲಿ ಗಂಡಿಗೂ ಅರಿಶಿಣ ಹಚ್ಚಿ ಸ್ನಾನ ಮಾಡಿಸುತ್ತಾರೆ. ಸ್ನಾನದ ನಂತರ ಹೆಣ್ಣಿಗೆ ಬಿಳಿ ಸೀರೆಯನ್ನು ಗಂಡಿಗೆ ಬಿಳಿ ಬಟ್ಟೆಯನ್ನು ತೊಡಿಸುತ್ತಾರೆ. ಹೆಣ್ಣಿನ ಮನೆಯಿಂದ ಹೆಣ್ಣನ್ನು, ಬಿಡದಿ ಮನೆಯಿಂದ

ಗಂಡನ್ನು ಚಪ್ಪರಕ್ಕೆ ಕರೆ ತರುತ್ತಾರೆ. ಗಂಡನ್ನು ಗಂಡಿನ ಚಪ್ಪರದಲ್ಲಿ ಕೂರಿಸುತ್ತಾರೆ. ಹೆಣ್ಣನ್ನು ಅರುಣೆ ಗುಡ್ಲವಿನ ಹತ್ತಿರ ಕರೆದುಕೊಂಡು ಹೋಗಿ ಅರುಣೆಯನ್ನು ಅವಳ ಕೈಯಿಂದ ಪೂಜಿಸಿಕೊಂಡು ಅದನ್ನು ಅವಳು ತಲೆಯ ಮೇಲೆ ಹೊತ್ತುಕೊಂಡು ಬಂದು ಹೆಣ್ಣಿನ ಚಪ್ಪರದಲ್ಲಿಡುತ್ತಾಳೆ. ಆ ಅರುಣೆಯ ಕೆಳಗೆ ಉಳಿದ ನಾಲ್ಕು ಮಡಕೆಗಳನ್ನು ಇಡುತ್ತಾರೆ. ಹೆಣ್ಣನ್ನು ಹೆಣ್ಣಿನ ಚಪ್ಪರದಲ್ಲಿ ಮತ್ತು ಗಂಡನ್ನು ಗಂಡಿನ ಚಪ್ಪರದಲ್ಲಿ ಕೂರಿಸಿ ಅವಳಿಗೆ ಮೂರು ಹಸೆಯನ್ನು, ಅವನಿಗೆ ನಾಲ್ಕು ಹಸೆಯನ್ನು ಹಚ್ಚುತ್ತಾರೆ. ಹೆಣ್ಣಿನ ಚಪ್ಪರದ ನಾಲ್ಕು ಮೂಲೆಗೂ ಇಟ್ಟಿರುವ ಗಡಿಗೆಗಳ ಮಧ್ಯೆ ಒಂದು ಗುಂಡಿಯನ್ನು ಮಾಡಿ ಅದಕ್ಕೆ ಕುರಿಗೊಬ್ಬರವನ್ನು ಹಾಕಿ ಅದರ ಮೇಲೆ ಅರುಣೆಯನ್ನಿಡುತ್ತಾರೆ. ಆ ನಾಲ್ಕು ಮಡಿಕೆಗಳ ಸುತ್ತಲೂ ಬರುವಂತೆ ಅಂಗುದಾರವನ್ನು ಸುತ್ತುತ್ತಾರೆ. ಅಂಗುದಾರ ನಾಲ್ಕು ಗಡಿಗೆಗಳನ್ನು ತಾಗುವಂತಿರಬೇಕು. ಈ ಎಳೆದ ಐದು ಎಳೆಗಳನ್ನು ಸುತ್ತಿ ಧಾರೆಯ ಹಸೆಯನ್ನು ಬರೆಯುತ್ತಾರೆ. ಹೆಣ್ಣನ್ನು ಧಾರೆಯ ಹಸೆಯ ಮೇಲೆ ಕೂರಿಸಿ ಬಂಧುಬಳಗದವರೆಲ್ಲ ಅವಳ ತಲೆಗೆ ಹಾಲನ್ನು ಹಾಕುತ್ತಾರೆ. ನಂತರ ಗಂಡನ್ನು ಹೆಣ್ಣಿನ ಚಪ್ಪರಕ್ಕೆ ಕರೆದುಕೊಂಡು ಬಂದು ಹೆಣ್ಣಿನ ಪಕ್ಕದಲ್ಲಿ ಕೂರಿಸುತ್ತಾರೆ. ಆಗ ಅಲ್ಲಿ ಸೇರಿದವರೆಲ್ಲ ಬೀರಕ್ಕಿಯನ್ನು ಇಬ್ಬರ ಮೇಲೆ ಹಾಕುತ್ತಾರೆ. ಅನಂತರ ಗಂಡು ಹೆಣ್ಣಿನ ಕಡೆಯವರು ಬಾಳೆನಾರಿನಿಂದ ಚೆಂಡನ್ನು ಕಟ್ಟಿ ಎಸೆದಾಡುತ್ತಾರೆ. ತರುವಾಯ ಪೂಜಾರಿ, ಗೌಡ ಇತರರು ಸೇರಿ 'ಮೂರು ಕಟ್ಟೆಯ ಮನೆಯವರೂ ಧಾರೆಗೆ ಅಪ್ಪಣೆ ಕೊಡಬೇಕು' ಎಂದು ಕೇಳುತ್ತಾರೆ.

ನಂತರ ಗಂಡನ್ನು ಸೂರ್ಯನಿಗೆ ಮುಖ ಮಾಡಿ ಕೂರಿಸಿ ಅವನಿಗೆ ಹಾಲು ನೀರು ಬಿಡುತ್ತಾರೆ. ಗಂಡಿನ ಕೈ ಕೆಳಗೆ ಹೆಣ್ಣನ್ನು ಕೂರಿಸಿ ಬೊಗಸೆ ಒಡ್ಡಿರುತ್ತಾಳೆ. ತನ್ನ ಕೈಗೆ ಬಿದ್ದ ಹಾಲನ್ನು ಅವನು ಹೆಣ್ಣಿನ ಕೈಗೆ ಬಿಡುತ್ತಾನೆ. ನಂತರ ಗಂಡು ಹೆಣ್ಣನ್ನು ಎಬ್ಬಿಸುತ್ತಾರೆ. ಅವರಿಬ್ಬರ ಮಧ್ಯ ಒಂದು ಬಟ್ಟೆಯ ತೆರೆಯನ್ನು ಹಿಡಿಯುತ್ತಾರೆ. ಹೆಣ್ಣಿನ ತಾಯಿ ಒಂದು ತಟ್ಟೆಯನ್ನು ಹೆಣ್ಣಿನ ತಲೆಯ ಮೇಲೆ ಹಿಡಿಯುತ್ತಾಳೆ. ಮೂವರು ಮುತ್ತೈದೆಯರು ಗಡಿಗೆಗಳಲ್ಲಿ ತುಂಬಿರುವ ನೀರನ್ನು ಎತ್ತಿ ಸೋಬಾನೆ ಪದಗಳನ್ನು ಹಾಡುತ್ತಾ ಅವಳ ತಲೆಯ ಮೇಲೆ ಸ್ವಲ್ಪ ಸ್ವಲ್ಪವಾಗಿ ಹುಯ್ಯುತ್ತಾರೆ. ಜೊತೆಗೆ ಹಾಲನ್ನು ಹೊಯ್ಯುತ್ತಾರೆ. ಅದೇ ರೀತಿ ಗಂಡನ್ನು ಮಣೆಯ ಮೇಲೆ ಕೂರಿಸಿ ಅವನಿಗೂ ಹಾಲು ತುಪ್ಪ ಹುಯ್ಯುತ್ತಾರೆ. ಇದಾದನಂತರ ಒಂದು ಹರಿವಾಣದಲ್ಲಿ ಎಲೆ ಅಡಿಕೆ ಹೂವುಗಳು ಮತ್ತು ತಾಳಿಯನ್ನಿಟ್ಟುಕೊಂಡು ಅದನ್ನು ಎಲ್ಲರಿಂದಲೂ ಮುಟ್ಟಿಸಿಕೊಂಡು ತಂದು ಗಂಡಿನ ಕೈಗೆ ಕೊಡುತ್ತಾರೆ. ಆಗ ಗಂಡು, ಹಿರಿಯರು ಹೇಳಿ ಕೊಟ್ಟಂತೆ 'ಸೂರ್ಯ ಚಂದ್ರ ಸಾಕ್ಷಿಯಾಣೆ, ಗುರು ಹಿರಿಯರ ಪಾದಸಾಕ್ಷಿಯಾಣೆ, ನಮ್ಮ ತಂದೆ ತಾಯಿ ಪಾದ ಸಾಕ್ಷಿಯಾಣೆ ನಾನೇ ಗಂಡ ನೀನೇ ಹೆಂಡತಿ' ಎಂದು ಗಂಡು ಹೇಳುತ್ತಾನೆ. 'ಸೂರ್ಯ ಚಂದ್ರ ಸಾಕ್ಷಿಯಾಣೆ, ಗುರು ಹಿರಿಯರ ಪಾದಸಾಕ್ಷಿಯಾಣೆ, ನಮ್ಮ ತಂದೆ ತಾಯಿ ಪಾದ ಸಾಕ್ಷಿಯಾಣೆ ನೀನೇ ಗಂಡ ನಾನೇ ಹೆಂಡತಿ' ಎಂದು ಹೆಣ್ಣು ಹೇಳುತ್ತಾಳೆ. ಆನಂತರ ಗಂಡು ತಾಳಿ ಕಟ್ಟುತ್ತಾನೆ.

ಧಾರೆ ಆದನಂತರ ಹೆಣ್ಣು ಮತ್ತು ಗಂಡನ್ನು ಎದುರು ಬದರು ಕೂರಿಸುತ್ತಾರೆ. ಒಬ್ಬಾಕೆ ಒಂದು ಹರಿವಾಣದಲ್ಲಿ ಅಕ್ಕಿಯನ್ನು ತುಂಬಿ ನಿಲ್ಲುತ್ತಾಳೆ. ಆ ಅಕ್ಕಿಯಲ್ಲಿ ಆ ಹೆಣ್ಣು ಸೇರಿದಂತೆ ಗಂಡು ಹೆಣ್ಣು ಮಾತಿನ ಚೇಡಿಸುವಿಕೆಯ ಆಟವನ್ನು ಆಡುತ್ತಾರೆ. ಇದನ್ನೆ ಓದೋ ಅಕ್ಕಿ ಶಾಸ್ತ್ರ ಎನ್ನುತ್ತಾರೆ. ಇದಾದ ನಂತರ ಮದುವೆ ಚಪ್ಪರದಲ್ಲಿ ಗಂಡು ಮತ್ತು ಹೆಣ್ಣನ್ನು ಗಂಡಿನ ಚಪ್ಪರದಲ್ಲಿ ಕೂರಿಸುತ್ತಾರೆ. ನಂತರ ಬೂವ ಮಾಡುವ ಸಂಪ್ರದಾಯ ಅಂದರೆ ಅಕ್ಕಿ, ಬೆಲ್ಲ, ಬೆಳ್ಳುಳ್ಳಿ, ತುಪ್ಪ, ಜೇನುತುಪ್ಪ, ತೆಂಗಿನಕಾಯಿ ಎಲ್ಲವನ್ನು ಒಳಗೊಂಡ ಅನ್ನವನ್ನು ಮಾಡುತ್ತಾರೆ. ಅದನ್ನು ಮುದ್ದೆಯನ್ನು ಮಾಡಿ ಆರು ಮುದ್ದೆಗಳನ್ನು ಮಾಡಿ ಅದರಲ್ಲಿ ಎರಡು ಬೂವದ ಮುದ್ದೆಯೆಂದು, ಎರಡನ್ನು ತಾಯಿ ಮುದ್ದೆಯೆಂದು, ಉಳಿದೆರಡನ್ನು ಗೌಡಮುದ್ದೆಯೆಂದು ಕರೆಯುತ್ತಾರೆ. ಈ ಮುದ್ದೆಗಳಲ್ಲಿ ತಾಯಿ ಮುದ್ದೆಗಳನ್ನು ತಂದು ಗಂಡು ಹೆಣ್ಣಿನ ಮುಂದೆ ಇಡುತ್ತಾರೆ. ಇದರಲ್ಲಿ ಒಂದನ್ನು ಗಂಡು, ಇನ್ನೊಂದನ್ನು ಹೆಣ್ಣು ಮುಟ್ಟಿದ ನಂತರ ಗಂಡಿನವರಿಗೆ ಕೊಡುತ್ತಾರೆ. ಹಾಗೆಯೇ ಬೂವದ ಮುದ್ದೆಗಳನ್ನು ಗಂಡು ಹೆಣ್ಣು ಮುಟ್ಟಿದ ನಂತರ ಹೆಣ್ಣಿನವರಿಗೆ ಕೊಡುತ್ತಾರೆ. ಇದನ್ನು ಪಡೆದ ಹೆಣ್ಣಿನ ಮತ್ತು ಗಂಡಿನ ಕಡೆಯವರು ಮರೆಗೆ ಹೋಗಿ ಊಟ ಮಾಡುತ್ತಾರೆ. ಇನ್ನೊಂದು ಗೌಡನ ಮುದ್ದೆಗೆ ಗೌಡನ ಬೆಳ್ಳಿ ಉಂಗುರದ ಮೊಹರನ್ನು ಒತ್ತುತ್ತಾರೆ. ಇದು ಸ್ವಲ್ಪವೂ ಬಿರುಕು ಬೀಳದಂತೆ ಎಚ್ಚರಿಕೆಯಿಂದ ಮಿದ್ದು ಕಟ್ಟಿರಬೇಕು. ಗೌಡನ ಮುದ್ದೆಯನ್ನು ಹಿಡಿದುಕೊಂಡು ಅದನ್ನು ತಯಾರು ಮಾಡಿದವನು 'ಗೌಡಮುದ್ದೆ ಬರುತ್ತೆ, ಗೌಡಮುದ್ದೆ ಬರುತ್ತೆ, ದಾರಿ ಬಿಡಿ' ಎಂದು ಹೇಳುತ್ತಾ ಅದನ್ನು ವಾದ್ಯ ಸಮೇತ ಹಟ್ಟಿಯ ದೇವಸ್ಥಾನದ ಮುಂದಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಕರಿಕಂಬಳಿ ಗದ್ದುಗೆ ಹಾಸಿ ಗೌಡಮುದ್ದೆಯನ್ನಿಟ್ಟು ಪೂಜಿಸಿ ಕಾಯಿ ಹೊಡೆದು ಯಾರಾದರೂ ಧೀರರು ಗೌಡ ಮುದ್ದೆಯನ್ನು ಊಟಮಾಡಬಹುದು ಎಂದು ಸವಾಲು ಹಾಕುತ್ತಾನೆ. ಸಮರ್ಥರಾದವರು ಗೌಡಮುದ್ದೆಯನ್ನು ತಿಂದ ನಂತರ ಗಂಡು ಹೆಣ್ಣು ಸೇರಿದಂತೆ ಅಲ್ಲಿ ಸೇರಿದ್ದವರಿಗೆಲ್ಲಾ ಕುಲದ ಊಟ ಹಾಕಲಾಗುತ್ತದೆ.

ಈ ಧಾರೆಯ ಊಟ ಮುಗಿದ ನಂತರ ಜಾಡಿ ತೀರಿಸುವ ಶಾಸ್ತ್ರ. ಅಂದರೆ ಒಂದು ಕಡೆ ಕರಿಯ ಕಂಬಳಿಯ ಗದ್ದುಗೆಯನ್ನು ಹಾಸಿ ಪಂಚಾರತಿಯನ್ನಿಟ್ಟು, ಒಂದು ಗಡಿಗೆಗೆ ಅಡಿಕೆಯನ್ನು ತುಂಬಿ ಅದರ ಬಾಯಿಗೆ ಬಾಳೆಯೆಲೆಯನ್ನಿಟ್ಟು, ಅದರ ಮೇಲೆ ಸಗಣಿಯನ್ನು ಮೆತ್ತಿ ಕರೇಓಬೇನಹಳ್ಳಿ, ರಾಮನಹಳ್ಳಿ ಮತ್ತು ತಾಳವಟ್ಟಿ ಈ ಮೂರು ಕಟ್ಟೆಮನೆಗಳ ಗೌಡರ ಮುದ್ರೆಗಳಿಂದ ಮುದ್ರೆ ಒತ್ತುತ್ತಾರೆ. ಇದಕ್ಕೆ ಮೂರು ಕಟ್ಟೆಯ ಮೊಹರು ಎನ್ನುತ್ತಾರೆ. ಇದನ್ನು ಯಾರು ಮುಟ್ಟುವಂತಿಲ್ಲ. ಕರಿಯ ಕಂಬಳಿಯ ಗದ್ದುಗೆಯ ಮೇಲೆ ಅದನ್ನಿಟ್ಟು ಪೂಜಿಸಿ ಅದರ ಎದುರಿಗೆ ಎಲೆ ಅಡಿಕೆಯನ್ನಿಡುತ್ತಾರೆ. ಕೆಲ ಹೆಂಗಸರು ಬಂದು ಅವರಿಟ್ಟಿರುವ ಹದಿನಾರು ಸಾವಿರ ವೀಳ್ಯೆದೆಲೆಯಲ್ಲಿ ಗಂಡಿನ ಮನೆದೇವರ ವೀಳ್ಯ, ತಾಳವಟ್ಟಿಯ ವೀಳ್ಯ, ರಾಮನಹಳ್ಳಿಯ ವೀಳ್ಯ, ಕರೇಓಬನಹಳ್ಳಿಯ ವೀಳ್ಯ, ಮತ್ತು ಗ್ರಾಮದ ಪಟೇಲ, ಶ್ಯಾನುಭೋಗರಿಗೆ, ಹನ್ನೆರಡು ಕೈವಾಡದವರಿಗೆ, ವೀಳ್ಯವನ್ನು ತೆಗೆದಿಡುತ್ತಾರೆ. 'ಕುಲದ ಸ್ವಾಮಿ, ದೈವದ ಸ್ವಾಮಿ, ಗೌಡ ಪೂಜಾರಪ್ಪಗಳು ಎಲ್ಲರೂ ಜಾಡಿ

ಹಾಕುವುದಕ್ಕೆ ಅಪ್ಪಣೆ ಕೊಡಿ ಎಂದು ಹೆಣ್ಣಿನ ತಂದೆ ಮೂರು ಸಾರಿ ಹೇಳುತ್ತಾನೆ. ಅಪ್ಪಣೆ ಕೊಟ್ಟೆವು ಎಂದು ಅಲ್ಲಿದ್ದವರು ಹೇಳುತ್ತಾರೆ. ಇಲ್ಲಿ ಜಾಡಿ ಹಾಕುವವರು ಮತ್ತು ಎತ್ತುವವರು ಕರಡಿಗೊಲ್ಲರ ವಂಶಸ್ಥರು. ಬೇರೆ ಯಾವ ಬೆಡಗಿನ ಗೊಲ್ಲರಿಗೂ ಅಧಿಕಾರವಿರುವುದಿಲ್ಲ. ಕರಡಿಗೊಲ್ಲರ ವಂಶಸ್ಥರು ಬಂದು ಪರೀಶಿಲನೆ ಮಾಡಿದ ತರುವಾಯಜಾಡಿಯ ಮೇಲಿನ ಅಡಿಕೆ ತುಂಬಿದ ಮಡಿಕೆಯನ್ನು ಗೌಡ ಪೂಜಿಸುತ್ತಾನೆ. ಅದರ ಮೇಲಿನಮೊಹರನ್ನು ಹೊಡೆಯುವವರು ಕಾಡುಗೊಲ್ಲರ ವಂಶಸ್ಥರು. ಅದರಿಂದ ಅಡಿಕೆಯನ್ನು ಸುರಿಯುವವರು ಅವರೇ ಆಗಿರುತ್ತಾರೆ. ಈ ಸಮಯದಲ್ಲಿ ಗಂಡಿನ ಕಡೆಯವರು ಗುಡಿಕಟ್ಟೆಗೆ ಹತ್ತು ಸೇರು ಅಕ್ಕಿ, ಒಂದು ಕಟ್ಟು ವೀಳ್ಯೆದೆಲೆ, ಒಂದು ಸೇರು ಅಡಿಕೆ ಕೊಡಬೇಕು. ಮೂರು ಕಟ್ಟೆಮನೆಗಳಿಗೂ ಒಂದೊಂದು ವೀಳ್ಯ ಕೊಡಬೇಕು. ಅಲ್ಲಿ ಸೇರಿರುವ ಎಲ್ಲರಿಗೂ ಎಲೆ ಅಡಿಕೆಯನ್ನು ಕೊಡುವ ಮೊದಲು ಕಟ್ಟೆಮನೆಗೆ, ದೇವರಿಗೆ, ಗ್ರಾಮದ ಗೌಡ, ಶ್ಯಾನುಭೋಗರಿಗೆ, ಹನ್ನೆರಡು ಕೈವಾಡದವರಿಗೆ ಗೌರವಾರ್ಥವಾಗಿ ವೀಳ್ಯವನ್ನು ಪ್ರತ್ಯೇಕವಾಗಿ ತೆಗಿದಿಟ್ಟ ನಂತರ ಎಲ್ಲರಿಗೂ ಕೊಡಬೇಕು.

ನಂತರ ಗಂಗಾಪೂಜೆ ಮಾಡುವುದು. ಹಣ್ಣು, ಕಾಯಿ, ಹೊಂಬಾಳೆ, ನೆನೆಅಕ್ಕಿ, ನೆನೆಗಡಲೆ. ಚಿಗುಳಿ, ತಂಬಿಟ್ಟು, ಗಂಧ, ಅರಿಶಿಣ ಕುಂಕುಮ, ಅಂಗುದಾರ ಎಲ್ಲವನ್ನು ತೆಗೆದುಕೊಂಡು ಮೇಳ ಮಾಡಿಸಿಕೊಂಡು ಬಾವಿಯ ಹತ್ತಿರಕ್ಕೆ ಹೋಗುತ್ತಾರೆ. ಅಲ್ಲಿ ಐದು ಗಡಿಗೆ ನೀರು ಸೇದುತ್ತಾರೆ. ಅಲ್ಲಿ ಮಣ್ಣು ಕಲಿಸಿ ಜಗತಿ ಹಾಕುತ್ತಾರೆ. ಆ ಜಗತಿಯ ಮೇಲೆ ಐದು ಬೆನವನನ್ನು ಇಡುತ್ತಾರೆ. ಅದಕ್ಕೆ ಅರಿಶಿಣ, ಕುಂಕುಮ, ಗಂಧ ಹೂವು ಹಾಕಿ ಪೂಜಿಸುತ್ತಾರೆ. ಜೊತೆಗೆ ಐದು ಗಡಿಗೆಗಳಿಗೆ ಗಂಧ, ಅರಿಶಿಣ ಕುಂಕುಮವನ್ನಿಟ್ಟು ಪೂಜಿಸುತ್ತಾರೆ. ಬಂದವರಿಗೆಲ್ಲ ಪ್ರಸಾದವನ್ನು ಕೊಡುತ್ತಾರೆ. ಮದಲಿಂಗಿತ್ತಿಯ ಜೊತೆ ನಾಲ್ಕು ಜನ ಮುತ್ತೈದೆಯರಿಗೂ ಎಡೆಯನ್ನು ಬಡಿಸುತ್ತಾರೆ. ಆಮೇಲೆ ಮದಲಿಂಗಿತ್ತಿಯನ್ನು ಒಳಗೊಂಡಂತೆ ಒಬ್ಬೊಬ್ಬ ಮುತ್ತೈದೆಯರ ತಲೆಯ ಮೇಲೂ ಒಂದೊಂದು ಗಡಿಗೆಯಂತೆ ನಾಲ್ಕು ಮುತ್ತೈದೆಯರ ತಲೆಯ ಮೇಲೂ ಗಡಿಗೆಯನ್ನು ಹೊರಿಸುತ್ತಾರೆ. ಅಲ್ಲಿಂದ ಮೆರವಣಿಗೆಯಲ್ಲಿ ಬಂದ ನಂತರ ಬಾಗಿಲ ಪೂಜೆ ಮಾಡಿಸುತ್ತಾರೆ. ಆಗ ಮದಲಿಂಗ ತನ್ನ ಕೈಲಿದ್ದ ಉಂಗುರವನ್ನು ಗಂಗಾದೇವತೆಗೆ ಅಂದರೆ ಗಡಿಗೆಗೆ ಹಾಕುತ್ತಾನೆ. ಆಮೇಲೆ ಕೊಡ ತಾರಮ್ಮ ಎಂದು ಹೇಳುತ್ತಾನೆ. ಆಗ ಸುತ್ತಲೂ ಮುತ್ತೈದೆಯರು ನಿನ್ನ ಹೆಂಡತಿಯ ಹೆಸರು ಹೇಳು ಅನ್ನುತ್ತಾರೆ. ಆಗ ಆತ ಹೆಂಡತಿಯ ಹೆಸರೇಳಿ ಕೊಡ ಕೊಡು ಅಂದಾಗ ಹೆಂಡತಿ ಗಡಿಗೆಯನ್ನು ಕೊಡುತ್ತಾಳೆ. ಆಗ ಆ ಕೊಡವನ್ನು ತೆಗೆದುಕೊಂಡು ಹೋಗಿ ಒಳಗೆ ಇಟ್ಟು ಉಂಗುರವನ್ನು ಮದಲಿಂಗನ ಕೈಲಿ ಇಡುತ್ತಾರೆ. ಅಲ್ಲಿಗೆ ಗಂಗಾದೇವತೆಯ ಶಾಸ್ತ್ರ ಮುಗಿಯುತ್ತದೆ. ಅಂದಿನ ರಾತ್ರಿಯೇ ಪ್ರಸ್ತವನ್ನೇರ್ಪಡಿಸುತ್ತಾರೆ. ಇಲ್ಲಿಗೆ ಐದು ದಿನಗಳ ಮದುವೆ ಮುಗಿಯುತ್ತದೆ.

ಮ್ಯಾಸಬೇಡರಲ್ಲಿ ಮದುವೆ ಸಂಪ್ರದಾಯವನ್ನು ನೋಡುವುದಾದರೆ, ಗಂಡಿನ ಕಡೆಯ ಬಂಧು ಬಳಗದವರು ಹೆಣ್ಣಿನ ಮನೆಗೆ ಹೆಣ್ಣು ನೋಡಲು ಬರುತ್ತಾರೆ. ಆಗ ಹೆಣ್ಣಿನ ಕಡೆಯವರು ಇಷ್ಟು ಜನ ಇಷ್ಟು ದೂರ ಯಾಕೆ ಬಂದಿರಿ ಎಂದು ಪ್ರಶ್ನಿಸುತ್ತಾರೆ. ಆಗ ಗಂಡಿನ ಕಡೆಯವರು ನಿಮ್ಮ

ಮನೆಯಲ್ಲಿ ಹಾಲು ಅನ್ನ ಊಟಮಾಡಿ ನಾಲ್ಕು ಒಳ್ಳೆ ಮಾತನಾಡಿ ಹೋಗುವುದಕ್ಕೆ ಬಂದಿದ್ದಿವಿ ಎನ್ನುತ್ತಾರೆ. ಯಾವಾಗ ಹಾಲು ಅನ್ನ ಎಂಬ ಪದವನ್ನು ಬಳಸುತ್ತಾರೋ ಆಗ ಹೆಣ್ಣಿನ ಕಡೆಯವರಿಗೆ ತಿಳಿಯುತ್ತದೆ ಇವರು ಹೆಣ್ಣನ್ನು ಕೇಳಲು ಬಂದಿದ್ದಾರೆ ಎಂಬುದು. ಆಗ ಗಂಡಿನ ಕಡೆಯವರು ಹೆಣ್ಣಿನ ತಾಯಿಯನ್ನು ಉದ್ದೇಶಿಸಿ ತಾಯಿ ಹೆಣ್ಣನ್ನು ಕೇಳುತ್ತಾರೆ. ಆಗ ತಾಯಿ ಉತ್ತರ ಕೊಡಲು ಶಕ್ತಳಾಗಿರುವುದಿಲ್ಲ. ಆಗ ಗಂಡನ ಕಡೆ ನೋಡುವಳು. ಆಕೆಯ ಗಂಡ ಅಥವಾ ಗಂಡಿನ ಕಡೆಯವರಿಗೆ ತಾನು ಹೆತ್ತ ಮಗಳನ್ನು ನಿಮ್ಮ ಮನೆಗೆ ಮದುವೆ ಮಾಡಿ ಕಳಿಸುವುದಕ್ಕೆ ನನಗೆ ಪೂರ್ಣ ಇಷ್ಟವಿದೆ ಎಂಬ ಮಾತನ್ನು ತಾಯಿಯ ಮೂಲಕ ಹೇಳಿಸುತ್ತಾನೆ. ಹೆಣ್ಣಿನ ತಂದೆ ತಾನು ಮನೆಯ ಯಜಮಾನನಾದರೂ ಹೆಣ್ಣಿನ ತಾಯಿಯ ಮೂಲಕ ಒಪ್ಪಿಗೆಯ ಮಾತು ಬಂದರೆ ಮಾತ್ರ ಗಂಡಿನವರು ಒಪ್ಪುವುದು.

ಹೀಗೆ ಹೆಣ್ಣು ಕೊಡಲು ತಾಯಿ, ತಂದೆ ಸೋದರಮಾವ ಎಲ್ಲರ ಒಪ್ಪಿಗೆ ತೆಗೆದುಕೊಂಡ ಮೇಲೆ ಗಂಡಿನ ಕಡೆಯವರು ಹೆಣ್ಣನ್ನು ನಿಶ್ಚಯ ಮಾಡಿಕೊಂಡಿದ್ದರ ದಕ್ಷಿಣೆಯಾಗಿ ಹದಿನಾರು ರೂಪಾಯಿಯನ್ನು ಕೊಡಬೇಕು. ಗಂಡಿನ ಕಡೆಯವರು ಅನುಕೂಲವಾಗಿದ್ದರೆ ಏನಾದರೂ ಬಂಗಾರ, ಸೀರೆ ಕೊಡಬಹುದು. ಅದು ಅವರವರ ಅನುಕೂಲ. ಹೀಗೆ ಕೊಟ್ಟಾಗ ಮದುವೆ ಲಗ್ನದ ದಿನವನ್ನೂ ತೀರ್ಮಾನಿಸಿಕೊಂಡು ಹೋಗುವರು. ಮದುವೆ ಮುಹೂರ್ತವನ್ನು ಪಂಚಾಂಗವನ್ನು ನೋಡಿ ನಿರ್ಧರಿಸುವ ಪದ್ಧತಿ ಹಿಂದೆ ಇರಲಿಲ್ಲ. ಆದರೆ ಈಗೀಗ ಜೋಯಿಸರನ್ನು ಕೇಳುವ ಪದ್ಧತಿಯನ್ನು ಬೇಡನಾಯಕರು ಬೆಳೆಸಿಕೊಂಡಿದ್ದಾರೆ.

'ಲಗ್ನದ ದಿನ ತಿರ್ಮಾನ ಮಾಡಲು ಬೇಡನಾಯಕರು ಯಾವ ಪಂಚಾಂಗವನ್ನು ನೋಡಿ ದಿನ ಮುಹೂರ್ತ ನಿರ್ಧರಿಸುವುದಿಲ್ಲ. ಹಿಂದಿನ ಶತಮಾನಗಳಲ್ಲಿ ಅಡವಿ ಸಂಚಾರಿಗಳಾಗಿದ್ದ ಬೇಡರಿಗೆ ಪಂಚಾಂಗ, ಪುರೋಹಿತರು ಸಿಕ್ಕುವುದು ದುರ್ಲಭವಿತ್ತು. ಹೀಗಾಗಿ ಅವರು ತಮ್ಮ ಮಕ್ಕಳ ವಿವಾಹ ದಿನವನ್ನು ತಾವೇ ನಿರ್ಧರಿಸಿಕೊಳ್ಳುತ್ತಿದ್ದರು. ಬೇಡರ ಎರಡು ವಂಶಗಳು ಸೂರ್ಯ ಚಂದ್ರರಿಂದ ಉತ್ಪನ್ನವಾದವು ಎಂಬ ನಂಬಿಕೆಯಿರುವುದರಿಂದ ಚಂದ್ರ ವಂಶಕ್ಕೆ ಸೇರಿದವರು ಲಗ್ನಗಳನ್ನು ರಾತ್ರಿಯ ಹೊತ್ತು ಇಟ್ಟುಕೊಳ್ಳುವರು. ಸೂರ್ಯವಂಶಕ್ಕೆ ಸೇರಿದ ಬೇಡರು ಬೆಳಗಿನ ಜಾವ ಸೂರ್ಯನು ಉದಯಿಸುವ ಸಂದರ್ಭಕ್ಕೆ ಇಟ್ಟುಕೊಳ್ಳುವರು'.[೩]

ಗಂಡು ಹೆಣ್ಣು ನೋಡುವ ಶಾಸ್ತ್ರ ಮುಗಿದು ಆ ಹೆಣ್ಣು ನಮ್ಮ ಮನೆಗೆ ಎಂಬುದು ಖಾತ್ರಿಯಾದ ಮೇಲೆಯೇ ಅವರ ಮನೆಯಲ್ಲಿ ಊಟ ಮಾಡುತ್ತಾರೆ. ಬಹುತೇಕವಾಗಿ ಸಿಹಿ ಅಡುಗೆಯನ್ನೇ ಮಾಡಿರುತ್ತಾರೆ. ಈ ಮುಂಚೆ ಬಿದುರಕ್ಕಿಯ ಅನ್ನ. ಹಾಲು, ಮೊಸರು, ಮಜ್ಜಿಗೆಯನ್ನು ಬಳಸುತ್ತಿದ್ದು ಇದಕ್ಕೆ ಉಪ್ಪು ಕಲಸಿಕೊಂಡು ಊಟ ಮಾಡುತ್ತಿದ್ದರಂತೆ.

ಗಂಡು ಹೆಣ್ಣು ಮಾತು ಕತೆಯೆಲ್ಲಾ ಮುಗಿದ ಮೇಲೆ ಮದುವೆ ದಿನವನ್ನು ಲಗ್ನವನ್ನು ನಿಗದಿಗೊಳಿಸಿದಂತೆ ಮದುವೆಯನ್ನು ಇಟ್ಟುಕೊಳ್ಳುತ್ತಾರೆ. ಸಾಮಾನ್ಯವಾಗಿ ಮ್ಯಾಸಬೇಡರ ಮದುವೆ

ಸೂರ್ಯನು ಉದಯಿಸುವ ಕಾಲಕ್ಕೆ ಸರಿಯಾಗಿ ಆಗಬೇಕೆಂಬುದು ಪದ್ಧತಿ. ಹಾಗಾಗಿ ಮುಹೂರ್ತದ ಹಿಂದಿನ ದಿನವೇ ವರನನ್ನು ಮದಲಿಂಗನನ್ನಾಗಿ ಮಾಡಿಕೊಂಡು ಅಂದರೆ ತಮ್ಮ ಮನೆಯಲ್ಲಿ ಹಿರಿಯರ ಪೂಜೆ ಮಾಡಿಕೊಂಡು ಧಾನ್ಯದ ರಾಶಿಗೆ ಪೂಜೆ ಸಲ್ಲಿಸಿ, ಆಯಾ ಬೆಡಗಿನ ಮನೆದೇವರಿಗೆ ಹೋಗಿ ದೇವರ ಮುಂದೆ ವರನನ್ನು ಕೂರಿಸುತ್ತಾರೆ. ಆತನಿಗೆ ಅರಿಶಿಣ ವನ್ನು ಹಚ್ಚಿ ಹಾಲಿನಲ್ಲಿ ಎಲೆಯನ್ನು ಒತ್ತಿ ತಲೆಯ ಮೇಲೆ ಒತ್ತುತ್ತಾರೆ. ಇದನ್ನು ಹಾಲು ಒತ್ತಿಸುವುದು ಎನ್ನುತ್ತಾರೆ. ಹೀಗೆ ಮಾಡಿಕೊಂಡು ಬಂದ ಮರುದಿನ ಹೆಣ್ಣಿನ ಊರಿಗೆ ಪ್ರಯಾಣ ಮಾಡುತ್ತಾರೆ. ಏಕೆಂದರೆ ಬೇಡರ ಬಹುತೇಕ ಮದುವೆಗಳು ಹೆಣ್ಣಿನ ಮನೆಯಲ್ಲಿಯೇ ನಡೆಯುವುದು. ಇದು ಹೆಣ್ಣಿನ ಮನೆಲ್ಲಿಯೇ ನಡೆಯಬೇಕೆಂಬ ನಿಯಮವಿಲ್ಲ. ಅವರ ಶಕ್ತ್ಯಾನುಸಾರವಾಗಿ ಎಲ್ಲಿ ಬೇಕಾದರೂ ಮಾಡಿಕೊಳ್ಳಬಹುದು. ಆದರೆ ಬಹುತೇಕ ಮದುವೆಗಳು ಹೆಣ್ಣಿನ ಮನೆಯಲ್ಲಿಯೇ ಜರುಗುತ್ತವೆ. ಬೇಡರು ಅರಣ್ಯವಾಸಿಗಳಾಗಿದ್ದಾಗ ನಡೆದುಕೊಂಡೇ ಪ್ರಯಾಣವನ್ನು ಮಾಡುತ್ತಿದ್ದರು. ಹಾಗೇ ನಡೆದುಕೊಂಡು ರಾತ್ರಿಯೆಲ್ಲಾ ಪ್ರಯಾಣ ಮಾಡುವಾಗ ಪಂಜಿನ ಸಹಾಯದಿಂದ ಹಿಂದೊಬ್ಬರು ಮುಂದೊಬ್ಬರು ಕೈಯಲ್ಲಿ ಪಂಜು ಹಿಡಿದುಕೊಂಡು ಮಧ್ಯದಲ್ಲಿ ಜನ ಬಿಟ್ಟುಕೊಂಡು ಪ್ರಯಾಣ ಮಾಡುತ್ತಿದ್ದರು.

ಮದುವೆ ಹೆಣ್ಣಿನ ಹಟ್ಟಿಗೆ ಹೋಗಿ ಒಂದು ದೇವಸ್ಥಾನದಲ್ಲಿ ಇಳಿದುಕೊಳ್ಳುತ್ತಾರೆ. ಆಗ ಗಂಡಿನ ಕಡೆಯವರು ಬಂದಿರುವ ಸುದ್ದಿ ಗೊತ್ತಾಗಿ ಹೆಣ್ಣಿನವರು ವಾದ್ಯ ಸಹಿತ ಬಂದು ಅವರನ್ನು ಕರೆದುಕೊಂಡು ಬರುವರು. ಆಗ ಹೆಣ್ಣಿನ ಕಡೆಯವರು ಮತ್ತು ಗಂಡಿನವರು ಎದುರು ಬದುರಾಗಿ ಅಕ್ಕಿಯನ್ನು ಉಗ್ಗಿಕೊಳ್ಳುತ್ತಾರೆ. ನಂತರ ಹೆಣ್ಣಿನ ಮನೆಯೊಳಗಡೆ ಹೋಗುವರು. ಗಂಡಿನ ಕಡೆಯವರಿಗೆಂದೇ ಬಿಡದಿ ಮನೆ ಎಂದು ಬಿಟ್ಟಿರುತ್ತಾರೆ. ಆ ಮನೆಯಲ್ಲಿ ಗಂಡನ್ನು ಬಿಟ್ಟಿರುತ್ತಾರೆ. ಇಡೀ ರಾತ್ರಿ ಗಂಡು ಹೆಣ್ಣನ್ನು ಕಂಬಳಿ ಗದ್ದುಗೆ ಹಾಸಿ ಅಕ್ಕಿಯಿಂದ ಹಸೆಯನ್ನು ಬರೆದು ಅದರ ಮೇಲೆ ಕೂರಿಸಿ ಅರಿಶಿಣ ಹಚ್ಚುವಂತಹ ಅನೇಕ ಶಾಸ್ತ್ರಗಳನ್ನು ಮಾಡುತ್ತಾರೆ.

ಮಾರನೆಯ ದಿನ ಬೆಳಗ್ಗೆ ಧಾರೆಯ ದಿನವಾಗಿದ್ದು ಗಂಡು ಹೆಣ್ಣಿಗೆ ಸುರಗಿ ನೀರು ಹಾಕಿ ಧಾರೆಗೆ ಸಿದ್ಧಗೊಳಿಸುತ್ತಾರೆ. ಸೋದರ ಮಾವ ಹೆಣ್ಣನ್ನು ಧಾರೆಗೆ ಕರೆ ತರುತ್ತಾನೆ. ಮೊದಲು ಹೆಣ್ಣಿನ ತಾಯಿ-ತಂದೆ ಹಾಲಿನ ಧಾರೆ ಹೊಯ್ದ ಮೇಲೆ ಸೋದರ ಮಾವನನ್ನೊಳಗೊಂಡಂತೆ ಮಿಕ್ಕವರು ಬಂದು ಬಳಗ ಮದುವೆಗೆ ಆಗಮಿಸಿದ ಎಲ್ಲರೂ ಧಾರೆ ಹೊಯ್ಯುವರು. ಗಂಡು ಹೆಣ್ಣಿನ ಕೊರಳಿಗೆ ತಾಳಿ (ಇತ್ತೀಚೆಗೆಲ್ಲಾ ಚಿನ್ನದ ತಾಳಿಯನ್ನು ಕಟ್ಟಲಾಗುತ್ತಿದೆ. ಅದರ ಜೊತೆಗೆ ಅರಿಶಿಣ ಕೊಂಬನ್ನು ಕಟ್ಟುತ್ತಾರೆ. ಬಹು ಹಿಂದೆ ಅರಿಶಿಣ ದಾರಕ್ಕೆ ಕಟ್ಟಾಣಿ ಮುತ್ತುಗಳನ್ನು ಕಟ್ಟಿ ಪೋಣಿಸುತ್ತಿದ್ದ ಸರವನ್ನು ಕಟ್ಟುತ್ತಿದ್ದರು.) ಕಟ್ಟಿದ ಮೇಲೆ ಅವರಿಬ್ಬರನ್ನು ಹೊರಗೆ ಕರೆದುಕೊಂಡು ಹೋಗಿ ಸೂರ್ಯ ಚಂದ್ರರ ಹೆಸರು ಹೇಳಿಸಿ ಪೂಜೆ ಮಾಡಿಸಿ ದಿಕ್ಕು ದಿಕ್ಕುಗೂ ಕೈ ಮುಗಿಸುವರು. ಧಾರೆಯಾದ ತರುವಾಯ ಅವರವರ ಅನೂಕೂಲಕ್ಕೆ ತಕ್ಕಂತೆ ಊಟದ ವ್ಯವಸ್ಥೆ ಇರುತ್ತದೆ.

ಗಂಡಿನ ಕಡೆಯವರು ಆ ದಿನವೇ ಹೆಣ್ಣನ್ನು ಕರೆದುಕೊಂಡು ತಮ್ಮ ಊರುಗಳಿಗೆ ಹೋಗುವರು. ಹೆಣ್ಣಿನ ಜೊತೆ ಹೆಣ್ಣಿನ ಮನೆಯವರು ಕೂಡ ಹೋಗುತ್ತಾರೆ. ಹಿಂದೆ ಹೀಗೆ ಹೋಗುವಾಗ ಹೆಣ್ಣಿನ

ಕಡೆಯವರು ದಾರಿಭತ್ಯೆ ಕೊಡುತ್ತಿದ್ದರಂತೆ. ಅಂದರೆ ಆಗಿನ ಕಾಲದಲ್ಲಿ ಸಾರಿಗೆ ವ್ಯವಸ್ಥೆ ಇಲ್ಲದ ಪ್ರಯುಕ್ತ ಕಾಲನಡಿಗೆಯಲ್ಲಿಯೇ ಪ್ರಯಾಣ ಮಾಡಬೇಕಿತ್ತು. ಹಾಗೆ ಪ್ರಯಾಣ ಮಾಡುವಾಗ ಊಟಕ್ಕೆ ಬೇಕಾದ ಅಕ್ಕಿ, ಉಪ್ಪು, ಖಾರ, ಕುರಿಯನ್ನು ಹೆಣ್ಣಿನ ಕಡೆಯವರು ದಾರಿಭತ್ಯೆ ಎಂದು ಕೊಟ್ಟದ್ದನ್ನು ಅಡುಗೆ ಮಾಡಿಕೊಂಡು ಊಟಮಾಡಿ ಊರಿಗೆ ಹೋಗುತ್ತಿದ್ದರು. ಆದರೆ ಈಗ ಪ್ರಯಾಣ ಸುಲಭವಾಗಿರುವುದರಿಂದ ಹೆಣ್ಣಿನವರು ದಾರಿಭತ್ಯೆಯನ್ನು ಕೊಡುವುದಿಲ್ಲ. ಹೆಣ್ಣನ್ನು ಆ ದಿನ ಮನೆ ತುಂಬಿಸಿಕೊಳ್ಳುವಾಗ ಹೊಸಲಿನ, ಮೇಲೆ ಒಂದು ಸೇರು ಅಕ್ಕಿಯನ್ನು ಇಡುತ್ತಾರೆ. ಹೆಣ್ಣು ಅದನ್ನು ತನ್ನ ಬಲಗಾಲಿನಿಂದ ಹೊಡೆದು ನಂತರ ಒಳಗೆ ಬರಬೇಕು. ಅಲ್ಲಿಯೂ ಹೊಸಲಿಗೆ ಕಾಸನ್ನು ಹೊಡೆಸುವ ಶಾಸ್ತ್ರ, ಗಂಡಿನ ತಂಗಿಯಿಂದ ಗಂಡಿಗೆ ಕಾಲು ತೊಳೆದು ಪೂಜಿಸುವುದಿದೆ. ಅದಕ್ಕೆ ಪ್ರತಿಯಾಗಿ ಆಕೆಗೆ ಏನಾದರೂ ಉಡುಗೊರೆ(ಹಸು. ಸಣ್ಣಕರು ಅಥವಾ ಇನ್ನೇನ್ನನಾದರೂ ಸರಿ) ಕೊಡುವುದು ಮುಂತಾದ ಶಾಸ್ತ್ರಗಳು ನಡೆಯುತ್ತವೆ.

ಮಾರನೆಯ ದಿನ ಗಂಡಿನ ಮನೆಯಲ್ಲಿ ಗಂಗಮ್ಮನ ಶಾಸ್ತ್ರ ನಡೆಯುತ್ತದೆ. ಲಗ್ನವಾದ ಹೆಣ್ಣು ಮತ್ತು ನಾಲ್ಕೈದು ಜನ ಮುತ್ತೈದೆಯರು ಸೇರಿ ಗಂಗಮ್ಮನಿಗೆ ಹೋಗುವರು. ಅಲ್ಲಿ ಗಂಗಮ್ಮನ ಪೂಜೆಯನ್ನು ಮಾಡಿಕೊಂಡು ತುಂಬಿದ ಗಡಿಗೆಯನ್ನು ಹೆಣ್ಣಿನ ತಲೆಯ ಮೇಲೆ ಹೊರಿಸಿಕೊಂಡು ಬರುವರು. ಹಾಗೆ ತಿರುಗಿ ಬಂದಾಗ ಹೆಣ್ಣು ನೇರವಾಗಿ ಮನೆಯೊಳಗೆ ನುಗ್ಗುವಂತಿಲ್ಲ. ಬಾಗಿಲ ಮುಂದೆ ನಿಂತುಕೊಳ್ಳಬೇಕು. ಒಳಗಿನಿಂದ ಬಂದ ಮದುಮಗ ಕೊಡವನ್ನು ಪೂಜಿಸಿಕೊಂಡು ಅದನ್ನು ಇಳಿಸಿಕೊಳ್ಳುವನು.

ಆದಿನ ಸಂಜೆ ಹೆಣ್ಣಿನ ಕಡೆಯವರು ಹೆಣ್ಣನ್ನು ಕರೆದುಕೊಂಡು ತಮ್ಮ ಊರಿಗೆ ಹೋಗುವರು. ಆಗ ಗಂಡಿನ ಕಡೆಯವರು ದಾರಿಭತ್ಯೆ ಕೋಡಬೇಕು ಎಂಬ ಪದ್ಧತಿ ಬಹುಹಿಂದೆ ಇತ್ತು. ಈಗ ಅದು ಇಲ್ಲ. ಮದುವೆಯಾದ ಐದನೆ ದಿನಕ್ಕೆ ಗಂಡು ಕರೆಯುವ ಶಾಸ್ತ್ರವಿದ್ದು ಅಂದೇ ಪ್ರಸ್ತದ ಕಾರ್ಯವನ್ನು ಇಟ್ಟುಕೊಳ್ಳುವರು.

**ಈ) ಸೀಮಂತ:**

ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಸೀಮಂತ ಅದ್ದೂರಿಯಾಗಿ ಆಚರಣೆ ಮಾಡುವುದಿಲ್ಲ. ಕಾಡುಗೊಲ್ಲರಲ್ಲಿ ಗರ್ಭಿಣಿ ಸಂಬಂಧಿಕರು, ನೆರೆಹೊರೆಯವರು ಗರ್ಭಿಣಿ ಹೆಂಗಸನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಒಳ್ಳೆಯ ಅಡುಗೆ ಮಾಡಿ ಬಡಿಸುತ್ತಾರೆ. ಗರ್ಭಿಣಿ ಮಹಿಳೆಗೆ ಇಷ್ಟವಾದ ಆಹಾರವನ್ನು ತಯಾರು ಮಾಡಿ ಬಡಿಸುತ್ತಾರೆ. ಇತ್ತೀಚೆಗೆ ಎರಡು ಸಮುದಾಯದಲ್ಲೂ ಇತರ ಸಮುದಾಯದವರ ಸಂಪರ್ಕದಿಂದಾಗಿ ಕಾಡುಗೊಲ್ಲರಲ್ಲಿಯೂ ಸೀಮಂತ ಆಚರಿಸುವುದಿದ್ದರೂ ಈ ಎರಡು ಸಮುದಾಯಗಳಲ್ಲಿ ಸೀಮಂತ ಮಾಡುವ ಆಚರಣೆ ಕಡಿಮೆ ಎಂದೇ ಹೇಳಬಹುದು. ಆದರೆ ಗರ್ಭಿಣಿ ಹೆಂಗಸನ್ನು ಬೇಸರಗೊಳ್ಳದೆ ನೋಡಿಕೊಳ್ಳುತ್ತಾರೆ.

## ಕೋಷ್ಟಕ -೧೭

### ಗರ್ಭವತಿಯ ಆಚರಣೆಗಳು

| – | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| – | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಸೀಮಂತ | ೧೩೭ | ೯೦.೧೩ | ೨೧ | ೯೫.೪೫ | ೧೫೮ | ೯೦.೮೦ |
| ಮಡಿಲುತುಂಬುವುದು | ೧೫ | ೯.೮೬ | ೧ | ೪.೫೫ | ೧೬ | ೯.೧೯ |
| ಒಟ್ಟು | ೧೫೨ | ೧೦೦.೦೦ | ೨೨ | ೧೦೦.೦೦ | ೧೭೪ | ೧೦೦.೦೦ |

ಕೋಷ್ಟಕದ ಸಂಖ್ಯೆ ೧೭ ರಲ್ಲಿ ವ್ಯಕ್ತವಾಗುವ ಅಂಶವೆಂದರೆ ಗರ್ಭವತಿಯ ಆಚರಣೆಗಳಿಗೆ ಸಂಬಂಧಿಸಿದಂತೆ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕಿನ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅದರ ಅನ್ವಯ ಮೇಲಿನ ಕೋಷ್ಟಕ ತಿಳಿಸುವುದೇನಂದರೆ, ಕಾಡುಗೊಲ್ಲರ ಮಹಿಳೆ ಗರ್ಭವತಿಯ ಆಚರಣೆಗಳು ಇವೆ ಎನ್ನುವುದಕ್ಕೆ ಸೀಮಂತ ಕಾರ್ಯದ ಪ್ರಮಾಣ ಶೇಕಡ ೯೦.೧೩ ರಷ್ಟು ಕಂಡುಬರುವುದು. ಹಾಗೆಯೇ ಮ್ಯಾಸಬೇಡರಹಟ್ಟಿಯಲ್ಲಿ ಸೀಮಂತ ಕಾರ್ಯಗಳು ನಡೆಯುವವು ಎನ್ನುವುದಕ್ಕೆ ಶೇಕಡ ೯೫.೪೫ ರಷ್ಟು ಕಂಡುಬರುವವು. ಒಟ್ಟಾರೆ ಎರಡು ಹಟ್ಟಿಗಳಿಂದ ಸೀಮಂತ ಕಾರ್ಯಗಳು ನಡೆಯುವವು ಎನ್ನುವುದಕ್ಕೆ ಶೇಕಡ ೯೦.೮೦ ರಷ್ಟು ಕಂಡುಬರುವವು. ಇತ್ತೀಚೆಗೆ ನಾಗರಿಕರ ಮತ್ತು ಗ್ರಾಮಗಳ ಸಂಪರ್ಕದಿಂದಾಗಿ ಸೀಮಂತ ಆಚರಿಸುವುದು ಕಂಡುಬಂದಿದ್ದು , ಹೊಸ ಸೀರೆಯುಡಿಸಿ ಅನುಕೂಲಕ್ಕೆ ತಕ್ಕಂತೆ ಸಿಹಿ ತಿಂಡಿಗಳನ್ನು ಮಾಡಿಸಿ ಬಂಧುಗಳಿಗೆ ಹಾಕುವ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ. ಹಾಗೂ ಬಸುರಿ ಹೆಂಗಸಿಗೆ ಹೊಸ ಹಸಿರು ಬಳೆ, ಹೂಗಳಿಂದ ಸಿಂಗರಿಸಿ ಗಂಡಿನ ಕಡೆಯವರು ಮತ್ತು ಬಂಧು ಬಳಗದವರು ಆಕೆಗೆ ಇಷ್ಟವಾದ ತಿಂಡಿ ತಿನಿಸುಗಳನ್ನು ತಯಾರಿಸಿಕೊಂಡು ಬಂದಿರುತ್ತಾರೆ. ಆ ದಿನ ಎಲ್ಲರೂ ಸೇರಿ ಹಬ್ಬದ ಊಟ ಮಾಡುತ್ತಾರೆ.

**ಉ) ಸಾವಿನ ಆಚರಣೆ:**

ಕಾಡುಗೊಲ್ಲರಲ್ಲಿ ಯಾರಾದರೂ ಸತ್ತರೆ ಹೆಣವನ್ನು ಗುಡಿಸಿಲಿನಿಂದ ಹೊರಗಡೆ ಇಡುತ್ತಾರೆ. ಸತ್ತ ವ್ಯಕ್ತಿಯ ಮಕ್ಕಳು ಅಗಸ ಸಮುದಾಯದ ಮನೆಯಿಂದ ಒಂದು ಹೊಸ ಮಡಿಕೆಯನ್ನು ತರಿಸುತ್ತಾರೆ. ಒಬ್ಬ ವಿಧವೆಯನ್ನು ಕರೆಸಿ ಅವಳಿಗೆ ಆರು ಹಿಡಿ ಅಕ್ಕಿಯನ್ನು, ಮಡಿಕೆಯನ್ನು, ಬೆರಣಿಯನ್ನು ಕೊಡುತ್ತಾರೆ. ಅವಳು ಒಲೆ ಹೂಡಿ ಅದರ ಮೇಲೆ ಮಡಿಕೆಯನ್ನು ಇಟ್ಟು ನೀರನ್ನು ಆರು ಹಿಡಿ ಅಕ್ಕಿಯನ್ನೂ ಹಾಕಿ ಅನ್ನ ಮಾಡುತ್ತಾಳೆ. ಸತ್ತ ವ್ಯಕ್ತಿಯು ಉಡುತ್ತಿದ್ದ ಬಟ್ಟೆಗಳನ್ನು ಮಾದಿಗ ಸಮುದಾಯದವರಿಗೆ ಕೊಡುತ್ತಾರೆ. ಸ್ನಾನ ಮಾಡಿಸಿ ಹಣೆಗೆ ವಿಭೂತಿ ಇಟ್ಟು ಬಾಯಿಗೆ ಮೂರು ಕಾಸುಗಳನ್ನು ಇಟ್ಟು, ಹೂವಿನ ಹಾರಗಳನ್ನು ಹಾಕಿ ಊದಿನ ಕಡ್ಡಿಯನ್ನು ಹಚ್ಚಿ ಪೂಜೆ

ಮಾಡುತ್ತಾರೆ. ನಂತರ ಶವವನ್ನು ಚಟ್ಟದ ಮೇಲೆ ಇರಿಸಿ ಒಂದು ಹೊಸ ಬಟ್ಟೆಯನ್ನು ಹೊದಿಸಿ ಹಗ್ಗದಿಂದ ಚಟ್ಟಕ್ಕೆ ಕಟ್ಟುತ್ತಾರೆ. ಮಡಿಕೆಯಲ್ಲಿ ಮಾಡಿದ ಅನ್ನವನ್ನು ಶವದ ಮೇಲಿಟ್ಟು ಹಗ್ಗದಿಂದ ಬಿಗಿಯಾಗಿ ಕಟ್ಟುತ್ತಾರೆ. ಆ ಚಟ್ಟವನ್ನು ಸಂಬಂಧಿಕರು ಅಥವಾ ಮಕ್ಕಳು ಹೊತ್ತುಕೊಂಡು ಹೋಗುತ್ತಾರೆ.

ವ್ಯಕ್ತಿಯು ಸತ್ತನೆಂದು ತಿಳಿದ ತಕ್ಷಣವೆ ಆ ವ್ಯಕ್ತಿಯ ಮನೆಯವರ ಆದೇಶದಂತೆ ಮೂರು ನಾಲ್ಕು ಜನ ಮೊದಲೆ ಹೋಗಿ ಒಂದು ಕಡೆ ಗುಂಡಿಯನ್ನು ತೆಗೆದಿರುತ್ತಾರೆ. ಗುಂಡಿಯ ಹತ್ತಿರ ತೆಗೆದುಕೊಂಡ ಹೋದ ಹೆಣವನ್ನು ಗುಂಡಿಯ ಸುತ್ತಾ ಮೂರು ಸಲ ಸುತ್ತಿಸಿ ಗುಂಡಿಯ ಪಕ್ಕದಲ್ಲಿಡುತ್ತಾರೆ. ಸತ್ತ ವ್ಯಕ್ತಿಯ ಮಕ್ಕಳಲ್ಲಿ ಒಬ್ಬ ಒಂದು ತುಂಬಿದ ಗಡಿಗೆಯನ್ನು ಹೆಗಲ ಮೇಲೆ ಹೊತ್ತುಕೊಂಡು ಶವದ ಸುತ್ತಾ ಒಂದು ಸುತ್ತು ಸುತ್ತುತ್ತಾನೆ. ಒಂದು ಸುತ್ತು ಬಂದ ಮೇಲೆ ಗಡಿಗೆಗೆ ಒಂದು ತೂತು ಮಾಡುತ್ತಾರೆ. ಎರಡನೆಯ ಸುತ್ತಿಗೆ ಎರಡನೆಯ ತೂತು, ಮೂರನೆ ಸುತ್ತಿಗೆ ಮೂರನೆ ತೂತನ್ನು ಮಾಡುತ್ತಾರೆ. ಹೀಗೆ ಮೂರು ತೂತು ಮಾಡಿದ ಮೇಲೆ ಗಡಿಗೆ ಹೊತ್ತ ವ್ಯಕ್ತಿ ಆ ಗಡಿಗೆಯನ್ನು ಕೆಳಕ್ಕೆ ಬಿಡುತ್ತಾನೆ.

ಶವಕ್ಕೆ ಕಟ್ಟಿದ್ದ ಹಗ್ಗವನ್ನು ಬಿಚ್ಚಿ, ಅದರ ಎದೆಯ ಮೇಲಿದ್ದ ಅನ್ನವನ್ನು ತಂಗಡೆಗಿಡದ ಬುಡದಲ್ಲಿ ಇಡುತ್ತಾರೆ. ಶವವನ್ನು ಬೆತ್ತಲೆಯನ್ನಾಗಿ ಮಾಡಿ ಅದರ ತಲೆಯನ್ನು ದಕ್ಷಿಣಕ್ಕೆ, ಕಾಲುಗಳನ್ನು ಉತ್ತರಕ್ಕೆ ಮಾಡಿ ಗುಂಡಿಯಲ್ಲಿ ಮಲಗಿಸುತ್ತಾರೆ. ಅಲ್ಲಿಗೆ ಬಂದಿದ್ದ ಸಂಬಂಧಿಕರು ಮತ್ತು ಹಟ್ಟಿಯ ಜನಗಳೆಲ್ಲ ಹೆಣದ ಮೇಲೆ ಒಂದೊಂದು ಹಿಡಿ ಮಣ್ಣನ್ನು ಹಾಕುತ್ತಾರೆ. ಆ ನಂತರ ಸಲಿಕೆಯಿಂದ ಮಣ್ಣನ್ನು ಎಳೆದು ಗುಂಡಿಯನ್ನು ಸಂಪೂರ್ಣವಾಗಿ ಮುಚ್ಚುತ್ತಾರೆ. ಅನಂತರ ಅಲ್ಲಿಗೆ ಬಂದಿದ್ದ ಜನರೆಲ್ಲಾ ಹತ್ತಿರದಲ್ಲಿದ್ದ ಕೆರೆ ಅಥವಾ ಬಾವಿಯ ನೀರಿನಿಂದ ಕೈಕಾಲು ತೊಳೆದುಕೊಂಡು ಒಂದು ಮರದ ಕೆಳಗೆ ಕುಳಿತುಕೊಳ್ಳುತ್ತಾರೆ. ಆಗ ಸತ್ತ ವ್ಯಕ್ತಿಯ ಸಂಬಂಧಿಗಳು ಸಂಸ್ಕಾರಕ್ಕೆ ಬಂದಿದ್ದ ಜನರಿಗೆಲ್ಲಾ ವೀಳ್ಯೆದೆಲೆ ಅಡಿಕೆಯನ್ನು ಕೊಡುತ್ತಾರೆ. ಅವರು ಎಲೆ ಅಡಿಕೆಯನ್ನು ಹಾಕಿಕೊಂಡು ಅಲ್ಲಿಂದ ಹೊರಟು ಹಟ್ಟಿಯ ಮೂಡಲ ದಿಕ್ಕಿಗೆ ಬರುತ್ತಾರೆ. ಅಲ್ಲಿ ಒಂದು ಮುದ್ದೆಯಷ್ಟು ಗಾತ್ರದ ಸಗಣಿಯನ್ನು ಉಂಡೆಮಾಡಿ ಕಳ್ಳಿಯ ಒಂದೊಂದು ಎಸಳನ್ನು ಕಿತ್ತು ಅದಕ್ಕೆ ಸಿಕ್ಕಿಸಿ ನಂತರ ಹಟ್ಟಿಯೊಳಕ್ಕೆ ಹೋಗುತ್ತಾರೆ. ಅಷ್ಟೊತ್ತಿಗೆ ಸತ್ತ ವ್ಯಕ್ತಿಯ ಮನೆಯವರು ಮನೆಯ ಒಳಭಾಗದಲ್ಲಿ ಒಂದಿಷ್ಟಗಲ ನೆಲವನ್ನು ಸಾರಿಸಿ ಸಗಣಿ ಉಂಡೆಯನ್ನು ಮಾಡಿ ಅದರ ಮೇಲೆ ಒಂದು ಹಣತೆಯನ್ನು ಹಚ್ಚಿ ಇಡುತ್ತಾರೆ. ಮಣ್ಣಿಗೆ ಹೋಗಿದ್ದ ಪ್ರತಿಯೊಬ್ಬರು ಆ ಹಣತೆಯನ್ನು ನೋಡಿ ಕೈ ಮುಗಿದು ಅವರವರ ಮನೆಗಳಿಗೆ ಹೋರಟು ಹೋಗುತ್ತಾರೆ.

ಶವವನ್ನು ಹೊತ್ತವರನ್ನು ಮಾತ್ರ ಹಟ್ಟಿಯ ಹೊರಗಡೆಯೇ ಸ್ನಾನ ಮಾಡಿಸಿ, ಅಗಸರನ್ನು ಕರೆಯಿಸಿ ಅವರ ಕೈಯಿಂದ ಗಂಜಲವನ್ನು ಕುಡಿಸುತ್ತಾರೆ. ಅನಂತರ ಅವರು ಕೂಡ ಸಗಣಿಯ ಮುದ್ದೆಗೆ ಕಳ್ಳಿಯ ಎಸಳನ್ನು ಸಿಕ್ಕಿಸಿ ಹಟ್ಟಿಯೊಳಕ್ಕೆ ಹೋಗಿ ಹಣತೆಯನ್ನು ನೋಡಿ ಕೈ ಮುಗಿಯುತ್ತಾರೆ.

ಮಾರನೆಯ ದಿನ ಸತ್ತ ವ್ಯಕ್ತಿಯ ಮನೆಯನ್ನು ಸಗಣಿಯಿಂದ ಸಾರಿಸುತ್ತಾರೆ. ನಂತರ ಕುಂಬಾರರ ಮನೆಯಿಂದ ಒಂದು ಮಡಿಕೆ ತರಿಸುತ್ತಾರೆ. ಒಬ್ಬ ವಿಧವೆಯನ್ನು ಕರೆದು ಆ ಮಡಿಕೆಯಲ್ಲಿ ಅನ್ನವನ್ನು ಮಾಡಿಸಿ ಅನ್ನವನ್ನು ಒಂದು ದೊಡ್ಡ ಅಡಿಕೆ ಪಟ್ಟೆಗೆ ಸುರಿಯುತ್ತಾಳೆ. ಅಂದು ಕ್ಷೌರಿಕನನ್ನು ಕರೆಸಿ ಹೆಣವನ್ನು ಹೊತ್ತ ಇಬ್ಬರಿಗೆ ತಲೆಯನ್ನು ಬೋಳಿಸುತ್ತಾರೆ. ನಂತರ ಅವರಿಗೆ ನೀರು ಹಾಕಲಾಗುತ್ತದೆ. ನೀರು ಹಾಕಿದ ಮೇಲೆ ಅಗಸರವನು ಅವರಿಗೆ ಗಂಜಲವನ್ನು ಕುಡಿಸುತ್ತಾನೆ. ವಿಧವೆ ಅಡಿಕೆ ಪಟ್ಟೆಯಲ್ಲಿ ತಾನು ಬೇಯಿಸಿದ್ದ ಅನ್ನವನ್ನು ಸುರಿದು ಅದಕ್ಕೆ ಮೊಸರನ್ನು ಹಾಕಿ ಕಲಸಿ ಅದನ್ನು ತೆಗೆದುಕೊಂಡು ಸಮಾಧಿಯ ಬಳಿಗೆ ಹೋಗುತ್ತಾಳೆ. ಆಕೆಯ ಹಿಂದೆ ಹಟ್ಟಿಯ ಜನರೆಲ್ಲರೂ ಹೋಗುತ್ತಾರೆ. ಸಮಾಧಿ ಇನ್ನು ಸ್ವಲ್ಪ ದೂರ ಇದೆ ಎನ್ನುವಾಗ ಅವಳು ಅಡಿಕೆ ಪಟ್ಟೆಯಲ್ಲಿ ತಂದಿದ್ದ ಅನ್ನವನ್ನು ನೆಲದ ಮೇಲೆ ಇಡುತ್ತಾಳೆ. ಅದಕ್ಕೆ ಹೂವು ಹಾಕಿ ತೆಂಗಿನಕಾಯಿ ಹೊಡೆದು ಪೂಜೆ ಮಾಡುತ್ತಾಳೆ. ಅನಂತರ ಅವಳ ಹಿಂದೆ ಬಂದವರು ಒಬ್ಬೊಬ್ಬರು ಒಂದೊಂದು ಗೇಣಿನಷ್ಟು ದೂರ ಆ ಅಡಿಕೆ ಪಟ್ಟೆಯ ಅನ್ನವನ್ನು ಮುಂದೆ ಮುಂದೆ ಇಡುತ್ತಾರೆ. ಎಲ್ಲರ ಸರದಿ ಮುಗಿದ ಮೇಲೆ ಕೊನೆಯಲ್ಲಿ ಶವವನ್ನು ಹೊತ್ತವರು ಒಂದೊಂದು ಗೇಣು ಮುಂದಕ್ಕೆ ಇಡುತ್ತಾರೆ. ಅನಂತರ ಎಲ್ಲರೂ ಸ್ವಲ್ಪ ಹೊತ್ತು ಅಲ್ಲಿಯೇ ನಿಂತಿರುತ್ತಾರೆ. ಆ ಸಮಯದಲ್ಲಿ ಒಂದು ಕಾಗೆ ಬಂದು ಆ ಅನ್ನವನ್ನು ಮುಟ್ಟಿದರೆ ಸತ್ತ ವ್ಯಕ್ತಿಗೆ ಒಳ್ಳೆಯದೆಂದು ನಂಬುತ್ತಾರೆ. ಒಂದು ಪಕ್ಷ ಕಾಗೆ ಬಾರದೆ ಇದ್ದರೆ ಶವವನ್ನು ಹೊತ್ತವರು ಆ ಅನ್ನವನ್ನು ತೆಗೆದುಕೊಂಡು ಹೋಗಿ ಕೆರೆಗೋ ಹಳ್ಳಕ್ಕೋ ಬಿಟ್ಟು ಬಿಡುತ್ತಾರೆ. ನಂತರ ಎಲ್ಲರೂ ಹಟ್ಟಿಗೆ ಹಿಂದಿರುಗುತ್ತಾರೆ.

ಹೆಣವನ್ನು ಹೊತ್ತವರನ್ನು ಹಟ್ಟಿಯೊಳಕ್ಕೆ ಸೇರಿಸಿಕೊಳ್ಳುವ ಮುನ್ನ ಕಾಗೆ ಕೂಳು ಹಾಕಲು ವಿಧವೆ ಮತ್ತೊಮ್ಮೆ ಅನ್ನವನ್ನು ಮಾಡುತ್ತಾಳೆ. ಒಂದು ಒನಕೆಗೆ ಎರಡು ಬಳೆಗಳನ್ನು ಹಾಕಿ ಒಂದು ಕೋಳಿಯ ಪುಕ್ಕವನ್ನು ತರುತ್ತಾಳೆ. ಒನಕೆಗೆ ಕೆಮ್ಮಣ್ಣನ್ನು ಬಳಿದು ಒಬ್ಬನನ್ನು ಒನಕೆಯ ಮೇಲೆ ಕೂರಿಸುತ್ತಾಳೆ. ಹೆಣ ಹೊತ್ತವ ಇನ್ನೊಬ್ಬ ಆ ಕೋಳಿ ಪುಕ್ಕವನ್ನು ಹರಳೆಣ್ಣೆಯಲ್ಲಿ ಅದ್ದಿ ಒನಕೆಯ ಮೇಲೆ ಕುಳಿತವನನ್ನು ಸವರುತ್ತಾನೆ. ಒನಕೆಯ ಮೇಲೆ ಕುಳಿತವನು 'ಹೆಗಲು ಇಳಿಸಿಕೊಂಡೆ' ಎಂದು ಹೇಳಿ ಒನಕೆಯನ್ನು ಬಿಟ್ಟು ಮೇಲೆಳುತ್ತಾನೆ. ಆಗ ಇನ್ನೊಬ್ಬ ಒನಕೆಯ ಮೇಲೆ ಕುಳಿತುಕೊಳ್ಳುತ್ತಾನೆ. ಅದೇ ಶಾಸ್ತ್ರವನ್ನು ಅವನಿಗೂ ಮಾಡಲಾಗುತ್ತದೆ. ನಂತರ ವಿಧವೆ ಅವರಿಬ್ಬರಿಗೂ ಊಟಕ್ಕೆ ಬಡಿಸಿ ತಾನು ಊಟ ಮಾಡುತ್ತಾಳೆ. ಅಲ್ಲಿಗೆ ಮೂರು ದಿನದ ಸೂತಕ ಕಳೆಯುತ್ತದೆ. ಆಗ ಅವರು ಹಟ್ಟಿಯೊಳಕ್ಕೆ ಬರುತ್ತಾರೆ. ಅಂದು ಸತ್ತವರ ಮನೆಯಲ್ಲಿ ಹಟ್ಟಿಯವರಿಗೆಲ್ಲ ಊಟವಿರುತ್ತದೆ.

ಸತ್ತ ವ್ಯಕ್ತಿ ಒಂದು ತಿಂಗಳಾದ ಮೇಲೆ ಆತನ ಮಕ್ಕಳು ಸಂಬಂಧಿಕರು ಹಟ್ಟಿಯರವರು ಎಲ್ಲರೂ ಸಮಾಧಿಯ ಬಳಿಗೆ ಹೋಗಿ ಎಲ್ಲರೂ ಪೂಜೆ ಸಲ್ಲಿಸಿ ಒಂದೊಂದು ತೊಟ್ಟು ಹಾಲನ್ನು ಸಮಾಧಿಯ ಮೇಲೆ ಹಾಕುತ್ತಾರೆ. ಸತ್ತವ್ಯಕ್ತಿಯ ಮಕ್ಕಳು ಎರಡು ಸಣ್ಣ ಮಡಿಕೆಗಳನ್ನು ತೆಗೆದುಕೊಂಡು ಸಮಾಧಿಯ ಮಣ್ಣನ್ನು ತುಂಬಿಕೊಳ್ಳುತ್ತಾರೆ. ಒಂದು ಮಡಿಕೆಯನ್ನು ನೀರಿಗೆ ಹಾಕುತ್ತಾರೆ. ಇನ್ನೊಂದು

ಮಡಿಕೆಯನ್ನು ತಮ್ಮ ಜಮೀನಿನಲ್ಲಿ ಗುಂಡಿ ತೋಡಿ ಮಣ್ಣು ಹಾಕಿ ಮುಚ್ಚಿ ಅದರ ಮೇಲೊಂದು ಕಲ್ಲು ನೆಟ್ಟು ಅದನ್ನೆ ಆತನ ಸಮಾಧಿಯೆಂದು ಪರಿಗಣಿಸುತ್ತಾರೆ. ಜಮೀನಿನಲ್ಲಿಯೇ ಸತ್ತ ವ್ಯಕ್ತಿಯನ್ನು ಮಣ್ಣು ಮಾಡಿದಾಗ ಈ ಶಾಸ್ತ್ರದ ಅವಶ್ಯಕತೆ ಇರುವುದಿಲ್ಲ.

ಈ ಹಿನ್ನೆಲೆಯಲ್ಲಿ ಕಾಡುಗೊಲ್ಲರು ಸಾವಿನ ಆಚರಣೆಯಲ್ಲಿ ತಮ್ಮದೇ ಆದಂತಹ ವಿಧಿ, ವಿಧಾನಗಳನ್ನು ಒಳಗೊಂಡಿರುವುದು ಹಾಗೂ ಶವವನ್ನು ಸಾಗಿಸುವ ವಿಧಾನಕ್ಕೆ ಸಂಬಂಧಿಸಿದಂತೆ ಶವವನ್ನು ಚಟ್ಟದ ಮೇಲೆ ತೆಗೆದುಕೊಂಡು ಹೋಗುವುದು ಪ್ರಸ್ತುತ ಅಧ್ಯಯನದಿಂದ ಕಂಡುಬರುತ್ತದೆ.

ಶವವನ್ನು ಹೂತ ಮೇಲೆ ಇರುವ ಸಂಸ್ಕಾರಗಳಿಗೆ ಸಂಬಂಧಿಸಿದಂತೆ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕಿನ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅದರ ಅನ್ವಯ ಕಾಡುಗೊಲ್ಲರು ಶವವನ್ನು ಹೂತ ಮೇಲೆ ತಿಥಿ ಆಚರಣೆ ಮಾಡುವುದು ಕಂಡುಬರುವುದು. ಈ ಹಿನ್ನೆಲೆಯಲ್ಲಿ ಕಾಡುಗೊಲ್ಲರಲ್ಲಿ ಶವವನ್ನು ಹೂಳುವ ಪದ್ಧತಿಯೇ ಹೆಚ್ಚಾಗಿರುವುದನ್ನು ಮಾಹಿತಿದಾರರು ನೀಡುವ ಅಂಶಗಳಿಂದ ಗೊತ್ತಾಗುತ್ತದೆ ಹಾಗೂ ಅಕಾಲಿಕ ಮರಣಕ್ಕೆ ತುತ್ತಾದಾಗ ಶವವನ್ನು ಸುಡುವ ಪದ್ದತಿ ಇರುವುದು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಮ್ಯಾಸಬೇಡರ ಹಟ್ಟಿಯಲ್ಲಿ ಯಾರಾದರು ಸತ್ತರೆ ಮನೆಯಿಂದ ಹೊರಗೆ ತಂದು ಅದರ ತಲೆಯನ್ನು ದಕ್ಷಿಣಕ್ಕೆ ಇರಿಸಿ, ಕಾಲನ್ನು ಉತ್ತರಕ್ಕೆ ಇಟ್ಟು, ತಲೆಯ ಬಳಿ ಒಂದು ದೀಪವನ್ನು ಹಚ್ಚಿ ಇಡುತ್ತಾರೆ. ಮನೆಯ ಮುಂದೆ ಕಟ್ಟಿಗೆಯಿಂದ ಬೆಂಕಿ ಹಾಕುವರು. ಆ ಬೆಂಕಿಯಲ್ಲಿ ಒಂದು ಮಡಿಕೆ ಇಟ್ಟು ಒಂದು ಚಂಬು ನೀರು ಕುದಿಸಿ ಅದರೊಳಗೆ ಒಂದಿಷ್ಟು ಅಕ್ಕಿ ಹಾಕಿ ಬೇಯಲು ಬಿಡುತ್ತಾರೆ. ವ್ಯಕ್ತಿಯ ಸಾವು ಸಂಭವಿಸಿದ ಕೂಡಲೇ ಮಕ್ಕಳಿಗೆ ಸಂಬಂಧಿಕರಿಗೆ ತಿಳಿಸಲಾಗುತ್ತದೆ. ಈಗೆಲ್ಲಾ ದೂರವಾಣಿ ಮೂಲಕವೇ ವಿಷಯವನ್ನು ತಿಳಿಸುತ್ತಾರೆ. ಆದರೆ ಹಿಂದೆ ಯಾರಾದರೂ ಸತ್ತ ತಕ್ಷಣ ಬಂಧು-ಬಳಗಕ್ಕೆ ತಿಳಿಸಲು ಮಾದಿಗ ಸಮುದಾಯದ ಜನರನ್ನು ಕಳುಹಿಸುವ ಪದ್ಧತಿ ಇತ್ತು. ನಂತರ ಬರು ಬರುತ್ತಾ ತನ್ನ ಮನೆಯ ಒಬ್ಬ ಸದಸ್ಯನನ್ನೇ ಮಕ್ಕಳಿರುವ ಊರುಗಳಿಗೆ ಕಳುಹಿಸಲಾಗುತ್ತಿತ್ತು. ಅವರು ಬಂದ ಮೇಲೆಯೇ ಹೆಣವನ್ನು ಎತ್ತುತ್ತಾ ಇದ್ದದ್ದು. ಹೇಳಿಕಳುಹಿಸಿದ ಎಲ್ಲಾ ಸಂಬಂಧಿಕರು ಬಂದ ಮೇಲೆ ಮನೆಯವರ ಜೊತೆಗೆ ಹಟ್ಟಿಯ ಅಥವಾ ಹಳ್ಳಿಯ ಜನರೂ ಸೇರಿಕೊಳ್ಳುವರು. ಗಂಡಸರೆಲ್ಲ ಕಳ್ಳಿ ಕಟ್ಟಿಗೆ ತಂದು ಚಟ್ಟವನ್ನು ಕಟ್ಟುತ್ತಾರೆ. ಇದಕ್ಕೆ ಮುಂಚೆಯೇ ಮಾದಿಗ ಸಮುದಾಯದ ಜನರು ಹೋಗಿ ನಿಗದಿಯಾದ ಸ್ಥಳದಲ್ಲಿ ಗುಂಡಿಯನ್ನು ತೋಡುತ್ತಾರೆ. ಇತ್ತ ಚಟ್ಟವನ್ನು ಸಿದ್ದಪಡಿಸಿದ ಮೇಲೆ ಶವವನ್ನು ಸ್ನಾನ ಮಾಡಿಸಿ ಬಟ್ಟೆಯನ್ನು ತೊಡಿಸಿ ಹೂವುಗಳನ್ನು ಹಾಕಿ ಪೂಜಿಸುತ್ತಾರೆ. ಹೆಣ್ಣುಮಕ್ಕಳು ಸತ್ತರೆ ಮುತ್ತೈದೆ ಸಾವು ಎಂದು ಸ್ನಾನ ಮಾಡಿಸಿದ ತರುವಾಯ ಅವಳಿಗೆ ಹೊಸ ಸೀರೆ ಉಡಿಸಿ ಆಕೆಯ ಗಂಡನಿಂದ ಹೂವು ಮುಡಿಸಿ ಕುಂಕುಮ ಹಚ್ಚಿಸುತ್ತಾರೆ. ಹೆಂಡತಿಯ ಹೆಣದ ಜೊತೆ ಗಂಡನನ್ನು ಕೂರಿಸುತ್ತಾರೆ. ಶವಕ್ಕೆ ಎಲ್ಲರೂ ಪೂಜೆ ಸಲ್ಲಿಸಿದ ಮೇಲೆ ಚಟ್ಟಕ್ಕೆ ಕಂಬಳಿಯನ್ನು ಹಾಸಿ ಅದರ ಮೇಲೆ ಶವ ಇರಿಸಿ ಹೂವುಗಳನ್ನು ಹಾಕಿ ಊರಿನವರು ಹೆಣಹೊರಲು

ಸಿದ್ಧರಾಗುತ್ತಾರೆ. ಮನೆಯ ಮುಂದೆ ಬೆಂಕಿಯಲ್ಲಿ ಬೆಂದ ಕೂಳನ್ನು ಮಗ, ನೀರಿನ ಮಡಿಕೆಯನ್ನು ಮೊಮ್ಮಗ ಹಿಡಿದುಕೊಂಡು ರುದ್ರಭೂಮಿಗೆ ತೆರಳುತ್ತಾರೆ. ಕೆಲವರು ಸತ್ತರೆ ರುದ್ರಭೂಮಿಯಲ್ಲಿ ಮಣ್ಣು ಮಾಡುತ್ತಾರೆ. ಕೆಲವರು ತಮ್ಮ ತಮ್ಮ ಹೊಲಗಳಲ್ಲಿಯೇ ಹಾಕಿಕೊಳ್ಳುತ್ತಾರೆ. ಅದು ಅವರವರ ತೀರ್ಮಾನಕ್ಕೆ ಬಿಟ್ಟದ್ದು. ಮನೆಯವರೇ ಅದನ್ನು ತೀರ್ಮಾನಿಸುತ್ತಾರೆ.

**ಕೋಷ್ಟಕ - ೧೮**

**ಶವವನ್ನು ಹೂಳುವ ಸ್ಥಳ**

| - | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| - | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಸ್ಮಶಾನ | ೩೨ | ೨೧.೦೫ | ೧೩ | ೫೯.೦೯ | ೪೫ | ೨೫.೮೬ |
| ಜಮೀನು | ೧೨೦ | ೭೮.೯೫ | ೯ | ೪೦.೯೧ | ೧೨೯ | ೭೪.೧೫ |
| **ಒಟ್ಟು** | ೧೫೨ | ೧೦೦.೦೦ | ೨೨ | ೧೦೦.೦೦ | ೧೭೪ | ೧೦೦.೦೦ |

ಕೋಷ್ಟಕದ ಸಂಖ್ಯೆ ೧೮ ರಲ್ಲಿ ವ್ಯಕ್ತವಾಗುವ ಅಂಶವೆಂದರೆ ಶವವನ್ನು ಹೂಳುವ ಸ್ಥಳಕ್ಕೆ ಸಂಬಂಧಿಸಿದಂತೆ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕಿನ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅದರ ಅನ್ವಯ ಮೇಲಿನ ಕೋಷ್ಟಕ ತಿಳಿಸುವುದೇನಂದರೆ. ಕಾಡುಗೊಲ್ಲರು ತಮ್ಮ ಜಮೀನುಗಳಲ್ಲಿ ಹೂಳುವ ಪ್ರಮಾಣ ಶೇಕಡ ೭೮.೯೫ ರಷ್ಟು ಕಂಡುಬರುವುದು. ಮ್ಯಾಸಬೇಡರ ಹಟ್ಟಿಯಲ್ಲಿ ಜಮೀನಿನಲ್ಲಿ ಹೂಳುವ ಪ್ರಮಾಣ ಶೇಕಡ ೪೦.೯೧ ರಷ್ಟು ಕಂಡುಬರುವುದು. ಒಟ್ಟಾರೆ ಎರಡು ಹಟ್ಟಿಗಳಿಂದ ಜಮೀನಿನಲ್ಲಿ ಹೂಳುವವರ ಪ್ರಮಾಣ ಶೇಕಡ ೭೪.೧೫ ರಷ್ಟು ಕಂಡುಬರುವವು.

ಸ್ವಲ್ಪ ದೂರ ಬಂದ ಮೇಲೆ ಒಂದು ತಂಗಟೆ ಗಿಡದ ಹತ್ತಿರ ಚಟ್ಟವನ್ನು ಇರಿಸಿ ಕೂಳು ಹೊತ್ತ ಮಗ ಮತ್ತು ನೀರು ಹೊತ್ತ ಮೊಮ್ಮಗನನ್ನು ತಂಗಟೆ ಗಿಡ ಮತ್ತು ಚಟ್ಟವನ್ನು ಮೂರು ಸುತ್ತು ಸುತ್ತುವರು. ನಂತರ ಅದೇ ಗಿಡದ ಬುಡದಲ್ಲಿ ಕೂಳು ನೀರಿನ ಮಡಿಕೆ ಇರಿಸಿ ಹೆಣದ ಹಿಂದೆ ಹೋದವರೆಲ್ಲಾ ಒಂದು ಕಲ್ಲನ್ನು ತೆಗೆದುಕೊಂಡು ಆ ಮಡಿಕೆಯನ್ನು ಒಡೆದು ಹಾಕುವರು. ಅಲ್ಲಿಂದ ಮುಂದಕ್ಕೆ ಹೆಣವನ್ನು ಹೊತ್ತು ಸಂಬಂಧಿಕರು ಮುಂದೆ ನಡೆದರೆ ಕೂಳು ನೀರು ತೆಗೆದುಕೊಂಡ ಹೋದ ಮಗ ಮತ್ತು ಮೊಮ್ಮಗ ಚಟ್ಟವನ್ನು ಹೊರುವವರನ್ನು ಹಿಂತಿರುಗಿ ನೋಡದಂತೆ ವಾಪಾಸು ಬರುವರು. ಬೇಡರಲ್ಲಿ ಹಿಂದೆ ಇಷ್ಟು ಕಟ್ಟುನಿಟ್ಟಾದ ಪದ್ಧತಿ ಇರುತ್ತಿದ್ದು, ಇತ್ತೀಚೆಗೆ ಒಂದೊಂದೆ ಪದ್ಧತಿಗಳು ಕಡಿಮೆಯಾಗಿ ವ್ಯಕ್ತಿ ಸತ್ತ ನಂತರ ಎಲ್ಲರನ್ನು ಕರೆಯಿಸಿ ಸಾಧಾರಣವಾಗಿ ಪೂಜೆ ಪನಸ್ಕಾರಗಳನ್ನು ಮಾಡಿ ಚಟ್ಟ ಕಟ್ಟಿಕೊಂಡು ಅವರವರ ಹೊಲಗಳಿಗೆ ಅಥವಾ ರುದ್ರಭೂಮಿಗೆ ತೆಗೆದುಕೊಂಡು ಹೋಗಿ ಮಣ್ಣು ಮಾಡಿ ಬರುವುದನ್ನು ಕಾಣಬಹುದು.

ಮಣ್ಣು ಮಾಡಿ ಬರುವ ಹೊತ್ತಿಗೆ ಮನೆಯಲ್ಲಿ ಯಾರಾದರೂ ಉಳಿದಿದ್ದರೆ ಹಸುವಿನ ಸಗಣಿಯನ್ನು ತಂದು ಮನೆಯ ಮುಂದೆ ಇಟ್ಟು ಅದರೊಳಗೆ ಗರಿಕೆ ಹುಲ್ಲು ಇಡುವರು. ಮಣ್ಣು

ಮಾಡಿ ಹಿಂತಿರುಗಿ ಬಂದವರು ಆ ಗರಿಕೆಯನ್ನು ಕಾಲಿನ ಹೆಬ್ಬೆಟ್ಟಿನಿಂದ ಮುಟ್ಟಿಸಿಕೊಂಡು ಒಳಗೆ ಬರುವರು. ಒಳಗೆ ಬಂದು ಸತ್ತ ವ್ಯಕ್ತಿಯ ಬಳಗದವರಿಗೆ ವೀಳ್ಯ ಕೊಟ್ಟು ಹೋಗುವರು. ಇದು ಒಂದು ಕಡೆಯ ಪದ್ಧತಿಯಾದರೆ ಇನ್ನು ಕೆಲವು ಕಡೆ ಮಣ್ಣಿಗೆ ಹೋಗಿ ಬಂದ ಮೇಲೆ ಮನೆಯ ಹೊರಗಡೆಯೇ ಬಟ್ಟೆ ಸಹಿತ ಸ್ನಾನ ಮಾಡಿ ದೇವಸ್ಥಾನಕ್ಕೆ ಹೋಗಿ ಬಂದು ಸತ್ತ ವ್ಯಕ್ತಿಯ ಮನೆಯಲ್ಲಿ ಹಚ್ಚಿಟ್ಟ ದೀಪವನ್ನು ನೋಡಿಕೊಂಡು ಸತ್ತವರ ಸಂಬಂಧಿಕರಿಗೆ ವೀಳ್ಯ ಕೊಟ್ಟು ಬರುವುದುಂಟು.

ಸಮಾಧಿಯಾದ ಮೂರನೆ ದಿನ ಒಂದು ಕುರಿಯನ್ನು ಕೊಯ್ದು ಅಡುಗೆ ಮಾಡಲಾಗುತ್ತದೆ. ಸತ್ತವರ ಹೆಸರಿನಲ್ಲಿ ಎಡೆಯನ್ನೆತ್ತಿಟ್ಟು ಅದನ್ನು ಸ್ವಲ್ಪ ಜನ ತೆಗೆದುಕೊಂಡು ಸಮಾಧಿಯ ಹತ್ತಿರ ಬರುವರು. ಶವದ ತಲೆಯ ಹತ್ತಿರ ಎಡೆಯನ್ನಿಟ್ಟು ಸ್ವಲ್ಪ ದೂರದಲ್ಲಿ ಹೋಗಿ ನಿಂತು ಕಾಗೆ ಬಂದು ತಿನ್ನುವುದನ್ನು ಕಾಯುವರು. ಕಾಗೆ ಬಂದು ತಿಂದರೆ ಸರಿ, ಬಹಳ ಹೊತ್ತಾದರೂ ಕಾಗೆ ಬಾರದಿದ್ದರೆ ಅಲ್ಲಿಗೆ ಬಂದವರಲ್ಲಿ ಒಬ್ಬ ಹಟ್ಟಿಗೆ ವಾಪಾಸ್ಸಾಗಿ ಒಂದು ಹಸುವನ್ನು ಕರೆದುಕೊಂಡು ಬಂದು ಅದರ ಬಾಯಿಗೆ ಎಡೆ ಇಡುವನು. ಹಸು ರುಚಿ ನೋಡಿ ಬಿಟ್ಟ ಎಡೆಯನ್ನು ತಂದು ಎಲ್ಲರ ಎಲೆಗೂ ಸ್ವಲ್ಪ ಸ್ವಲ್ಪ ಹಾಕಲಾಗುವುದು. ಮೂರನೆ ದಿನ ಸತ್ತವನು ಗಂಡಸಾಗಿದ್ದರೆ ಅವನ ಹೆಂಡತಿನ್ನು ಸಮಾಧಿಯ ಬಳಿ ಕರೆದುಕೊಂಡು ಬಂದು ಅದರ ತಲೆಯ ಕಡೆ ಕೂರಿಸಿ ಬಳೆ ಒಡೆಸಿ, ಮೂಗತಿ ತೆಗೆಸಿ, ತಾಳಿಯನ್ನೂ ತೆಗೆಸುವರು.

ವ್ಯಕ್ತಿ ಸತ್ತು ಹನ್ನೆರಡನೆ ದಿನಕ್ಕೆ ಮೂರನೆಯ ದಿನದಂತೆ ಮಾಂಸದ ಅಡುಗೆ ಇರುವುದಿಲ್ಲ. ಸಿಹಿಯೂಟವಿರುತ್ತದೆ. ಮಣ್ಣಿಗೆ ಬಂದವರೆಲ್ಲರೂ ಈ ಸಮಾರಾಧನೆಗೆ ಕಡ್ಡಾಯವಾಗಿ ಬರುತ್ತಾರೆ. ಅವರ ಜೊತೆಗೆ ಇನ್ನುಳಿದ ಬಂಧು ಬಳಗದವರೆಲ್ಲರೂ ಬರುವರು. ತಂದೆಯನ್ನು ಕಳೆದುಕೊಂಡ ಮಗಳೆಂದು ವಸ್ತ್ರಗಳನ್ನು ಕೊಡುವರು. ಆ ದಿನ ಇಡೀ ಊರಿಗೆ ಊಟವಿರುತ್ತದೆ. ಅದರ ಜೊತೆಗೆ ಸತ್ತ ವ್ಯಕ್ತಿಗೆ ಇಷ್ಟವಾದ ಎಲ್ಲಾ ರೀತಿಯ ತಿನಿಸುಗಳು ವಸ್ತುಗಳನ್ನು ಆತನ ಗುಡ್ಡೆಯ ಹತ್ತಿರವಿಟ್ಟು ಪೂಜಿಸಲಾಗುತ್ತದೆ.

ಬೇಡರು ತಮ್ಮ ಸಮಾಧಿಗಳಿಗೆ ಗುಡ್ಡೆ ಎಂದು ಕರೆಯುತ್ತಾರೆ. ಇದಕ್ಕೆ ಕೃಷ್ಣಮೂರ್ತಿ ಹನೂರುರವರು ತಮ್ಮ ಮ್ಯಾಸಬೇಡರು ಎಂಬ ಕೃತಿಯಲ್ಲಿ ನಮೂದಿಸಿರುವಂತೆ, 'ವ್ಯಕ್ತಿ ಸತ್ತು ಹನ್ನೆರಡನೆಯ ದಿನದಂದು ಸತ್ತ ವ್ಯಕ್ತಿಯ ಕೂಳು ಹೊತ್ತ ಹಿರಿಯ ಮಗ, ನೀರು ಹೊತ್ತ ಮೊಮ್ಮಗ ಇಬ್ಬರೂ ಹೊರಟು ಹೆಣ ಹೊತ್ತುಕೊಂಡು ಹೋಗುವ ದಿನ ತಂಗಟೆಗಿಡದ ಬಳಿ ಎಲ್ಲರೂ ಕಲ್ಲು ಹಾಕಿದ ಜಾಗದಲ್ಲಿ ಆರಿಸಿದ ಒಂದು ಕಲ್ಲನ್ನು ತರುವರು. ಅದೇ ಕಲ್ಲನ್ನು ಮನೆಯೊಳಗೆ ತಂದಿರಿಸಿ ತೊಳೆದು ಅರಿಶಿನ ಕುಂಕುಮ ಇಟ್ಟು ಪೂಜಿಸಿ ನಂತರ ಆ ಕಲ್ಲನ್ನು ತೆಗೆದುಕೊಂಡು ತಮಟೆ ವಾದ್ಯ ಸಹಿತ ತಮ್ಮ ಪೂರ್ವಜರ ಕಾಲದ ಒಂದು ಪ್ರತ್ಯೇಕ ಸಮಾಧಿಯ ಬಳಿ ಬರುವರು. ಅದು ಹಟ್ಟಿಯಿಂದ ಸ್ವಲ್ಪವೇ ದೂರವಿರುತ್ತದೆ. ಬೇಡನಾಯಕರ ಒಂದು

ಕುಟುಂಬದಲ್ಲಿ ಯಾರೇ ತೀರಿಕೊಳ್ಳಲಿ ಅವರನ್ನು ಎಲ್ಲಿಯೇ ಸಮಾಧಿ ಮಾಡಲಿ, ಆವತ್ತಿನ ದಿನ ತಂಗಟೆಗಿಡದ ಬಳಿ ಹಾಕಿದ ಕಲ್ಲುಗಳಲ್ಲಿ ಒಂದನ್ನು ಹನ್ನೆರಡನೆಯ ದಿನ ತಂದು ಮತ್ತೊಂದು ಕಡೆ ಎಲ್ಲಿಯಾದರೂ ಇಡುವರು. ಹಾಗೆ ಕುಟುಂಬದಲ್ಲಿ ಹಿಂದಿನಿಂದಲೂ ತೀರಿಕೊಂಡವರೆಲ್ಲರ ನೆನೆಪಿನಲ್ಲಿ ಒಂದೊಂದು ಕಲ್ಲು ಅಲ್ಲಿ ಸೇರಿ ಒಂದು ಗುಡ್ಡೆಯಾಗಿರುತ್ತದೆ. ಅಂಥ ಗುಡ್ಡೆಯನ್ನು ತಮ್ಮ ಪೂರ್ವಜರ ಸಮಾಧಿ ಎಂದು ನಾಯಕ ಕುಟುಂಬದವರು ಕರೆದುಕೊಳ್ಳುವುದಿದೆ. ಅದಕ್ಕೆ ವಿಶೇಷ ದಿನಗಳಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ಮಹಾಲಯ ಅಮಾವಾಸ್ಯೆಯ ಸಂದರ್ಭದಲ್ಲಿ ಎಡೆಯಿಟ್ಟು ಪೂಜಿಸುವರು'.[೪]

ಹೀಗೆ ಆಚರಣೆ ಮತ್ತು ಸಂಪ್ರದಾಯಗಳಲ್ಲಿ ಮ್ಯಾಸಬೇಡರಿಗೂ ಮತ್ತು ಕಾಡುಗೊಲ್ಲರಿಗೂ ಭಿನ್ನತೆಯಿರುವುದನ್ನು ಕಾಣಬಹುದು. ಆದರೆ ಮ್ಯಾಸಬೇಡರಿಗಿಂತ ಕಾಡುಗೊಲ್ಲರಲ್ಲಿಯೇ ಬಹು ಕಟ್ಟುನಿಟ್ಟಿನ ಸಂಪ್ರದಾಯಗಳಿವೆ. ಮ್ಯಾಸ ಬೇಡರಲ್ಲಿ ಅಷ್ಟಾಗಿ ಇಲ್ಲ. ಜಾಗತೀಕರಣ, ಆಧುನಿಕ ಜೀವನ ಶೈಲಿ, ಆಧುನಿಕ ಶಿಕ್ಷಣದ ಪ್ರಭಾವವಿದ್ದರೂ ಈ ಜನಾಂಗದವರು ತಮ್ಮ ಕುಲದ ಆಚಾರ, ರೂಢಿ ಸಂಪ್ರದಾಯಗಳನ್ನು ಬಿಟ್ಟಿಲ್ಲ. ಅವುಗಳನ್ನೇ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ನಗರದಲ್ಲಿ ವಾಸಿಸುವ ಆಧುನೀಕರಣಕ್ಕೆ ಒಳಗಾದ ಕೆಲವರು ಸಂಪ್ರದಾಯಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಬದಲಾಯಿಸಿಕೊಂಡಿದ್ದರೆಯೇ ಹೊರತು ಅವುಗಳನ್ನು ನಿರಾಕರಿಸಿಲ್ಲ. ಆದರೆ ಗ್ರಾಮೀಣ ಪ್ರದೇಶಗಳ ಕಡೆ ಈಗಲೂ ಹಿರಿಯ ತಲೆಮಾರುಗಳು ತಮ್ಮ ಹಳೆಪದ್ಧತಿಗಳನ್ನು ಬಿಟ್ಟಿಲ್ಲ. ಕಾಡುಗೊಲ್ಲರಲ್ಲಿ ಹೆಣ್ಣು ಹೆರಿಗೆಯಾದರೆ ಮನೆಯಿಂದ ಸುಮಾರು ದೂರದಲ್ಲಿ ಒಂದು ಗುಡಿಸಿಲಿನಲ್ಲಿರಬೇಕಿತ್ತು. ಇದೇ ವಿಚಾರ ಮಾಧ್ಯಮದ ಮೂಲಕ ಬಹು ದೊಡ್ಡ ಚರ್ಚೆಯಾಗಿ ಸರ್ಕಾರವನ್ನೊಳಗೊಂಡಂತೆ ಅನೇಕ ಮಠಾಧೀಶರೆಲ್ಲರೂ ಈ ಬಗೆಗೆ ಮಾತನಾಡಿದ್ದುಂಟು. ಮಾನವೀಯತೆಯ ದೃಷ್ಟಿಯಿಂದ ಮತ್ತು ಹೆಣ್ಣಿನ ಹಾಗೂ ಹುಟ್ಟಿದ ಮಗುವಿನ ಆರೋಗ್ಯದ ಹಿತ ಕಾಯಲು ಈ ಪದ್ಧತಿಯನ್ನು ಕೈಬಿಡಬೇಕೆಂದಾಯಿತು.

ಇತ್ತೀಚಿಗೆ ಈ ಜನಾಂಗದ ಹಳೇ ತಲೆಗಳು ಕಳಚುತ್ತಿರುವ ಕಾರಣ ಆಚರಣೆ ಸಂಪ್ರದಾಯಗಳು ಕೂಡ ತಮ್ಮ ಅಸ್ತಿತ್ವ ಮತ್ತು ಮೂಲ ಸ್ವರೂಪವನ್ನು ಕಳೆದುಕೊಂಡು ಹೊಸ ರೂಪವನ್ನು ಪಡೆದುಕೊಳ್ಳುತ್ತಿವೆ ಎಂದರೆ ತಪ್ಪಾಗಲಾರದು.

**ಸಂಪ್ರದಾಯಿಕ ಆಚರಣೆಗಳು:**

**ಕೋಷ್ಟಕ–೧೯**

**ಇಂದಿನ ಯುವಕರು ಸಂಪ್ರದಾಯವನ್ನು ಕಟ್ಟುನಿಟ್ಟಾಗಿ ಪಾಲಿಸುವುದು**

| – | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಹೌದು | ೯೯ | ೬೫.೧೩ | ೧೩ | ೫೯.೦೯ | ೧೧೨ | ೬೪.೩೭ |
| ಇಲ್ಲ | ೫೩ | ೩೪.೮೭ | ೯ | ೪೦.೯೧ | ೬೨ | ೩೫.೬೩ |
| ಒಟ್ಟು | ೧೫೨ | ೧೦೦.೦೦ | ೨೨ | ೧೦೦.೦೦ | ೧೭೪ | ೧೦೦.೦೦ |

ಕಾಡುಗೊಲ್ಲರು ಮತ್ತು ಮ್ಯಾಸಬೇಡರ ಸಮುದಾಯಗಳಲ್ಲಿ ಕೆಲವು ವಿಶಿಷ್ಟ ರೀತಿಯ ಆಚರಣೆಗಳಿವೆ. ಆ ಆಚರಣೆಗಳು ಅವರ ಮೂಲವನ್ನು ಕುರಿತಂತವು. ಅಂತಹ ಕೆಲವು ವಿಶಿಷ್ಟ ಆಚರಣೆಗಳನ್ನು ಗಮನಿಸುವುದಾದರೆ, ಇಂದಿನ ಯುವಕರು ಸಂಪ್ರದಾಯವನ್ನು ಕಟ್ಟುನಿಟ್ಟಾಗಿ ಪಾಲಿಸುವುದು, ಈ ಹಟ್ಟಿಗಳಲ್ಲಿ ಕಂಡುಬರುತ್ತದೆ. ಗೊಲ್ಲರ ಹಟ್ಟಿಗಳಲ್ಲಿ ಕಟ್ಟುನಿಟ್ಟಾಗಿ ಆಚರಿಸುವುದರ ಪ್ರಮಾಣ ಶೇಕಡ ೬೫.೧೩ ರಷ್ಟು ಕಂಡುಬಂದರೆ ಮ್ಯಾಸಬೇಡರಲ್ಲಿ ಕಟ್ಟುನಿಟ್ಟಾಗಿ ಆಚರಿಸುವುದರ ಪ್ರಮಾಣ ಶೇಕಡ ೫೯.೦೯ ರಷ್ಟು ಕಂಡುಬರುವುದು. ಒಟ್ಟಾರೆ ಎರಡು ಹಟ್ಟಿಗಳಿಂದ ಕಟ್ಟು ನಿಟ್ಟಾಗಿ ಆಚರಿಸುವುದರ ಪ್ರಮಾಣ ಶೇಕಡ ೬೪.೩೭ ರಷ್ಟು ಕಂಡುಬರುವುದು.

**ಕಾಡುಗೊಲ್ಲರ ಆಚರಣೆಗಳು:**

**ಜೆನ್ನಿಗೆ ಕುರಿ:** ಕಾಡುಗೊಲ್ಲರು ಒಂದು ನಿರ್ದಿಷ್ಟವಾದ ಉದ್ದೇಶಕ್ಕಾಗಿ ಮೀಸಲಾಗಿ ಬಿಟ್ಟಿರುವ ಕುರಿಗೆ ಜೆನ್ನಿಗೆ ಕುರಿ ಎಂದು ಕರೆಯುತ್ತಾರೆ. ಈ ಪದ್ಧತಿ ಕಾಡುಗೊಲ್ಲರಲ್ಲಿ ಮಾತ್ರ ಉಂಟು. ಜೆನ್ನಿಗೆ ಕುರಿಯ ಹಾಲು ಇವರಲ್ಲಿ ವಿಶಿಷ್ಟವಾದ ಸ್ಥಾನ ಪಡೆದುಕೊಂಡಿದೆ. ಕಾಡುಗೊಲ್ಲರು ಈ ಹಾಲನ್ನು ಪವಿತ್ರವೆಂದು ಭಾವಿಸುತ್ತಾರೆ. ಹೆಂಗಸು ಮಗುವನ್ನು ಹೆತ್ತು ಮೂರು ತಿಂಗಳ ಕಾಲ ಹಟ್ಟಿಯಿಂದ ಹೊರ ಇದ್ದು ನಂತರ ಹಟ್ಟಿಯ ಒಳಕ್ಕೆ ಬರುವಾಗ ಜೆನ್ನಿಗೆ ಹಾಲನ್ನು ತೀರ್ಥದಂತೆ ಕುಡಿಸುತ್ತಾರೆ. ಇಲ್ಲಿ ಕುಡಿಸುವ ಜೆನ್ನಿಗೆ ಹೊರಜೆನ್ನಿಗೆ ಎಂದು ಕರೆಯುತ್ತಾರೆ. ಅನಂತರ ದೇವಸ್ಥಾನವನ್ನು ಸುತ್ತಿ ಕಳ್ಳಿಯ ಬೇಲಿಯನ್ನು ದಾಟಿ ಹಟ್ಟಿಯ ಬಾಗಿಲಿಗೆ ಬರುತ್ತಾರೆ. ಆಗ ಮತ್ತೊಂದು ಸಲ ಬಾಣಂತಿಗೆ ಮತ್ತು ಮಗುವಿಗೆ ಜೆನ್ನಿಗೆ ಹಾಲು ಕುಡಿಸುತ್ತಾರೆ. ಇದನ್ನು ಒಳಜೆನ್ನಿಗೆ ಎನ್ನುತ್ತಾರೆ. ಇದಾದ ನಂತರವೇ ಬಾಣಂತಿಗೆ ಸೂತಕ ಹೋಗಿ ಅವರು ಪರಿಶುದ್ಧರಾದರೆಂದು ನಂಬುತ್ತಾರೆ. ಹೀಗೆ ಈ ಕುರಿಯ ಹಾಲನ್ನು ಜೆನ್ನಿಗೆ ಹಾಲು ಎಂದು ಕರೆಯುತ್ತಾರೆ. ಈ ಇಂತಹ ಸಂದರ್ಭದಲ್ಲಿ ಮಾತ್ರ ಕುರಿಯ ಹಾಲು ಬಳಕೆಯಾಗುತ್ತದೆ.

ಹಟ್ಟಿಯಲ್ಲಿರುವ ಕುರಿಗಳಲ್ಲಿ ಯಾವುದನ್ನು ಜೆನ್ನಿಗೆ ಕುರಿಯನ್ನಾಗಿ ಆರಿಸಬೇಕೆಂದು ಕಾಡುಗೊಲ್ಲರು ದೇವರನ್ನು ಕೇಳುತ್ತಾರೆ. ದೇವರು ಹೂವಿನ ಪ್ರಸಾದದ ಮೂಲಕ ಅಥವಾ ಗಣೆಯ ಮೂಲಕ ಯಾವ ಕುರಿಯನ್ನು ಸೂಚಿಸುವುದೋ ಅದನ್ನೇ ಜೆನ್ನಿಗೆ ಕುರಿಯಾಗಿ ಆರಿಸುತ್ತಾರೆ. ಈ ಜೆನ್ನಿಗೆ ಕುರಿ ಹೆಣ್ಣು ಕುರಿಯಾಗಿರಬೇಕು. ಅದರ ಬಲಗಿವಿಯನ್ನು ಉದ್ದುದ್ದಕ್ಕೆ ಮೂರು ನಾಮಗಳಂತೆ ಸೀಳುತ್ತಾರೆ. ಈ ಕುರಿಯನ್ನು ಪ್ರತ್ಯೇಕವಾಗಿ ಸಾಕದೆ ಉಳಿದ ಕುರಿಗಳೊಡನೆ ಸಾಕುತ್ತಾರೆ. ಇದು ಎಲ್ಲಿ ಬೇಕಾದರೂ ಮೇಯಬಹುದು. ಅದನ್ನು ದಂಡಿಸುವಂತಿಲ್ಲ. ಜೆನ್ನಿಗೆ ಕುರಿಗೆ ಹೆಣ್ಣುಕುರಿ ಹುಟ್ಟಿದರೆ ಅದನ್ನು ಜೆನ್ನಿಗೆ ಕುರಿಯನ್ನಾಗಿ ಮಾಡಿ ಗಂಡು ಕುರಿ ಹುಟ್ಟಿದರೆ ಅದನ್ನು ಮಾರಿ ಅದರಿಂದ ಬಂದ ಹಣವನ್ನು ದೇವರ ಹೆಸರಿನಲ್ಲಿ ಹಾಗೇಯೇ ಇಟ್ಟು ದೇವರಿಗೆ ಕಾಣಿಕೆಯಾಗಿ ಅರ್ಪಿಸುತ್ತಾರೆ.

ಜೆನ್ನಿಗೆ ಕುರಿ ಸತ್ತಾಗ ಅದರ ಮಾಂಸವನ್ನು ಕಾಡುಗೊಲ್ಲರು ತಿನ್ನುತ್ತಾರೆ. ಆದರೆ ಅದರ ಯಾವ ಒಂದು ಭಾಗವೂ ಕೂಡ ನಾಯಿ ನರಿಗಳ ಪಾಲಾಗದಂತೆ ಎಚ್ಚರವಹಿಸುತ್ತಾರೆ. ಆಕಸ್ಮಾತ್ ಜೆನ್ನಿಗೆ ಕುರಿಯನ್ನು ತಿನ್ನದೇ ಹಾಗೆಯೇ ಬಿಡುವ ಪರಿಸ್ಥಿತಿ ಬಂದರೆ ಇದಕ್ಕೆ ಒಂದು ದೊಡ್ಡ ಕಲ್ಲನ್ನು ಕಟ್ಟಿ ಕೆರೆಯೊಳಕ್ಕೋ ಬಾವಿಯೊಳಕ್ಕೊ ಮುಳುಗಿಸುತ್ತಾರೆ. ಕಾಡುಗೊಲ್ಲರು ಈ ಕುರಿಯನ್ನು ತಿನ್ನುವ ಮೊದಲು ತಲೆಯನ್ನು ಕತ್ತರಿಸಿ ಒಂದು ಆಳವಾದ ಗುಂಡಿಗೆ ಹಾಕಿ ಮುಚ್ಚಿ ಅನಂತರ ಉಳಿದ ಭಾಗವನ್ನು ತಿನ್ನುತ್ತಾರೆ. ಅದರ ಎಂಜಲನ್ನು ಬೀದಿಗೆ ಎಸೆಯದೇ ತಿಪ್ಪೆಯಲ್ಲಿ ಒಂದು ಗುಂಡಿಯನ್ನು ತೋಡಿ ಅದರೊಳಕ್ಕೆ ಹಾಕಿ ಮುಚ್ಚುತ್ತಾರೆ. ಅದರ ಮೇಲೆ ಗುರುತಿಗೆಂದು ಮುಳ್ಳಿನ ಕೊನೆಯನ್ನು ನೆಡುತ್ತಾರೆ.

**ಪಟ್ಟದ ಬಸವ:**

ದೇವರಿಗೆ ಬಸವನನ್ನು ಬಿಡುವ ಸಂಪ್ರದಾಯ ಕಾಡುಗೊಲ್ಲರಿಗೆ ವಿಶಿಷ್ಟವಾದುದೇನು ಅಲ್ಲ. ಕರ್ನಾಟಕದಲ್ಲೆಲ್ಲಾ ಈ ಸಂಪ್ರದಾಯ ಪ್ರಚಲಿತವಾಗಿದೆ. ಕಾಡುಗೊಲ್ಲರಲ್ಲಿ ಎತ್ತಪ್ಪ ಮತ್ತು ಜುಂಜಪ್ಪ ದೇವರಿಗೆ ಬಸವನನ್ನು ಬಿಡುತ್ತಾರೆ. ಎತ್ತಪ್ಪ ದೇವರ ಬಸವನಿಗಿಂತ ಜುಂಜಪ್ಪ ದೇವರ ಬಸವ ಹೆಚ್ಚು ಪ್ರಸಿದ್ಧವಾಗಿದೆ. ಬಡಮ್ಮೈಲ ಜುಂಜಪ್ಪನಿಗೆ ಅತ್ಯಂತ ಆತ್ಮೀಯವಾದ ಬಸವ. ಜುಂಜಪ್ಪ ಇಲ್ಲದಿದ್ದಾಗ ಅವನ ದನಗಳ ಯೋಗಕ್ಷೇಮವನ್ನು ನೋಡಿಕೊಳ್ಳುವ ಜವಾಬ್ದಾರಿ ಬಡಮ್ಮೈಲನಿಗೆ ಸೇರಿತ್ತು. ಜುಂಜಪ್ಪನಿಗೆ ಬಿಟ್ಟಿರುವ ಪಟ್ಟದ ಬಸವಗಳು ಪುರಾಣದ ಬಡಮ್ಮೈಲನ ಸಂಕೇತ ಎಂದು ಭಾವಿಸಬಹುದು.

ಯಾರು ಬೇಕಾದರೂ ಜುಂಜಪ್ಪನಿಗೆ ಬಸವನನ್ನು ಬಿಡುವಂತಿಲ್ಲ. ತಮಗೆ ಏನಾದರೂ ತೊಂದರೆಯಾದಾಗ ಅದು ನಿವಾರಣೆಯಾದರೆ ಅದರ ಪ್ರಯುಕ್ತ ಹರಕೆಯ ರೂಪದಲ್ಲಿ ಬಸವನನ್ನು ಬಿಡುವಂತಿಲ್ಲ. ಜುಂಜಪ್ಪ ಯಾರಾದರೂ ಒಬ್ಬ ಕಾಡುಗೊಲ್ಲನ ಕನಸಿನಲ್ಲಿ ಬಂದು ಅವನ ಬಳಿ ಇರುವ ಹೋರಿಕರುವನ್ನು ತನಗೆ ಬಸವನಾಗಿ ಬಿಡುವಂತೆ ಸೂಚಿಸುತ್ತಾನೆ. ಅದರಂತೆ ಕಾಡುಗೊಲ್ಲರು

ಆ ಕರುವನ್ನು ಜುಂಜಪ್ಪ ದೇವರಿಗೆ ಒಪ್ಪಿಸುತ್ತಾರೆ. ಜುಂಜಪ್ಪ ಕನಸಿನಲ್ಲಿ ಕಾಣಿಸಿಕೊಂಡು ಹೇಳಿದ ನಂತರವೂ ಆ ವ್ಯಕ್ತಿ ಬಸವನನ್ನು ಬಿಡದಿದ್ದರೆ ಜುಂಜಪ್ಪ ಹಾವಿನ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಅದನ್ನೂ ಮೀರಿದರೆ ಇನ್ನು ಹೆಚ್ಚಿನ ತೊಂದರೆಗಳನ್ನು ಅನುಭವಿಸುತ್ತಾರೆ. ಎಂಬುದು ಗೊಲ್ಲರ ನಂಬಿಕೆ.

ಜುಂಜಪ್ಪನಿಗೆ ಬಿಟ್ಟ ಹೋರಿಕರುವು ಪಟ್ಟದ ಬಸವ ಆಗಬೇಕಾದರೆ ಅದಕ್ಕೆ ವಿಧಿಪೂರ್ವಕವಾಗಿ ಸಂಸ್ಕಾರವಾಗಬೇಕು. ಜುಂಜಪ್ಪನ ದೇವಸ್ಥಾನದ ಬಳಿಗೆ ಹೋರಿಕರುವನ್ನು ಕರೆದುಕೊಂಡು ಹೋಗಿ ಅದರ ಮೈ ತೊಳೆಯಬೇಕು. ದೇವರಿಗೆ ಐದು ರೂಪಾಯಿ ಕಾಣಿಕೆ ಕೊಡಬೇಕು. ಅನಂತರ ಜುಂಜಪ್ಪನ ಪೂಜಾರಿ ಶ್ರೀಗಂಧದ ಚಕ್ಕೆಯಿಂದ ಬೆಂಕಿಯನ್ನು ಮಾಡಿ, ಅದರಲ್ಲಿ ಬೇವಿನ ಕಡ್ಡಿಯನ್ನು ಕಾಯಿಸಿ ಅದರಿಂದ ಆ ಕರುವಿನ ನಾಲಿಗೆಯನ್ನು ಸುಡುತ್ತಾನೆ. ಅನಂತರ ಅದೇ ಬೇವಿನ ಕಡ್ಡಿಯಿಂದ ಆ ಕರುವಿನ ತೊಡೆಯ ಹೊರಭಾಗಕ್ಕೆ ಮೂರು ಚುಟಿಕೆ ಹಾಕುತ್ತಾನೆ. ದೇವರ ಮೇಲಿನ ಒಂದು ಹೂವಿನ ಹಾರವನ್ನು ಅದರ ಕೊರಳಿಗೆ ಹಾಕುತ್ತಾರೆ. ನಂತರ ಆ ಕರುವಿನ ಮೇಲೆ ತೀರ್ಥ ಹಾಕಿದರೆ ಅದು ಪಟ್ಟದ ಬಸವನಾಗುತ್ತದೆ. ಆ ಕರುವನ್ನು ತಂದಿದ್ದ ವ್ಯಕ್ತಿ ಅದನ್ನು ಅಲ್ಲಿಯೇ ಬಿಟ್ಟು ಹೋಗುತ್ತಾನೆ. ಅಂದಿನಿಂದ ಅದು ಎಲ್ಲಿ ಬೇಕಾದರೂ ಮೇಯಬಹುದು. ಅದನ್ನು ಯಾರೂ ಅಡ್ಡಿಪಡಿಸುವಂತಿಲ್ಲ.

ಈ ಬಸವನನ್ನು ದೇವರ ರೂಪವೆಂದೇ ಗೊಲ್ಲರು ನಂಬಿದ್ದಾರೆ. ಅದನ್ನು ತಮ್ಮ ಅನೇಕ ಕಷ್ಟಗಳಿಗೆ ಶಾಸ್ತ್ರವನ್ನು ಕೇಳುತ್ತಾರೆ. ಮಕ್ಕಳಾಗದ ಹೆಣ್ಣುಮಕ್ಕಳನ್ನು ಈ ಬಸವ ದಾಟಿ ಹೋದರೆ ಮಕ್ಕಳಾಗುತ್ತವೆ ಎಂಬ ನಂಬಿಕೆಯಿದೆ. ಹಾಗೇ ಬಾವಿಯನ್ನು ತೆಗೆಯುವ ಜಾಗವನ್ನು ಗೊತ್ತುಮಾಡಲು ಬಸವನನ್ನು ಕರೆದುಕೊಂಡು ಹೋಗುತ್ತಾರೆ. ಅದು ಒಂದು ಜಾಗದಲ್ಲಿ ಕಾಲು ಕೆರೆದು ಗಂಜಲ ಹುಯ್ದು ಅಲ್ಲಿ ಮಲಗುತ್ತದೆ. ಅದು ಮಲಗಿದ ಜಾಗದಲ್ಲಿ ನೀರು ಬೀಳುವುದೆಂದು ಭಾವಿಸಿ ಅಲ್ಲಿಯೇ ಬಾವಿ ಕೊರೆಯಿಸುತ್ತಾರೆ. ಹೀಗೆ ಪಟ್ಟ ಕಟ್ಟಿದ ಬಸವನಿಗೆ ಅನುಭವಸ್ಥರಿಂದ ಬೀಜವನ್ನು ಒಳಕ್ಕೆ ತಳ್ಳಿಸುತ್ತಾರೆ. ಬಸವನ ಅಂಗಾಂಗಗಳು ಊನವಾಗಿರಬಾರದು. ಹಾಗೇನಾದರೂ ಊನವಾದರೇ ಅದು ಪಟ್ಟದ ಸ್ಥಾನವನ್ನು ಕಳೆದುಕೊಂಡು ಸಾಮಾನ್ಯ ಬಸವನಾಗಿ ಉಳಿಯುತ್ತದೆ. ಪಟ್ಟದ ಬಸವ ಸತ್ತರೆ ಅದನ್ನು ವಾದ್ಯ ಸಮೇತ ಮೆರವಣಿಗೆ ಮಾಡಿಕೊಂಡು ಹೋಗಿ ಸಮಾಧಿ ಮಾಡಿ ಬರುತ್ತಾರೆ. ಆ ಸಮಾಧಿಯನ್ನು ಪವಿತ್ರವಾದ ಜಾಗವೆಂದು ಪೂಜಿಸುತ್ತಾರೆ.

**ನವಣೆ ಬತ ಮತ್ತು ಹುರುಳಿ ಬತ:**

ವ್ರತಕ್ಕೆ ಸಮನಾಗಿ ಬತ ಎಂಬ ಪದವನ್ನು ಇಲ್ಲಿ ಬಳಸಲಾಗಿದೆ. ಈ ಎರಡು ಬತಗಳನ್ನು ಆಚರಿಸುವವರು ತಾಳಮಟ್ಟಿ ಕಟ್ಟೆಮನೆಗೆ ಸೇರಿದ ಬೆಡಗುಗಳ ಗೊಲ್ಲರು ಮಾತ್ರ, ಕರೇಓಬೇನಹಳ್ಳಿ, ರಾಮನಹಳ್ಳಿ ಕಟ್ಟೆಮನೆಗಳಿಗೆ ಸೇರಿದ ಗೊಲ್ಲರು ಈ ಬತವನ್ನು ಆಚರಿಸುವುದಿಲ್ಲ. ಈ ವ್ರತದ ಪ್ರಕಾರ ವರ್ಷಕ್ಕೊಂದು ಬಾರಿ ಶಿವರಾತ್ರಿ ಹಬ್ಬದಲ್ಲಿ ನಡೆಯುವ ಕಾಳಿನ ಹಬ್ಬದಲ್ಲಿ ಬೇಯಿಸಿದ

ಹುರುಳಿಯನ್ನು ಮತ್ತು ನವಣೆಯನ್ನು ಪ್ರಸಾದವೆಂದು ಸ್ವೀಕರಿಸುವರು. ಈ ಸಂದರ್ಭವನ್ನು ಬಿಟ್ಟರೆ ಈ ಕಟ್ಟೆಮನೆಯವರು ಎರಡು ಧಾನ್ಯಗಳನ್ನು ಬಳಸುವುದಿಲ್ಲ. ಅಷ್ಟೇ ಅಲ್ಲದೇ ಕೈಯಿಂದ ಮುಟ್ಟುವುದೂ ಕೂಡ ಇಲ್ಲ. ಇದನ್ನು ನವಣೆ ಬತ ಮತ್ತು ಹುರುಳಿ ಬತ ಎಂದು ಕರೆಯುತ್ತಾರೆ.

**ಹಾಲು ಮೀಸಲು:**

ಎಲ್ಲ ಬೆಡಗಿನ ಕಾಡುಗೊಲ್ಲರು ಹಸು, ಕುರಿ, ಮೇಕೆ ಇವುಗಳಿಂದ ಪ್ರತ್ಯೇಕವಾಗಿ ಹಾಲು ಕರೆದು ಹೆಪ್ಪು ಹಾಕಿ ದೇವರಿಗೆ ಅರ್ಪಿಸುತ್ತಾರೆ. ಇದನ್ನು ಹಟ್ಟಿಯಲ್ಲಿ ಎಲ್ಲರೂ ಮಾಡದೇ ಒಬ್ಬ ವ್ಯಕ್ತಿಗೆ ಒಪ್ಪಿಸುತ್ತಾರೆ. ಅವನು ಸ್ನಾನ ಮಾಡಿ, ಕರಿಯ ಕಂಬಳಿಯನ್ನು ಹೊದ್ದು, ಯಾರೊಡನೆಯೂ ಮಾತನಾಡದಂತೆ ಹಾಲು ಕರೆಯಬೇಕು. ಹೀಗೆ ಮಡಿಯಿಂದ ಕರೆದ ಹಾಲನ್ನು ತಂದು ದೇವಸ್ಥಾನದ ಪೌಳಿಯಲ್ಲಿರುವ ವಾರದ ಮನೆಯಲ್ಲಿ ಇಟ್ಟಿರುವ ಹಂಡೆಯ ಗಾತ್ರದ ಮಡಿಕೆಗೆ ಸುರಿಯುತ್ತಾರೆ. ಈ ಎಲ್ಲಾ ಹಾಲನ್ನು ಕಾಯಿಸುವ ಜವಾಬ್ದಾರಿಯನ್ನು ಒಬ್ಬರಿಗೆ ನೀಡಿರುತ್ತಾರೆ. ಅವರು ಸಹ ಸ್ನಾನ ಮಾಡಿ ಹಾಲು ಕಾಯಿಸಿ ಹೆಪ್ಪು ಹಾಕಬೇಕು. (ಪ್ರತಿಯೊಂದು ಹಟ್ಟಿಯಲ್ಲಿಯೂ ಈ ರೀತಿಯ ಮೀಸಲು ಹಾಲನ್ನು ಸಂಗ್ರಹಿಸಿ ಕಾಯಿಸಿ ಹೆಪ್ಪುಹಾಕಲು ದೇವಸ್ಥಾನದ ಪಕ್ಕದಲ್ಲಿ ಒಂದು ಗುಡಿಸಲನ್ನು ಕಟ್ಟಿರುತ್ತಾರೆ.) ಮೊಸರಾದ ಮೇಲೆ ಬೆಣ್ಣೆ ತೆಗೆದು ಕಾಯಿಸಿ ತುಪ್ಪ ತೆಗೆಯುತ್ತಾರೆ. ಮೊಸರು ತೆಗೆದು ಉಳಿದ ಮಜ್ಜಿಗೆಯನ್ನು ಊರಿನ ಎಲ್ಲಾ ಮನೆಗಳಿಗೂ ಹಂಚುತ್ತಾರೆ. ತುಪ್ಪವನ್ನು ಮಾತ್ರ ಸಂಗ್ರಹಿಸಿಕೊಂಡು ದೇವರ ದೀಪಕ್ಕೆ ಮಾತ್ರ ಮೀಸಲಾಗಿಸಲಾಗುತ್ತದೆ.

**ಪೂಜಾ ವಿಧಾನ:**

ಕಾಡುಗೊಲ್ಲರಿಗೆ ದನಗಳ ಗೂಡು, ದೇವರ ಗುಬ್ಬ ಪವಿತ್ರವಾದ ಸ್ಥಳಗಳು. ದನಗಳನ್ನು ಮತ್ತು ದನಗಳು ವಾಸಿಸುವ ಸ್ಥಳಗಳನ್ನು ಪವಿತ್ರವೆಂದು ಪೂಜಿಸುತ್ತಾರೆ. ಹಾಗೆಯೇ ಬೇವಿನ ಮರ, ಸುರಹೊನ್ನೆಮರ, ತುಗ್ಗಲಿಮರವನ್ನು ಪೂಜಿಸುತ್ತಾರೆ. ಹುಣಸೆ ಮರವನ್ನು ಕಡಿಯುವುದಿಲ್ಲ. ಹಾಲು ಹೊಯ್ದು ಪೂಜಿಸುತ್ತಾರೆ. ಜೊತೆಗೆ ಜಾತ್ರೆಗಳಲ್ಲಿ ಗಂಗಾ ಪೂಜೆಯನ್ನು ಮಾಡುತ್ತಾರೆ.

**ಕಾಣಿಕೆ:**

ಜುಂಜಪ್ಪನ ಭಕ್ತರಾದ ದಾಸಯ್ಯಗಳು ಮನೆ ಮನೆಗೆ ಬರುವುದುಂಟು. ಕಾಡುಗೊಲ್ಲರಷ್ಟೇ ಅಲ್ಲದೇ ಇತರ ಜಾತಿಯ ಜನಗಳು ಕೂಡ ತಮ್ಮ ಮನೆಗಳಲ್ಲಿ ಹಾವು, ಚೇಳು, ಮಂಡರಗಪ್ಪೆಗಳು ಹೆಚ್ಚಾದಾಗ ಜುಂಜಪ್ಪನ ಹೆಸರು ಹೇಳಿ ನಾಲ್ಕಾಣೆಯನ್ನೋ, ಎಂಟಾಣೆಯನ್ನೋ ಹರಕೆ ಕಟ್ಟಿಕೊಳ್ಳುತ್ತಾರೆ. ಜುಂಜಪ್ಪನ ದಾಸಯ್ಯಗಳು ಊರಿಗೆ ಬಂದಾಗ ಅವರು ಹಿಡಿದಿದ್ದ ಗರುಡಗಂಬದ ದೀಪದ ಎಣ್ಣೆಯ ಒಳಕ್ಕೆ ಆ ಕಾಣಿಕೆಯ ದುಡ್ಡನ್ನು ಹಾಕುತ್ತಾರೆ. ದಾಸಯ್ಯನವರು ಊರಿಗೆ ಬಾರದ ಪಕ್ಷದಲ್ಲಿ ಹರಕೆ ಕಟ್ಟಿದ ಜನ ಜುಂಜಪ್ಪನ ಜಾತ್ರೆಗೆ ಹೋಗಿ ಹರಕೆ ತೀರಿಸುತ್ತಾರೆ. ಈ ಕಾರಣಕ್ಕಾಗಿಯೇ ಜುಂಜಪ್ಪನ ಭಕ್ತರಾದ ದಾಸಯ್ಯಗಳನ್ನು ಕಾಣಿಕೆಯವರು ಎಂದು ಕರೆಯುವುದುಂಟು.

**ಎಡೆ ಹಾಕುವುದು:**

ಕಾಡುಗೊಲ್ಲರು ಗೌರಸಮುದ್ರ ಮಾರಮ್ಮ ಮತ್ತು ಬೇವಿನಹಳ್ಳಿ ಕರಿಯಮ್ಮ ಮೊದಲಾದ ದೇವತೆಗಳಿಗೆ ಮೊಸರನ್ನ ಎಡೆ ಮಾಡುತ್ತಾರೆ. ಅದರ ಜೊತೆಗೆ ಮಾಂಸವನ್ನು ಸಹ ಎಡೆಹಾಕುವ ಪದ್ಧತಿ ಇದೆ. ಆದರೆ ಎತ್ತಪ್ಪ, ಜುಂಜಪ್ಪ, ಕಾಟಮದೇವರು, ಕೇತೇದೇವರುಗಳಿಗೆ ಪ್ರಾಣಿಗಳನ್ನು ಬಲಿಕೊಡುವುದಿಲ್ಲ ಮತ್ತು ಮಾಂಸಹಾರವನ್ನು ಎಡೆಹಾಕುವುದಿಲ್ಲ. ಸಸ್ಯಾಹಾರವನ್ನು ಮಾತ್ರ ಎಡೆ ಹಾಕುತ್ತಾರೆ. ಆದರೆ ಪಾತೇದೇವರಿಗೆ ಮಾತ್ರ ಅಚ್ಚ ಕಪ್ಪು ಹೋತವನ್ನು ಗಾವು ಸಿಗಿಯುತ್ತಾರೆ. ಮಾಂಸಾಹಾರವನ್ನು ನೈವೇದ್ಯ ಮಾಡುತ್ತಾರೆ. ಬೇಡರಹಳ್ಳಿ ರಂಗಪ್ಪ, ನಂದಿಹಳ್ಳಿ ತಿಮ್ಮಪ್ಪ ಮೊದಲಾದ ದೇವರುಗಳಿಗೆ ಬೇಯಿಸಿದ ಪದಾರ್ಥವನ್ನು ಎಡೆ ಹಿಡಿಯುತ್ತಾರೆ.

**ಮ್ಯಾಸಬೇಡರ ಆಚರಣೆಗಳು:**

**ಕಾಸು ಮೀಸಲು:** ಕಾಸು ಎಂದರೆ ದುಡ್ಡು. ಅದು ಹಿಂದೆ ನೋಟಿನ ರೂಪದ್ದಾಗಿರದೇ ನಾಣ್ಯದ ರೂಪದ್ದಾಗಿತ್ತು. ಆದರೆ ಈಗ ನಾಣ್ಯ ನೋಟು ಎರಡಲ್ಲಿ ಯಾವುದಾದರೂ ಸರಿ ಅದು ಕಾಸಾಗಿರಬೇಕು. ಅದನ್ನು ಎಲೆ ಅಡಿಕೆ ಜೊತೆ ಇಟ್ಟು ದೇವರಿಗೆ ಕೊಡುವುದು. ಅದು ಪೂಜಾರಿಗಳಿಗೆ, ದಾಸಯ್ಯಗಳಿಗೆ ಸಲ್ಲುತ್ತದೆ. ಮೀಸಲು ಎಂದರೆ ಬೆಣ್ಣೆ ಮೀಸಲು. ಒಲೆ, ಪಾತ್ರೆ ಎಲ್ಲವನ್ನು ಸ್ವಚ್ಛಮಾಡಿಕೊಂಡು ಬಾಯಿಗೆ ಬಟ್ಟೆ ಕಟ್ಟಿಕೊಂಡು ಹಾಲನ್ನು ಕರೆದು ಕಾಯಿಸಿ ಎಪ್ಪು ಹಾಕಿ ಅದರಿಂದ ತೆಗೆದ ಬೆಣ್ಣೆಯನ್ನು ದೇವರಿಗೆ ಮೀಸಲು ಎಂದು ಕೊಡುತ್ತಾರೆ. ಪೂಜಾರಿಗಳು ಉಪವಾಸವಿದ್ದುಕೊಂಡು ಕಾಲ್ನಡಿಗೆಯಲ್ಲಿ ಬಂದು ದೇವರಿಗೆ ಅರ್ಪಿಸುತ್ತಾರೆ.

**ಪಂಜು ಹಿಡಿಯುವುದು:** ದಾಸಯ್ಯನವರು ಈ ಪಂಜನ್ನು ಹಿಡಿಯುತ್ತಾರೆ. ಬೇಡರ ಪ್ರತಿ ಹಬ್ಬ, ಜಾತ್ರೆ, ಉತ್ಸವಗಳಲ್ಲಿ ಪಂಜನ್ನು ಹಿಡಿಯುವರು. ಬೇಡರ ವಿಶೇಷ ಆಚರಣೆಗಳಲ್ಲಿ ಇದು ಒಂದು. ದಾಸಯ್ಯಗಳು ಪಂಜುಗಳನ್ನು ಎರಡು ಕೈಯಲ್ಲಿ ಹಿಡಿದು ಬರಿ ಮೈಯಲ್ಲಿ ಚಲ್ಲಣ ಧರಿಸಿ ರುದ್ರಾವೇಶದಿಂದ ನರ್ತನ ಮಾಡುತ್ತಾ ಬೊಬ್ಬೆ ಹಾಕುತ್ತಾ ಬೆಂಕಿಯನ್ನು ಬಾಯಲ್ಲಿ ಇಟ್ಟು ನಂದಿಸುವ ಮತ್ತು ಬಾಯಿಯಿಂದ ಬೆಂಕಿಯ ಜ್ವಾಲೆಗಳನ್ನು ಉಗಿಯುವ ಹೀಗೆ ಸುಮಾರು ಅರ್ಧ ಗಂಟೆಯ ಕಾಲ ರುದ್ರನರ್ತನ ಮಾಡುತ್ತಾರೆ. ಹೀಗೆ ಐದು ಬಾರಿ ಮಾಡುತ್ತಾರೆ. ಇದು ಗಾದ್ರಿಪಾಲನಾಯಕ ಮತ್ತು ಹುಲಿಯೊಂದಿಗೆ ನಡೆದ ಯುದ್ಧದ ಘಟನೆಯನ್ನು ಅನುಕರಣೆ ಮಾಡುವುದಾಗಿದೆ.

**ದೇವರೆತ್ತುಗಳನ್ನು ಮೆರೆಸುವುದು:** ಬೇಡರು ಪ್ರತಿ ಹಬ್ಬ, ಜಾತ್ರೆ ಮತ್ತು ಉತ್ಸವಗಳಲ್ಲಿ ಕಿಲಾರಿಗಳು ದೇವರೆತ್ತುಗಳನ್ನು ಹೊಡೆದುಕೊಂಡು ಬರುತ್ತಾರೆ. ಅವರು ವಾದ್ಯಗಳ ಸಮೇತ ಆಯಾ ದೇವರುಗಳ ಮುಂದೆ ಮೂರು ಬಾರಿ ಮೆರೆಸುತ್ತಾರೆ(ಓಡಿಸುವುದು). ಮುತ್ತೇಗಾರು

ಎತ್ತುಗಳು, ಬೊಮ್ಮದೇವರೆತ್ತುಗಳು, ಬಂಗಾರು ದೇವರೆತ್ತುಗಳು, ಗಾದ್ರಿದೇವರೆತ್ತುಗಳು, ಓಬಳ ದೇವರೆತ್ತುಗಳನ್ನು ಕ್ರಮವಾಗಿ ಓಡಿಸಲಾಗುತ್ತದೆ. ಆ ಸಂದರ್ಭದಲ್ಲಿ ಬೆಲ್ಲ, ಮಂಡಕ್ಕಿ, ಹೂವನ್ನು ಬೆರೆಸಿದ ಚೂರುಬೆಲ್ಲವನ್ನು ದೇವರೆತ್ತುಗಳ ಮೇಲೆ ಎಸೆದು ಅವುಗಳನ್ನು ಮುಟ್ಟಿ ನಮಸ್ಕರಿಸುತ್ತಾರೆ.

**ನವಣೆ ಬತ:** ಬೇಡರಿಗೆ ನವಣೆ ನಿಷೇಧಿತ ಧಾನ್ಯ. ಇದನ್ನು ನವಣೆಬತ ಎನ್ನುತ್ತಾರೆ. ಬೇಡರ ದೇವರಿಗಳಿಗೂ ನವಣೆ ಆಗದಿರುವುದರಿಂದ ಇದನ್ನು ಎಡೆಗೂ ಬಳಸುವುದಿಲ್ಲ. ಹಾಗೆಯೇ ತಮ್ಮ ದನಕರುಗಳನ್ನು ಸಹ ನವಣೆ ಹೊಲಗಳ ಮೇಲೆ ಹಾಯಿಸುವುದಿಲ್ಲ.

**ಗಾವು ಸಿಗಿಯುವುದು:** ಅಚ್ಚ ಕಪ್ಪು ಅಥವಾ ಬಿಳಿಯ ಬಣ್ಣದ ಹೋತಮರಿಯನ್ನು ತಂದು ಅದರ ಗಂಟಲನ್ನು ಹಲ್ಲುಗಳಿಂದಲೇ ಕಚ್ಚಿ ಕಚ್ಚಿ ಅದರ ರಕ್ತ ಮಾಂಸಗಳನ್ನು ಕುಡಿದು ತಿನ್ನುವ ಪ್ರಕ್ರಿಯೆಯೇ ಗಾವು ಸಿಗಿಯುವುದು, ಮಾರಿ ಹಬ್ಬದ ಸಂದರ್ಭದಲ್ಲಿ ಇದು ಪ್ರಧಾನವಾಗಿ ಕಂಡುಬರುತ್ತದೆ. ಈ ಕ್ರಿಯೆಯನ್ನು ನೆರವೇರಿಸುವವರನ್ನು ಪೋತನಾಯಕರು ಎನ್ನುತ್ತಾರೆ. ಇವರು ಹೋತದ ರೀತಿಯಲ್ಲಿ ಮುಖವನ್ನು ಅಲಂಕರಿಸಿಕೊಂಡು ಹೋತವನ್ನು ಸಿಗಿಯುತ್ತಾರೆ. ಆ ಕಾರಣದಿಂದಲೇ ಇವರಿಗೆ ಪೋತನಾಯಕರೆಂದು ಹೆಸರು ಬಂದಿರಬೇಕು ಎನಿಸುತ್ತದೆ. ಹಿಂದೆ ಆನೆ, ಒಂಟೆ, ಕೋಣ, ಹಂದಿಗಳನ್ನೇ ಗಾವುಮರಿಯಾಗಿ ಬಳಸುತ್ತಿದ್ದು, ಈಗ ಅದು ಕೇವಲ ಹೋತದ ಮರಿಗೆ ಬಂದು ನಿಂತಿದೆ.

**ಮಣೇವು ಆಡುವುದು:** ಬೇಡರು ಪ್ರತಿ ಹಬ್ಬದಲ್ಲೂ ಮಣೇವು ಆಡುವ ಸಂಪ್ರದಾಯವಿದೆ. ಬಾಳೆಹಣ್ಣು ಮತ್ತು ಬೆಲ್ಲವನ್ನು ಚಿಕ್ಕ ಚಿಕ್ಕ ತುಂಡುಗಳಾಗಿ ಕತ್ತರಿಸಿ ಸಮಪ್ರಮಾಣದಲ್ಲಿ ಬೆರಸಿ ನೆಲದ ಮೇಲೆ ಇಡುತ್ತಾರೆ. ಅದರ ಸುತ್ತಾ ದಾಸರ ಬೆಡಗಿನ ವ್ಯಕ್ತಿಗಳು ತಮಟೆಯ ಶಬ್ಧಕ್ಕೆ ಸರಿಯಾಗಿ ಹೆಜ್ಜೆ ಹಾಕಿ ಕುಣಿಯುತ್ತಾ ಸುತ್ತುತ್ತಾರೆ. ತಮಟೆ ಶಬ್ಧ ನಿಲ್ಲುತ್ತಿದ್ದಂತೆ ನಾ ಮುಂದು ತಾ ಮುಂದು ಎಂದು ಮಂಡಿಯೂರಿ ಕೈಯಲ್ಲಿ ಮುಟ್ಟದಂತೆ ಬಾಯಿಯಲ್ಲಿಯೇ ತಿನ್ನುತ್ತಾರೆ.

**೩.೨ ನಂಬಿಕೆಗಳು ಮತ್ತು ನಿಷೇಧಗಳು**

ಕಾಡುಗೊಲ್ಲರಲ್ಲಿ ಮ್ಯಾಸಬೇಡರಲ್ಲಿ ನಂಬಿಕೆ ಮತ್ತು ನಿಷೇಧಗಳಿಗೆ ಹೆಚ್ಚು ಪ್ರಾಧಾನ್ಯತೆ ಕೊಡುತ್ತಾರೆ. ಪ್ರಕೃತಿಯ ಶಕ್ತಿಗಳಲ್ಲಿ ನಂಬಿಕೆ ಇಟ್ಟಿರುವುದು ಕಂಡುಬರುತ್ತದೆ. ಗಂಗೆಪೂಜೆ, ಸೂರ್ಯ, ಚಂದ್ರ, ದೇವರು, ಧರ್ಮ ಇವುಗಳಲ್ಲಿ ಅತೀವವಾದ ನಂಬಿಕೆ ಇಟ್ಟಿದ್ದಾರೆ.. ನಂಬಿಕೆಯೆಂದರೆ ಸಾಂಪ್ರದಾಯಿಕವಾಗಿ ಒಪ್ಪಿಕೊಂಡ ತಿಳುವಳಿಕೆಯಾಗಿರುತ್ತದೆ. ಈ ನಿಟ್ಟಿನಲ್ಲಿ ಈ ಎರಡು ಸಮುದಾಯಗಳು ದೈವಭಕ್ತಿಯ ಆರಾಧಕರಾಗಿ ಅವುಗಳಲ್ಲಿ ನಂಬಿಕೆಯಿಟ್ಟು ಪೂಜಿಸುತ್ತಾರೆ. ನಂಬಿಕೆಗಳು ಕೆಲವೊಮ್ಮೆ ಕಾರ್ಯಕಾರಣ ಸಂಬಂಧವಿಲ್ಲದವುಗಳಾಗಿರಬಹುದು. ಉದಾಹರಣೆಗೆ ಹೆಣ್ಣು ನೋಡಲು ಹೋಗುವಾಗ ಬೆಕ್ಕು ಅಡ್ಡಬಂದರೆ ಅಪಶಕುನವೆಂದು ಮನೆಗೆ ವಾಪಾಸು ಹೋಗಿ ನೀರು ಕುಡಿದು ಬರುವುದು.

ಕಟ್ಟಿಗೆ ಹೊರೆ ಬಂದರೆ ಅಪಶಕುನವೆಂದು ಭಾವಿಸುವುದು. ದನಕರುಗಳನ್ನು ದೈವತ್ವಕ್ಕೇರಿ ಪೂಜನೀಯ ಭಾವನೆಯನ್ನು ಹೊಂದಿ ಪೂಜಿಸುವುದು. ಸಾಂಪ್ರದಾಯಿಕವಾಗಿ ನಡೆದುಬಂದ ಆಚರಣೆಗಳಲ್ಲಿ ನಂಬಿಕೆ ಇಟ್ಟು ಅಪಾರವಾದ ಶ್ರದ್ಧೆ, ಭಕ್ತಿ ಭಯದಿಂದ ನಂಬಿಕೆಗಳನ್ನು ಆಚರಿಸುವುದು ಕಂಡು ಬರುತ್ತದೆ. ಕಾಡುಗೊಲ್ಲರು ತಮ್ಮ ಪೂಜಾರಿಯನ್ನೆ ದೇವರ ಸಮಾನ ಎಂಬ ನಂಬಿಕೆ ಇಟ್ಟಿರುವುದು ಕಂಡುಬರುತ್ತದೆ. ಮ್ಯಾಸಬೇಡರು ದಾಸಯ್ಯಗಳಿಗೆ ಮಹತ್ವಕೊಟ್ಟು ಜೀವಂತ ದೇವರೆಂದು ನಂಬಿಕೆ ಇಟ್ಟಿರುತ್ತಾರೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ದೇವರನ್ನು ಹೂ ಕೇಳುವುದು, ಹರಕೆ, ಮುಡಿಪು ಕಟ್ಟಿಕೊಳ್ಳುವುದು, ಕಾಸುಮೀಸಲು ತರುವುದು. ಅಮ್ಮ, ಸೀತಾಳ ಎದ್ದಾಗ ಒನಕೆಯ ಮೇಲೆ ಕೂರಿಸಿ ಬೇವಿನ ಸೊಪ್ಪನ್ನು ಇಟ್ಟು ತಣ್ಣಗೆ ಮಾಡುವುದು ಎನ್ನುತ್ತಾರೆ. ಹೀಗೆ ನಂಬಿಕೆಗಳು ತಮ್ಮ ಜೀವನದ ಅವಿಭಾಜ್ಯ ಅಂಗವಾಗಿ ನಂಬಿಕೆಗಳಲ್ಲಿ ಅಪಾರ ನಂಬಿಕೆ ಇಟ್ಟಿರುತ್ತಾರೆ. ಈ ಸಮುದಾಯಗಳಲ್ಲಿ ಬಹಳಕಾಲದವರೆಗೆ ಮಳೆಬಾರದಿದ್ದರೆ ಗಣೆ ಊದುವುದು, ಕಪ್ಪೆ ಮದುವೆ ಮಾಡುವುದು, ಸತ್ತಾಗ ಮೂರು ದಿನದ ಕೂಳನ್ನು ಕಾಗೆ ಮುಟ್ಟದಿದ್ದರೆ ಸ್ವರ್ಗ ಸಿಗುವುದಿಲ್ಲವೆಂಬ ನಂಬಿಕೆ. ರಾತ್ರಿ ಹೊತ್ತು ಉಪ್ಪು ಕೊಡಬಾರದು ಎಂಬ ನಂಬಿಕೆ, ಹಲ್ಲಿ ಲೊಚಗುಟ್ಟಿದರೆ ಕೃಷ್ಣ ಕೃಷ್ಣ ಎನ್ನುವುದು ಮತ್ತು ಒಳ್ಳೆಯ ಶಕುನ ಎಂಬ ನಂಬಿಕೆ. 'ನಂಬಿಕೆಗಳು ಯಾವುದೋ ಒಂದು ಅವ್ಯಕ್ತ ಭಯ ಅಥವಾ ಆತಂಕ ಸೂಚಿಸುತ್ತವೆ ಅವುಗಳು ಮಾನಸಿಕ ಸ್ಥಿತಿಗೆ ಸಂಬಂಧಿಸಿದವು, ಯಾವುದೇ ವಿಷಯವನ್ನು ಕುರಿತ ಪರಿಮಿತ ತಿಳುವಳಿಕೆಯೇ ನಂಬಿಕೆಗಳಿಗೆ ಮೂಲ 'ಅಸಂಬದ್ಧ, ಅವೈಜ್ಞಾನಿಕ ಸಂಬಂಧವನ್ನು ಕಲ್ಪಿಸಿದಾಗ ನಂಬಿಕೆಗಳು ಹುಟ್ಟಿಕೊಳ್ಳುತ್ತವೆ. ತಪ್ಪು ತಿಳುವಳಿಕೆ ಮತ್ತು ಅಜ್ಞಾನದಿಂದ ನಂಬಿಕೆಗಳು ಜನ್ಮ ತಾಳುತ್ತವೆ'.[೫]

ನಂಬಿಕೆಗಳು ಇಂತಹ ಹಿನ್ನಲೆಯಿಂದಲೇ ಹುಟ್ಟುತ್ತವೆಂದು ಹೇಳಲಿಕ್ಕಾಗುವುದಿಲ್ಲ. ಕೆಲವು ನಂಬಿಕೆಗಳಿಗೆ ಅರ್ಥವಿರುವುದಿಲ್ಲ, ಆದರೆ ಯಾವುದೇ ನಂಬಿಕೆ ಕೆಲವು ಆಚರಣೆಗಳು ಮತ್ತೆ, ಮತ್ತೆ ಪುನರಾವರ್ತಿತವಾದಾಗ ಅದೇ ನಂಬಿಕೆಯಾಗಿ ರೂಪುಗೊಳ್ಳುತ್ತದೆ. ನಂಬಿಕೆಗಳ ಹಿನ್ನಲೆಯಲ್ಲಿ ಆಯಾ ಸಂಸ್ಕೃತಿಯ ಒಳಭಾವವಿರುತ್ತದೆ. ಆಯಾ ಸಂಸ್ಕೃತಿಯ ಹಿನ್ನಲೆಯಲ್ಲಿಯೇ ನಂಬಿಕೆಗಳು ಹುಟ್ಟಿಕೊಳ್ಳುವಂತದ್ದು ಆದ್ದರಿಂದ ಆಯಾ ಸಂಸ್ಕೃತಿಗಳಿಗೆ ವಿಶೇಷವಾದ ನಂಬಿಕೆಗಳಿರುತ್ತವೆ. ನಂಬಿಕೆಗಳನ್ನು ನಿರ್ದಿಷ್ಟ ಪ್ರಾದೇಶಿಕಸಾಂಸ್ಕೃತಿಕ ಹಿನ್ನೆಲೆಯೊಳಗೆ ಅರ್ಥೈಸಿಕೊಳ್ಳುವುದು ಅಗತ್ಯ. ಬುಡಕಟ್ಟುಗಳಲ್ಲಿ ಅತೀವವಾದ ನಂಬಿಕೆಗಳಿಗೆ ಇಂಬು ಕೊಡುವ ಮನಸ್ಥಿತಿ ಅವರದಾಗಿತ್ತು, ಗಿಡ, ಮರ, ಪ್ರಾಣಿ, ಪಕ್ಷಿ, ವಸ್ತುಗಳು, ಬಂಡೆ, ಇತ್ಯಾದಿಗಳಲ್ಲಿ ಇರಿಸಿದ್ದ ನಂಬಿಕೆ ಮಹತ್ತರವಾದುದು.

ಕಾಡುಗೊಲ್ಲ ಮತ್ತು ಮ್ಯಾಸಬೇಡರು ಇಂತಹ ಹಲವಾರು ನಂಬಿಕೆಗಳನ್ನು ರೂಢಿಸಿಕೊಂಡಿದ್ದಾರೆ. ಜುಂಜಪ್ಪ ತನ್ನ ತಾಯಿಯ ಬೆನ್ನಿನಲ್ಲಿ ಹುಟ್ಟಿದವನು. ಎತ್ತಪ್ಪ ತುಪ್ಪದಲ್ಲಿ ಹುಟ್ಟಿದವನು. ಗಾದ್ರಿಪಾಲನಾಯಕ ಹುಲಿಯನ್ನು ಕೊಂದವನು ಎಂಬ ನಂಬಿಕೆಗಳಿವೆ. ಹೀಗೆ ಸಾಂಸ್ಕೃತಿಕ ವೀರರು ಪಾಲಿಸಿಕೊಂಡುಬಂದ ಜೀವನ ವಿಧಾನಗಳಲ್ಲಿ ನಂಬಿಕೆ ಇಟ್ಟರು. ಅಲ್ಲದೆ ಅವರನ್ನು ದೈವತ್ವಕ್ಕೇರಿಸಿ ಪೂಜಿಸುವುದು

ಇಂದಿಗೂ ಈ ಸಮುದಾಯಗಳಲ್ಲಿ ಕಂಡುಬರುತ್ತದೆ. ಹೀಗೆ ಕಾಡುಗೊಲ್ಲರಲ್ಲಿ ಹುಟ್ಟು, ಮುಟ್ಟಿನ ಸಂದರ್ಭದಲ್ಲಿ ಆಚರಿಸುವ ಆಚರಣೆಗಳು ನಂಬಿಕೆಗಳಿಗೆ ಕಾರಣವಾಗುತ್ತದೆ.

ಕೆಲವೊಂದು ಅರ್ಥಹೀನವಾದ ನಂಬಿಕೆಗಳೂ ಇವೆ. ರಾತ್ರಿಯ ಹೊತ್ತು ಉಪ್ಪುಕೊಡಬಾರದು ಎಂಬುದು, ಒಂದು ವೇಳೆ ಕೊಟ್ಟರೆ ಏನಾಗುತ್ತದೆ ಎಂದು ಪ್ರಶ್ನಿಸಿ ಕೊಂಡರೆ, ಮನಸ್ಥಿತಿಯಲ್ಲಿ ಆತಂಕ ಉಂಟಾಗುವುದು. ಇಂತಹಮೂಢನಂಬಿಕೆಗಳು ತುಂಬಾ ಇವೆ. ಹಲ್ಲಿ ಲೊಚಗೊಟ್ಟಿದರೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಅರ್ಥಹೀನ. ಆದರೆ ನಂಬಿಕೆ ಅರ್ಥರಹಿತವೆಂಬುದು ಉದ್ದೇಶವಲ್ಲ. ನಂಬಿಕೆಗಳು ಯಾವ ಸದರ್ಭದಲ್ಲಿ ಹುಟ್ಟಿದವು ಯಾಕಾಗಿ ಹುಟ್ಟಿದವು, ಆ ಸಂದರ್ಭದ ಅನುಭವ ಎಂತಹುದು ಎನ್ನುವುದು ಮುಖ್ಯ. ಹೀಗೆ ಒಂದು ಸಾಂಸ್ಕೃತಿಕ ವ್ಯವಸ್ಥೆಯಲ್ಲಿ ಮಾಟ, ದೆವ್ವ, ಭೂತ, ಆರಾಧನೆ ಹೀಗೆ ಪ್ರಾಚೀನ ಕಾಲದಿಂದಲೂ ಇಂದಿನವರೆಗೂ ಮುಂದುವರಿದು ಕೊಂಡುಬಂದಿವೆ. ನಂಬಿಕೆಗಳು ನಾಗರಿಕತೆಯ ಬೆಳವಣಿಗೆಯೊಂದಿಗೆ ಅರ್ಥವನ್ನು ಕಳೆದು ಕೊಂಡಿವೆ. ಆದರೂ ನಂಬಿಕೆಗಳು ಸಾಮಾಜಿಕ ವ್ಯವಸ್ಥೆಯನ್ನು ಇರುವ ಹಾಗೆಯೆ ಕಾಪಾಡಿಕೊಳ್ಳುವಲ್ಲಿ ನೆರವಾಗುತ್ತವೆ.

ಒಟ್ಟಾರೆಯಾಗಿ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ತಮ್ಮ ಪೂರ್ವಜರು ಹುಟ್ಟುಹಾಕಿದ್ದ ನಂಬಿಕೆಗಳನ್ನು ಆಚರಣೆ ಮಾಡುವುದರ ಮೂಲಕ ನಂಬಿಕೆಗಳಿಗೆ ಭಂಗಬರದಂತೆ ಮುಂದುವರಿಸಿಕೊಂಡು ಹೋಗುತ್ತಿರುವುದು ಕಂಡುಬರುತ್ತದೆ. ನಂಬಿಕೆಗಳು ಪರಂಪರಾಗತವಾಗಿ ಅವರ ಪುರಾಣಗಳು, ಐತಿಹ್ಯಗಳು, ಕಥೆಗಳು, ಮೌಖಿಕ ಸಾಹಿತ್ಯ ಇಂತಹ ನಂಬಿಕೆಗಳನ್ನು ಮುಂದುವರಿಸಲು ಅನುವು ಮಾಡುತ್ತವೆ. ನಂಬಿಕೆಗಳು ಒಂದು ಸಮುದಾಯದ ನಿಯಂತ್ರಣ ಮತ್ತು ಯಥಾಸ್ಥಿತಿಯ ಜೀವನ ವಿಧಾನವನ್ನು ಮುಂದುವರಿಸಲು ನಂಬಿಕೆಗಳು ಆಚರಣಾ ವಿಧಾನಗಳಾಗಿ ರೂಪುಗೊಳ್ಳುತ್ತವೆ.

**ವಿಧಿ ನಿಷೇಧಗಳು:**

ಮಾನವ ಸಂಘಜೀವಿ, ಸಮಾಜ ಜೀವಿಯೆಂದು ಅರಿಸ್ಟಾಟಲ್ ಬಹುದಿನಗಳ ಹಿಂದೆಯೇ ಹೇಳಿದ್ದನು. ಮಾನವನಿಗೆ ಸಮೂಹ ಜೀವನ, ಅನಿರ್ವಾಯ, ಯಾವುದೆ ಸಮೂಹ, ಸಮುದಾಯ, ಸಮಾಜ ತನ್ನದೇ ಆದ ನಿಯಮಗಳನ್ನು ಹೊಂದಿರುತ್ತದೆ. ಇದು ಸಮುದಾಯ ಸುಸ್ಥಿರತೆಗೆ, ಸಂಸ್ಕೃತಿಯ ಉಳಿವಿಗೆ ಕಾರಣವಾಗುತ್ತದೆ. ಇಂತಹ ನಿಯಮಗಳು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುತ್ತವೆ. ವಿಧಿನಿಯಮಗಳು ಸಾರ್ವತ್ರಿಕವಾಗಿ ಸಮುದಾಯದ ನಿಯಂತ್ರಣಕ್ಕೆ ಅನಿವಾರ್ಯವಾದುದು. ಇಂತಹ ಸಾಮಾಜಿಕ ನಿಯಂತ್ರಣದಲ್ಲಿ ಉತ್ತಮ ಗೌರವ, ಘನತೆಯನ್ನು ತಂದುಕೊಡುತ್ತವೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ವಿಧಿನಿಷೇದಗಳು ಬಹಳಷ್ಟಿವೆ. ವಿಧಿ ನಿಯಮಗಳು ಎಂದರೆ ಹೀಗೆ ಮಾಡಲೇಬೇಕೆಂಬ ಆಜ್ಞೆಯ ರೂಪದಲ್ಲಿರುತ್ತವೆ. ವಿಧಿನಿಯಮಗಳು ನಾವು ಹೀಗೆಯೇ ಮಾಡಬೇಕು, ಹೀಗೆ ಇರಬೇಕೆಂಬುದಾಗಿ ತಿಳಿಸುತ್ತವೆ.

ವಿಧಿನಿಯಮಗಳಲ್ಲಿ ಕಾಡುಗೊಲ್ಲರಲ್ಲಿ ಋತುಮತಿಯಾದ ಹೆಣ್ಣು ಹಟ್ಟಿಯಿಂದ ಹೊರಗಿರಬೇಕು, ಹೆರಿಗೆಯ ಸಂಧರ್ಭದಲ್ಲಿ ಹಟ್ಟಿಯ ಹೊರಗೆ ಹೆರಿಗೆಯಾಗಬೇಕು. ಕಟ್ಟೆ ಮನೆಗಳ ನ್ಯಾಯ ತೀರ್ಮಾನಕ್ಕೆ ಬದ್ಧರಾಗಬೇಕು, ಜೆನ್ನಿಗೆ ಹಾಕಿಸುವುದು. ಗೊಲ್ಲಕಡಗ ಧರಿಸಬೇಕು ಹೀಗೆ ಮ್ಯಾಸಬೇಡರಲ್ಲೂ ವಿಧಿನಿಯಮಗಳಿಗೆ ಸಂಬಂಧಿಸಿದಂತೆ ಹಲವಾರು ನಿಯಮಗಳಿವೆ. ಋತುಮತಿಯಾದಾಗಿನ ನಿಯಮಗಳು, ಹಿರಿಯರ ಹಬ್ಬ, ತಿಥಿ ಆಚರಣೆ ಮಾಡುವುದು. ಹೀಗೆ ಒಂದು ಸಮುದಾಯದ ಜನರ ವರ್ತನೆಗಳನ್ನು ನಿಯಂತ್ರಿಸುವಲ್ಲಿ ವಿಧಿನಿಯಮಗಳು ಮುಖ್ಯವಾದವು. ವಿಧಿನಿಯಮಗಳು ನೈತಿಕ ನಿಯಮಗಳಾಗಿ ರೂಪಿತವಾಗುತ್ತವೆ.

ನಿಷೇಧಗಳು ಏನು ಮಾಡಬಾರದು, ಏನನ್ನು ಮಾಡಲೇಕೂಡದು ಎಂದು ತಿಳಿಸುವ ಆಜ್ಞಾಪಿಸುವ ಬಹಿಷ್ಕಾರಾಜ್ಞೆಗಳು, ಒಂದು ಸಮುದಾಯದಲ್ಲಿನ ನಿಷೇಧಗಳು, ನಿರ್ಬಂಧಗಳು ಇಡೀ ಸಮುದಾಯವನ್ನು ನಿಯಂತ್ರಿಸುತ್ತವೆ. ಸಮುದಾಯದ ನಿಯಮಗಳು ಕಟ್ಟುನಿಟ್ಟಾಗಿ ಮುಂದುವರಿಸಿಕೊಂಡು ಹೋಗಲು ನಿರ್ಬಂಧಗಳನ್ನು ಹೇರುವುದರ ಮೂಲಕ ನಿಷೇಧಗಳನ್ನು ಹೊಂದಿರುತ್ತದೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಇಂತಹ ನಿಷೇಧಗಳನ್ನು ಪೂಜಾರಿಯ ಮತ್ತು ದಾಸಯ್ಯಗಳ ಮೇಲೆ ಹೇರಿರುವುದು ಕಂಡುಬರುತ್ತದೆ. ಮ್ಯಾಸಬೇಡ, ಕಾಡುಗೊಲ್ಲರಲ್ಲಿ ಅಂತರ್ ಜಾತಿ ವಿವಾಹವಾಗಬಾರದು. ಕೋಳಿ ತಿನ್ನಬಾರದು, ಈಚಲು ಚಾಪೆಯ ಮೇಲೆ ಮಲಗಬಾರದು, ಹರಿಜನರು ಹಟ್ಟಿಯೊಳಗೆ ಪ್ರವೇಶ ನಿಷಿದ್ಧತೆ ಇರುವುದು. ಮ್ಯಾಸಬೇಡ ಮತ್ತು ಕಾಡುಗೊಲ್ಲರಲ್ಲಿ ಇಂತಹ ಹಲವಾರು ವಿಧಿನಿಷೇಧಗಳಿದ್ದು ಹಲವಾರು ವಿಧಿನಿಷೇಧಗಳನ್ನು ಇಂದಿಗೂ ಮುಂದುವರಿಸಿಕೊಂಡು ಬಂದಿರುವುದು ಕಂಡುಬರುತ್ತದೆ.

### ೩.೩. ಹಬ್ಬ ಹಾಗೂ ಜಾತ್ರೆಗಳು:

ಕಾಡುಗೊಲ್ಲರಲ್ಲಿ ಹಬ್ಬಗಳನ್ನು ಮತ್ತು ಜಾತ್ರೆಗಳನ್ನು ಮಾಡುತ್ತಾರೆ. ಅವರಿಗೆ ವಿಶಿಷ್ಟವಾಗಿರುವ ಯಾವ ಹಬ್ಬವೂ ಇಲ್ಲ. ಅವರು ಉಳಿದ ಜನರು ಆಚರಿಸುವಂತೆ ಯುಗಾದಿ, ದೀಪಾವಳಿ, ಬಸವನ ಹಬ್ಬ, ಶಿವರಾತ್ರಿ, ನಾಗರ ಪಂಚಮಿ ಮುಂತಾದ ಹಬ್ಬಗಳನ್ನು ಆಚರಿಸುತ್ತಾರೆ. ಈ ಹಬ್ಬಗಳಲ್ಲಿ ಸ್ನಾನ ಮಾಡಿ, ದೇವರಿಗೆ ಹಣ್ಣು ಕಾಯಿಗಳನ್ನು ಅರ್ಪಿಸಿ ತಮ್ಮ ಕೈಲಾದ ಸಿಹಿ ಅಡುಗೆಯನ್ನು ಮಾಡಿ ದೇವರಿಗೆ ಎಡೆ ಇಟ್ಟು ಊಟ ಮಾಡುತ್ತಾರೆ. ಈ ಹಬ್ಬಗಳಲ್ಲಿ ಯಾವುದೇ ರೀತಿಯ ವಿಶೇಷತೆಗಳಿರುವುದಿಲ್ಲ. ಆದರೆ ಶಿವರಾತ್ರಿಯ ಹಬ್ಬವನ್ನು ಕಾಳಿನ ಹಬ್ಬವೆಂದು ಕರೆಯುತ್ತಾರೆ. ಈ ಹಬ್ಬದಲ್ಲಿ ಹುರುಳಿ ಮತ್ತು ನವಣೆಯಿಂದ ಮಾಡಿದ ಅಡುಗೆಯನ್ನು ದೇವರಿಗೆ ಎಡೆ ಮಾಡಿ ಊಟ ಮಾಡುತ್ತಾರೆ. ಬಸವನ ಹಬ್ಬದಲ್ಲಿ ಎತ್ತುಗಳಿಗೆ ಮತ್ತು ಹೋರಿಗಳಿಗೆ ಶೃಂಗಾರ ಮಾಡಿ ಅವುಗಳಿಗೆ ಪೂಜೆ ಮಾಡಿ ಮೆರೆವಣಿಗೆ ಮಾಡುತ್ತಾರೆ. ಜೊತೆಗೆ ದನಗಳನ್ನು, ಕುರಿಗಳನ್ನು, ಮೇಕೆಗಳನ್ನೂ ಕಿಚ್ಚು ಹಾಯಿಸುತ್ತಾರೆ. ದೀಪಾವಳಿಯ ದಿನದಂದು ದೇವರಿಗೆ ದೀಪ ಹಚ್ಚಿ ಪೂಜಿಸುತ್ತಾರೆ. ನಾಗರ ಪಂಚಮಿಯಲ್ಲಿ ಹುತ್ತದ ಪೂಜೆಯನ್ನು ಮಾಡುತ್ತಾರೆ.

ಮ್ಯಾಸ ಬೇಡರಲ್ಲಿಯೂ ಎಲ್ಲಾ ಹಬ್ಬಗಳನ್ನು ಆಚರಿಸುತ್ತಾರೆ, ಅದರಲ್ಲಿ ಕೆಲವು ಹಬ್ಬಗಳನ್ನು ವಿಶೇಷವಾಗಿ ಆಚರಿಸುತ್ತಾರೆ. ಅಂತಹ ಕೆಲವು ಹಬ್ಬಗಳನ್ನು ಗಮನಿಸುವುದಾದರೆ,

**ಯುಗಾದಿ ಹಬ್ಬ:**

ಈ ಹಬ್ಬವನ್ನು ಪಿತೃದೇವತಾ ಆರಾಧನೆಯಾಗಿ ಮತ್ತು ತಮ್ಮ ಹಿರಿಯರ ಸ್ಮರಣಾರ್ಥವಾಗಿ ಆಚರಿಸುತ್ತಾರೆ. ಆಶ್ವೀಜ ಮಾಸದಲ್ಲಿ ನಡೆಯುವ ಈ ಹಬ್ಬದಲ್ಲಿ ತಮ್ಮ ಪೂರ್ವಿಕರಿಂದ ಬಂದಂತಹ ಆಯುಧಗಳಾದ ಬಿಲ್ಲು, ಬಾಣ, ಭರ್ಚಿ, ಕತ್ತಿ, ಕಠಾರಿ ಎಲ್ಲವನ್ನು ಇಟ್ಟು ಪೂಜಿಸುವರು. ಈ ಆಯುಧಗಳು ಬೇಡರಿಗೆ ಬೇಟೆಯಾಡಲು ನೆರವಾಗಿವೆ. ಹಾಗಾಗಿಯೇ ಹಿರಿಯರ ನೆನಪಿನಲ್ಲಿ ಇವುಗಳನ್ನು ಪೂಜಿಸುತ್ತಾರೆ. ಒಂದು ತುಂಬಿದ ಕೊಡ ಅಥವಾ ಬಿಂದಿಗೆ ನೀರನ್ನಿಟ್ಟು ಅದಕ್ಕೆ ಹೊಸ ಬಟ್ಟೆಗಳನ್ನೇರಿಸಿ ಅವರಿಗೆ ಇಷ್ಟವಾದ ಆಹಾರಗಳನ್ನಿಟ್ಟು ಪೂಜಿಸುತ್ತಾರೆ.

**ನಾಗರಪಂಚಮಿ:**

ಇದು ಮ್ಯಾಸಬೇಡರಿಗೆ ವಿಶಿಷ್ಟವಾದ ಹಬ್ಬ. ಪೂರ್ವಜರಿಂದ ಆಚರಿಸಿಕೊಂಡು ಬಂದಿರುವ ಹಬ್ಬ. ಬೇಡರು ಅರಣ್ಯವಾಸಿಗಳಾಗಿದ್ದ ಸಂದರ್ಭದಲ್ಲಿ ಈ ಆಚರಣೆ ಅಸ್ತಿತ್ವಕ್ಕೆ ಬಂದಿರಬಹುದು. ಹೆಡೆಕಟ್ಟಿನ ಹಬ್ಬ ಕೂಡ ಈ ಹಿನ್ನಲೆಯಲ್ಲಿಯೇ ಹುಟ್ಟಿರಬೇಕು. ಭಯದಿಂದಲೋ, ಭಕ್ತಿಯಿಂದಲೋ ಅಥವಾ ಪ್ರಕೃತಿಯನ್ನು ಆರಾಧಿಸಬೇಕೆಂಬ ಪರಿಕಲ್ಪನೆಯಲ್ಲಿ ಹಾವು ಕೂಡ ಪ್ರಕೃತಿಯ ಅಂಗವಾಗಿದ್ದುದರ ಆ ಹಿನ್ನಲೆಯಲ್ಲಿಯೂ ನಾಗರ ಆರಾಧನೆ ಹುಟ್ಟಿರಬಹುದು. ಬೇಡರಲ್ಲಿ ಈ ಹಬ್ಬವನ್ನು ವಾರಗಟ್ಟಲೆ ಮಾಡುತ್ತಾರೆ. ಹುತ್ತಗಳಿಗೆ, ದೇವಾಲಯಗಳಲ್ಲಿರುವ ನಾಗಶಿಲ್ಪಗಳಿಗೆ ಹಾಲನ್ನು ಎರೆಯುವ ಮೂಲಕ ನಾಗದೇವತೆಯನ್ನು ಆರಾಧಿಸುತ್ತಾರೆ.

**ಗುಗ್ಗರಿಹಬ್ಬ :**

ಈ ಹಬ್ಬವನ್ನು ಪ್ರತಿವರ್ಷ ಮಾಘಮಾಸದಲ್ಲಿ ಮಾಡುತ್ತಾರೆ. ಗುಗ್ಗರಿ ಹಬ್ಬವು ಮೊದಲು ಮ್ಯಾಸಬೇಡರ ಹಿರಿಯ ನಾಯಕ ಹೀರೆಹಳ್ಳಿಯಲ್ಲಿ ನೆಲೆಸಿರುವ ದಡ್ಡಿಸೂರನಾಯಕನಿಗೆ ಎಡೆ ಹಾಕುವ ಮೂಲಕ ಮೊದಲುಗೊಂಡು ನಂತರ ಖುದಾಪುರದ ಬೋರೇದೇವರು, ಮಾಕನಡಕು ಓಬಳದೇವರು ಹೀಗೆ ಮ್ಯಾಸಮಂಡಲಕ್ಕೆ ಸೇರಿದ ಎಲ್ಲರೂ ತಮ್ಮ ತಮ್ಮ ದೇವಸ್ಥಾನಗಳ ಬಳಿ ಹನ್ನೆರಡು ಪೆಟ್ಟಿಗೆ ದೇವರುಗಳ ಹೆಸರಿನಲ್ಲಿ ನಡೆಸುವ ಹಬ್ಬ. ತಮ್ಮ ಹೊಲದಲ್ಲಿ ಬೆಳೆದ ಹುರುಳಿ, ತೊಗರಿ, ಹಲಸಂದೆ, ಹೆಸರುಕಾಳು, ಹೀಗೆ ಗುಗ್ಗರಿಗೆ ಬಳಸಬಹುದಾದ ಮುಂತಾದ ದ್ವಿದಳ ಧಾನ್ಯಗಳನ್ನು ತಮ್ಮ ದೇವರುಗಳಿಗೆ ಗುಗ್ಗರಿಯ ಎಡೆ ಮಾಡಿ ನೈವೇದ್ಯ ಮಾಡುವವರೆಗೂ ಬಳಸುವಂತಿಲ್ಲ ಬೇಯಿಸುವಂತಿಲ್ಲ. ಎಲ್ಲಾ ಕಾಳುಗಳನ್ನು ಒಟ್ಟಿಗೆ ಸೇರಿಸಿ ಗುಗ್ಗರಿ ಮಾಡಲು ಕೇಂದ್ರೀಕರಿಸುವುದರಿಂದ ಇದನ್ನು ಕಾಳಹಬ್ಬ ಎಂದೂ ಕರೆಯುತ್ತಾರೆ.

**ಮುಂಗಾರಿಹಬ್ಬ:**

ಇದು ಎತ್ತುಗಳಿಗೆ ಸೀಮಿತವಾದ ಹಬ್ಬ. ಆ ದಿನ ಎತ್ತುಗಳನ್ನು ಅಲಂಕರಿಸಿ, ಪೂಜಿಸಿ ಕಿಚ್ಚು

ಹಾಯಿಸುವ ಹಬ್ಬ. ಇದನ್ನು ಕಾರಹುಣ್ಣಿಮೆ ಹಬ್ಬ ಎಂತಲೂ ಕರೆಯುತ್ತಾರೆ. ಈ ಹಬ್ಬದ ದಿನ ಎತ್ತುಗಳಿಗೆ ಮೈ ತೊಳೆದು ಅವುಗಳ ಕೋಡುಗಳಿಗೆ ಬಣ್ಣ ಹಚ್ಚಿ ಅವುಗಳಿಗೆ ಅಲಂಕಾರ ಮಾಡಿ ಪೂಜಿಸುತ್ತಾರೆ. ಪೂಜೆಯಾದ ಮೇಲೆ ಎತ್ತುಗಳಿಗೆಂದೇ ಮಾಡಿದ ಜೋಳದ ಹುಗ್ಗಿಯನ್ನು ಎತ್ತುಗಳಿಗೆ ತಿನಿಸುತ್ತಾರೆ. ನಂತರ ಓಟದಲ್ಲಿ ಹೋರಿಗಳನ್ನು ಜೂಜು ಬಿಡುವುದು. ಅಂದರೆ ಊರಿನ ಮುಂಬಾಗದಲ್ಲಿ ಅಡ್ಡವಾಗಿ ಒಂದು ಉದ್ದನೆಯ ಹಗ್ಗವನ್ನು ಕಟ್ಟಿರುತ್ತಾರೆ. ದೂರದಿಂದ ಓಡಿ ಬಂದ ಎತ್ತುಗಳು ಅದನ್ನು ದಾಟಬೇಕು.

**ಗೌರಿ ಹುಣ್ಣಿಮೆ:**

ಚಿತ್ರದುರ್ಗ ಜಿಲ್ಲೆಯಾದ್ಯಂತ ಹೆಣ್ಣು ಮಕ್ಕಳಿಗೆ ಪ್ರಧಾನವಾದ ಹಬ್ಬವೆಂದರೆ ಗೌರಿ ಹುಣ್ಣಿಮೆ. ಹಳ್ಳಿ ಗಾದೆಯಂತೆ 'ಗಂಡಿಗೆ ಯಾಕೆ ಗೌರಿ ಚಿಂತೆ' ಎಂಬಂತೆ ಗೌರಿ ಹುಣ್ಣಿಮೆ ಹೆಣ್ಣು ಮಕ್ಕಳು ಸಂಭ್ರಮಿಸುವ ಹಬ್ಬ. ಗೌರಿಹುಣ್ಣಿಮೆಯನ್ನು ಹೆಚ್ಚಿನದಾಗಿ ಚಿತ್ರದುರ್ಗ ಜಿಲ್ಲೆಯಾದ್ಯಂತ ಹಟ್ಟಿಗಳಲ್ಲಿ ಬಹಳ ವಿಜೃಂಭಣೆಯಿಂದ ಆಚರಿಸುತ್ತಾರೆ. ಕಥೆಯ ಪ್ರಕಾರ ಮಹಾಭಾರತದ ಕುಂತಿಗೆ ಗೌರೀ ಪೂಜೆ ಮಾಡುವ ಬಯಕೆಯಾಗಿ ಮುತ್ತೈದೆಯರನ್ನು ಆಹ್ವಾನಿಸುತ್ತಾಳೆ. ಆದರೆ ಅವರು ಕುಂತಿ ವಿಧವೆ ಎಂಬ ಕಾರಣಕ್ಕೆ ನಿರಾಕರಿಸುತ್ತಾರೆ. ಅಸಹಾಯಕಳಾದ ಕುಂತಿ ಅವಿವಾಹಿತ ಹೆಣ್ಣು ಮಕ್ಕಳನ್ನು ಸೇರಿಸಿಕೊಂಡು ಗೌರಿಪೂಜೆ ಮಾಡುವುದರೊಂದಿಗೆ ತನ್ನಬಯಕೆಯನ್ನು ಈಡೇರಿಸಿಕೊಳ್ಳುತ್ತಾಳೆ. ಈ ಕತೆಯ ಸಂಪ್ರದಾಯವನ್ನು ಗೌರಮ್ಮನ ಉತ್ಸವದಲ್ಲಿ ಕಾಣಬಹುವುದು. ಹಾಗಾಗಿ ಗೌರಿದೇವಿಯನ್ನು ತರಲು ಕುಂತೆಮ್ಮನೂ ಬಂದಿರುತ್ತಾಳೆ.

ಗೌರಿ ಹುಣ್ಣಿಮೆ ಸಾಮಾನ್ಯವಾಗಿ ನವಂಬರ್ ತಿಂಗಳಿನಲ್ಲಿ ಬರುತ್ತದೆ. ಪ್ರಥಮದಿನದಲ್ಲಿ ಗೌರಿಮಣ್ಣು ತಂದು ಗೌರಮ್ಮನನ್ನು ಪೂಜಿಸಿ ಕೂರಿಸುತ್ತಾರೆ. ಗೌರಿ ಮಣ್ಣು ಎಂದು ಹೇಳಿ ಪೂಜಿಸುವುದು ಕೃಷಿ ಸಂಸ್ಕೃತಿಯೂ ಇಲ್ಲಿ ಸಮೀಕರಣಗೊಂಡಿರುವುದನ್ನು ಸಂಕೇತಿಸುತ್ತದೆ. ಗೌರಿ ಹುಣ್ಣಿಮೆ ವಿಶೇಷವಾಗಿ 'ಮಕ್ಕಳಗೌರಿ' ಅವಿವಾಹಿತರೇ ಗೌರಿ ಮಕ್ಕಳಾಗುವುದು. ಗೌರಿ ಹುಣ್ಣಿಮೆಯದಿನ ಹೆಣ್ಣು ಮಕ್ಕಳು ಹೊಳೆಗೆ ಹೋಗಿ ಹೆಣ್ಣು ಮಕ್ಕಳು ಸಾಲಾಗಿ ಆರತಿ, ಕಳಸ ಹಿಡಿದುಕೊಂಡು ಗಂಗೆ ಪೂಜೆಯೊಂದಿಗೆ ವಿಜೃಂಭಣೆಯ ಮೆರವಣಿಗೆಯೊಂದಿಗೆ ವಾದ್ಯಗಳ ಸಮೇತ ಗೌರಮ್ಮನನ್ನು ಕೂರಿಸಿ ಪೂಜಿಸುತ್ತಾರೆ. ಗೌರಿ ಪ್ರತಿಮೆಯನ್ನು ಮಣ್ಣಿನಿಂದ ಇಲ್ಲವೆ ಕಟ್ಟಿಗೆಯಿಂದ ಮಾಡಿ ಸಿಂಗಾರ ಮಾಡುತ್ತಾರೆ. ಗೌರಿಯನ್ನು ಪ್ರತ್ಯೇಕ ದೇವಸ್ಥಾನ ಇಲ್ಲವೆ ಬಸವೇಶ್ವರ, ಈಶ್ವರನ ದೇವಸ್ಥಾನದಲ್ಲಿ ಹೀಗೆ ಗೌರಿ ಹುಣ್ಣಿಮೆ ಪ್ರಾರಂಭವಾದದಿನದಿಂದ ಐದು ದಿನ, ಅಥವಾ ಒಂಬತ್ತು ದಿನದವರೆಗೂ ಕೂರಿಸುತ್ತಾರೆ. ಮಕ್ಕಳು ಗೌರಿ ಹುಡುಗಿಯರಾಗಿ ವಿಜೃಂಭಿಸುತ್ತಾರೆ. ಚಿಕ್ಕ ಚಿಕ್ಕ ಹೆಣ್ಣು ಮಕ್ಕಳು ಸಹ ಸೀರೆ ಉಟ್ಟು ಅಲಂಕರಿಸಿಕೊಂಡು ಒಡವೆಗಳನ್ನು ಹಾಕಿಕೊಂಡು ವಿಜೃಂಭಿಸುವುದು ಕಣ್ಣಿಗೆ ಹಬ್ಬ.

ಹಳ್ಳಿ ಗಾದೆಯಂತೆ 'ಗೌರಿ ಹಬ್ಬದಲ್ಲಿ ಹೆಣ್ಣು ನೋಡಬಾರದು, ಕಾರ ಹುಣ್ಣಿಮೆಯಲ್ಲಿ ಹೋರಿ ನೋಡಿ ತರಬಾರದು' ಎಂಬಂತೆ ನೋಡಲು ಸುಂದರವಾಗಿ ಅಲಂಕರಿಸಿಕೊಂಡಿರುತ್ತಾರೆ. ಐದು ದಿನ, ಒಂಬತ್ತು ದಿನಅಲಂಕಾರದೊಂದಿಗೆ, ಬಂದ ಅತಿಥಿಗಳಿಗೆ, ಮಾವಗಳಿಗೆ ಕೋಲು ಹಾಡು ಹೇಳುತ್ತಾ ಗೌರಿ ಕಾಣಿಕೆ ವಸೂಲಿ ಮಾಡುತ್ತಾರೆ. 'ಕೋಲು ಕೋಲನ್ನಾ ಊನೆ ಕೋಲು ಕೋಲನ್ನ' ಎಂದು ಶಿವ ಪಾರ್ವತಿಯರನ್ನು ಕುರಿತು ಇಂಪಾಗಿ ಹಾಡುತ್ತಾರೆ. ಮಾವಂದಿರಿಗೆ ಮತ್ತು ಅತಿಥಿಗಳಿಗೆ ತಟ್ಟೆಯಲ್ಲಿ ಎಲೆ ಅಡಿಕೆ ಇಟ್ಟು ಕೊಡುತ್ತಾರೆ. ಎಲೆ ಅಡಿಕೆ ಮೆಲ್ಲುತ್ತಾ ಮಾವಂದಿರಾದವರು ಹುಡಿಗಿಯರನ್ನು ಛೇಡಿಸುತ್ತಾರೆ. ಗೋಗರೆದು ಅವರಿಂದ ಹಣವಸೂಲಿ ಮಾಡುತ್ತಾರೆ.

ಗೌರಿ ಹುಡುಗಿಯರು ಕೊನೆಯ ದಿನ ಕುಂತಿ ರೊಟ್ಟಿ ಎಂದು ಮಾಡುತ್ತಾರೆ. ಗೌರಿ ಹಬ್ಬದ ವಿಶೇಷ ಊಟವೆಂದರೆ ಸೆಜ್ಜೆರೊಟ್ಟಿ, ಕುಂಬಳಕಾಯಿ, ಎಳ್ಳುಸೂಸಲು ಮಾಡಿ ಗೌರಿ ಹುಡುಗಿಯರೆಲ್ಲರು ಒಟ್ಟಿಗೆ ಸೇರಿ ಹಂಚಿ ತಿನ್ನುವ ಮತ್ತು ಸಾಮೂಹಿಕಾವಾಗಿ ಊಟ ಮಾಡುವ ಸಂಸ್ಕೃತಿಯೂ ಇಲ್ಲಿ ಎದ್ದು ಕಾಣುವ ಗುಣವಾಗಿದೆ.

ಐದು ದಿನ ಅಥವಾ ಒಂಬತ್ತು ದಿನದಲ್ಲಿ ಗೌರಿಹುಣ್ಣಿಮೆ ಮುಕ್ತಾಯವಾಗುತ್ತದೆ. ಅಂದು ವಿಜೃಂಭಣೆಯಿಂದ ಗಂಡಸರು ಜೊತೆಗೂಡಿ ಕೋಲಾಟ, ನಂದಿಕೋಲು ಕುಣಿತಗಳ ಮೂಲಕ ಸಂಭ್ರಮಿಸಿ ರಾತ್ರಿಯೆಲ್ಲಾ ಗೌರಿ ಮೆರವಣಿಗೆ ಮಾಡಿ ದೇವಿಯನ್ನು ದೇವಸ್ಥಾನಕ್ಕೆ ತರುತ್ತಾರೆ.

ಚಿತ್ರದುರ್ಗ ಜಿಲ್ಲೆಯಲ್ಲೇ ಈ ಗೌರೀಹಬ್ಬವು ವಿಶಿಷ್ಟವಾದುದಾಗಿದ್ದು ಕೃಷಿ ಮೂಲ ಸಂಸ್ಕೃತಿಯೊಂದಿಗೆ ತಳುಕು ಹಾಕಿಕೊಂಡಿರುವ ಈ ಹಬ್ಬವು ಒಂದು ಜನಪದ ಸಂಪ್ರದಾಯವಾಗಿದ್ದು, ಬಯಲು ಸೀಮೆಯ ಈ ಜಿಲ್ಲೆಯಲ್ಲಿ ವಿಶೇಷವಾಗಿ ಆಚರಿಸುವುದು ಕಂಡುಬರುತ್ತದೆ. ಹಟ್ಟಿಗಳಲ್ಲಿ ಅಲ್ಲದೆ ಗ್ರಾಮ, ಊರುಗಳಲ್ಲಿಯೂ ಈ ಹಬ್ಬವು ವಿಶೇಷತೆ ಪಡೆದುಕೊಂಡಿರುವುದು ಕಾಣಬರುತ್ತದೆ. ಹೆಣ್ಣು ಮಕ್ಕಳ ಈ ಸರಸ ಸಂಭ್ರಮದ ಹಬ್ಬ ವಿಶಷ್ಟವಾಗಿರುವ ಒಂದು ಸಂಪ್ರದಾಯವಾಗಿದೆ.

ಗೌರಿ ಹುಡುಗಿಯ ಹಗಲು ಮತ್ತು ಸಾಯಂಕಾಲ ಬೆಳದಿಂಗಳಲ್ಲಿ ಆಡುವ ಆಟ, ಒಗಟು, ಹಾಡು, ಆಟಗಳಲ್ಲಿ ಕಾಲ ಕಳೆಯುತ್ತಾರೆ. ಹಗಲಿಡೀ ವಿಶೇಷವಾಗಿ ಊರ ಹೊರಗಡೆ ಹುಣಸೆಮರಕ್ಕೆ ಹಗ್ಗಕಟ್ಟಿ ಜೋಕಾಲಿ ಆಡುತ್ತಾರೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಆಚರಿಸುವ ಹಟ್ಟಿ ಹಬ್ಬಗಳು ಹೇಗೆ ನಡೆಯುತ್ತವೆ ಮತ್ತು ಯಾವ ಆಯಾಮಗಳನ್ನು ಪಡೆದುಕೊಳ್ಳುತ್ತವೆ ಎನ್ನುವುದಕ್ಕೆ ಹಲವು ಪ್ರಕಾರದ ಚರ್ಚೆಗಳು ಹುಟ್ಟಿಕೊಳ್ಳುತ್ತವೆ. ಸಾಮಾನ್ಯವಾಗಿ ಭಾರತೀಯರಲ್ಲಿ ಆಚರಿಸುವ ಹಟ್ಟಿ ಹಬ್ಬಗಳು ಸಂಪ್ರದಾಯಗಳ ಹಿನ್ನೆಲೆಯಲ್ಲಿ ಜೀವಂತಿಕೆ ಪಡೆದುಕೊಳ್ಳುತ್ತವೆ. ಇವು ಪರಂಪರಾಗತವಾಗಿ ಪೀಳಿಗೆಯಿಂದ ಪೀಳಿಗೆಗೆ ಕೊಂಡೊಯ್ಯುತ್ತವೆ. ಅವುಗಳಲ್ಲಿ ಯಾವುವು ಅಂದರೆ ಕಾಡುಗೊಲ್ಲರಲ್ಲಿ ಶಿವರಾತ್ರಿ ಹಾಗೂ ಹಟ್ಟಿ ಹಬ್ಬ (ದೀವಳಿಗೆ) ಕಾರಹುಣ್ಣಿಮೆ (ಎತ್ತಿನ ಹಬ್ಬ), ಗುಗ್ಗರಿ ಹಬ್ಬ ಆಚರಿಸುವರು, ಮ್ಯಾಸಬೇಡರಲ್ಲಿ

ಆಚರಿಸುವ ಹಬ್ಬದ ಪ್ರಕಾರಗಳು ಹಲವು ಇದ್ದರು ಅದರಲ್ಲಿ ಪ್ರಮುಖ ಹಬ್ಬವೆಂದರೆ ಯುಗಾದಿ ಮತ್ತು ಗುಗ್ಗರಿ ಹಬ್ಬ, ಕಾರಹುಣ್ಣಿಮೆ ಹಾಗೂ ದೀವಳಿಗೆ ಈ ಹಬ್ಬಗಳನ್ನು ಸಂಭ್ರಮದಿಂದ ಆಚರಣೆ.ಮಾಡುವುದು ಪ್ರಸ್ತುತ ಅಧ್ಯಯನದಲ್ಲಿ ಕಂಡುಬಂದಿದೆ.

**ಆಚರಣಾ ತಾಣಗಳು:**

ಕಾಡುಗೊಲ್ಲರ ಎತ್ತಪ್ಪ, ಜುಂಜಪ್ಪ, ಕಾಟಮದೇವರು, ಚಿತ್ರದೇವರು, ಪಾತೇದೇವರು, ಕೇತೇದೇವರು, ನರಸಿಂಹ, ರಂಗಪ್ಪ ಇವು ಪ್ರಮುಖ ದೇವರುಗಳು. ಎತ್ತಪ್ಪದೇವರ ಕೇಂದ್ರಗಳು ಹಿರಿಯೂರು ತಾಲ್ಲೂಕಿನ ವೇಣಕಲ್ಲು ಗುಡ್ಡದಲ್ಲಿ ಮತ್ತು ಚಿತ್ರದುರ್ಗ ತಾಲ್ಲೂಕಿನ ತಳುಕಿನ ಗುಡ್ಡದಲ್ಲಿ ಇದೆ. ಜುಂಜಪ್ಪನ ಕೇಂದ್ರಗಳು ಸಿರಾ ತಾಲ್ಲೂಕಿನ ಬೇವಿನಹಳ್ಳಿಯಲ್ಲಿ ಮತ್ತು ಗುಬ್ಬಿ ತಾಲ್ಲೂಕಿನ ಹಾಗಲವಾಡಿಯಲ್ಲಿದೆ. ಚಿತ್ರದೇವರ ಕೇಂದ್ರಗಳು ಮಡಕಸಿರಾ ತಾಲ್ಲೂಕಿನ ಮದನಕುಂಟೆಯಲ್ಲಿ, ಪಾವಗಡ ತಾಲ್ಲೂಕಿನ ಪಾಲೇನಹಳ್ಳಿಯೂ ಇದೆ. ಈ ಮೂರು ದೇವರುಗಳನ್ನು ಮಾರನವರಗೊಲ್ಲರು ಪೂಜಿಸುತ್ತಾರೆ. ಅನಂತಪುರ ಜಿಲ್ಲೆಯ ಕದರಿಯಲ್ಲಿ ನರಸಿಂಹಸ್ವಾಮಿ ಮತ್ತು ಹಿರಿಯೂರು ತಾಲ್ಲೂಕಿನ ನಂದಿಹಳ್ಳಿಯಲ್ಲಿ ರಂಗಪ್ಪದೇವರ ಕೇಂದ್ರವಿದೆ. ಈ ದೇವರುಗಳನ್ನು ಕಾಡುಗೊಲ್ಲರು ಮಾತ್ರ ಪೂಜಿಸುತ್ತಾರೆ. ಮಾರನವರ ಗೊಲ್ಲರು ಎಂಬ ಪಂಗಡದವರು ಪೂಜಿಸುವುದಿಲ್ಲ. ಹಿರಿಯೂರು ತಾಲ್ಲೂಕಿನ ಯರಬಳ್ಳಿ ಮತ್ತು ಇಕ್ಕನೂರಿನಲ್ಲಿ ಕಾಟಮದೇವರ ಆರಾಧನಾ ಕೇಂದ್ರವಿದೆ. ಚಳ್ಳಕೆರೆ ತಾಲ್ಲೂಕಿನ ಚನ್ನಮ್ಮನಾಗತಿಹಳ್ಳಿಯಲ್ಲಿ ಕೇತೇದೇವರ ಕೇಂದ್ರವಿದೆ. ಹಿರಿಯೂರಿನ ಕೂಡಲಹಳ್ಳಿಯಲ್ಲಿ ಪಾತೇದೇವರ ಕೇಂದ್ರವಿದೆ. ಈ ಎಲ್ಲಾ ಪುರುಷ ದೇವರುಗಳ ಜೊತೆಗೆ ಕಾಡುಗೊಲ್ಲರು ಒಂದು ಹೆಣ್ಣು ದೇವರನ್ನು ಪೂಜಿಸುತ್ತಾರೆ. ಆ ಹೆಣ್ಣು ದೇವತೆಯನ್ನು ಗೌರಸಂದ್ರ ಮಾರಕ್ಕ, ಬೇವಿನಹಳ್ಳಿ ಕರಿಯಮ್ಮ, ಕರೇಓಬನಹಳ್ಳಿ ಮಾರಮ್ಮ, ಗೊಲ್ಲಹಳ್ಳಿಯಮ್ಮ, ಎಂಬ ಹೆಸರುಗಳಿಂದ ಪೂಜಿಸುತ್ತಾರೆ.

ಅಷ್ಟೇ ಅಲ್ಲದೇ ತಮ್ಮಲ್ಲಿ ಪರಾಕ್ರಮಿಯಾದ ಒಬ್ಬ ವೀರ ತನ್ನ ಸಮುದಾಯಕ್ಕಾಗಿ ಮಡಿದಿದ್ದರೆ ಅಂತವರನ್ನು ದೇವರೆಂದು ತಿಳಿದು ಪೂಜಿಸುವ ಪರಿ ಗೊಲ್ಲರಲ್ಲಿದೆ. ಅವರ ಹೆಸರಿನಲ್ಲಿ ದೇವಸ್ಥಾನಗಳನ್ನು ಕಟ್ಟಿ ಆರಾಧಿಸುತ್ತಾರೆ. ವೀರಣ್ಣ, ಅಜ್ಜಪ್ಪ, ಸಿರಿಯಪ್ಪ, ಯರ‍್ರಪ್ಪ ಮೊದಲಾದವರನ್ನು ಇಲ್ಲಿ ನೆನೆಯಬಹುದು.

ಮ್ಯಾಸಬೇಡರಿಗೆ ಭೌಗೋಳಿಕವಾಗಿ ನದಿ, ಬೆಟ್ಟ, ಗುಡ್ಡ, ಮರಗಳೇ ಪೂಜನೀಯ ಸ್ಥಳಗಳಾಗಿವೆ. ಆರಂಭದಲ್ಲಿ ನಿಸರ್ಗವನ್ನೇ ದೇವರೆಂದು ಪೂಜಿಸುತ್ತಿದ್ದರು. ಕಾಲಕ್ರಮೇಣ ತನ್ನ ಜನಾಂಗಕ್ಕಾಗಿ ಹೋರಾಡಿ ಮಡಿದ ನಾಯಕರನ್ನೇ ದೇವರೆಂದು ಪೂಜಿಸುವ ಪರಿಯನ್ನು ಬೇಡರು ಬೆಳೆಸಿಕೊಂಡರು. ಅವರಿಗಾಗಿ ದೇವಾಲಯಗಳನ್ನು ಸ್ಥಾಪಿಸಿಕೊಂಡರು. ಕೆಲವು ಆಚರಣಾ ವಿಧಿ ವಿಧಾನಗಳ ಮೂಲಕ ಆ ನಾಯಕರನ್ನು ಆರಾಧಿಸುತ್ತಾರೆ. ಅವರನ್ನು ಸಾಂಸ್ಕೃತಿಕ ನಾಯಕರು ಎಂದು ಕರೆಯಬಹುದು. 'ಉತ್ತರಕನ್ನಡ ಜಿಲ್ಲೆಯ ಹಾನಗಲ್ಲು, ಸಿರ್ಸಿ, ಸಿದ್ಧಾಪುರ, ಅನಿಲಗೊಳ ಮುಂತಾದ ಸ್ಥಳಗಳಲ್ಲಿ ಕುಮಾರರಾಮನ ಆರಾಧನಾ ಕ್ಷೇತ್ರಗಳಿರುವುದು ಗಮನಾರ್ಹ. ಹಬ್ಬ, ಜಾತ್ರೆಗಳು ಇಲ್ಲಿ ನಡೆಯುವುದು ಗಮನಾರ್ಹ. ಬೆಳಗಾಂ ಜಿಲ್ಲೆಯಲ್ಲಿ ಸೂಲದ ಈರಪ್ಪ(ಅಥಣಿ), ಚಿಕ್ಕಲದಿನ್ನೆಯ ದೊಡ್ಡನಾಯಕನನ್ನು ಆರಾಧಿಸಲಾಗುತ್ತದೆ. ಹಾವೇರಿ ಜಿಲ್ಲೆಯ ಕಾಗಿನೆಲೆಯಲ್ಲಿ ಬೇಡರ ಕಣ್ಣಪ್ಪನ ದೇವಾಲಯವಿದೆ'.

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಉಳ್ಳಾರ್ಥಿಯಲ್ಲಿ ಬೋರೆದೇವರು, ಗುಡಿಹಳ್ಳಿ ಓಬಳದೇವರು, ದಾವಣಗರ ಜಿಲ್ಲೆಯ ಜಗಳೂರಿನಲ್ಲಿ ಪಾಪನಾಯಕ ಐಕ್ಯವಾದ ಸ್ಥಳದಲ್ಲಿ ಪಾಪನಾಯಕನ ದೇವಾಲಯ, ದಾವಣಗೆರೆ ತಾಲ್ಲೂಕಿನ ಕಾಮಗೇತನ ಹಳ್ಳಿಯಲ್ಲಿ ಸೂರದೇವರು, ಚಳ್ಳಕೆರೆ ತಾಲ್ಲೂಕಿನ ರುದ್ರಮ್ಮನಹಳ್ಳಿಯಲ್ಲಿ ನಲುಜೆರುವಯ್ಯ, ಮೊಳಕಾಲ್ಮೂರು ತಾಲ್ಲೂಕಿನ ನುಂಕಮಲೆಯಲ್ಲಿ ನುಂಕಪ್ಪ, ಹೊಳಲ್ಕೆರೆ ತಾಲ್ಲೂಕಿನಲ್ಲಿರುವ ಬೇಡರ ಪ್ರಾಚೀನ ಆರಾಧನಾ ಕ್ಷೇತ್ರವಾದ ಗಂಜಿಗಟ್ಟೆಯಲ್ಲಿ ಗಾದ್ರಿಪಾಲನಾಯಕನ ದೇವಾಲಯ, ಚಳ್ಳಕೆರೆ ತಾಲ್ಲೂಕಿನ ನಾಯಕನಹಟ್ಟಿಯಲ್ಲಿ ತಿಪ್ಪೇರುದ್ರಸ್ವಾಮಿ ದೇವಸ್ಥಾನ, ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ವಲಸೆ ಎಂಬ ಪ್ರದೇಶದಲ್ಲಿ ಯರಗಾಟನಾಯಕ ಸಮಾಧಿಯಾದ ಪ್ರಯುಕ್ತ ಆ ಸಮಾಧಿಯೇ ಇಂದು ದೇವಾಲಯವಾಗಿದೆ. ಅದೇ ರೀತಿ ಚಿತ್ರದುರ್ಗ ತಾಲ್ಲೂಕಿನ ಬೆಳಗಟ್ಟ ಮತ್ತು ಗೋನೂರಿನಲ್ಲಿ ಯರಗಾಟನಾಯಕನ ದೇವಾಲವಿದೆ. ಅಲ್ಲಿನ ಬೇಡರೆಲ್ಲರೂ ಈತನ ಅನುಯಾಯಿಗಳಾಗಿದ್ದಾರೆ. ಮೊಳಕಾಲ್ಮೂರು ತಾಲ್ಲೂಕಿನ ಮುತ್ತಿಗಾರಹಳ್ಳಿಯಲ್ಲಿ ಮ್ಯಾಸಬೇಡರನ್ನು ರಾಕ್ಷಸನಾಗಿ ಕಾಡಿದ ಕೊಡಗಲು ಬೊಮ್ಮನ ದೇವಾಲಯ ಇದೆ.ಮೊಳಕಾಲ್ಮೂರು ತಾಲ್ಲೂಕಿನಲ್ಲಿನ ಓಬಣ್ಣನಹಳ್ಳಿಯಲ್ಲಿ ಬೇಡರ ಸಂಸ್ಕೃತಿ ನಿರ್ಮಾಪಕನಾದ ಯರಮಂಚಿನಾಯಕನ ಗುಡಿ, ಗೌರಸಮುದ್ರದಲ್ಲಿ ಗೌರಸಂದ್ರ ಮಾರಮ್ಮ ಮತ್ತು ಬೊಮ್ಮನಾಯಕನ ದೇವಾಸ್ಥಾನ, ಚಳ್ಳಕೆರ ತಾಲ್ಲೂಕಿನ ಗರಣಿಹಳ್ಳದ ಸಮೀಪದಲ್ಲಿ ಬರುವ ಹೀರೆಹಳ್ಳಿ ಎಂಬ ಗ್ರಾಮದಲ್ಲಿ ದಡ್ಡಿಸೂರನಾಯಕನ ದೇವಾಲಯವಿದೆ. ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ರಾಯದುರ್ಗ ತಾಲ್ಲೂಕಿನ ಗಲಗಲ್ಲು ಎಂಬ ಸಣ್ಣ ಗ್ರಾಮದಲ್ಲಿ ಗಾಜನಾಯಕನ ದೇವಾಲಯ, ಚಳ್ಳಕೆರೆ ತಾಲ್ಲೂಕಿನ ಬೇಡರೆಡ್ಡಿಹಳ್ಳಿಯಲ್ಲಿ ಪಚ್ಚಪದಿ ದೊಡ್ಡ ತಿರುಮಲ ದೇವರು, ದೇವರಹಳ್ಳಿಯಲ್ಲಿ ದಡ್ಲುಮಾರಮ್ಮ, ನಾಯಕನಹಟ್ಟಿಯಲ್ಲಿ ಒಡ್ನಳ್ಳಿ ಮಾರಮ್ಮ, ಕುದಾಪುರದಲ್ಲಿ ಚಿಂತಗುಟ್ಲು ಬೋರೇದೇವರು, ದೊಣಮಂಡಲಹಟ್ಟಿಯಲ್ಲಿ ಮಂದಬೊಮ್ಮದೇವರು, ರುದ್ರಮ್ಮಹಳ್ಳಿಯಳ್ಳಿ ನಲ್ಲಜೆರವು ಓಬಳುದೇವರು, ವರವು ಎಂಬ ಸ್ಥಳದಲ್ಲಿ ಮಲ್ಲಿನಾಯಕ ಬೊಮ್ಮದೇವರು, ನನ್ನಿವಾಳದಲ್ಲಿ ಬಂಗಾರು ದೇವರು, ಬೋಸೇದೇವರಹಟ್ಟಿಯಲ್ಲಿ ಬೋಸೇದೇವರು, ಕೂಡ್ಲಿಗಿ ತಾಲ್ಲೂಕಿನ ಮಾಕನಡುಕಿನಲ್ಲಿ ಓಬಳದೇವರು, ಚಳ್ಳಕೆರೆ ತಾಲ್ಲೂಕಿನ ನಲಗೇತನಹಟ್ಟಿಯಲ್ಲಿ ಚನ್ನಕೇಶವ ಮತ್ತು ಚಿತ್ರದೇವರುಗಳು, ಚಳ್ಳಕೆರೆ ಕಾಟಪ್ಪನಹಟ್ಟಿಯ ಕಾಟಮುಲಿಂಗೇಶ್ವರ ಮುಂತಾದ ಸ್ಥಳಗಳು ಬೇಡರ ಆರಾಧನಾ ನೆಲೆಗಳಾಗಿವೆ.

ಮ್ಯಾಸಬೇಡರಲ್ಲಿ ಇಡೀ ಸಮುದಾಯಕ್ಕೆ ಮೂಲ ನೆಲೆಯೆಂದರೆ ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲ್ಲೂಕಿನಲ್ಲಿರುವ ಕಂಪಳದೇವರಹಟ್ಟಿ ಕ್ಷೇತ್ರ. ಶ್ರೀಕೃಷ್ಣ ಇಲ್ಲಿ ಬೇಡರನ್ನು ಬೇಟೆಯಿಂದ ಸ್ಥಿತ್ಯಾಂತರಗೊಳಿಸಿದನೆಂದು ಹೇಳುತ್ತಾರೆ. ಇಲ್ಲಿ ಸಾಂಸ್ಕೃತಿಕ ಸಂಘರ್ಷ ನಡೆದು ಬೇಡರು ಬೇಟೆಯನ್ನು ತೊರೆದು ಪಶುಪಾಲನ ವೃತ್ತಿಯನ್ನು ಕೈಗೊಂಡರು. ಬೇಡರ ಬಹು ಪ್ರಮುಖವಾದ ಕೆಲವು ಹಬ್ಬಗಳು ಈ ಸ್ಥಳದಲ್ಲಿ ನಡೆಯುತ್ತವೆ. ಆಗ ಸುತ್ತಾ ಮುತ್ತಾ ಜಿಲ್ಲೆಯಲ್ಲಿ ವಾಸವಾಗಿರುವ ಬೇಡರೆಲ್ಲರೂ ಬಂದು ಇಲ್ಲಿ ನಡೆಯುವ ವಿಶಿಷ್ಟ ಹಬ್ಬಗಳನ್ನು ಮುಗಿಸಿಕೊಂಡು ಹಿಂದಿರುಗುತ್ತಾರೆ.

ಬೇಡರಲ್ಲಿ ಗುಗ್ಗರಿಹಬ್ಬ, ದೀವಳಿಗೆ ಮತ್ತು ಕಾರು ಹುಣ್ಣಿಮೆಗಳಂತಹ ಹಬ್ಬಗಳು ವಿಶೇಷವಾಗಿರುತ್ತವೆ. ಈ ಹಬ್ಬಗಳನ್ನು ಅವರು ವಾಸಿಸುವ ಸ್ಥಳಗಳಲ್ಲಿ ಮಾಡಿಕೊಂಡರೆ ಹೆಡೆಕಟ್ಟಿನ ಹಬ್ಬದಂತಹ ವಿಶೇಷ ಹಬ್ಬವನ್ನು ಎಲ್ಲ ಬೆಡಗಿನವರು ಕೂಡಿ ತಮ್ಮ ಮೂಲನೆಲೆಯಾದ ಕಂಪಳದೇವರಹಟ್ಟಿಯಲ್ಲಿಯೇ ಮಾಡುವುದನ್ನು ಕಾಣಬಹುದು.

ಇಲ್ಲಿ ಕಂಪಳರಂಗಸ್ವಾಮಿ, ಪಾಪನಾಯಕ, ಗಾದ್ರಿಪಾಲನಾಯಕ, ಭಾಗ್ಯದಲಕ್ಷ್ಮಮ್ಮ ಮುಂತಾದ ದೇವಾಲಯಗಳಿವೆ. ಸಂಸ್ಕೃತಿಯ ಮೂಲಕ ಭಾವೈಕ್ಯತೆ ಸಾರಲು ಬೇಡರು ಆವಾಗಾವಾಗ ಇಲ್ಲಿ ಸೌಹಾರ್ದಯುತ ಕಾರ್ಯಕ್ರಮಗಳನ್ನು ನಡೆಸುತ್ತಾರೆ. ಅಂತಹ ಕಾರ್ಯಕ್ರಮಗಳಲ್ಲಿ ಬಹು ಮುಖ್ಯವಾದ ಸಾಂಸ್ಕೃತಿಕ ಹಬ್ಬ 'ಹೆಡೆಕಟ್ಟಿನ ಹಬ್ಬ' (ಪಡಗಟ್ಟಿನ ಪಂಡುಗ) ನಡೆಯುವುದೇ ಇಲ್ಲಿ. ಈ ಹಬ್ಬದಲ್ಲಿ ಇಡೀ ಬೇಡಕುಲವೇ ಇಲ್ಲಿ ಸೇರಿರುತ್ತದೆ. ೧೯೭೫ ಡಿಸಂಬರ್ ೧೨ ರಂದು ನಡೆದಿದ್ದ ಈ ಹಡೆಕಟ್ಟಿನ ಹಬ್ಬ ಸುಮಾರು ನಲವತ್ತೊಂದು ವರ್ಷಗಳ ತರುವಾಯ ೨೦೧೬ ಡಿಸಂಬರ್ ೯ ರಂದು ನಡೆದಿದೆ. ಈ ಹಬ್ಬದ ವೈಶಿಷ್ಟ್ಯವೆಂದರೆ ದೇವರ ಮುತ್ತಿನ ಕಾಲುಪೆಂಡೆಯನ್ನು ಭಕ್ತಾದಿಗಳಿಗೆ ತೋರಿಸುವುದು.

ಈ ಹಡೆಕಟ್ಟಿನ ಹಬ್ಬವನ್ನು ಶ್ರಾವಣಮಾಸದಲ್ಲಿ ಮಾಡುತ್ತಾರೆ. ಮುತ್ತಿನಕಾಲುಪೆಂಡೆಯನ್ನು ಏಳೆಡೆ ಸರ್ಪ ವಿಷ್ಣು ಪರಮಾತ್ಮನಿಗೆ ಕೊಟ್ಟಿತ್ತೆಂದು, ಅದನ್ನು ವಿಷ್ಣು ಪರಮಾತ್ಮ ಮಂದರಾಜನಿಗೆ ಕೊಟ್ಟನೆಂಬುದು ಪ್ರತೀತಿ. ಈ ಹಬ್ಬ ನಾಗದೇವತೆಗೆ ಸಂಬಂಧಿಸಿದ್ದು, ಅಡವಿಯಲ್ಲಿ ಸಂಚಾರಿಗಳಾಗಿದ್ದ ಮ್ಯಾಸರಿಗೆ ಹಾವುಗಳ ಭೀತಿಯಿಂದ ತಪ್ಪಿಸಿಕೊಳ್ಳಲು ಅಥವಾ ಅವುಗಳನ್ನು ಶಾಂತಿ ಮಾಡುವ ಸಲುವಾಗಿ ಈ ರೀತಿಯ ಆಚರಣೆ ಮಾಡಿರಬಹುದು. ಒಟ್ಟಿನಲ್ಲಿ ಇದು ಸರ್ಪಕ್ಕೆ ಸಂಬಂಧಿಸಿದ್ದು ಎಂಬುದು ಅದರ ಆಚರಣೆಗಳಲ್ಲಿಯೇ ತಿಳಿಯುತ್ತದೆ.

ಇದೇ ರೀತಿ ಪದಿಮುತ್ತಯ್ಯಗಳ ಜಾತ್ರೆ ಎಂಬ ಜಾತ್ರೆ ನಡೆದು ಸುಮಾರು ವರ್ಷಗಳ ತರುವಾಯ ಅಂದರೆ ಇಪ್ಪತ್ತೆರೆಡು ವರ್ಷಗಳ ನಂತರ ೨೦೧೭ ರ ಪೆಬ್ರವರಿ ೧೯ ರಿಂದ ೨೩ ರವರೆಗೆ ನಡೆದಿದೆ. ಇಡೀ ಮ್ಯಾಸಮಂಡಲವೇ ಸೇರಿ ಮೊಳಕಾಲ್ಮೂರು ತಾಲ್ಲೂಕಿನ ತುಮಕೂರ್ಲಹಳ್ಳಿ ವ್ಯಾಪ್ತಿಗೆ ಸೇರಿದ ಊಟೆಕುಂಟೆ ಒಡಕುಕಟ್ಟೆ ಹತ್ತಿರ ಮಲಿಯಮ್ಮನ ಬಂಡೆಯ ಹಳ್ಳದ ಸಮೀಪದಲ್ಲಿ ಜಾತ್ರೆ ಏರ್ಪಡಿಸಲಾಗಿತ್ತು. ಇಡೀ ಬೇಡರ ಪಡೆಯೇ ಸೇರಿ ಆಚರಿಸುವ ಹಬ್ಬ ಇದಾಗಿದೆ. ಊರಿನಿಂದ ದೂರದ ಒಂದು ಅರಣ್ಯದಂಥ ಪ್ರದೇಶದಲ್ಲಿ ಈ ಹಬ್ಬವನ್ನು ಮಾಡುತ್ತಾರೆ. ಮೂರು ಜನ ನಾಯಕರು, ಏಳು ಜನ ಹಿರಿಯರು, ಹಟ್ಟಿನಾಯಕ, ಹನ್ನೆರೆಡು ಜನ ಕೋಮುದಾರರು, ಹನ್ನೆರೆಡು ಜನ ಪೂಜಾರಿಗಳು, ಕಿಲಾರಿಗಳು, ಪದಿಪೂಜಾರಿಗಳು, ಇಡೀ ಮ್ಯಾಸಮಂಡಲದ ಕುಲಸಾವಿರದವರು ಎಲ್ಲರು ಸೇರಿ ಮಾಡುವ ಜಾತ್ರೆ ಇದಾಗಿದೆ. ಹೀಗೆ ಬೇಡ ಸಮುದಾಯದ ಆರಾಧನ ಕ್ಷೇತ್ರಗಳಲ್ಲಿ ಬಹು ಮುಖ್ಯವಾಗಿ ಕಂಪಳದೇವರಹಟ್ಟಿ, ಸನ್ನಿವಾಳ ಮತ್ತು ಮಿಂಚೇರಿ ಪ್ರದೇಶಗಳು ಬಹು ಮುಖ್ಯವಾದವು.

ಕಾಡುಗೊಲ್ಲರು ಮತ್ತು ಮ್ಯಾಸಬೇಡರ ಸಾಂಸ್ಕೃತಿಕ ಪರಂಪರೆ ಕೊಂಚ ಭಿನ್ನವೆನಿಸಿದರೂ ಎರಡು ಸಮುದಾಯಗಳ ಆಚಾರ, ವಿಚಾರ, ನಂಬಿಕೆ, ಹಬ್ಬ, ಸಂಪ್ರದಾಯಗಳಲ್ಲಿ ಅನೇಕ ಸಾಮ್ಯ ಅಂಶಗಳಿರುವುದನ್ನು ಕಾಣಬಹುದು. ಅವರಲ್ಲಿನ ಸಾಂಸ್ಕೃತಿಕ ಸಾಮ್ಯವಿಚಾರಗಳಿಂದಾಗಿ ಕಾಡುಗೊಲ್ಲರು ಮತ್ತು ಮ್ಯಾಸಬೇಡರು ಮೂಲದಲ್ಲಿ ಒಂದೇ ಆಗಿದ್ದು, ತದನಂತರದಲ್ಲಿ ಬೇರೆ ಬೇರೆಯಾಗಿದ್ದಾರೆಂಬ ಅಭಿಪ್ರಾಯಕ್ಕೆ ಬರಬಹುದು.

ಆದರೆ ಜಾತ್ರೆಗಳನ್ನು ಕಾಡುಗೊಲ್ಲರು ವಿಶೇಷವಾಗಿ ಮಾಡುತ್ತಾರೆ. ಜುಂಜಪ್ಪ, ಎತ್ತಪ್ಪ, ಚಿತ್ರದೇವರು, ಕಾಟಮದೇವರು, ಪಾತೇದೇವರು, ಕೇತೇದೇವರು, ಗೌರಸಮುದ್ರದ ಮಾರಕ್ಕ, ಬೇವಿನಹಳ್ಳಿ ಕರಿಯಮ್ಮ, ಪುರಲಹಳ್ಳಿ ಭೂತಪ್ಪ, ಮುಂತಾದ ಜಾತ್ರೆಗಳನ್ನು ಮಾಡುತ್ತಾರೆ.

**ಎತ್ತಪ್ಪ ಮತ್ತು ಜುಂಜಪ್ಪನ ಜಾತ್ರೆ:**

ಈ ದೇವರ ಜಾತ್ರೆಗಳು ದೀಪಾವಳಿಯ ಸಂದರ್ಭದಲ್ಲಿ ನಡೆಯುತ್ತವೆ. ಈ ಜಾತ್ರೆಗಳಲ್ಲಿ ಜಾಂಡೇವು(ಬಾವುಟ) ಹಾರಿಸುವುದು, ಹಾಲು ಮೀಸಲು ಕರೆಯುವುದು, ದೇವರಿಗೆ ಗಂಗಾಸ್ನಾನ ಮಾಡಿಸುವುದು, ಹರಕೆಗಳನ್ನು ತೀರಿಸುವುದು, ದೀಪ ಏರಿಸುವುದು ಬಹು ಮುಖ್ಯವಾದ ಕಾರ್ಯಕ್ರಮಗಳು. ಮೊದಲಿಗೆ ದೇವಸ್ಥಾನದ ಎದುರಿಗೆ ಒಂದು ಕಂಬ ನಿಲ್ಲಿಸಿ ಅದಕ್ಕೆ ಜಾಂಡೇವು ಅಂದರೆ ಕಾವಿಯ ಬಣ್ಣದ ಬಾವುಟವನ್ನು ಹಾರಿಸುತ್ತಾರೆ. ಅದು ಜಾತ್ರೆಯನ್ನು ಆರಂಭಿಸಿದ್ದರ ಗುರುತು. ಅನಂತರ ಪೂಜಾರರು ಊರ ಸಮೀಪದಲ್ಲಿರುವ ಹಳ್ಳಕ್ಕೆ ವಾದ್ಯಸಮೇತ ದೇವರನ್ನು ಕರೆದುಕೊಂಡು ಹೋಗಿ ಗಂಗಾಸ್ನಾನ ಮಾಡಿಸಿಕೊಂಡು ಬರುತ್ತಾರೆ. ಭಕ್ತರು ಒಂದು ವಾರಕ್ಕೆ ಮೊದಲೇ ತಾವು ಸಾಕಿರುವ ಹಸು, ಕುರಿ, ಮೇಕೆ ಗಳಿಂದ ಹಾಲನ್ನು ಕರೆದು ಅದನ್ನು ಪ್ರತ್ಯೇಕವಾಗಿ ತೆಗೆದು ಕಾಯಿಸಿ ಹೆಪ್ಪು ಹಾಕಿ ಮೊಸರು ಮಾಡಿ, ಆ ಮೊಸರಿನಿಂದ ಬೆಣ್ಣೆಯನ್ನು ತೆಗೆದು ಆ ಬೆಣ್ಣೆಯನ್ನು ಕಾಯಿಸಿ ಬಂದ ತುಪ್ಪವನ್ನು ಶೇಖರಿಸಿಡುತ್ತಾರೆ. ಇದನ್ನು ಮೀಸಲು ತುಪ್ಪ ಎಂದು ಕರೆದು ಜಾತ್ರೆಗೆ ಬರುವಾಗ ತರುತ್ತಾರೆ. ದೇವಸ್ಥಾನದ ಮುಂಭಾಗದಲ್ಲಿ ಆರೇಳು ಅಡಿಗಳಷ್ಟು ಎತ್ತರವಾಗಿರುವ ಮತ್ತು ಮೂರು ಅಡಿಗಳಷ್ಟು ಸುತ್ತಳತೆ ಇರುವ ಹಿತ್ತಾಳೆಯ ದೀಪದ ಕಂಬವನ್ನು ಇಟ್ಟಿರುತ್ತಾರೆ. ಇದಕ್ಕೆ ಎಣ್ಣೆ ಬತ್ತಿ ಹಾಕಿ ಹಚ್ಚುತ್ತಾರೆ. ಭಕ್ತಾದಿಗಳು ತಾವು ಜಾತ್ರೆಗೆ ಬರುವಾಗ ತಂದಿದ್ದ ಮೀಸಲು ತುಪ್ಪವನ್ನು ಈ ದೀಪಕ್ಕೆ ಹಾಕುತ್ತಾರೆ.

ಭಕ್ತಾದಿಗಳು ತಮ್ಮ ಮನೆಯಲ್ಲಿ ಯಾರಿಗಾದರೂ ಹಾವು, ಚೇಳು ಕಡಿದಿದ್ದಾಗ ಅಥವಾ ದನಕರುಗಳಿಗೆ ಉಣ್ಣೆ ಹತ್ತಿದಾಗ ಅದು ವಾಸಿಯಾದರೆ ಜುಂಜಪ್ಪನಿಗಾಗಲಿ, ಎತ್ತಪ್ಪನಿಗಾಗಲಿ, ಚಿತ್ರದೇವರಿಗಾಗಲಿ ಹರಕೆ ಒಪ್ಪಿಸುವುದಾಗಿ ಹರಸಿಕೊಂಡಿರುತ್ತಾರೆ. ಈ ಬಗೆಯ ಹರಕೆಗಳು ಹೆಚ್ಚಾಗಿ ಜುಂಜಪ್ಪನಿಗೆ ಮಾಡಿಕೊಳ್ಳುವುದುಂಟು. ಚಿನ್ನದ ಮತ್ತು ಬೆಳ್ಳಿಯ ಹಾವು, ಚೇಳು, ಮಂಡರಗಪ್ಪೆಗಳನ್ನು ಜಾತ್ರೆಗಳಲ್ಲಿ ಬೀಡುಬಿಟ್ಟಿರುವ ಅಂಗಡಿಗಳಲ್ಲಿ ಇಟ್ಟುಕೊಂಡಿರುತ್ತಾರೆ. ಭಕ್ತರು ತಾವು ಮಾಡಿಕೊಂಡಿರುವ ಹರಕೆಯೋಪಾದಿಯಲ್ಲಿ ಚೇಳು, ಹಾವು, ಮಂಡರಗೊಪ್ಪೆಯಲ್ಲಿ ಒಂದನ್ನು

ತೆಗೆದುಕೊಂಡು ಹೋಗಿ ದೇವರ ಡಬ್ಬಿಗಳಿಗೆ ಹಾಕುತ್ತಾರೆ. ಈ ಹರಕೆಗಳು ಭಕ್ತರ ಆರ್ಥಿಕ ಪರಿಸ್ಥಿತಿಯನ್ನವಲಂಬಿಸಿರುತ್ತವೆ. ಭಕ್ತಾದಿಗಳು ಇಂತಹ ಹರಕೆಗಳನ್ನು ಒಪ್ಪಿಸಿ ಹಣ್ಣು ಕಾಯಿ ಮಾಡಿಸಿಕೊಂಡು ದೇವರನ್ನು ಅಡ್ಡಣಿಗೆಯ ಮೇಲೆ ಮೆರವಣಿಗೆ ಮಾಡುತ್ತಾರೆ. ಜಾತ್ರೆಯ ಸಂದರ್ಭದಲ್ಲಿ ಕೆಲವು ಭಕ್ತಾದಿಗಳು ಶಾಸ್ತ್ರ ಕೇಳುವುದುಂಟು. ಇಂತಹ ಎಲ್ಲಾ ಆಚರಣೆಗಳು ಮುಗಿದ ನಂತರ ದೇವರನ್ನು ಗುಡಿದುಂಬಿಸುತ್ತಾರೆ. ಹಾರಿಸಿದ ಜಾಂಡೇವನ್ನು ಇಳಿಸುತ್ತಾರೆ. ಅಲ್ಲಿಗೆ ಜಾತ್ರೆ ಮುಕ್ತಾಯವಾಗುತ್ತದೆ.

ಜುಂಜಪ್ಪನ ಜಾತ್ರೆ ಹಾಗಲವಾಡಿಯ ಬಳಿ ಇರುವ ಜುಂಜಪ್ಪನ ಹಟ್ಟಿಯಲ್ಲಿ ಮಾತ್ರವಲ್ಲದೆ ಕಳುವಾರ ಹಳ್ಳಿಯ ಬಳಿ ಇರುವ ಜುಂಜಪ್ಪನ ಸಮಾಧಿಯ ಬಳಿಯೂ ನಡೆಯುತ್ತದೆ. ಎತ್ತಪ್ಪನ ಜಾತ್ರೆ ಹಿರಿಯೂರು ತಾಲ್ಲೂಕಿನ ವೇಣ್‌ಕಲ್ಲು ಗುಡ್ಡದಲ್ಲಿ ನಡೆಯುತ್ತದೆ. ಇದೇ ರೀತಿಯಾಗಿ ಕಾಡುಗೊಲ್ಲರು ಚಿತ್ರದೇವರು, ಕಾಟಮದೇವರು, ಪಾತೇದೇವರು, ಕೇತೇದೇವರು, ಗೌರಸಮುದ್ರದ ಮಾರಕ್ಕ, ಬೇವಿನಹಳ್ಳಿ ಕರಿಯಮ್ಮ, ಪುರಲಹಳ್ಳಿ ಭೂತಪ್ಪ, ಮುಂತಾದವರ ಜಾತ್ರೆಗಳನ್ನು ಮಾಡುತ್ತಾರೆ.

**ಕ್ಯಾತೆದೇವರ ಜಾತ್ರೆ :**

ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾ. ಪರಶುರಾಂಪುರ ಹೋಬಳಿಯ ಚೆನ್ನಮ್ಮನಾಗತಿಹಳ್ಳಿಯಲ್ಲಿ ಕೇತೇ ದೇವರ ಜಾತ್ರೆ ನಡೆಯುತ್ತದೆ. ಈ ಜಾತ್ರೆಯು ಇಪ್ಪತ್ತೆಂಟು ದಿನಗಳು ನಡೆಯುತ್ತದೆ. ಈ ಜಾತ್ರೆಯನ್ನು ಹದಿಮೂರು ಗುಡಿಕಟ್ಟಿನವರು ಸೇರಿ ಮಾಡುತ್ತಾರೆ. ಪೂಜಾರಿ, ಗೊಲ್ಲಗೌಡರು, ಸೋಮನವರ ಗೊಲ್ಲರು, ಕೋಣನವರ ಗೊಲ್ಲರು ಎಲ್ಲರೂ ಸೇರಿ ವೈವಿಧ್ಯಮಯವಾಗಿ ತಮ್ಮ ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತಾರೆ. ಹಲವಾರು ಕಡೆಗಳಿಂದ ಭಕ್ತಾದಿಗಳು ಈ ಜಾತ್ರೆಗೆ ಬರುತ್ತಾರೆ. ಆಂಧ್ರಪ್ರದೇಶದ ಕಲ್ಯಾಣದುರ್ಗ, ರಾಯದುರ್ಗ, ಕೂಡ್ಲಿಗಿ, ಬಳ್ಳಾರಿ, ಶಿರಾ, ತುಮಕೂರು, ಮೊಳಕಾಲ್ಮೂರು, ಹೊಸದುರ್ಗ, ಹೊಳಲ್ಕೆರೆ, ಹಿರಿಯೂರು ಹೀಗೆ ಮುಂತಾದ ಭಾಗಗಳಿಂದ ಆಗಮಿಸುತ್ತಾರೆ.

**ಜಾತ್ರೆಯಲ್ಲಿ ಜರುಗುವ ಆಚರಣೆಗಳು :**

- ನವಣೆ ಮತ್ತು ಹುರುಳಿ ಕೈತೊಳೆಯುವುದು ಮತ್ತು ದೇವರಿಗೆ ಕಂಕಣ ಕಟ್ಟುವುದು.
- ದೇವರ ಪೂಜೆಯ ಮರವನ್ನು ಕಡಿದು ಪುರ್ಲಹಳ್ಳಿ ಗ್ರಾಮದ ವಸಲುದಿನ್ನೆಗೆ ಸಾಗಿಸುವುದು
- ಕಳ್ಳೆ ಕಟ್ಟಲು ಕಳ್ಳೆ ಕಡಿಯುವುದು.
- ಎರದಕಳ್ಳೆಯಿಂದ ಗುಡಿ ಕಟ್ಟುವುದು ನಂತರ ಕಳಸ ಸ್ಥಾಪನೆ.
- ಹುತ್ತದ ಪೂಜೆ ಮತ್ತು ಕೋಣದ ಪೂಜೆ.
- ಹಾವಿನಗೂಡು ಮತ್ತು ಮಜ್ಜನ ಬಾವಿ ಹಾಗೂ ಅರಸೇವೆ.

* ಕಳಸ ಕೀಳುವುದು.

* ಹುರುಳಿ ಧಾನ್ಯ ನೈವೇದ್ಯ ಮತ್ತು ಕಂಕಣ ವಿಸರ್ಜನೆ.

ಚಳ್ಳಕೆರೆ ತಾಲ್ಲೂಕಿನ ಚೆನ್ನಮ್ಮನಾಗತಿಹಳ್ಳಿಯಲ್ಲಿ ನೆಲೆಸಿರುವ ಕೇತೇದೇವರು, ಚಂದಮುತ್ತಿ ಬೆಡಗಿನವರಿಗೆ, ಆರಾಧ್ಯದೇವರು. ಈ ದೇವರು ಬತದ ದೇವರು (ವ್ರತ). ಅಂದರೆ ಜಾತ್ರೆಯ ಸಂದರ್ಭದಲ್ಲಿ ಈ ದೇವರ ಒಕ್ಕಲಿನವರು,ಕಠಿಣ ವ್ರತಗಳನ್ನು ಪರಿಪಾಲಿಸಬೇಕು. ಈ ಜಾತ್ರೆ ನಡಿಯುವಷ್ಟು ಕಾಲ ಭಕ್ತರು ಮನೆಯೊಳಗೆ ಹುರುಳಿ, ನವಣೆಗಳನ್ನು ಇಟ್ಟುಕೊಳ್ಳುವುದಿಲ್ಲ ಬೇರೆಯವರ ಮನೆಯಲ್ಲಿ ಇಲ್ಲವೇ ಗೂಡು ಕಟ್ಟಿ ಪ್ರತ್ಯೇಕವಾಗಿಡುತ್ತಾರೆ. ಜಾತ್ರೆಯ ಪ್ರಾರಂಭದ ಮೊದಲನೇ ದಿನವೆ ಹುರುಳಿ ಕೈ ತೊಳೆಯುವುದು ಎಂದು ಪ್ರಾರಂಭಿಸಿ ಹುರುಳಿ ನವಣೆಯನ್ನು ಬೇರೆ ಕಡೆ ಇಡಬಹುದೆಂದು ವರ್ಷಕ್ಕೊಮ್ಮೆ ಸ್ವಚ್ಛತೆಯ ದೃಷ್ಟಿಯಿಂದ ಎಂಬುದಾಗಿ ನನ್ನ ತಾರ್ಕಿಕವಾದ ಆಲೋಚನೆ.

ದೇವರ ಪೂಜೆಯ ಮರವನ್ನು ಕಡಿಯಲು ಪೂಜಾರಿ ಚಂದ್ರಣ್ಣನ್ನು ಹಾಲು ಇರುವಂತ ಮರವನ್ನು ಕಡಿಯಲು ಸೂಚಿಸುತ್ತಾನೆ. ಪೂಜಾರಿ ತೋರಿಸಿದ ಮರವನ್ನೇ, ದೇವರು ತೋರಿಸಿದನೆಂದು ಅವರು ಭಾವಿಸುತ್ತಾರೆ. ಹತ್ತಿಮರವಿರಬಹುದು, ತಗ್ಗುಲಿಮರವಿರಬಹುದು, ಕಳ್ಳಿಯಮರವಿರಬಹುದು, ಹಾಲು ಇರುವ ಮರ ಮಾತ್ರ, ಕಂಬಕ್ಕೆ ಕಡಿಯುತ್ತಾರೆ. ಕಡಿಯುವ ಮುನ್ನಾ ಪೂಜಾರಿ ಚಂದ್ರಣ್ಣ ಮತ್ತು ಗೌಡರು ಪೂಜೆ ಮಾಡಿದ ನಂತರ ಮರವಾಯಿಗಳು ಮರವನ್ನು ಕಡಿಯುತ್ತಾರೆ. ಮರವಾಯಿಗಳು ಮರಕಡಿಯದಿದ್ದರೆ ಜಾತ್ರೆಯೇ ನಡೆಯುವುದಿಲ್ಲ. ಕಂಬದ ಮರಕಡಿದವರನ್ನು ಕುರಿತು ಪದ ಹೇಳುತ್ತಾರೆ.

ಕಂಬಕಡುದಣ್ಣಾಗೆ ನಿಂಬೆ ಹಣ್ಣ ಕೊಡಿರೋ
ಜೋಳಿಗೆ ತುಂಬಾ ಹೊನ್ನ ಕೊಡಿರೋ ತಂದನ್ನಾ ತಾನೋ
ಜೋಳಿಗೆ ತುಂಬಾ ಹೊನ್ನ ಕೊಡಿರೋ ನಿಂಗಣ್ಣನ
ಕಂಬವ ಕಡಿದ ಮರವಯ್ಯಾಗೆ ತಂದನ್ನಾ ತಾನೋ

ಈ ಪದದ ಅರ್ಥವೇನೆಂದರೆ ಮರಕಡಿದವರಿಗೆ ಶ್ರಮಕ್ಕೆ ಏನಾದರೂ ಕೊಡಬೇಕು ಎಂದರ್ಥವಾಗುತ್ತದೆ. ಮರವಾಯಿಗಳು ಬಿಳಿ ಪೇಟ, ಕಚ್ಚೆ ಪಂಚೆ,ಕೋಟು, ಮತ್ತು ಹೆಗಲಿಗೆ ಕಂಬಳಿ ಹಾಕಿಕೊಂಡು ಕೊಡಲಿಯನ್ನು ಹೆಗಲೇರಿಸಿರುತ್ತಾರೆ.ಮರ ಕಡಿದ ನಂತರ ಗದ್ದುಗೆ ಮಾಡಿ ಅದನ್ನು ಪೂಜೆ ಮಾಡಿ ಚೆನ್ನಮ್ಮನಾಗತಿಹಳ್ಳಿಯ ಪುರ್ಲಹಳ್ಳಿಯ ವಸಲುದಿನ್ನೆಗೆತರುತ್ತಾರೆ. ಮರವನ್ನು ತಂದ ಮಾರನೇಯ ದಿನವೆ ಗಳಗಳನ್ನು ಹಾಕಿ ಗುಡಿ ನಿರ್ಮಿಸುತ್ತಾರೆ, ಅದೇ ದಿನವೇ ಕಳ್ಳೆ ಅಂದರೆ ಬಾರೆ ಕಳ್ಳೆ, ತಗ್ಗುಲಿ ಕಳ್ಳೆ, ಕಾರೆಯ ಕಳ್ಳೆ, ಜಾಲಿಯ ಕಳ್ಳೆ ಇವುಗಳಿಂದ ಗುಡಿಯನ್ನು ನಿರ್ಮಾಣ ಮಾಡುತ್ತಾರೆ. ಅದಾದ ಸ್ವಲ್ಪಹೊತ್ತಿಗೆ ಭಾವೋದ್ವೇಗದಿಂದ ತುಂಬಾ ಸಂತೋಷದಿಂದ ಎಲ್ಲರೂ ಕೂಡಿ ಕಂಬವನ್ನು ನಿಲ್ಲಿಸಿ ೧೮ ರಿಂದ ೨೦ ಅಡಿ ಕಳ್ಳೆಯ ಗುಡಿಯನ್ನು ನಿರ್ಮಿಸುತ್ತಾರೆ,

ಅದರ ಮೇಲೆ ಕಳಸವನ್ನು ಇಡುತ್ತಾರೆ. ಹೀಗೆ ಗುಡಿ ನಿರ್ಮಾಣದ ನಂತರ ಬಂಜಗೆರೆ ವೀರಣ್ಣ ದೇವರು, ಬತವಿನ ದೇವರು, ಐಗಾರ್ಲಹಳ್ಳಿ ತಾಳಿದೇವರು, ಚೆನ್ನಮ್ಮನಾಗತಿಹಳ್ಳಿಯ ಶ್ರೀ ಕೇತೇದೇವರ ದೇವಸ್ಥಾನಕ್ಕೆ ಬಂದು ಅಕ್ಕಮ್ಮನ ದೇವಸ್ಥಾನದ ಮಜ್ಜನ ಬಾವಿಗೆ ಹೋಗಿ ಗಂಗೆಪೂಜೆ ಮಾಡಿಕೊಂಡು ಎಲ್ಲಾ ದೇವರುಗಳು ವಸಲು ದಿನ್ನೆಯಲ್ಲಿ ಕಟ್ಟಿರುವ ಗುಡಿಯಲ್ಲಿ ಸ್ಥಾಪನೆ,ಮಾಡುವರು.

ನಂತರದ ದಿನ ಹುತ್ತದ ಪೂಜೆ ಮತ್ತು ಕೋಣನ ಪೂಜೆ ಮಾಡುವರು, ಹಿರಿಯರು ಹೇಳುವ ಹಾಗೆ ಹುತ್ತದ ಪೂಜೆ ಏಕೆಂದರೆ, ಕ್ಯಾತಪ್ಪನ್ನು ಹಟ್ಟಿ ಪ್ರವೇಶಿಸುವಾಗ, ನಾಗಪ್ಪ ತಡೆಗಟ್ಟಿದ್ದರಿಂದ ಕೇತೇದೇವರು ಹುರಿಗಣ್ಣು ಬಿಟ್ಟಾಗ, ನಾಗಪ್ಪ ಹೆದರಿ ನಿಂಗಣ್ಣನನ್ನು ಹಟ್ಟಿಯ ಒಳಕ್ಕೆ ಬಿಟ್ಟುಕೊಳ್ಳುತ್ತದೆ. ಆಗ ಜಾತ್ರೆಯಲ್ಲಿ ನಿನಗಿಂತಲೂ ಮೊದಲು ನನಗೆ ಪೂಜೆ ಸಲ್ಲಬೇಕೆಂಬ ಒಂದು ಷರತ್ತು ಹಾಕುತ್ತದೆ,ಆ ಷರತ್ತಿಗೆ ಕ್ಯಾತಪ್ಪ ಒಪ್ಪಿಕೊಳ್ಳುತ್ತದೆ. ಹಾಗಾಗಿ ಮದಲಿಂಗನನ್ನು ಮಾಡುವಾಗ ಹುತ್ತಕ್ಕೆ ಹಾಲು ಬಿಟ್ಟು, ಗದ್ದುಗೆ ಕಂಬಳಿ ಹಾಕಿ ಹುತ್ತಕ್ಕೆ ಪೂಜೆ ಮಾಡುತ್ತಾರೆ. ಏಳು ಮಂದಿ ಅಕ್ಕಮ್ಮಗಳ ಪೂಜೆ ಮತ್ತು ಮಜ್ಜನಬಾವಿ ಪೂಜೆ ಮಾಡುತ್ತಾರೆ. ಏಳು ಮಂದಿ ಅಕ್ಕಮ್ಮಗಳ ಚರಿತ್ರೆಯನ್ನು ಜನಪದರು ಹೇಳುತ್ತಾರೆ. ಆ ಕಥೆ ಏನೆಂದರೆ ಕನ್ನೇರು ಬಂಡೆಯ ಬಾವಿಯಲ್ಲಿ ಪ್ರತಿನಿತ್ಯ ಈಜಾಡಲು ಬರುತ್ತಿದ್ದರು. ಅವರು ಅಲ್ಲಿ ನೆಲೆಗೊಂಡಿರುವ ಅಣ್ಣ ಕ್ಯಾತಪ್ಪನನ್ನು ಕಂಡು ಪ್ರತಿನಿತ್ಯ ಪೂಜೆ ಮಾಡುತ್ತಾರೆ. ಆಗ ಕ್ಯಾತಪ ಪ್ರತ್ಯಾಕ್ಷನಾಗಿ, ನಿಮಗೆ ಏನು ವರಬೇಕು ಕೇಳಿ ಎನ್ನುತ್ತಾನೆ. ಆಗ ಅವರು ನಾವು ಸ್ವರ್ಗಕ್ಕೆ ಪುನಃ ಹೋಗದಂತೆ ನಿಮ್ಮ ಬಳಿ ಸೇವೆ ಮಾಡಿಕೊಂಡಿರುತ್ತೇವೆ ಎಂದು ಕೇಳಿದಾಗ ವರವನ್ನು ಕರುಣಿಸುತ್ತಾರೆ. ಅವರಿಗೆ ಭಕ್ತಾದಿಗಳು ಗುಡಿ ಕಟ್ಟಿಕೊಡುತ್ತಾರೆ. ಅಕ್ಕಮ್ಮ ದೇವತೆಗಳು ಭಕ್ತಾದಿಗಳಿಗೆ ಉಪಕಾರಿಯಾದ ಕೆಲಸ ಮಾಡುತ್ತಾರೆ. ಖಾಯಿಲೆ ವಾಸಿ ಮಾಡುತ್ತಾರೆ, ಮಕ್ಕಳಿಲ್ಲದವರಿಗೆ ಮಕ್ಕಳ ಭಾಗ್ಯ ಕರುಣಿಸುತ್ತಾರೆ. ಅಕ್ಕಮ್ಮಗಳ ಬಾವಿಯ ವಿಶೇಷತೆಯೆಂದರೆ ನೀರು ಹಾಕಿಸಿಕೊಳ್ಳುವುದು. ದೇವರ ಪ್ರದಕ್ಷಿಣೆ ಮಾಡಿದರೆ ಒಳ್ಳೆಯದಾಗುತ್ತದೆ. ಎನ್ನುವ ಮನೋಭಾವನೆ ಈಗಲು ಆ ಜನರಲ್ಲಿ ತುಂಬಾ ಇದೆ.

**ಕಳಸ ಕೀಳುವುದು**

ಕೇತೆದೇವರ ಜಾತ್ರೆಯಲ್ಲಿ ವಿಶಿಷ್ಟವಾಗಿ ಕೊನೆಯ ದಿನದಂದು ಕಳಶ ಕೀಳುವ ಕಾರ್ಯಕ್ರಮವಿರುತ್ತದೆ. ಜಾತ್ರೆಯ ಕೊನೆಯ ದಿನ ಕೋಣನವರ ಗೊಲ್ಲರು ಉಪವಾಸದ ವ್ರತವನ್ನು ಹೊಂದಿದ್ದು ಐದು ಜನ ಕೋಣನವರ ಗೊಲ್ಲರು ಬರಿ ಚಡ್ಡಿಯನ್ನು ಧರಿಸಿ ಇಪ್ಪತ್ತು ಅಡಿ ಎತ್ತರದ ಕಳ್ಳೆಯನ್ನು ಬರಿಗಾಲಿನಿಂದ ಹತ್ತಿಕಳಸ ಕೀಳುವುದನ್ನು ನೋಡಲು ರೋಮಾಂಚನಕಾರಿ ಎನಿಸುತ್ತದೆ. ಬೇರೆ ಯಾವುದೇ ಜನಾಂಗದಲ್ಲಿ ಇಂತಹ ವಿಶಿಷ್ಟ ಆಚರಣೆ ಗುರುತಿಸಲು ಸಾಧ್ಯವಿಲ್ಲ. ಗೌಡರು ಮತ್ತು ಹಿರಿಯರ ಅನುಮತಿ ಪಡೆದು ಕಳಸ ಕೀಳುತ್ತಾರೆ. ಕಳಸ ಕೀಳಲು ಹತ್ತುವಾಗ ಕಾಲಿಗೆ ಮುಳ್ಳಿನ ಕಳ್ಳೆ ತಗುಲಿದರು ನೋವಾಗುವುದಿಲ್ಲ. ಅದಕೆಕಾರಣ ಕೇತೇದೇವರ ಮಹಿಮೆ.ಕಳಸ

ಕಿತ್ತಾದ ನಂತರ ಅಲ್ಲಿಗೆ ಬಂದಿರುವ ದೇವರುಗಳ ಮಹಾ ಮಂಗಳಾರತಿಯೊಂದಿಗೆ ಹುರುಳಿ ನೈವೇದ್ಯ ಮಾಡಿ ಕಂಕಣ ವಿಸರ್ಜನೆ ಮಾಡಿ ತಮ್ಮ ಹಟ್ಟಿಗಳಿಗೆ ಹಿಂದಿರುಗುತ್ತವೆ. ಹಾಗೆಯೇ ಭಕ್ತಾದಿಗಳು ತಮ್ಮ ಎತ್ತು ಗಾಡಿಗಳೊಂದಿಗೆ ತಮ್ಮ ತಮ್ಮ ಊರುಗಳಿಗೆ ಹಿಂದಿರುಗುತ್ತಾರೆ.

**ಮ್ಯಾಸಬೇಡರ ಗುರು ಸಂಸ್ಥಾನವಾದ ಕಂಪಳದೇವರ ಜಾತ್ರೆ:**

ಚಿತ್ರದುರ್ಗ ಜಿಲ್ಲೆಯ, ಮೊಳಕಾಲ್ಮೂರು ತಾಲ್ಲೂಕಿನಾದ್ಯಂತ ಮ್ಯಾಸಬೇಡರು ಅತಿಯಾಗಿ ವಾಸಿಸುತ್ತಿದ್ದಾರೆ, ಅವರದು ಸಾಂಸ್ಕೃತಿಕವಾಗಿ ತುಂಬಾ ಶ್ರೀಮಂತಿಕೆಯಿಂದಿರುವ ಬುಡಕಟ್ಟು ಸಮುದಾಯವಾಗಿದೆ. 'ಹಬ್ಬದ ಊಟ ಜಾತ್ರೆಯ ನೋಟ' ಎನ್ನುವಂತೆ ಬಯಲು ಸೀಮೆಯ ಪ್ರದೇಶಗಳಲ್ಲಿ ಕಂಪಳದೇವಹರಟ್ಟಿ ಜಾತ್ರೆಯು ಯಾವುದೇ ಜಾತಿ, ಭೇಧವಿಲ್ಲದೆ ಎಲ್ಲರೂ ಭಾಗವಹಿಸಿ ಈ ಜಾತ್ರೆಯನ್ನು ಆಚರಿಸುತ್ತಾರೆ. ಕಂಪಳದೇವರ ಪಟ್ಟದ ಪೂಜಾರಿ ರೇವಣ್ಣ, ಈತನೇ ದೇವರನ್ನು ಹೊರುವುದು. ನಗರ ಪೂಜಾರಿಯವರು ದೇವರ ಕಾರ್ಯಕರ್ತರಾಗಿರುತ್ತಾರೆ.

**ಜಾತ್ರೆಯ ಕಾರ್ಯಕ್ರಮಗಳು**

✓ ದೇವರನ್ನು ತೊಳೆದು ಅಲಂಕರಿಸುವುದು.

✓ ಗುಗ್ಗುರಿ ಕಲೆಹಾಕಿ ಬೇಯಿಸುವುದು.

✓ ಹಣತೆಗೆ ಎಣ್ಣೆ ಹಾಕುವುದು.

✓ ಪಂಜುನುಂಗುವ ಕಾರ್ಯಕ್ರಮ.

✓ ಬೆಳಗಿನ ಜಾವ ಮಹಾಪೂಜೆ.

✓ ಮಹಾಪೂಜೆಯ ನಂತರ ಉಪವಾಸ ವ್ರತ ಬಿಡುವುದು.

✓ ಗೌಡರಿಂದ ಜಾತ್ರೆಗೆ ಕುದುರೆ ಬರುವುದು.

✓ ಕುದುರೆ ಬಂದ ನಂತರ ದೇವರೆತ್ತುಗಳನ್ನು ಹರಿಸುವುದು.

▪ ಕಂಪಳದೇವರನ್ನು ಕಾಮ್ಸೆ ಕಡ್ಡಿಯಿಂದ ತಯಾರು ಮಾಡಿದ ಗುಬ್ಬದಲ್ಲಿ ಕೂರಿಸುತ್ತಾರೆ. ಮ್ಯಾಸಬೇಡರ ಎಲ್ಲಾ ಕೋಮಿನವರು ಸೇರಿ ತಮ್ಮ ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತಾ ಜಾತ್ರೆಯ ಕಾರ್ಯಗಳನ್ನು ನಡೆಸುತ್ತಾರೆ.

- ಕುರಿಕಿಲಾರಿ
- ಎತ್ತಿನಕಿಲಾರಿ
- ಪಟ್ಟಿದ ಪೂಜಾರಿ
- ಮುತ್ತೆ ಪೂಜಾರಿ

* ಹಟ್ಟಿ ನಾಯಕ
* ದಾಸರಯ್ಯಗಳು (ಗೋಸಲರ ಗುಂಪಿನವರು)
* ಮುಡೇಲಾರು
* ಮಾನಗಲಾರು
* ತಂಬಲು ಮುತ್ಯಾರು
* ಕುರುಬಲಾರು
* ಎತ್ತಿನ ಕಿಲಾರಿಗಳು

ಹೀಗೆ ಮೂರು ಕಟ್ಟೆಮನೆಯವರು ೩೦,೦೦೦ ಕುಲದವರು-ಕಾಪುಕಂಪಳದವರು.

ಮೂರು ಕಟ್ಟೆಮನೆಯರು ಈ ಜಾತ್ರೆಗೆ ಬರುತ್ತಾರೆ.

* ನನ್ನೀವಾಳ ಕಟ್ಟೇಮನೆ
* ನಾಯಕನ ಹಟ್ಟಿ ಕಟ್ಟೆಮನೆ
* ಗೋನೂರು ಕಟ್ಟೇಮನೆ

ಮ್ಯಾಸಬೇಡರಲ್ಲಿ ಸಂಘಟನೆ ಹೆಚ್ಚಾಗಿದ್ದು ಹಂಚಿ ತಿನ್ನುವ ಸಂಸ್ಕೃತಿ ಈ ಜಾತ್ರೆಯಲ್ಲಿ ಎದ್ದು ಕಾಣುತ್ತದೆ. ಈ ಜಾತ್ರೆಯಲ್ಲಿ ವಿಶೇಷವಾಗಿ ಗುಗ್ಗರಿ ಬೇಯಿಸುವುದು, ಪಂಜುನುಂಗುವುದು, ದೇವರೆತ್ತುಗಳನ್ನು ಓಡಿಸುವುದು, ದಗಮು ಬಡಿಯುವುದು, ಕೊನೆಯ ದಿನ ಸೂರುಬೆಲ್ಲ ಮೆಣಸು ದೇವರಿಗೆ ತೂರುವುದು ಈ ಕಾರ್ಯಗಳು ಮುಗಿದಮೇಲೆ ದೇವರು ಮೂಲ ವಾಸ್ತವ್ಯಕ್ಕೆ ಹೋಗಿ ನೆಲೆಸುವುದು.

ಜಾತ್ರೆಯು ಮುಖ್ಯವಾಗಿ ಸಾಮಾಜಿಕ ಸಂಬಂಧಗಳನ್ನು, ಮೌಲ್ಯಗಳನ್ನು, ಸಾಂಸ್ಕೃತಿಕ ಅಂಶಗಳನ್ನು, ಕೌಟುಂಬಿಕ ಸಂಬಂಧಗಳನ್ನು ಬಿಗಿಗೊಳಿಸುವ ಕೆಲಸವನ್ನು ಮಾಡುತ್ತದೆ. ಇದು ಸಾರ್ವತ್ರಿಕವಾಗಿ ನಡೆಯುವುದರಿಂದ ಎಲ್ಲಿಯವರಾದವರು ಜಾತ್ರೆಗೆ ಭಾಗವಹಿಸಬಹುದು. ಕೇವಲ ಒಂದು ಜಾತಿಯವರಿಗೆ ಸೀಮಿತವೆಂದು ಕಂಡುಬಂದರು ಅದನ್ನು ನೋಡುವ ದೃಷ್ಟಿ ವಿಶಾಲವಾಗಿದೆ. ಏಕೆಂದರೆ ಉರಿಮೆಯವರು, ಕಹಳೆ ಊದುವವರು, ಕುಂಬಾರರು ಹೀಗೆ ಹಲವಾರು ವ್ಯಕ್ತಿಗಳು ಜಾತ್ರೆ ನಡೆಯಲು ಅವಶ್ಯಕ.

**ಮನೆದೇವರ ಜಾತ್ರೆಗಳು :**

ಮ್ಯಾಸಬೇಡರ ಪ್ರಮುಖ ಹಬ್ಬಗಳಲ್ಲಿ ಈ ಮನೆದೇವರ ಜಾತ್ರೆಯೂ ಒಂದು. ಇವರು ತಮ್ಮ ಬೆಡಗು ಕುಲಗಳಿಗೆ ಅನುಗುಣವಾಗಿ ಒಂದೊಂದು ದೇವರನ್ನು ಮನೆದೇವರನ್ನಾಗಿ ಮಾಡಿಕೊಂಡು

ಪೂಜಿಸುತ್ತಾರೆ. ಆಯಾ ದೇವರ ಜಾತ್ರೆಯ ದಿನದಂದು ಸಂಭ್ರಮದಿಂದ ಮನೆದೇವರ ಜಾತ್ರೆಯನ್ನು ಮಾಡುತ್ತಾರೆ.

**೩.೪ ಹಟ್ಟಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು**

ಮಾನವ ಮೂಲತಃ ಸಂಘಜೀವಿ, ಸಮೂಹಜೀವಿ. ಸಮಾಜ ಜೀವಿಯೂ ಆಗಿದ್ದಾನೆ. ಮಾನವ ಒಂಟಿಯಾಗಿರಲಾರ. ತನ್ನೆಲ್ಲಾ ಬೇಡಿಕೆಗಳನ್ನು ಈಡೇರಿಸಿಕೊಳ್ಳುವ ಸಲುವಾಗಿ ಸಮಾಜ ಅತ್ಯಗತ್ಯವಾದುದು. ಸಮಾಜವೆಂದರೆ ಸಾಮಾಜಿಕ ಸಂಬಂಧಗಳ ಬಲೆ. ಸಮಾಜವೆಂಬುದು ಹಲವಾರು ಆಚರಣೆಗಳು, ಜೀವನಕ್ರಮ, ವಿಧಾನಗಳು, ಅಧಿಕಾರ ಮತ್ತು ಪರಸ್ಪರ ಸಹಾಯ, ಹಲವಾರು ಸಮೂಹಗಳು, ಮಾನವನ ವರ್ತನೆಯಬಗೆಗಿನ ನಿಯಂತ್ರಣ ಹಾಗೂಸ್ವಾತಂತ್ರ್ಯಗಳನ್ನೊಗೊಂಡ ಒಂದು ವ್ಯವಸ್ಥೆ. (ಮೆಕೈವರ್ ಪೇಜ್) "ಒಂದು ಸಾಮಾನ್ಯ ಸಂಸ್ಕೃತಿಯಲ್ಲಿ ಸಹಭಾಗಿಗಳಾಗಿ ಒಂದು ಭೂಭಾಗದಲ್ಲಿ ವಾಸಿಸುತ್ತಾ ಪರಸ್ಪರ ಒಡನಾಟದಲ್ಲಿರುವ ಜನ ಸಮೂಹವನ್ನು ಸಮಾಜ ಎನ್ನುತ್ತಾರೆ."[೬] (ಐಯಾನ್ ರಾಬರ್ಟ ಸನ್) 'ಸಮಾಜವು ತನ್ನ ಸದಸ್ಯರ ನಡುವೆ ಅಂತರ್‌ಕ್ರಿಯೆಗಳನ್ನೊಳಗೊಂಡ ವ್ಯವಸ್ಥೆಯಾಗಿದೆ'. ಸಾಮಾಜಿಕ ಸಂಬಂಧಗಳೇ ಆ ಸಮಾಜದ ಚಲನೆಯ ಪ್ರಧಾನವಾದ ಶಕ್ತಿ. ಒಂದು ಸಾಮಾಜಿಕ ವ್ಯವಸ್ಥೆಯು ಸಂಕೀರ್ಣವಾದ ಆಚರಣೆಗಳೊಂದಿಗೆ ಕೂಡಿರುತ್ತದೆ. ಅವುಗಳಲ್ಲಿ ನಿಯಮಗಳು, ವಿಧಿ ನಿಷೇಧಗಳು, ನಂಬಿಕೆಗಳು, ವಸತಿವ್ಯವಸ್ಥೆ, ಕುಟುಂಬ, ಆಹಾರಪದ್ಧತಿ, ಉಡುಗೆ ತೊಡುಗೆ, ವೃತ್ತಿ, ನ್ಯಾಯಪದ್ಧತಿ, ಬೆಡಗುಗಳು, ವಿವಾಹ, ಸಾಮಾಜಿಕ ನಿಯಂತ್ರಣ, ಉತ್ಪಾದನಾ ವ್ಯವಸ್ಥೆ ಇವುಗಳನ್ನೊಳಗೊಂಡ ಅಖಂಡವಾದ ಸಂಕೀರ್ಣ ವ್ಯವಸ್ಥೆಯೇ ಸಮಾಜ. ಯಾವುದೇ ಸಾಮಾಜಿಕ ವ್ಯವಸ್ಥೆ ಭೂಪ್ರದೇಶ, ಕಾಲವನ್ನು ಆಧರಿಸಿರುವುದು. ಆದ್ದರಿಂದಲೇ ಸಮಾಜದಿಂದ ಸಮಾಜ ಭಿನ್ನವಾಗಿರುವುದು.

ಪ್ರಸ್ತುತ ಅಧ್ಯಯನವು ಕಾಡುಗೊಲ್ಲ ಮತ್ತು ಮ್ಯಾಸಬೇಡರ ಹಟ್ಟಿಗಳ ಸಾಮಾಜಿಕತೆ ಮತ್ತು ಆರ್ಥಿಕತೆಯ ಸಂಸ್ಕೃತಿಯನ್ನಾಧರಿಸಿದೆ. ಈ ಎರಡು ಸಮುದಾಯಗಳು ಕೆಲವೊಂದು ಅಂಶಗಳಲ್ಲಿ ಸಾಮ್ಯತೆಯನ್ನು ಹೊಂದಿದ್ದು ಸರಳ, ನಿರಾಡಂಬರ, ಸಜ್ಜನಿಕೆಯಿಂದ ಜೀವನವನ್ನು ನಡೆಸುವುದು ಪ್ರಸ್ತುತ ಅಧ್ಯಯನದಿಂದ ಕಂಡುಬರುತ್ತದೆ. ಅನ್ಯ ಸಮುದಾಯಗಳಿಗಿಂತ ಭಿನ್ನವಾದ ರೀತಿಯಲ್ಲಿ ಜೀವನಕ್ರಮ, ಸಾಮಾಜಿಕವ್ಯವಸ್ಥೆ, ಆರ್ಥಿಕ ಜೀವನವನ್ನು ಪರಂಪರಾನುಗತವಾಗಿ ಕಟ್ಟಿಕೊಂಡು ಬಂದಿದ್ದಾರೆ

**ಹಟ್ಟಿಗಳ ಸಾಮಾಜಿಕ ಜೀವನ :**

**ಅ) ಕುಟುಂಬ:**

ಸಾಮಾಜಿಕ ಸಂಸ್ಥೆಗಳಲ್ಲಿ ಮೂಲಭೂತ ಸ್ವರೂಪದ ಅತ್ಯಂತ ಮಹತ್ವ ಪೂರ್ಣವಾದ ಸಂಸ್ಥೆ ಎಂದರೆ ಕುಟುಂಬ. ಜಗತ್ತಿನ ಎಲ್ಲಾ ಸಮುದಾಯಗಳಿಗೂ ಕುಟುಂಬ ಅತ್ಯಗತ್ಯ ಕುಟುಂಬವಿಲ್ಲದೆ ಸಾಮಾಜಿಕಜೀವನ ಅಸಾಧ್ಯ ಕುಟುಂಬದ ಸಾರ್ವತ್ರಿಕತೆಗೆ ಜೈವಿಕ ಅಂಶಗಳೇ ಮುಖ್ಯ ಕಾರಣವೆನಿಸುತ್ತವೆ.

ಕುಟುಂಬವೆಂದರೆ ರಕ್ತಸಂಬಂಧಿಗಳಿಂದ ಕೂಡಿದ ಸಾಮಾಜಿಕ ಸಂಘಟನೆಯಾಗಿರುತ್ತದೆ. ಈಲಿಯಟ್ ಮೆರಿಲ್ ಹೇಳುವ ಪ್ರಕಾರ 'ಗಂಡ, ಹೆಂಡತಿ ಮತ್ತು ಮಕ್ಕಳನ್ನೊಳಗೊಂಡಿರುವ ಜೈವಿಕ ಸಾಮಾಜಿಕ ಘಟಕವೇ ಕುಟುಂಬ'.[೭]

ಕಾಡುಗೊಲ್ಲ ಮತ್ತು ಮ್ಯಾಸಬೇಡ ಬುಡಕಟ್ಟುಗಳಲ್ಲಿ ಕುಟುಂಬ ಮತ್ತು ಬಂಧುತ್ವ ವ್ಯವಸ್ಥೆಗೆ ಹೆಚ್ಚು ಮನ್ನಣೆ ಕೊಡುತ್ತಾರೆ. ಕಾಡುಗೊಲ್ಲರಲ್ಲಿ ಪಿತೃಪ್ರಧಾನ ಕುಟುಂಬವನ್ನು ಗುರುತಿಸಬಹುದಾಗಿದೆ. ಬಹುತೇಕ ಬುಡಕಟ್ಟು ಕುಟುಂಬಗಳಲ್ಲಿ ಪಿತೃಪ್ರಧಾನತೆಯು ಅಸ್ತಿತ್ವದಲ್ಲಿರುವುದನ್ನು ಕಾಣಬಹುದು. ದಕ್ಷಿಣಭಾರತದ ನಾಯರ್‌ಜನಾಂಗ ಮತ್ತು ಕೆಲವು ಬುಡಕಟ್ಟುಗಳಲ್ಲಿ ಮಾತ್ರ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಇದೆ. ಅವುಗಳನ್ನು ಬಿಟ್ಟರೆ ಬಹುತೇಕ ಬುಡಕಟ್ಟುಗಳಲ್ಲಿ ಪಿತೃ ಪ್ರಧಾನತೆಯ ಕುಟುಂಬವನ್ನು ಗುರುತಿಸಬಹುದು. ಕಾಡುಗೊಲ್ಲರಲ್ಲಿಯೂ ಅವಿಭಕ್ತ ಕುಟುಂಬಗಳಿದ್ದು ಪಿತೃ ಪ್ರಧಾನ್ಯತೆಯನ್ನು ಹೊಂದಿವೆ. ತಂದೆಯೇ ಮನೆಯ ಯಜಮಾನನಾಗಿರುತ್ತಾನೆ. ಪುರುಷ ಪ್ರಾಧಾನ್ಯವಾಗಿದ್ದರೂ ಸ್ತ್ರೀಯರನ್ನು ಗೌರವದಿಂದ ಕಾಣುವ ಮತ್ತು ಯಾವುದಾದರೂ ಕೆಲಸ ಮಾಡುವಾಗ, ಜಮೀನು ಕೊಳ್ಳುವಾಗ, ಮನೆಕಟ್ಟುವಾಗ, ಸ್ತ್ರೀಯರ ಸಮ್ಮತಿಯನ್ನು ಕೇಳುತ್ತಾರೆ. ಗೊಲ್ಲಕುಟುಂಬಗಳಲ್ಲಿ ಸದಸ್ಯರ ಸಂಖ್ಯೆ ಹೆಚ್ಚಿದೆ. ಅವರು ಕುರಿಸಾಕಣೆ, ಹೈನುಗಾರಿಕೆ, ಕೃಷಿ, ಇತ್ಯಾದಿ ಕೆಲಸಗಳನ್ನು ಅಥವಾ ಶ್ರಮವಿಭಜನೆ ಮಾಡಿಕೊಂಡು ಬಹಳ ಅನ್ಯೂನ್ಯತೆಯಿಂದ ಜೀವನ ಮಾಡುತ್ತಾರೆ. ಕಾಡುಗೊಲ್ಲ ಕುಟುಂಬಗಳಲ್ಲಿ ಭಾವನಾತ್ಮಕ ಸಂಬಂದ ಹೆಚ್ಚಿದ್ದು ಎಲ್ಲಾ ಸದಸ್ಯರು ಹೊಂದಾಣಿಕೆಯಿಂದ ಇರುತ್ತಾರೆ. ಹಾಗಾಗಿ ಕೆಲವು ಕುಟುಂಬಗಳು ಅವಿಭಕ್ತ ಕುಟುಂಬಗಳಾಗಿಯೇ ಉಳಿದಿವೆ. ಆಧುನಿಕ ಇತ್ತೀಚಿನ ದಿನಗಳಲ್ಲಿ ವಿಭಕ್ತ ಕುಟುಂಬಗಳಿದ್ದರೂ ಅವರೆಲ್ಲರೂ ಅಣ್ಣ ತಮ್ಮಂದಿರು, ಚಿಕ್ಕಪ್ಪ, ಚಿಕ್ಕಮ್ಮ, ದೊಡ್ಡಪ್ಪ ಎಲ್ಲರೂ ಸಹ ಜಾತ್ರೆ, ಉತ್ಸವ, ಧಾರ್ಮಿಕ ಕ್ರಿಯಾವಿಧಿಗಳು, ಸತ್ತಾಗ, ಕೆಟ್ಟಾಗ ಎಲ್ಲಾ ಸಂಧರ್ಭಗಳಲ್ಲಿ ಒಟ್ಟಾಗುತ್ತಾರೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಬಂಧುತ್ವ ವ್ಯವಸ್ಥೆಗೆ ಹೆಚ್ಚು ಮನ್ನಣೆ ಕೊಡುತ್ತಾರೆ. ರಕ್ತಸಂಬಂಧಕ್ಕೆ ಪ್ರಾಧಾನ್ಯತೆ ಕೊಡುತ್ತಾರೆ, 'ಕಣ್ಣರಿಯದಿದ್ದರು ಕರುಳರಿಯುತ್ತದೆ'ಎಂಬ ಗಾದೆಯಂತೆ ಅವರಲ್ಲಿ ನಾವು ನಮ್ಮವರು ಎಂಬ ಭಾವನೆ, ಐಕ್ಯತೆ, ಸಂಘಟನೆ ಹೆಚ್ಚಾಗಿರುತ್ತದೆ. ಮೊದಲಿನಷ್ಟು ಅವಿಭಕ್ತಕುಟುಂಬಗಳು ಈಗ ಇರುವುದಿಲ್ಲ ಸಾಂಪ್ರದಾಯಿಕ ಕಸುಬುಗಳಿಲ್ಲದಿರುವುದು. ಆಧುನೀಕರಣ, ಕೈಗಾರೀಕರಣ, ನಗರೀಕರಣ. ಶಿಕ್ಷಣದಿಂದಾಗಿ ಇತ್ತೀಚಿನ ದಿನಗಳಲ್ಲಿ ಗೊಲ್ಲರಲ್ಲಿಯೂ ವಿಭಕ್ತಕುಟುಂಬಗಳ ಸಂಖ್ಯೆ ಹೆಚ್ಚುತ್ತಿದೆ.

ಮ್ಯಾಸಬೇಡರ ಹಟ್ಟಿಗಳಲ್ಲಿಯೂ ಪಿತೃಪ್ರಧಾನ ಕುಟುಂಬಗಳನ್ನು ಕಾಣಬಹುದು. ತಂದೆಯೇ ಕುಟುಂಬದ ಯಜಮಾನನಾಗಿರುತ್ತಾನೆ. ಆತನ ಆಜ್ಞೆಗಳನ್ನು ಉಳಿದ ಸದಸ್ಯರು ಪಾಲಿಸುತ್ತಾರೆ. ಹಟ್ಟಿಯ ಕುಟುಂಬಗಳಲ್ಲಿ ಶ್ರಮವಿಭಜನೆಯನ್ನು ಲಿಂಗ, ವಯಸ್ಸುಗಳ ಆಧಾರದ ಮೇಲೆ ನಿರ್ವಹಿಸುತ್ತಾರೆ. ಮ್ಯಾಸಬೇಡರಲ್ಲೂ ಸ್ತ್ರೀಯರಿಗೂ ಗೌರವ ಕೊಡುತ್ತಾರೆ. ಕೃಷಿಗೆ ನೆಲೆನಿಂತ ನಂತರದಲ್ಲಿ ಕೃಷಿ ಚಟುವಟಿಕೆಗಳಲ್ಲಿ ಮತ್ತು ಪಶುಪಾಲನೆಯಲ್ಲಿ ಮನೆಕೆಲಸಗಳಲ್ಲಿ ಸ್ತ್ರೀಯು ಹೆಚ್ಚು ಶ್ರಮಪಟ್ಟು ದುಡಿಯುತ್ತಿದ್ದಾಳೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ತಮ್ಮ ಹೊಲ ಗದ್ದೆಗಳಿಗೆ ಹೊಂದಿಕೊಂಡಂತೆ

ತಮ್ಮ ತಮ್ಮ ಜಮೀನಿನಲ್ಲಿಯೇ ಮನೆಗಳನ್ನು ನಿರ್ಮಿಸಿಕೊಂಡಿರುವ ಕುಟುಂಬಗಳೂ ಕಂಡು ಬರುತ್ತವೆ.

ಉತ್ಪಾದನಾ ಸಾಧನಗಳು ಪರಿಕರಗಳು ಬದಲಾವಣೆಯಾಗಿ ಉತ್ಪಾದನೆ ಹೆಚ್ಚಾದಾಗ ಪಿತೃ ಪ್ರಧಾನತೆಯು ಹುಟ್ಟಿಕೊಂಡಿತು. ಪ್ರಧಾನತೆ ಎಂಬುದು ಅಧೀನ ಸ್ಥಿತಿಯಿಂದ ನ್ಯಾಯಬದ್ಧಗೊಳ್ಳಲ್ಪಡುತ್ತದೆ. ಪ್ರಧಾನತೆಯ ಕಾರಣಕ್ಕಾಗಿಯೇ ಅಧೀನಗೊಂಡ ಸ್ಥಿತಿ ಹೊಂದಿರಬೇಕಾಗುತ್ತದೆ. ಫ್ರೆಡರಿಕ್‌ಎಂಗೆಲ್ಸ್ ಅವರು 'ಕುಟುಂಬ, ಖಾಸಗೀ ಆಸ್ತಿ ಮತ್ತು ರಾಜ್ಯ ಇವುಗಳ ಉಗಮ' ಕೃತಿಯಲ್ಲಿ ಕುಟುಂಬದ ರಚನೆ ಮತ್ತು ಮಾನವ ಸಾಮಾಜಿಕ ಸಂಸ್ಥೆಗಳ ವಿಕಾಸದ ಕುರಿತು ಚರ್ಚಿಸುತ್ತಾರೆ. ಎಂಗೆಲ್ಸ್‌ರವರ ಚಾರಿತ್ರಿಕ ಭೌತಿಕವಾದವು ಉತ್ಪಾದನಾ ಸಾಧನಗಳ ವಿಕಾಸವು ಉತ್ಪಾದನಾ ಸಂಬಂಧಗಳನ್ನು ನಿರ್ಣಾಯಾಕವಾಗಿ ರೂಪಿಸುತ್ತದೆ. ಹೀಗೆ ಕಾಲದಿಂದ ಕಾಲಕ್ಕೆ ಉತ್ಪಾದನಾ ಸಂಬಂಧಗಳಲ್ಲಿ ಆದ ಬದಲಾವಣೆಗಳೇ ಚರಿತ್ರೆಯನ್ನು ರೂಪಿಸುತ್ತಾ ಬಂದಿವೆ. ಚಾರಿತ್ರಿಕ ಭೌತವಾದದ ನೆಲೆಯಲ್ಲಿ ಭಾರತದ ಚರಿತ್ರೆಯನ್ನು ಡಿ.ಡಿ.ಕೊಸಾಂಬಿ, ದೇವಿಪ್ರಸಾದ್‌ಚಟ್ಟೋಪಾಧ್ಯಾಯ, ಅಮೃತ್‌ಢಾಂಗೆ ಮತ್ತು ರೋಮಿಲಾಥಾಪರ್ ನಿರೂಪಿಸುತ್ತಾ ಬಂದಿದ್ದಾರೆ. ಈ ಎಲ್ಲಾ ಚರಿತ್ರೆಕಾರರ ಬರಹಗಳು ಆಹಾರ ಸಂಗ್ರಹಣೆಯ ಹಂತದಿಂದ ಕೃಷಿ ಹಂತದವರೆಗೆ ಸ್ತ್ರೀಪ್ರಧಾನತೆ ಮತ್ತು ಮಾತೃ ಅಧಿಕಾರವು ಮಾನವ ಸಮಾಜದಲ್ಲಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತವೆ.

ಆಹಾರ ಸಂಗ್ರಹಣೆಯಿಂದ ಕೃಷಿ ಹಂತದ ಚಟುವಟಿಕೆಯವರೆಗೆ ಅದರಲ್ಲೂ ನೇಗಿಲ ಬಳಕೆಯಿಂದ ಅಧಿಕಗೊಂಡ ಕೃಷಿ ಉತ್ಪಾದನೆಯವರೆಗೆ ಇದ್ದ ಸ್ತ್ರೀ ಪ್ರಧಾನ ಸಮಾಜವು ಹೇಗೆ ಪುರುಷ ಪ್ರಧಾನ ಸಮಾಜವಾಗಿ ರೂಪುಗೊಂಡಿತು ಎಂದು ವಿವರಿಸುವಲ್ಲಿ ಎಂಗೆಲ್ಸ್ ಯಶಸ್ವಿಯಾಗಿದ್ದಾರೆ.

ಕೋಸಾಂಬಿಯವರೂ ಸಹ ಉತ್ಪಾದನ ಸಾಧನಗಳು ಯಾವಾಗ ಪುರುಷನ ಕೈಗೆ ಹಸ್ತಾಂತರವಾದವೋ ಆಗಲೇ ಮಹಿಳೆ ತಾನು ಹೊಂದಿದ್ದ ಪ್ರಾಧಾನ್ಯತೆಯನ್ನು ಕಳೆದುಕೊಳ್ಳಬೇಕಾಯಿತು ಎನ್ನುತ್ತಾರೆ. ಎಂಗೆಲ್ಸ್‌ರವರ ಅಭಿಪ್ರಾಯವೇನೆಂದರೆ ಬದಲಾದ ಆರ್ಥಿಕ ಚಟುವಟಿಕೆಗಳು ಸಮುದಾಯದ ಅಧಿಕಾರದ ಗುರುತ್ವವನ್ನೇ ಬದಲಿಸಿದ್ದನ್ನು ವಿಶ್ಲೇಷಿಸುತ್ತಾರೆ. ಇಂದಿಗೂ ಮಾತೃಪ್ರಧಾನತೆಯು ಪಾರಂಪರಿಕ ಕೃಷಿಕ ಮತ್ತು ಬುಡಕಟ್ಟು ಸಮಾಜಗಳಲ್ಲಿದ್ದರೂ ಸಹ ಸಾಂಕೇತಿಕ ಮಟ್ಟದಲ್ಲಿದ್ದು, ಸಮುದಾಯಗಳ ಆಚರಣೆಗಳಲ್ಲಿ ವ್ಯಕ್ತವಾಗುತ್ತದೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಪುರುಷ ಪ್ರಾಧಾನ್ಯತೆ ಇದೆ, ತಾಯಿಯಾದವಳು ಮಕ್ಕಳನ್ನು ಪೋಷಿಸುವುದು, ಮನೆಕೆಲಸ, ಹೊಲಗದ್ದೆಗಳಲ್ಲಿ ಕೆಲಸಮಾಡುವುದು ಪುರುಷನಷ್ಟೆ ಜವಾಬ್ದಾರಿಯುತವಾಗಿ ದುಡಿಯುತ್ತಾಳೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ವಿಧವಾ ಪುರ್ನವಿವಾಹವಾಗಲೀ ಮತ್ತು ಕೂಡಿಕೆ ವಿವಾಹ ಪದ್ಧತಿಯಾಗಲೀ ಇರುವುದಿಲ್ಲ, ಹಾಗಂತ ವಿಧವೆಯರನ್ನು ಅಮಂಗಳ ಎಂದು ಭಾವಿಸುದಿಲ್ಲ. ಇತ್ತೀಚೆಗೆ ವಿವಾಹ ಸಂಧರ್ಭದಲ್ಲಿ ಹಣದ

ರೂಪದಲ್ಲಿ, ಒಡವೆ ರೂಪದಲ್ಲಿ, ಹೆಣ್ಣಿನವರು ಗಂಡಿಗೆ ಕೊಡುವ ವರದಕ್ಷಿಣೆ ಪದ್ಧತಿ ಬೆಳೆದು ಬಂದಿದೆ ಎಂದು ವಕ್ತೃಗಳು ತಿಳಿಸುತ್ತಾರೆ. ಈ ಎರಡೂ ಬುಡಕಟ್ಟು ಸಮುದಾಯಗಳಲ್ಲಿ ಸಂಪ್ರದಾಯ, ನಂಬಿಕೆ, ಆಚರಣೆಗಳಿಗೆ ಹೆಚ್ಚು ಮಹತ್ವ ಕೊಡುತ್ತಾರೆ.

**ಆ) ವಸತಿ:**

ಕಾಡುಗೊಲ್ಲರು ತಮ್ಮ ನೆಲೆ ಅಥವಾ ವಸಾಹತುಗಳನ್ನು ನಿರ್ಮಿಸಿಕೊಂಡು ಮುಖ್ಯ ಹಳ್ಳಿಗಳಿಂದ ಬಹುದೂರ ವಾಸಿಸುತ್ತಾರೆ. ಅವರು ವಾಸಿಸುವ ಜಾಗಕ್ಕೆ ಅಥವಾ ಪ್ರದೇಶಕ್ಕೆ ಗೊಲ್ಲರಹಟ್ಟಿ ಎಂದು ಕರೆಯುತ್ತಾರೆ. ಅಲೆಮಾರಿಗಳಾಗಿರುವುದರಿಂದ ಭೌಗೋಳಿಕ ಪ್ರದೇಶಕ್ಕನುಗುಣವಾಗಿ ವಸತಿ ವ್ಯವಸ್ಥೆಯನ್ನು ನಿರ್ಮಿಸಿಕೊಂಡಿರುತ್ತಾರೆ. ಇತ್ತೀಚೆಗೆ ಕೃಷಿಯ ಮೂಲಕ ನೆಲೆನಿಂತು ಹಟ್ಟಿಗಳನ್ನು ಕಟ್ಟಿಕೊಂಡಂತೆ ಕಾಣುತ್ತದೆ. ಬಹುತೇಕ ಹಟ್ಟಿಗಳು ಮೂಲಭೂತ ಸೌಲಭ್ಯಗಳಲ್ಲೊಂದಾದ ಡಾಂಬರು ರಸ್ತೆಗಳನ್ನೂ ಕಂಡಿಲ್ಲ, ಕಿರುದಾರಿಯಲ್ಲೋ, ಅಥವಾ ಮಣ್ಣಿನಿಂದ ಮಾಡಿದ ದಾರಿಯಲ್ಲೋ ಓಡಾಡಬೇಕು. ಗೊಲ್ಲರಹಟ್ಟಿಯ ಸುತ್ತುಲೂ ಅಂಚಿನಲ್ಲಿ ಮುಳ್ಳಿನ ಬೇಲಿಯನ್ನೋ ಅಥವಾ ಕಳ್ಳಿಯನ್ನೋ ಹಾಕಿರುತ್ತಾರೆ. ಗೊಲ್ಲರ ಹಟ್ಟಿಯಲ್ಲಿ ಇಂದಿಗೂ ಗುಡಿಸಲುಗಳಿರುವುದನ್ನು ಕಾಣಬಹುದು. ಸುತ್ತಲೂ ಕಲ್ಲುಮಣ್ಣಿನಿಂದ ಗೋಡೆ ನಿರ್ಮಿಸಿ ಮಧ್ಯದಲ್ಲಿ ಕಂಬ ನಿಲ್ಲಿಸಿ ಗೋಡೆಯ ಮೇಲೆ ಅಡಕೆ ದಬ್ಬೆಗಳನ್ನು ಹಾಕಿ ತೆಂಗಿನಗರಿ, ಅಂಚಿಹುಲ್ಲು, ಬಾದೆಹುಲ್ಲು, ಆಪುನಿಂದ ಹೊದಿಸಿರುತ್ತಾರೆ. ಗುಡಿಸಲು ನಿರ್ಮಿಸುವಾಗ ಯಾವುದೇ ಶಾಸ್ತ್ರ, ಪಂಚಾಂಗಕೇಳದೆ ಒಂದು ಅಂಕಣದಷ್ಟು ಜಾಗದಲ್ಲಿ ಗುಡಿಸಲು ನಿರ್ಮಿಸುತ್ತಾರೆ. ಗುಡಿಸಲಿಗೆ ಚಿಕ್ಕ ತಗಡಿನ ಬಾಗಿಲು ಇಲ್ಲವೆ ಗರಿಯಿಂದ ಕಟ್ಟಿ ಮಾಡಿದ ತಡಿಕೆಬಾಗಿಲನ್ನು ಮುಚ್ಚಲು ಮಾಡಿಕೊಂಡಿರುತ್ತಾರೆ. ತಮ್ಮ ಗುಡಿಸಲುಗಳ ಪಕ್ಕದಲ್ಲಿಯೇ ರೊಪ್ಪ ಕಟ್ಟಿಕೊಂಡಿರುತ್ತಾರೆ. ಅದರಲ್ಲಿ ಕುರಿಗಳನ್ನು ಕೂಡಿ ಹಾಕುತ್ತಾರೆ. ರಕ್ಷಣೆಗೆ ರೊಪ್ಪಕ್ಕೆ ಜಾಲಿಮುಳ್ಳನ್ನು ಹಾಕಿರುತ್ತಾರೆ. ಇತ್ತೀಚೆಗಷ್ಟೆ ಗೊಲ್ಲರಹಟ್ಟಿಗಳಲ್ಲಿ ಹೆಚ್ಚಿನದಾಗಿ ಹೆಂಚಿನಮನೆಗಳು, ಮಾಳಿಗೆಮನೆಗಳು, ಶೀಟಿನಮನೆಗಳನ್ನು, ನಿರ್ಮಿಸಿಕೊಂಡಿರುತ್ತಾರೆ. ಪ್ರತ್ಯೇಕವಾಗಿ ಹಟ್ಟಿಗಳಲ್ಲಿ ವಾಸಿಸುವ ಅವರು ತಮ್ಮ ಅನನ್ಯತೆಯನ್ನು ಗುರುತಿಸಿಕೊಂಡಿದ್ದಾರೆ. ಮನೆಕಟ್ಟುವ ವಸ್ತುಗಳನ್ನು ಬದಲಾವಣೆ ಮಾಡಿಕೊಂಡು ಮನೆ ನಿರ್ಮಿಸುತ್ತಿದ್ದಾರೆ. ಪ್ರತಿಯೊಂದು ಮನೆಇರಲಿ, ಗುಡಿಸಲು ಇರಲಿ ಒಳಗಡೆ ಪ್ರವೇಶಿಸಿದರೆ ಹಗ್ಗದಿಂದ ತಯಾರಿಸಿದ 'ನೆಲುವು' ಅಂದರೆ ಹಾಲು, ಮೊಸರು, ತುಪ್ಪ, ಬೆಣ್ಣೆಯನ್ನು ಇಡಲು ಅಂತರಕ್ಕೆ ಗಳಕ್ಕೆ ಕಟ್ಟಿರುತ್ತಾರೆ. ಇದು ಅವರ ಜ್ಞಾನ ಪರಂಪರೆಯ ಪ್ರತೀಕ, ಏಕೆಂದರೆ ಬೆಕ್ಕಿಗೆ ಸಿಗದ ಹಾಗೆ ಇಡಲು ಮಾಡಿರುವಂತಹ ಸಾಧನ. ಹಾಗೆಯೆ 'ಅಡಕಲಿ' ಅಂದರೆ ಸೋರೆಗಳನ್ನು ಒಂದರ ಮೇಲೊಂದು ಏರಿಸಿ ಅದರಲ್ಲಿ ಕಾಳುಗಳು, ಹಣ ಇಡಲು ಬಳಸುತ್ತಾರೆ. ಇದು ಜನಪದರ ಆಹಾರ ಸಾಮಾಗ್ರಿ ಸಂಗ್ರಹ ಜಾಣ್ಮೆಯನ್ನು ತಿಳಿಯಬಹುದು.

ಕಾಡುಗೊಲ್ಲರ ಹಟ್ಟಿಗಳಲ್ಲಿ ಇಂದೂ ಸಹ ಮೊಳಕಾಲ್ಮೂರು, ಹಿರಿಯೂರು, ಚಳ್ಳಕೆರೆ ತಾಲ್ಲೂಕುಗಳಲ್ಲಿ ಗುಡಿಸಲುಗಳು ಕಂಡುಬರುತ್ತವೆ. ಗುಡಿಸಲುಗಳ ಪಕ್ಕದಲ್ಲಿಯೇ ರೊಪ್ಪವನ್ನು ಕಟ್ಟಿಕೊಂಡಿರುತ್ತಾರೆ.

ಹಸು, ಎತ್ತುಗಳನ್ನು ಕಟ್ಟಲು 'ಗ್ವಾದ್ಲಿ'ಯನ್ನು ಮಾಡಿಕೊಂಡಿರುತ್ತಾರೆ. ವಸತಿ ವ್ಯವಸ್ಥೆಗೆ ಸಂಬಂಧಿಸಿದಂತೆ ತುಂಬಾ ಸರಳವಾಗಿ ನಿರ್ಮಿಸಿಕೊಂಡಿದ್ದು, ಪ್ರಕೃತಿಯಲ್ಲಿ ಸಿಗುವ ಗಳ, ಗರಿ, ಆಪು, ಬಾದೆಹುಲ್ಲು ಅಂಚಿಹುಲ್ಲಿನಿಂದ ಗುಡಿಸಲನ್ನು ನಿರ್ಮಿಸಿಕೊಂಡಿರುತ್ತಾರೆ. ಅಪ್ಪಟ ನಿಸರ್ಗ ನಿಯಮಗಳನ್ನು ಅನುಸರಿಸುವುದು ಅವರ ಬದುಕಿನ ಕ್ರಮವಾಗಿದೆ.

ಇತ್ತೀಚಿಗೆ ಪಶುಪಾಲನೆಯಿಂದ ಕೃಷಿಗೆ ನೆಲೆನಿಂತ ಗೊಲ್ಲರು ಮತ್ತು ಬೇಡರು ಹೆಂಚಿನಮನೆ, ಇಲ್ಲವೆ ಶೀಟನಮನೆ, ಕಟ್ಟಕೊಂಡಿದ್ದಾರೆ. ಅವರು ಸ್ವಲ್ಪ ಮಟ್ಟಿಗೆ ಆರ್ಥಿಕ ಸ್ಥಿತಿವಂತರಾಗಿದ್ದು ಉತ್ತಮ ಸ್ಥಿತಿಯಲ್ಲಿದ್ದಾರೆ. ಕಾಡುಗೊಲ್ಲರ ಹಟ್ಟಿಗಳ ಮಧ್ಯಭಾಗದಲ್ಲಿ ದೇವಸ್ಥಾನವಿರುತ್ತದೆ. 'ದೇವರ ಮನೆಯೂ ಸಹ ಗುಡಿಸಲಿನಿಂದ ನಿರ್ಮಿಸಿರುತ್ತಾರೆ'. ದೇವರ ಗುಡಿಸಲು "ಕೋನಾಕೃತಿ"ಯಲ್ಲಿ ನಿರ್ಮಿಸಿದ್ದು, 'ಅಂಚಿಹುಲ್ಲು ಮತ್ತು ಮುತ್ತುಗದ ಎಲೆ' ಹೊದಿಸಿದ ಗುಡಿಸಲಾಗಿರುತ್ತದೆ. ಈಗಲೂ ಯರಬಳ್ಳಿ ಹಾಲುಗುಡುದಪ್ಪಸ್ವಾಮಿ, ಸಿಂಪಣ್ಣ, ಕಾಟಮದೇವರು ಗುಡಿಸಲಿನಲ್ಲಿಯೇ ಇರುವುದು ಕಂಡುಬರುತ್ತದೆ. ದೇವರ ಗುಡಿಸಲಿಗೆ ಚಿಕ್ಕದಾದ ಮಾರುದ್ದದ ಬಾಗಿಲಿರುತ್ತದೆ. ಒಳಗಡೆ ದೇವರು ಮತ್ತು ಪೂಜಾರಿಗಷ್ಟೆ ಜಾಗವಿರುತ್ತದೆ. ವಕ್ತೃಗಳಾದ ಪಿಳ್ಳಣ್ಣ, ಕುರಿನಾಗಜ್ಜರ, ಈರಣ್ಣನವರು ಹೇಳುವ ಹಾಗೆ ಮೊದಲು ಈ ದೇವರುಗಳ ಗುಡಿಸಲು ಸುತ್ತ ಕಳ್ಳಿ ಬೇಲಿ ಇತ್ತು, ಈಗ ಕಾಂಪೌಂಡು ನಿರ್ಮಿಸಿದ್ದಾರೆ(ಪೌಳಿ). ಗೊಲ್ಲರ ಹಟ್ಟಿಯಲ್ಲಿ ಪೂಜಾರಿಗಳೂ ಸಹ ದೇವರ ಸಮೀಪದಲ್ಲಿಯೇ ವಾಸಿಸಬೇಕಾಗುತ್ತದೆ. ಪೂಜಾರಿಗೂ ಸಹ ಗುಡಿಸಲನ್ನು ನಿರ್ಮಿಸಿರುತ್ತಾರೆ. ಅದಕ್ಕೆ 'ಭವಂತಿ' ಮನೆ ಎನ್ನುತ್ತಾರೆ. ಪೂಜಾರಿಯು ಬಹಳಷ್ಟು ವ್ರತ ನಿಯಮಗಳನ್ನು ಪಾಲಿಸಬೇಕಾಗುತ್ತದೆ ಪೂಜೆ ಮಾಡುವ ಸಂದರ್ಭದಲ್ಲಿ ಬಾಯಿಗೆ ಬಟ್ಟೆಕಟ್ಟಿಕೊಂಡು ಪೂಜಿಸಬೇಕು, ಅಪ್ಪಿ-ತಪ್ಪಿ ಎಂಜಲು(ಉಗುಳು) ಸಿಡಿದೀತು ಎಂಬ ಭಾವನೆಯಿಂದಾಗಿ ಹಾಗೆಯೆ ದಿನಾಲೂ ವರತೆ(ಚಲುಮೆ) ನೀರನ್ನು ತಂದು ಮುಖತೊಳೆಯಬೇಕು. ಬಸ್ಸು ಹತ್ತುವ ಆಗಿಲ್ಲ, ಚಪ್ಪಲಿ ತೊಡುವ ಆಗಿಲ್ಲ, ಬೇರೆಯವರ ಮನೆಯಲ್ಲಿ ಊಟ ಮಾಡುವ ಆಗಿಲ್ಲ ಹೀಗೆ ಕಾಡುಗೊಲ್ಲ ದೇವರುಗಳು ಕಟ್ಟುನಿಟ್ಟಿನ ವ್ರತದ ದೇವರುಗಳಾಗಿದ್ದು ಇತ್ತೀಚಿಗೆ ಕೆಲವು ಗೊಲ್ಲರ ಹಟ್ಟಿಗಳಲ್ಲಿ ಬೃಹತ್‌ಗಾತ್ರದ ದೇವಸ್ಥಾನಗಳನ್ನು ಕಟ್ಟಿರುವುದು ಕಂಡುಬರುತ್ತವೆ. ಕೂಡ್ಲಹಳ್ಳಿ, ಚನ್ನಮ್ಮನಾಗತಿಹಳ್ಳಿ, ಚಿತ್ರಹಳ್ಳಿ, ಇತ್ಯಾದಿಯಾಗಿ ಬೃಹತ್ತಾದ ಕಟ್ಟಡದ ದೇವಸ್ಥಾನಗಳನ್ನು ನಿರ್ಮಿಸಿರುತ್ತಾರೆ.

ಮ್ಯಾಸಬೇಡರೂ ಸಹ ಕಾಡುಗೊಲ್ಲರಂತೆ ವಸತಿ ನಿರ್ಮಿಸುವಲ್ಲಿ ಸಾಮ್ಯತೆಯನ್ನು ಹೊಂದಿದ್ದಾರೆ. ಹೆಚ್ಚಿನದಾಗಿ ಅವರಲ್ಲಿ ಮಾಳಿಗೆ ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಮ್ಯಾಸಬೇಡರೂ ಸಹ ಮನೆಯ ಹತ್ತಿರವೇ ಕುರಿಹಟ್ಟಿ(ರೊಪ್ಪ) ನಿರ್ಮಿಸಿರುತ್ತಾರೆ. ದೇವಸ್ಥಾನಗಳು ಇಂದು ಕಟ್ಟಡಗಳನ್ನು ಕಟ್ಟಿ ದೇವರು ಇಟ್ಟಿರುವುದು ಕಾಣುತ್ತೇವೆ. ಇಂದಿಗೂ ಕಂಪಳದೇವರ ಹಟ್ಟಿಯ ದೀವಳಿಗೆ, ಜಾತ್ರೆ ಸಂದರ್ಭಗಳಲ್ಲಿ ಮಾತ್ರ ಕಾಂಸಿ ಹುಲ್ಲು ಮತ್ತು ಮುತ್ತುಗದ ಎಲೆಗಳಿಂದ ಗುಬ್ಬ ನಿರ್ಮಿಸಿ ದೇವರನ್ನು ಗುಬ್ಬದಲ್ಲಿಡುತ್ತಾರೆ. ಜಾತ್ರೆ ಮುಗಿದ ನಂತರ ದೇವಸ್ಥಾನದೊಳಗೆ ಇಡುತ್ತಾರೆ. ಬೇಡರಲ್ಲೂ ಸಹ ಗುಡಿಸಲು ನಿರ್ಮಿಸುತ್ತಿದ್ದು ಮ್ಯಾಸಬೇಡರೂ ಸಹ ಗುಡಿಸಲುಗಳಲ್ಲಿ ವಾಸಿಸುವುದು ಕಂಡುಬರುತ್ತದೆ.

ಒಟ್ಟಾರೆಯಾಗಿ ಭೌಗೋಳಿಕ ಪರಿಸರಕ್ಕನುಗುಣವಾಗಿ ವಸತಿ ವ್ಯವಸ್ಥೆಯನ್ನು ನಿರ್ಮಿಸಿಕೊಂಡು ಜೀವಿಸುತ್ತಿರುವುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಸಂಗತಿಯಾಗಿದೆ. ಗುಡಿಸಲು/ಮಾಳಿಗೆ ಮನೆ/ಹಂಚಿನ ಮನೆ/ಶೀಟನ ಮನೆ ಈ ಸಂಗತಿಗಳಿಂದ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಸಾಂಸ್ಕೃತಿಕ ಲಕ್ಷಣಗಳು ಸಾಮ್ಯತೆ ಪಡೆಯುತ್ತವೆ.

**ಇ) ಆಹಾರಪದ್ಧತಿ:**

ಕಾಡುಗೊಲ್ಲ ಮತ್ತು ಮ್ಯಾಸಬೇಡ ಬುಡಕಟ್ಟುಗಳಲ್ಲಿ ಎರಡು ರೀತಿಯ ಆಹಾರ ಪದ್ಧತಿಗಳುಂಟು ಮಾಂಸಾಹಾರ ಮತ್ತು ಸಸ್ಯಾಹಾರ. ಮೂಲತಃ ಬುಡಕಟ್ಟು ಸಮುದಾಯಗಳಾದ ಇವರು ಬೇಟೆ ಮತ್ತು ಪಶುಪಾಲನೆಯೊಂದಿಗೆ ಜೀವನವನ್ನು ಸವೆಸಿದ್ದರಿಂದ ಮೂಲತಃ ಮಾಂಸಾಹಾರಿಗಳೆ ಆಗಿದ್ದರು. ಬೇಟೆಯ ಮೂಲಕ ಸಿಕ್ಕ ಕೌಜುಗ, ಮೊಲ, ಉಡ, ಮೀನು, ಬಿಳಿಇಲಿ, ಜಿಂಕೆ ಮಾಂಸಗಳನ್ನು ತಿನ್ನುತ್ತಿದ್ದರು ಈಗ ಬೇಟೆ ಸಾಂಕೇತಿಕವಾಗಿದೆ. ಅವರು ಕುರಿ, ಮೇಕೆಯ ಮಾಂಸವನ್ನು ಬಳಸುತ್ತಾರೆ ಅವರ ಕೆಲವೊಂದು ದೇವರುಗಳಿಗೆ ಬ್ಯಾಟೆ ಕಡಿದು ಮಾಂಸದ ನೈವೇದ್ಯ ಮಾಡುತ್ತಾರೆ. ಗೌರಸಂದ್ರ ಮಾರಕ್ಕ, ಪುರ್ಲ ಹಳ್ಳಭೂತಪ್ಪ, ಯರಬಳ್ಳಿಮಾರಕ್ಕ, ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ (ಹೊರಮಠ), ಕರಿಯೋಬೇನಹಳ್ಳಿ ಮಾರಕ್ಕ, ಮೊದಲಾದ ದೇವರುಗಳಿಗೆ ಬ್ಯಾಟೆ ಕಡಿಯತ್ತಾರೆ. ಕೆಲವು ದೇವರುಗಳಿಗೆ ಬ್ಯಾಟೆ ಕಡಿಯುವುದಿಲ್ಲ. ಕಾಡುಗೊಲ್ಲರ ಕಾಟಂಲಿಂಗೇಶ್ವರ, ಚಿತ್ರಲಿಂಗೇಶ್ವರ, ಮತ್ತು ಮ್ಯಾಸಬೇಡರ ಕಂಪಳರಂಗಸ್ವಾಮಿ ದೇವರುಗಳಿಗೆ ಬ್ಯಾಟೆ ಕಡಿಯುವುದಿಲ್ಲ. ದೇವರುಗಳಿಗೆ ಅನ್ನ, ಮೊಸರು, ಹುಗ್ಗಿ, ಬೆಲ್ಲ, ಬಾಳೆಹಣ್ಣು, ತೆಂಗಿನಕಾಯಿ,ಹಾಲು, ತುಪ್ಪ, ಕಾಸುಮೀಸಲು ಈ ರೀತಿಯಾಗಿ ಎಡೆಸಲ್ಲಿಸುತ್ತಾರೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರು ಹಂದಿ, ಕೋಳಿ ತಿನ್ನುವುದಿಲ್ಲ, ಅವುಗಳನ್ನು ತಮ್ಮ ಹಟ್ಟಿಯೊಳಗೂ ಬಿಟ್ಟುಕೊಳ್ಳುವುದಿಲ್ಲ, ಹಂದಿ, ಕೋಳಿಯು ಹಟ್ಟಿ ಒಳಗೆಬಂದರೆ ಅಪವಿತ್ರವೆಂದು ಭಾವಿಸುತ್ತಾರೆ. ಅದಕ್ಕಾಗಿಯೇ ಪಾವಿತ್ರ್ಯತೆ ಉಳಿಸಿಕೊಳ್ಳಲು ಹಟ್ಟಿಯಸುತ್ತ ಮುಳ್ಳಿನಬೇಲಿ ಹಾಕಿರುತ್ತಾರೆ. ಮಾಂಸದ ಆಹಾರವನ್ನು ತಯಾರು ಮಾಡುವಾಗ ಸಾಮಾನ್ಯವಾಗಿ ಬಹುತೇಕ ಮನೆಗಳಲ್ಲಿ ಮನೆಯ ಹೊರಗಡೆಯೇ ತಯಾರುಮಾಡುತ್ತಾರೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರು ಮೂಲತಃ ಕಾಡಿನಲ್ಲೇ ವಾಸಿಸುತ್ತಿದ್ದರಿಂದ ಕಾಡಿನಲ್ಲಿಸಿಗುವ ಗೆಡ್ಡೆ, ಗೆಣಸು, ಸೊಪ್ಪು ತಿಂದುಂಡು ಬೆಳೆದವರು. ಸಸ್ಯಾಹಾರಕ್ಕೂ ಅಷ್ಟೆ ಪ್ರಾಧಾನ್ಯತೆ ಕೊಡುತ್ತಾರೆ. ಚಿತ್ರದುರ್ಗ ಬಯಲುಸೀಮೆಯ ಪ್ರದೇಶವಾಗಿದ್ದು ಮಳೆಬೀಳುವ ಪ್ರಮಾಣ ಕಡಿಮೆ ಇರುವುದರಿಂದ ಬೆದ್ದಲು ಬೇಸಾಯ ಹೆಚ್ಚು ಮಾಡುವರು. ಕಾಡುಗೊಲ್ಲ ಮತ್ತು ಮ್ಯಾಸಬೇಡರು ಇಲ್ಲಿ ಬೆಳೆಯುವ ರಾಗಿ, ಜೋಳ, ನವಣೆ, ಆರ್ಕ, ಸಾವೆ, ತೊಗರಿ, ಹುರುಳಿ, ಸಜ್ಜೆ, ಅಲಸಂದೆ, ಎಳ್ಳು, ಅವರೆ, ಕುಸುಬೆ, ಶೇಂಗಾ ಬೆಳೆಯುತ್ತಾರೆ. ಚಿತ್ರದುರ್ಗ ಬಯಲು ಸೀಮೆಯ ಜನರಿಗೆ ರಾಗಿಮುದ್ದೆ ತುಂಬ ಇಷ್ಟವಾದ ಆಹಾರ ಪದಾರ್ಥವಾಗಿದೆ. ರಾಗಿಮುದ್ದೆಯ ಜೊತೆಗೆ ಉದುಕ, ಬಜ್ಜಿ, ಮೆಣಸಿನಕಾಯಿ ಚಟ್ನಿ, ಗುರಾಳು ಚಟ್ನಿ (ಕುರಸನಿ), ಶೇಂಗಾ ಚಟ್ನಿ ತಯಾರಿಸುತ್ತಾರೆ. ರೊಟ್ಟಿಯೂ ಸಹ ಅವರಿಗೆ

ಪ್ರಿಯವಾದ ಆಹಾರ. ಶ್ರಮಆಧಾರಿತ ವೃತ್ತಿ ಅವರದ್ದಾಗಿರುವುದರಿಂದ ಗಟ್ಟಿ ಆಹಾರ ಪದಾರ್ಥಗಳನ್ನು ಸೇವಿಸುತ್ತಾರೆ. ಪಶುಪಾಲನೆಗೆ ಹೊಂದಿಕೊಂಡಿರುವ ಈ ಬುಡಕಟ್ಟುಗಳು ಹಾಲು, ಮೊಸರು, ಮಜ್ಜಿಗೆ, ತುಪ್ಪ ಹೆಚ್ಚಾಗಿ ಬಳಸುತ್ತಾರೆ. ಸಜ್ಜೆಅನ್ನ ಮಜ್ಜಿಗೆಯನ್ನು ಉಣ್ಣುತ್ತಾರೆ. ಪ್ರಕೃತಿಯಲ್ಲಿ ಸಿಗುವ ಆಲೆಸೊಪ್ಪು, ಮುಂಗರಬಳ್ಳಿ (ನಾಲ್ಕುಎಣೆರುವಬಳ್ಳಿ), ಅರಿವೆಸೊಪ್ಪು. ಕಿರುಕ್ಸಾಲೆಸೊಪ್ಪು, ನುಗ್ಗಿಸೊಪ್ಪು, ಹುಣಿಸೆ ಚಿಗುರಿನ ಸಾರು ದಿನ ನಿತ್ಯವೂ ಬಳಸುತ್ತಾರೆ. ಹಬ್ಬಹರಿದಿನ ಜಾತ್ರೆ, ಉತ್ಸವಗಳಲ್ಲಿ ಗೋಧಿಪಾಯಸ ಮಾಡುತ್ತಾರೆ.

ಮ್ಯಾಸಬೇಡರಲ್ಲಿ ಬೊಮ್ಮದೇವಡ್ಲುರು ನವಣೆ ಮುಟ್ಟುವುದ್ದಿಲ್ಲ ಮನೆಯೊಳಗೂ ನವಣೆಪ್ರವೇಶವಿಲ್ಲ, ನವಣೆಯ ಹೊಲದಲ್ಲಿಯೂ ಹೋಗುವುದಿಲ್ಲ, ಈಚಲುಹಣ್ಣು ತಿನ್ನುವುದಿಲ್ಲ, ಈಚಲಚಾಪೆಯ ಮೇಲೂ ಮಲಗುವುದಿಲ್ಲ ಏಕೆಂದರೆ ಅವರ ಹಿರಿಯರು ನಡೆಸಿಕೊಂಡು ಬಂದ ಸಂಪ್ರದಾಯವಾಗಿದೆ. ಕಾಡುಗೊಲ್ಲ ಮತ್ತು ಮ್ಯಾಸಬೇಡ ಮಾಂಸಾಹಾರ ಸಸ್ಯಾಹಾರ ಎರಡು ರೀತಿಯ ಆಹಾರವನ್ನು ಉಪಯೋಗಿಸುತ್ತಿದ್ದು ದಿನನಿತ್ಯದ ಜೀವನದಲ್ಲಿ ಸಸ್ಯಾಹಾರಕ್ಕೆ ಹೆಚ್ಚು ಪ್ರಾಧಾನ್ಯತೆ ಕೊಡುತ್ತಾರೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರ ಆಹಾರ ಪದ್ಧತಿಯನ್ನು ಪರಾಮರ್ಶಿಸಿದರೆ. ಈ ಎರಡು ಸಮುದಾಯಗಳಲ್ಲೂ ಸಸ್ಯಾಹಾರಿ ಮತ್ತು ಮಾಂಸಾಹಾರಿ ಈ ಎರಡು ಪ್ರಕಾರದ ಆಹಾರ ಪದ್ಧತಿಯನ್ನು ಅನುಸರಿಸುತ್ತಿರುವುದನ್ನು ಪ್ರಸ್ತುತ ಅಧ್ಯಯನ ಗುರುತಿಸಿದೆ.

**ಈ) ಉಡುಗೆ ತೊಡುಗೆಗಳು:**

ಕಾಡುಗೊಲ್ಲರು ಉಡುಗೆ ತೊಡುಗೆಗಳಲ್ಲಿ ಇತರೆ ಬುಡುಕಟ್ಟುಗಳಿಗೆ ಹೋಲಿಸಿದಾಗ ಸಾಮ್ಯತೆ ಹೊಂದಿದ್ದಾರೆ. ಕಾಡುಗೊಲ್ಲರು ಬಹುಪಾಲು ಜನ ಕಪ್ಪು ಬಣ್ಣದವರಾಗಿದ್ದಾರೆ. ಸಾಮಾನ್ಯವಾಗಿ ಗಂಡಸರ ಮತ್ತು ಹೆಂಗಸರ ಉಡುಪು ಸರಳವಾಗಿರುತ್ತದೆ. ಅವರ ಉಡುಪುಗಳು ದುಬಾರಿ ಬೆಲೆಯವುಗಳಾಗಿರದೆ ಕಡಿಮೆ ಬೆಲೆಯ ಒರಟು ಬಟ್ಟೆಗಳಾಗಿರುತ್ತವೆ. ಕುರಿ, ಹಸು, ಎತ್ತು, ಎಮ್ಮೆಗಳನ್ನು ಮೇಯಿಸುವುದಕ್ಕೆ ಕೃಷಿ ಕೆಲಸದಲ್ಲಿ ತೊಡಗಬೇಕಾಗಿರುವುದರಿಂದ ಈ ರೀತಿಯ ಬಟ್ಟೆ ಧರಿಸುತ್ತಾರೆ. ಪುರುಷರು ನಿಲುವಂಗಿ, ಮೊಣಕಾಲಿನವರೆಗೆ ಇಳಿಬಿದ್ದ ಪಟ್ಟಿ ನಿಕ್ಕರ್, ತಲೆಗೆ ರುಮಾಲು, ಹೆಗಲ ಮೇಲೊಂದು ಕರಿಕಂಬಳಿ, ಕಾಲಿಗೆ ಚರ್ಮದಿಂದ ಮಾಡಿದ ದಪ್ಪನೆಯ ಪಾದರಕ್ಷೆಗಳು ಬಹುಶಃ ಅವರ ಉಡುಪು ಸರಳವಾಗಿದ್ದು ಗಾಳಿ, ಮಳೆ, ಚಳಿಗೆ ರಕ್ಷಣೆಗೆ ಅನುಕೂಲವಾಗುವಂತಹ ಉಡುಪು ಧರಿಸುತ್ತಿದ್ದರು. ಮೊಣಕಾಲಿನವರೆಗೆ ಕಚ್ಚೆಪಂಜೆ ಉಡುತ್ತಾರೆ. ಅವರಿಗೆ ಕಂಬಳಿ ತುಂಬಾ ಅತ್ಯುಪಯುಕ್ತವಾದುದ್ದಾಗಿತ್ತೆಂದು ಕಾಣುತ್ತದೆ. ಅದನ್ನು ಕುಪ್ಪೆಮಾಡಿ ಇಟ್ಟುಕೊಂಡು ಕುಳಿತು ಕೊಳ್ಳುವುದು, ಚಳಿಗೆ ಹೊದಿಕೆಯಾಗಿ, ಮಳೆ ಬಂದಾಗ ಹೊದ್ದುಕೊಳ್ಳುವುದು ಕಂಡುಬರುತ್ತದೆ. ಇದರಿಂದಾಗಿ ಈ ವದಿಕೆ ಬೆಚ್ಚಗಿನ ಅನುಭವವನ್ನು ನೀಡುತ್ತದೆ. ಮಹಿಳೆಯರು ಸೀರೆ ಉಡುವುದು ಕಾಡುಗೊಲ್ಲರ ಹಿರಿಯ ಮಹಿಳೆಯರು ಕುಪ್ಪಸ ತೊಡದಿರುವ ಸಂಪ್ರದಾಯ ಹೊಂದಿದ್ದು ಸೀರೆಯ ಸೆರಗಿನಿಂದ ಎದೆಯನ್ನು ಮುಚ್ಚಿಕೊಳ್ಳುತ್ತಾರೆ. ಆದರೆ ಇಂದು ಕಾಡುಗೊಲ್ಲರು ಆಧುನಿಕ ಉಡುಪುಗಳನ್ನು ಇತರೆ ಜನಾಂಗದವರಂತೆ ಧರಿಸುತ್ತಿರುವುದು ಕಂಡುಬರುತ್ತದೆ.

ಕಾಡುಗೊಲ್ಲರು ಚಿನ್ನ ಮತ್ತು ಬೆಳ್ಳಿಯಿಂದ ಮಾಡಿದ ಆಭರಣಗಳನ್ನು ಧರಿಸುತ್ತಾರೆ. ಗೊಲ್ಲ ಸಮುದಾಯದ ಮಹಿಳೆಯರಲ್ಲಿ ಮೊಣಕೈಗೆ ಕಡಗವನ್ನು ತೊಡುತ್ತಾರೆ. ಇದನ್ನು 'ಗೊಲ್ಲಕಡಗ'ವೆಂದು ಕರೆಯುತ್ತಾರೆ. ಗೊಲ್ಲಕಡಗದ ಸಂಪ್ರದಾಯವು ಈ ಜನಾಂಗದ ಮಹಿಳೆಯರ ಸಾಂಸ್ಕೃತಿಕ ಅನನ್ಯತೆಯನ್ನು ಬಿಂಬಿಸುತ್ತದೆ, ವಿಶೇಷವೆಂದರೆ ಗೊಲ್ಲಮಹಿಳೆಯರು ಗಂಡ ಸತ್ತನಂತರವೂ ತಾಳಿ, ಮೂಗುತಿ, ಕಾಲುಂಗುರ, ಕಡಗ ಯಾವ ಆಭರಣಗಳನ್ನು ತೆಗೆಯುವುದಿಲ್ಲ, ಹಾಗಾಗಿ ಅವರಲ್ಲಿ ವೈಧವ್ಯ ಕಾಡುವುದಿಲ್ಲ. ಕಾರಣ ಕೃಷ್ಣಪರಮಾತ್ಮನೇ ನಮ್ಮ ಗಂಡ ಅವನಿಗೆ ಸಾವಿಲ್ಲ ನಾವು ಯಾವಾಗಲೂ ಮುತ್ತೈದೆಯರು ಎಂದು ನಂಬಿದ್ದಾರೆ. ಈಗೀಗ ಗೊಲ್ಲಮಹಿಳೆಯರು ಚಿನ್ನದ ಆಭರಣಗಳನ್ನು ತೊಡುತ್ತಿದ್ದಾರೆ, ಪುರುಷರೂ ಸಹ ಉಂಗುರ, ಕೊರಳಿಗೆ ಸರಹಾಕುತ್ತಿರುವುದನ್ನು ಕಾಣಬಹುದು.

ಈ ಎರಡು ಸಮುದಾಯಗಳನ್ನು ಸಂದರ್ಶಿಸಿದಾಗ ತಿಳಿದು ಬರುವುದೇನೆಂದರೆ, ಕಾಡುಗೊಲ್ಲರಲ್ಲಿ ಎಲ್ಲ ತರಹದ ಆಭರಣಗಳನ್ನು ಧರಿಸುವುದು ಕಂಡುಬರುತ್ತದೆ. ಮ್ಯಾಸಬೇಡರಲ್ಲಿ ಓಲೆಯನ್ನು ಧರಿಸುವುದು ಕಂಡುಬರುತ್ತದೆ. ವಿಶೇಷವಾಗಿ ಕಾಡುಗೊಲ್ಲರಲ್ಲಿ ಕೈ ಕಡಗ ಧರಿಸುವುದು ಕ್ಷೇತ್ರ ಕಾರ್ಯದ ಸಂರ್ಭದಲ್ಲಿ ಕಂಡುಬರುತ್ತದೆ.

ಮ್ಯಾಸಬೇಡರ ಉಡುಗೆ ತೊಡುಗೆಗಳನ್ನು ಗಮನಿಸಿದಾಗ ಅವರೂ ಸಹ ಪಶುಪಾಲಕ ವೃತ್ತಿಯಿಂದ ಕೃಷಿಗೆ ನೆಲೆನಿಂತವರಾಗಿರುವರು. ಮ್ಯಾಸಬೇಡರ ಮೈಬಣ್ಣ ಸಾಮಾನ್ಯವಾಗಿ ಕಪ್ಪು ಇದ್ದು ಉದ್ದ ಶರೀರ, ತಲೆಯ ಮೇಲೆ ರುಮಾಲು ಧರಿಸಿರುತ್ತಾರೆ, ಕೆಲವರು ಬರಿ ಮೈಯಲ್ಲಿರುತ್ತಾರೆ, ಹೆಗಲ ಮೇಲೆ ಕಂಬಳಿ ಇರುತ್ತದೆ. ಕಂಬಳಿಯು ಹೊದ್ದುಕೊಳ್ಳಲು ಬೇಕಾದರೆ ಒಂದು ಕಡೆ ಕುಪ್ಪೆ ಹಾಕಿ ಕುಳಿತುಕೊಳ್ಳಲು ಬಳಸುತ್ತಾರೆ. ಮಳೆಗಾಲದಲ್ಲಿ ಕುರಿಯ ರೊಪ್ಪದ ಹತ್ತಿರ ಹೊದ್ದುಕೊಳ್ಳಲು ಬಳಸುತ್ತಾರೆ. ಅದರ ಮೇಲೆ ಬಿದ್ದ ಮಳೆ ಹನಿಯು ಅತ್ತ ಇತ್ತ ಜಾರಿ ಹೋಗುತ್ತದೆ ಅದರೊಳಗೆ ಇದ್ದರೆ ವ್ಯಕ್ತಿಯು ನೆನೆಯುವುದಿಲ್ಲ. ಕೆಲವು ಗಂಡಸರು ಸಲ್ಲಾಡ(ಚಲ್ಲಣ)ವನ್ನು ತೊಡುತ್ತಾರೆ. ಮ್ಯಾಸಬೇಡರ ಹಿರಿಯ ಹೆಂಗಸರು ಈಗಲೂ ಸೀರೆಯುಟ್ಟು ಕುಪ್ಪಸ ತೊಡದೆ ಇರುವುದನ್ನು ನೋಡಬಹುದು, ಅವರು ರವಿಕೆಯನ್ನು ಧರಿಸದೆ ಸೀರೆಯ ಸೆರಗನ್ನೆ ಎದೆಗೆ ಮುಚ್ಚಿಕೊಳ್ಳುತ್ತಾರೆ. ಮ್ಯಾಸಬೇಡ ಗಂಡಸರು ತಲೆಗೂದಲನ್ನು ಕತ್ತರಿಸದೆ ಉದ್ದನಾಗಿ ಬಿಟ್ಟು ತುರುಬು ಕಟ್ಟಿಕೊಳ್ಳುತ್ತಾರೆ. ಮ್ಯಾಸಬೇಡರೂ ಸಹ ಸರಳವಾದ ಉಡುಪನ್ನು ಧರಿಸುವರು ಈಗಲೂ ಚಳ್ಳಕೆರೆ ತಾಲ್ಲೂಕಿನ ನನ್ನಿವಾಳ, ಮೊಳಕಾಲ್ಮೂರು ತಾಲ್ಲೂಕಿನ ಮುತ್ತಿಗಾರಹಳ್ಳಿಯ 'ಕಿಲಾರಿ'ಗಳು 'ಸಲ್ಲಾಡ' ಚಲ್ಲಣ, ಕೈಯಲ್ಲಿ ಒಂದು ಕೋಲು, ಹೆಗಲಮೇಲೆ ಕಂಬಳಿ, ತಲೆಯ ಮೇಲೆ ರುಮಾಲು ಸುತ್ತಿಕೊಂಡಿರುತ್ತಾರೆ. ಬೆಡಗು ಅಥವಾ ಕುಲಚಿಹ್ನೆಯ ಆಧಾರದ ಮೇಲೆ ಉಡುಪು ಧರಿಸುವುದನ್ನು ಗುರುತಿಸಬಹುದು.

ಕಿಲಾರಿಗಳು- ಸಲ್ಲಾಡ,(ಚಲ್ಲಣ) ರುಮಾಲು.

ಬುಲ್ಲಾಡ್ಲು ಮಹಿಳೆಯರು- ಕುಪ್ಪಸಧರಿಸುವುದಿಲ್ಲ.

ದೊರೆಗಳು- ಬಿಳಿವಸ್ತ್ರ ಧರಿಸುವರು.

ಮ್ಯಾಸಬೇಡರು ಇತ್ತೀಚೆಗೆ ಆಧುನಿಕತೆಯ ಪ್ರಭಾವದಿಂದಾಗಿ ಹಳೆಯ ಉಡುಗೆತೊಡುಗೆಗಳನ್ನು ಬಿಟ್ಟು ನಾಗರಿಕ ಉಡುಪುಗಳನ್ನು ಮತ್ತು ನಾಜೂಕಾದ ಬಟ್ಟೆಗಳನ್ನು ತೊಡುವುದನ್ನು ಗಮನಿಸಬಹುದಾಗಿದೆ.

**ಉ) ವೈದ್ಯಪದ್ಧತಿ:**

ಕಾಡಾಡಿಬದುಕಿನಲ್ಲಿ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಪ್ರತ್ಯೇಕವಾಗಿ ವಾಸಿಸುವುದರಿಂದ ಕಾಡಿನಲ್ಲೋ ಅಥವಾ ಕಾಡಿನಂಚಿನಲ್ಲೋ ವಾಸಿಸುವುದರಿಂದ ಹಿಂದೆ ಹೆಚ್ಚಿನದಾಗಿ ನಗರಗಳ ಮತ್ತು ನಾಡಿನ ಸಂಪರ್ಕವಿಲ್ಲದಿದ್ದುರಿಂದ ಅವರು ಹೆಚ್ಚಾಗಿ ಸಹಜವಾಗಿಸಿಗುವ ಬೇರು, ಎಲೆ, ಬಳ್ಳಿ, ಗಿಡ ಮೂಲಿಕೆಗಳಿಂದ ಮನುಷ್ಯರ ಖಾಯಿಲೆಗಳಿಗೆ ಮತ್ತು ದನ, ಕುರಿಯ ಹಲವಾರು ರೋಗಿಗಳಿಗೆ ಔಷಧಿಯನ್ನು ತಾವೇ ತಯಾರಿಸಿಕೊಳ್ಳುತ್ತಿದ್ದರು. ಈಗೀಗ ಆಸ್ಪತ್ರೆಗಳಿಗೆ ಹೋಗುತ್ತಾರೆ. ಮನುಷ್ಯರಿಗೆ ಬರುವ ಪಿತ್ತ, ಅಜೀರ್ಣ, ತಲೆನೋವು, ವಾಂತಿ, ಹೊಟ್ಟೆನೋವು, ನ್ಯೂತಿ, ಕೊಂಕುಳಗಡ್ಡೆ, ಉಗುರುಸುತ್ತು, ಇತ್ಯಾದಿ ರೋಗಗಳಿಗೆ ಬಹಳ ಸರಳವಾಗಿ ತಾವೇ ಸುತ್ತ ಮುತ್ತ ಸಿಗುವ ಗಿಡ ಮೂಲಿಕೆಗಳಿಂದಲೇ ಔಷಧಿ ತಯಾರಿಸಿಕೊಳ್ಳುತ್ತಾರೆ. ದನ ಕರುಗಳಿಗೆ ಬರುವ ರೋಗಗಳಲ್ಲಿ ಕಾಲುಬಾಯಿ, ದೊಮ್ಮೆರೋಗ, ಹೊಟ್ಟೆ ಊದಿಕೊಂಡಾಗ, ಸೆಲೆ(ನೀರುಸೆಲೆ)ಯಾದಾಗ, ದನಗಳ ಕಾಲುಮುರಿದಾಗ ಇಂತಹ ಸಂದರ್ಭಗಳಲ್ಲಿ ತಾವೇ ಔಷಧಿಯನ್ನು ತಯಾರಿಸಿ ಗುಣಪಡಿಸಿಕೊಳ್ಳುತ್ತಾರೆ. ಮಾನುಷ್ಯರಿಗೆ ಬರುವ ಖಾಯಿಲೆಗಳಲ್ಲಿ ಹಲವಾರು ಚಿಕ್ಕ ಪುಟ್ಟ ಖಾಯಿಲೆಗಳನ್ನು ಶಮನ ಮಾಡಿಕೊಳ್ಳುತ್ತಾರೆ.

**ಪಿತ್ತ;** ಪಿತ್ತವಾದಾಗ ತುಂಬ ಸರಳವಾದ ಔಷಧಿ ಹೇಳುತ್ತಾರೆ, ಹುಣಸೆಹಣ್ಣನ್ನು ರಾತ್ರಿ ಹೊತ್ತು ನೆನೆಹಾಕಿ ಬೆಳಿಗ್ಗೆ ಅದರ ಹುಳಿಹಿಂಡಿ ತೆಗೆದು ಸ್ವಲ್ಪ ಬೆಲ್ಲಹಾಕಿ ಶುಂಠಿಪುಡಿ ಸ್ವಲ್ಪ ಜೀರಿಗೆಯನ್ನು ಕುಟ್ಟಿಹಾಕಿ ಬೆಳಿಗ್ಗೆ ಹಾಳುಹೊಟ್ಟೆಗೆ ಕುಡಿದರೆ ವಾಸಿಯಾಗುತ್ತದೆ. ತಲೆಸುತ್ತುವುದು ಕಡಿಮೆಯಾಗುತ್ತದೆ ಹೀಗೆ ಮೂರುದಿನ ಸೇವಿಸಬೇಕು.

**ಬಾಲಗ್ರಹ:** ಮಕ್ಕಳಿಗೆ ಉಂಟಾಗುವ ವಾಂತಿ, ಬೇಧಿ, ಅಳುವುದು, ಇತ್ಯಾದಿ ಅದರ ಲಕ್ಷಣಗಳು. ಅದಕ್ಕೆ ಬಾಲಗ್ರಹ ಚೀಟಿ ಬರೆದು ದಾರದಿಂದ ಸುತ್ತಿ, ಪೂಜೆಮಾಡಿ ಕಟ್ಟುವುದರಿಂದ ದೋಷ ಹೋಗುತ್ತದೆ ಎಂಬ ನಂಬಿಕೆ ಇದೆ.

**ಉಗುರು ಸುತ್ತು:** ಉಗುರು ಸುತ್ತು ಎದ್ದ ವ್ಯಕ್ತಿ ಎರಡು ಮೂರು ದಿನಗಟ್ಟಲೆ ನಿದ್ದೆ ಮಾಡುಲು ಬಿಡುವುದಿಲ್ಲವಂತೆ, ಅದಕ್ಕೆ ಹಸುವಿನ ಇಲ್ಲವೆ ಎಮ್ಮೆಯ ಸಗಣಿಯನ್ನು ಹಾಕಿ ಎರಡುದಿನ ಕಟ್ಟುತ್ತಾರೆ. ಮತ್ತು ಕೋಣನ ಮೂಗಿನಲ್ಲಿ ಆ ಬೆರಳನ್ನು ಇಟ್ಟರೆ ವಾಸಿಯಾಗುತ್ತದೆಂದು ಹೇಳುತ್ತಾರೆ.

**ನ್ಯೂತಿ:** ನ್ಯೂತಿಯು ಸಹ ದೊಡ್ಡ ಗುಳ್ಳೆಯೋಪಾದಿಯಲ್ಲಿ ಏಳುವುದು, ಅದಕ್ಕೆ ಗಿಡದಿಂದ ಔಷಧಿ ತಯಾರಿಸಿ ಹಾಕುತ್ತಾರೆ.

**ಮಕ್ಕಳಿಗೆ ಕಾರಹಾಕುವುದು:** ಮಕ್ಕಳಿಗೆ ಹಸಿವಾಗಲು ಮತ್ತು ಮಕ್ಕಳು ದಷ್ಟಪುಷ್ಟವಾಗಿ ಬೆಳೆಯಲು ಕಾರಹಾಕುವುದು ಒಳ್ಳೆಯದೆನ್ನುತ್ತಾರೆ. ಇಡ್ಲಿ, ಮೋಡಿಕಡ್ಡಿ, ಅಳಲೆಕಾಯಿ, ಜಾಕಾಯಿ. ಉತ್ತುತ್ತಿ ತಾಯಿಯ ಹಾಲಿನಲ್ಲಿ ತೇದು ವಾರಕ್ಕೊಮ್ಮೆ ಒಂದು ಒಳ್ಳೆಯನ್ನು ಹಾಕಿದರೆ ಮಗುವು ಆರೋಗ್ಯವಾಗಿರುತ್ತದೆ ಎಂಬ ನಂಬಿಕೆ ಇದೆ.

**ಚೇಳು ಕಡಿದರೆ:** ನಾಗಚಕ್ರದ ಬೇರು, ನಿಂಬೆರಸ, ಈರುಳ್ಳಿ ಅರೆದು ರಸತೆಗೆದು ಚೇಳು ಕಡಿದ ಹತ್ತಿರ ಹಚ್ಚಿ ಬೆಂಕಿ ಬಿಸಿ ಕಾವು ಕೊಟ್ಟರೆ ನೋವು ಕಡಿಮೆಯಾಗುತ್ತದೆ.

**ದನಗಳಿಗೆ ಬರುವ ಖಾಯಿಲೆಗಳು** : ಸೆಲೆಯಾದ ದನವು ಮೇಯುವುದಿಲ್ಲ. ಜೋಲುಗಿವಿ ಹಾಕಿಕೊಂಡು ಸಪ್ಪೆಯಾಗಿರುತ್ತದೆ. ತಕ್ಷಣ ಗುರುತಿಸಿ ಮೂಗಿನ ಹತ್ತಿರದಲ್ಲಿ, ಮಳೆಯಿಂದ ನರನೋಡಿ ಸೆಲೆಬಡಿದರೆ ಕಪ್ಪು ರಕ್ತ ಹೊರ ಹೋಗುತ್ತದೆ. ನಂತರ ಸ್ವಲ್ಪ ಆ ಜಾಗಕ್ಕೆ ಬೂದಿ ಹಚ್ಚಬೇಕು. ಹಾಗೆಯೆ ದನ ಚುರುಕಾಗದಿದ್ದರೆ ಕಣ್ಣಿನಲ್ಲಿ ಶುಂಠಿ ಪುಡಿಯನ್ನು ಇಟ್ಟರೆ ನಿಚ್ಚಳವಾಗಿ ದನ ಮೇಯಲು ಪ್ರಾರಂಭಿಸುತ್ತದೆ. ಆಗ ಒಣಮೇವು ಹಾಕಬೇಕು. ದನಗಳಿಗೆ ಹೊಟ್ಟೆ ಊದಿ ಕೊಂಡಾಗ ಬಿಳಿಉಳ್ಳಾಗಡ್ಡಿ, ಮೆಣಸು, ಬಜೆ ಚೆನ್ನಾಗಿ ಗುಂಡುಕಲ್ಲಿನಲ್ಲಿ ಅರೆದು ಬಿಸಿನೀರಿನಲ್ಲಿ ಗೊಟ್ಟದ ಮೂಲಕ ಕುಡಿಸಿದಾಗ ಸಗಣಿ ಹಾಕುತ್ತದೆ ಹೊಟ್ಟೆ ಊತವು ಕಡಿಮೆಯಾಗುತ್ತದೆ. ದನಗಳಿಗೆ ಕಾಲು ಬಾಯಿ ಖಾಯಿಲೆ, ದೊಮ್ಮೆ ರೋಗ ಬಂದಾಗ ನಾಟಿ ವೈಧ್ಯ ಪದ್ದತಿಯನ್ನು ಅನುಸರಿಸುವುದು ಕಂಡುಬರುತ್ತದೆ.

ಹಟ್ಟಿಯ ಹೊರಗೆ ಬುಡ್ಡೆಕಲ್ಲು ಮುಖ್ಯದ್ವಾರ ಬಾಗಿಲ ಹತ್ತಿರವಿರುತ್ತದೆ. ಇದೂ ಸಹ ದನಕರುಗಳಿಗೆ ಒಳ್ಳೆಯದಾಗಲೆಂದು ಮಾಡುವ ಆಚರಣೆ ಬುಡ್ಡೆಕಲ್ಲಿಗೆ ನೂರಾಒಂದು ಕೊಡ ನೀರುಹೊಯ್ದು, ಪೂಜೆಮಾಡಿ ವೀಳ್ಯೆದೆಲೆ ಬಾಳೆಹಣ್ಣು ಹಾಕುವರು. ದನಗಳು ಮತ್ತು ಜನಗಳು ಬುಡ್ಡೆಕಲ್ಲಿನ ಸುತ್ತ ತಿರುಗಿಸುವರು. ದನಗಳಿಗೆ ಮುಸುರೆ ಉಗ್ಗುವರು ಹೀಗೆ ಮಾಡುವುದರಿಂದ ದನಕರುಗಳಿಗೆ ಮತ್ತು ಜನಗಳಿಗೂ ಒಳ್ಳೆಯದಾಗುತ್ತದೆಂಬ ನಂಬಿಕೆ ಇರುವುದು. ಬುಡಕಟ್ಟು ಜನರು ಜನಪದರ ರೀತಿಯಲ್ಲಿ ಕೆಲವು ಖಾಯಿಲೆಗಳಿಗೆ ಔಷಧವನ್ನು ತಾವಿರುವಲ್ಲಿಯೇ ತಯಾರಿಸಿಕೊಳ್ಳುತ್ತಾರೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಈ ತೆರನಾದ ವೈದ್ಯಪದ್ಧತಿಯಲ್ಲದೆ ದೇವರ ಮೇಲೆ ಅತೀವವಾದ ಭಕ್ತಿಯನ್ನಿಟ್ಟುಕೊಂಡಿರುವ ಅವರು ದೇವರ ಮೊರೆ ಹೋಗುವುದೂ ಹೆಚ್ಚು. ಕಾಡುಗೊಲ್ಲರಂತು ಖಾಯಿಲೆ ಬಂದಾಗ ದೇವರನ್ನು ಹೂ ಕೇಳುವುದು ಹರಕೆ ಕಟ್ಟಿಕೊಳ್ಳುವುದು ದೇವರ ಧೂಳ್ತ ಮತ್ತು ತೀರ್ಥ ಹಾಕಿಸಿಕೊಳ್ಳುವುದು. ಒಟ್ಟಾರೆಯಾಗಿ ದೇವರನ್ನು ಕೇಳದೆ ಮುಂದಿನ ಕೆಲಸವೇ ಇಲ್ಲ. ಇಂದಿಗೂ ಕಾಡುಗೊಲ್ಲರು ಚೇಳುಕಡಿದರೆ ಮದ್ದನಕುಂಟೆ ಯರಪ್ಪಸ್ವಾಮಿ ದೇವಸ್ಥಾನಕ್ಕೆ ಹೋಗಿ ಧೂಳ್ತ ಹಚ್ಚಿಕೊಂಡು. ತೀರ್ಥಕುಡಿದರೆ ವಾಸಿಯಾಗಿ ಬಿಡುತ್ತದೆ ಎಂಬ ನಂಬಿಕೆ ಅವರಲ್ಲಿದೆ. ಅದೇ ರೀತಿಯಾಗಿ ಚಿತ್ರಹಳ್ಳಿಯ ಚಿತ್ರಲಿಂಗೇಶ್ವರ ದೇವಸ್ಥಾನದಲ್ಲಿ

ಖಾಯಿಲೆಯಾದವರು, ಮಾಯಮಾಟ ಮಾಡಿಸಿ ಕೈಕಾಲುಬಿದ್ದವರು ಚಿತ್ರಲಿಂಗೇಶ್ವರ ದೇವಸ್ಥಾನದಲ್ಲಿ ಒಂಭತ್ತು ದಿನ, ಹನ್ನೊಂದು ದಿನ, ಅಲ್ಲಿಯೇ ತಂಗಿ ದೇವರ ಧೂಳ್ತ, ತೀರ್ಥಹಾಕಿಸಿಕೊಂಡರೆ ಖಾಯಿಲೆ ವಾಸಿಯಾಗುತ್ತದೆಂಬ ನಂಬಿಕೆ ಕಾಡುಗೊಲ್ಲರಲ್ಲಿ ಹೆಚ್ಚಾಗಿದೆ.

ಮ್ಯಾಸಬೇಡರಲ್ಲಿಯೂ ದೇವರ ಬಗ್ಗೆ ನಂಬಿಕೆ ಇದೆ ಗೌರಸಂದ್ರ ಮಾರಮ್ಮನಿಗೆ ಹರಕೆ ಕಟ್ಟಕೊಳ್ಳುವುದು, ಬೇವಿನುಡುಗೆ, ದೇವರಿಗೆ ಬೆಳ್ಳಿಯ ವಸ್ತುಗಳನ್ನು ಕೊಡುವುದರ ಮೂಲಕ ಹರಕೆ ತೀರಿಸುವುದು. ನಾಯಕನಹಟ್ಟಿ ಜಾತ್ರೆಯಲ್ಲಿ ಮೆಣಸು ತೂರುವುದು ಹೀಗೆ ಮ್ಯಾಸಬೇಡರಲ್ಲೂ ದೇವರ ಬಗ್ಗೆ ನಂಬಿಕೆಯಿಟ್ಟುಕೊಂಡು ನಡೆದು ಕೊಳ್ಳುವುದು ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ಯುವ ಪೀಳಿಗೆಯವರು ಸಂಪ್ರದಾಯಗಳ ಹೊರತಾಗಿ ಕಾಯಿಲೆ, ಹೆರಿಗೆ ಇತ್ಯಾದಿ ಸಂಧರ್ಭಗಳಲ್ಲಿ ಆಸ್ಪತ್ರೆಯೂ ಕೂಡ ಬೇಕೆಂಬುದಾಗಿ ಸಮ್ಮತಿ ಸೂಚಿಸಿರುವುದು ಕ್ಷೇತ್ರಾಧ್ಯಯನದಲ್ಲಿ ಕಂಡುಬರುತ್ತದೆ.

**ಕೋಷ್ಟಕ-೨೦**

**ಆಧುನಿಕ ವೈದ್ಯಕೀಯ ಪದ್ಧತಿ ಬಗೆಗೆ ಇರುವ ಅಭಿಪ್ರಾಯ**

| - | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| - | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಉತ್ತಮವಾಗಿದೆ | ೧೩೯ | ೯೧.೪೫ | ೧೯ | ೮೬.೩೬ | ೧೫೮ | ೯೦.೮೦ |
| ಉತ್ತಮವಾಗಿಲ್ಲ | ೩ | ೧.೯೭ | ೨ | ೯.೦೯ | ೫ | ೨.೮೭ |
| ಕೆಲವೊಮ್ಮೆ ಬೇಕು | ೧೦ | ೬.೫೮ | ೧ | ೪.೫೫ | ೧೧ | ೬.೩೨ |
| ಬೇಕಾಗಿಲ್ಲ | ೦ | ೦.೦೦ | ೦ | ೦.೦೦ | ೦ | ೦.೦೦ |
| **ಒಟ್ಟು** | ೧೫೨ | ೧೦೦.೦೦ | ೨೨ | ೧೦೦.೦೦ | ೧೭೪ | ೧೦೦.೦೦ |

ಕೋಷ್ಟಕ ೨೦ ರಲ್ಲಿ ವ್ಯಕ್ತವಾಗುವ ಅಂಶವೆಂದರೆ ಆಧುನಿಕ ವೈಧ್ಯ ಪದ್ಧತಿಯ ಬಗ್ಗೆ ಕಾಡುಗೊಲ್ಲರ ಹಟ್ಟಿಯಲ್ಲಿ ಉತ್ತಮವಾಗಿದೆ ಎನ್ನುವುದು ಶೇ. ೯೧.೪೫ ಕಂಡುಬಂದರೆ, ಮ್ಯಾಸಬೇಡರ ಹಟ್ಟಿಯಲ್ಲಿ ಉತ್ತಮವಾಗಿದೆ ಎನ್ನುವುದಕ್ಕೆ ೮೬.೩೬ ಕಂಡುಬಂದಿರುತ್ತದೆ ಈ ಹಿನ್ನೆಲೆಯಲ್ಲಿ ಆಧುನಿಕ ವೈಧ್ಯಕೀಯ ಪದ್ಧತಿಗೆ ಮಹತ್ವ ಕೊಟ್ಟಿರುವುದು ಅಧ್ಯಯನ ಕಂಡುಕೊಂಡಿದೆ.

ಹೀಗೆ ಕಾಡುಗೊಲ್ಲ ಮತ್ತು ಮ್ಯಾಸಬೇಡರು ತಮ್ಮ ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಹಾಸುಹೊಕ್ಕಾಗಿ ಬುಡಕಟ್ಟು ಜನ ಜೀವನವನ್ನು ಹೊಂದಿದ್ದು. ಇತ್ತೀಚಿನ ದಿನಗಳಲ್ಲಿ ಸ್ವಲ್ಪಮಟ್ಟಿಗೆ ಬದಲಾವಣೆ ಹೊಂದಿದ್ದರೂ ಸಾಂಕೇತಿಕವಾಗಿಯಾದರೂ ತಮ್ಮ ಮೂಲ ಜೀವನದ ಪಾರಂಪರಿಕವಾದ ಆಚರಣೆಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದು ಬರುತ್ತದೆ.

**ಊ) ಶಿಕ್ಷಣ:**

ಕಾಡುಗೊಲ್ಲ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಹಿಂದುಳಿರುವಿಕೆಗೆ ಶಿಕ್ಷಣದ ಕೊರತೆಯೇ ಕಾರಣ, ಮುಖ್ಯವಾಗಿ ಸಮಾಜದ ಮುಖ್ಯವಾಹಿನಿಯಲ್ಲಿ ಮಿಳಿತಗೊಳ್ಳಬೇಕಾದರೆ ಶಿಕ್ಷಣ ಅಗತ್ಯವಾಗಿದೆ. ಕಾಡುಗೊಲ್ಲ ಸಮುದಾಯವು ಶಿಕ್ಷಣದಲ್ಲಿ ತುಂಬಾ ಹಿಂದುಳಿದಿದ್ದು, ಬಹು ಸಂಖ್ಯಾತರು ಅನಕ್ಷರಸ್ಥರಾಗಿದ್ದಾರೆ. ಮ್ಯಾಸಬೇಡರು ಶಿಕ್ಷಣದಲ್ಲಿ ಮುಂದುವರಿದಿರುವುದು ಅಧ್ಯಯನದಿಂದ ಕಂಡುಬರುತ್ತದೆ. ಹಟ್ಟಿಗಳಲ್ಲಿ ಶಾಲೆಗಳಿದ್ದರೂ ಪ್ರಾಥಮಿಕ ಶಿಕ್ಷಣವನ್ನು ಪ್ರವೇಶಪಡೆದು ಅರ್ಧಕ್ಕೆ ಶಾಲೆ ಬಿಡುತ್ತಾರೆ. ಈ ಸಮುದಾಯಗಳು ಶಿಕ್ಷಣ ಮೊಟಕುಗೊಳ್ಳಲು ಕಾರಣವೆಂದರೆ ಕುರಿ ದನಗಳನ್ನು ಮೇಯಿಸಲು ಹೋಗುವುದು, ಕೂಲಿ ಕೆಲಸಕ್ಕೆ ಕಳಿಸುವುದು, ಹೊಲ ಗದ್ದೆಗಳಲ್ಲಿ ಕೆಲಸಗಳಿಗೆ ಕರೆದುಕೊಂಡು ಹೋಗುವುದು. ಇವು ಮಕ್ಕಳ ಕೆಲಸವಾದರೆ ತಂದೆ ತಾಯಿಗಳು ತಮ್ಮ ಜೀವನ ನಿರ್ವಹಣೆಗೆ ಕೂಲಿ ಕೆಲಸ, ಹೊಲದ ಕೆಲಸ, ಕುರಿಕಾಯುವುದು, ಹೀಗೆ ಪಾರಂಪರಿಕ ವೃತ್ತಿಯಿಂದ ಜೀವನ ಮಾಡುತ್ತಾರೆ. ಅವರು ಶಿಕ್ಷಣ ಕಲಿತು ಏನುಮಾಡಬೇಕಾಗಿದೆ ಎಂಬುದಾಗಿ ನಂಬಿಕೊಂಡಿರುತ್ತಾರೆ. ಹಟ್ಟಿಗಳಲ್ಲಿ ಹೆಣ್ಣು ಮಕ್ಕಳಿಗಂತು ಶಿಕ್ಷಣವನ್ನು ಕೊಡುವುದು ತುಂಬಾ ದುರ್ಲಭವಾಗಿದೆ. ಏಕೆಂದರೆ ಮನೆ ಕೆಲಸ, ಜಮೀನಿನ ಕೆಲಸ ಮತ್ತು ಚಿಕ್ಕವಯಸ್ಸಿನಲ್ಲಿಯೇ ವಿವಾಹ ಮಾಡುವುದು, ಹಟ್ಟಿಯಿಂದ ದೂರದ ಶಾಲೆಗಳಿಗೆ ಕಳುಹಿಸದಿರುವುದು ಕಂಡುಬರುತ್ತದೆ. ಅವರಲ್ಲಿ ಇನ್ನು ಉನ್ನತ ಶಿಕ್ಷಣ ಕನಸಿನ ಮಾತೇ ಸರಿ. ಹಾಗಾಗಿ ಹಟ್ಟಿಗಳಲ್ಲಿ ಶಿಕ್ಷಣ ಪಡೆದವರ ಸಂಖ್ಯೆ ತುಂಬಾ ಕಡಿಮೆ.

**ಕೋಷ್ಟಕ-೨೧**

**ಶಿಕ್ಷಣದ ಮಟ್ಟ**

| - | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| - | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಪ್ರಾಥಮಿಕ | ೩೬ | ೨೩.೬೮ | ೫ | ೨೨.೭೨ | ೪೧ | ೨೩.೫೬ |
| ಮಾಧ್ಯಮಿಕ | ೩೮ | ೨೫.೦೦ | ೬ | ೨೭.೨೭ | ೪೪ | ೨೫.೨೮ |
| ಪಿಯುಸಿ | ೪ | ೨.೬೩ | ೧ | ೪.೫೫ | ೫ | ೨.೮೭ |
| ಪದವಿ | ೭ | ೪.೬೦ | ೪ | ೧೮.೧೮ | ೧೧ | ೬.೩೨ |
| ವೃತ್ತಿ ಪರ | ೨ | ೧.೩೨ | ೦ | ೦.೦೦ | ೨ | ೧.೧೫ |
| ಶಾಲೆಗೆ ದಾಖಾಲಾಗಿಲ್ಲ | ೬೩ | ೪೧.೪೫ | ೪ | ೧೮.೧೮ | ೬೭ | ೩೮.೫೦ |
| ಮಧ್ಯದಲ್ಲಿ ಶಾಲೆ ಬಿಟ್ಟವರು | ೨ | ೧.೩೨ | ೨ | ೯.೦೯ | ೪ | ೨.೨೯ |
| **ಒಟ್ಟು** | ೧೫೨ | ೧೦೦.೦೦ | ೨೨ | ೧೦೦.೦೦ | ೧೭೪ | ೧೦೦.೦೦ |

ಕೋಷ್ಟಕ ೨೧ ರಲ್ಲಿ ವ್ಯಕ್ತವಾಗುವ ಅಂಶವೆಂದರೆ ಗೊಲ್ಲರಹಟ್ಟಿ ಸಮುದಾಯದಲ್ಲಿ ಮಾಧ್ಯಮಿಕ ಶಾಲೆಯನ್ನು ಓದಿರುವವರ ಪ್ರಮಾಣ ಶೇಕಡ ೨೫.೦೦ ರಷ್ಟು ಕಂಡು ಬಂದರೆ, ಅದು ಇತರೆ ಶಿಕ್ಷಣದ ಪ್ರಕಾರಗಳಿಗೆ ಹೋಲಿಕೆ ಮಾಡಿದರೆ ಹೆಚ್ಚು ಕಂಡು ಬಂದಿರುವುದು. ಇದೆ ಮ್ಯಾಸಬೇಡರಲ್ಲಿ ಮಾಧ್ಯಮಿಕ ಶಿಕ್ಷಣದ ಪ್ರಮಾಣವನ್ನು ಹೋಲಿಕೆಮಾಡಿದರೆ ಶೇಕಡ ೨೭.೨೭ ರಷ್ಟು ಕಂಡುಬರುವುದು. ಆದರೆ ಶಾಲೆಗೆ ದಾಖಲೆಯೇ ಇಲ್ಲದಿರುವುದು ಗೊಲ್ಲರಹಟ್ಟಿಯಲ್ಲಿ ಶೇಕಡ ೪೧.೪೫ ರಷ್ಟು ಕಂಡುಬರುವುದು. ಶಾಲೆಗೆ ದಾಖಲಾಗಿಲ್ಲದಿರುವುದು ಮ್ಯಾಸಬೇಡರ ಹಟ್ಟಿಯಲ್ಲಿ ಶೇಕಡ ೧೮.೧೮ ರಷ್ಟು ಕಂಡುಬರುವುದು. ಈ ಹಿನ್ನೆಲೆಯಲ್ಲಿ ಕಾಡುಗೊಲ್ಲರು ಶೈಕ್ಷಣಿಕವಾಗಿ ಹಿಂದುಳಿದಿರುವುದು ಹಾಗೂ ಮ್ಯಾಸಬೇಡರು ಶೈಕ್ಷಣಿಕವಾಗಿ ಅಭಿವೃದ್ಧಿ ಹೊಂದಿರುವುದು ಪ್ರಸ್ತುತ ಅಧ್ಯಯನದಿಂದ ಕಂಡುಬಂದಿದೆ.

**ಹೆಣ್ಣು ಮಕ್ಕಳ ವಿದ್ಯಾಭ್ಯಾಸ ವಿವರ**

ಸಾಮಾಜಿಕ ಜಗತ್ತಿನಲ್ಲಿ ಮಹಿಳೆಯರು ಒಟ್ಟು ಜನಸಂಖ್ಯೆಯಲ್ಲಿ ಅರ್ಧದಷ್ಟು ಇರುವುದು ಕಂಡುಬರುವುದು. ಸಮೂಹ ಮತ್ತು ಸಾಮಾಜಿಕ ಜೀವನದಲ್ಲಿ ತಳಮಟ್ಟದಿಂದ ಕೆಲಸ ನಿರ್ವಹಿಸುತ್ತಿರುವುದು ಕಂಡುಬಂದಿದೆ. ಆದರೆ ಮೂಲಭೂತ ಹಕ್ಕಿನ ಪ್ರಶ್ನೆ ಎದುರಾದರೆ ಇದುವರೆಗೂ ನೀಡಿಲ್ಲ ಎಂದರೆ ಅದು ತಪ್ಪಾಗುವುದು, ನೀಡಿದರೂ ಅದು ಯಾರಿಗೆ ದಕ್ಕಿದೆ ಎನ್ನುವಂತಹ ವಾದವಿವಾದಗಳು ಹುಟ್ಟಿಕೊಳ್ಳುತ್ತವೆ. ಮಹಿಳೆಯ ಅಭಿವೃದ್ಧಿ ವೇಗ ಹೆಚ್ಚಿಸಬೇಕಾದರೆ ಶಿಕ್ಷಣ ಕೆಳಮಟ್ಟದವರಿಗೆ ತಲುಪಬೇಕು. ಅದು ತಲುಪಿದರೂ ಯಾರಿಗೆ ತಲುಪಿದೆ ಯಾವ ಪ್ರಮಾಣದಲ್ಲಿ ತಲುಪಿದೆ ಎನ್ನುವಂತಹ ವಿಷಯಗಳನ್ನು ಈ ಕೆಳಕಂಡ ಕೋಷ್ಟಕತಿಳಿಸುತ್ತದೆ.

**ಕೋಷ್ಟಕ-೨೨**

**ಹೆಣ್ಣು ಮಕ್ಕಳ ವಿದ್ಯಾಭ್ಯಾಸದ ವಿವರ**

| - | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| ವಿದ್ಯಾಭ್ಯಾಸ ಕೊಡಿಸದಿದ್ದರೆ ಕಾರಣ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಹಟ್ಟಿಗಳ ಸಮೀಪ ಶಾಲೆ ಇಲ್ಲದಿರುವುದು | ೨ | ೧.೩೨ | ೦ | ೦.೦೦ | ೨ | ೧.೧೫ |
| ಬಡತನ | ೯ | ೫.೯೨ | ೦ | ೦.೦೦ | ೯ | ೫.೧೭ |
| ಸಂಪ್ರದಾಯಗಳು | ೩ | ೧.೯೭ | ೦ | ೦.೦೦ | ೩ | ೧.೭೨ |
| ಮನೆಕೆಲಸ | ೨೧ | ೧೩.೮೨ | ೩ | ೧೩.೬೪ | ೨೪ | ೧೩.೭೯ |
| ತಿಳುವಳಿಕೆ ಇಲ್ಲದಿರುವುದು. | ೧ | ೦.೬೬ | ೦ | ೦.೦೦ | ೧ | ೦.೫೭ |
| ವಿದ್ಯಾಭ್ಯಾಸ ಮಾಡಿಸಿದವರ ಪ್ರಮಾಣ | ೧೧೬ | ೭೬.೩೨ | ೧೯ | ೮೬.೩೬ | ೧೩೫ | ೭೭.೫೯ |
| **ಒಟ್ಟು** | ೧೫೨ | ೧೦೦.೦೦ | ೨೨ | ೧೦೦.೦೦ | ೧೭೪ | ೧೦೦.೦೦ |

ಕೋಷ್ಟಕ ೨೨ ರಲ್ಲಿ ವ್ಯಕ್ತವಾಗುವ ಅಂಶವೆಂದರೆ ಗೊಲ್ಲರ ಹಟ್ಟಿ ಸಮುದಾಯದಲ್ಲಿ ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚು ಮಹತ್ವ ಕೊಟ್ಟರುವ ಅಂಶ ಪ್ರಸ್ತುತ ಅಧ್ಯಯನದಿಂದ ವ್ಯಕ್ತವಾಗುವುದು. ಗೊಲ್ಲರಹಟ್ಟಿ ಸಮುದಾಯದಲ್ಲಿ ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚು ಮಹತ್ವ ಕೊಟ್ಟರುವುದರ ಪ್ರಮಾಣ ಶೇಕಡ ೭೬.೩೨ ರಷ್ಟು ಕಂಡುಬರುವುದು. ಮ್ಯಾಸಬೇಡರ ಹಟ್ಟಿಯಲ್ಲಿ ಹೆಣ್ಣು ಮಕ್ಕಳ ವಿದ್ಯಭ್ಯಾಸಕ್ಕೆ ಹೆಚ್ಚು ಮಹತ್ವ ಕೊಟ್ಟರುವ ಪ್ರಮಾಣ ಶೇಕಡ ೮೬.೩೬ ರಷ್ಟು ಕಂಡುಬರುವುದು. ಪ್ರಸ್ತುತ ಜಾಗತೀಕ ವಿದ್ಯಾಮಾನದಲ್ಲೂ ಇನ್ನು ಮಹಿಳಾ ಶಿಕ್ಷಣಕ್ಕೆ ಆದ್ಯತೆ ನೀಡದೇ ಇರುವಂತಹ ಅಂಶ ಎರಡು ಸುಮುದಾಯಗಳಲ್ಲೂ ಕಂಡುಬರುವುದು. ಗೊಲ್ಲರಹಟ್ಟಿ ಸಮುದಾಯದಲ್ಲಿ ಈಗಲೂ ಮಹಿಳಾ ಶಿಕ್ಷಣಕ್ಕೆ ಏಕೆ ಆದ್ಯತೆ ನೀಡಲ್ಲ ಎನ್ನುವುದಕ್ಕೆ ಮನೆಕೆಲಸದಿಂದ ಶೇಕಡ ೧೩.೮೨ ರಷ್ಟು ಕಂಡುಬಂದರೆ. ಮ್ಯಾಸಬೇಡರ ಹಟ್ಟಿಯಲ್ಲಿ ಶೇಕಡ ೧೩.೬೪ ರಷ್ಟು ಅಧ್ಯಯನದಿಂದ ಕಂಡುಬಂದಿರುವುದು.

### ಎ) ಸಾಮಾಜಿಕ ಸಂಘಟನೆ :

ಕಾಡುಗೊಲ್ಲರಲ್ಲಿ ಸಾಮಾಜಿಕ ಸಂಘಟನೆ ಹೆಚ್ಚಾಗಿರುತ್ತದೆ. ಊರು ಅಥವಾ ಗ್ರಾಮಗಳಿಂದ ಪ್ರತ್ಯೇಕವಾಗಿ ಹಟ್ಟಿಗಳನ್ನು ಕಟ್ಟಿಕೊಂಡಿದ್ದಾರೆ. ಅವರು ತಮ್ಮ ಹಟ್ಟಿಗೆ ಬೇಲಿಯನ್ನು ಹಾಕಿಕೊಂಡು ತಮ್ಮದೇ ಆದ ಸಂಪ್ರದಾಯಗಳು ಮತ್ತು ಮಡಿವಂತಿಕೆಗಳನ್ನು ಆಚರಿಸುತ್ತಾರೆ. ಹಾಗಾಗಿ ಇವರು ಪ್ರತ್ಯೇಕವಾಗಿ ವಾಸಿಸುತ್ತಾರೆ. ಹಟ್ಟಿಯಿಂದ ಕಾಡುಗೊಲ್ಲರ ಸಾಮಾಜಿಕ ಸಂಘಟನೆ ಆರಂಭವಾಗುವುದು. ಹಟ್ಟಿಗಳಲ್ಲಿ ಹತ್ತರಿಂದ ನೂರು ಗುಡಿಸಲುಗಳಿರಬಹುದು, ಅವರೆಲ್ಲರೂ ಬಹಳ ಸಂಘಟನೆಯಿಂದಿರುತ್ತಾರೆ. ಹಬ್ಬಹರಿದಿನ, ಮದುವೆ, ಜಾತ್ರೆಗಳಲ್ಲಿ ಎಲ್ಲಾ ಗುಡಿಕಟ್ಟಿನವರು ಸೇರಿ ಆಚರಿಸುತ್ತಾರೆ. ಆಧುನಿಕ ದಿನಗಳಲ್ಲಿ ಕಾಡುಗೊಲ್ಲ ಸಂಘಟನೆಗಳು ಹುಟ್ಟಿಕೊಂಡಿವೆ. ಪ್ರತ್ಯೇಕವಾಗಿ ಅವರಲ್ಲೂ ಮಠಮಾನ್ಯಗಳು ಪ್ರಾರಂಭವಾಗಿ ಸಂಘಟನೆ ಹೆಚ್ಚಾಗಿ ಬೆಳೆಯುತ್ತಿದೆ. ಕರ್ನಾಟಕ ಕಾಡುಗೊಲ್ಲರ ಕ್ಷೇಮಾಭಿವೃದ್ಧಿ ಸಂಘ, ಕರ್ನಾಟಕ ರಾಜ್ಯ ಕಾಡುಗೊಲ್ಲರ ಹಿತರಕ್ಷಣಾ ಸಮಿತಿ ಹೀಗೆ ಅವರಲ್ಲಿ ಸಂಘಟನೆಗಳು ತಮ್ಮ ಹಿತಾಸಕ್ತಿಯನ್ನು ಕಾಯ್ದುಕೊಳ್ಳಲು ಮತ್ತು ಸರ್ಕಾರದಿಂದ ಬರಬೇಕಾದ ಸೌಲಭ್ಯಗಳನ್ನು ಪಡೆಯಲು ಹೋರಾಡುತ್ತಿರುವುದು ಕಂಡುಬರುತ್ತದೆ. ಈ ಸಂಘಟನೆಗಳು ಈಗಾಗಲೇ ಸರ್ಕಾರದ ಸೌಲಭ್ಯಗಳಲ್ಲಿ ಶೈಕ್ಷಣಿಕ, ಆರ್ಥಿಕ, ರಾಜಕೀಯ, ಇತ್ಯಾದಿ ಮೀಸಲಾತಿಯನ್ನು ಪಡೆಯಲು ನಿರಂತರವಾಗಿ ಸೆಣಸಾಡುತ್ತಿವೆ. ಎರಡು ಸಮುದಾಯಗಳಲ್ಲಿಯೂ ಸಂಘಟನೆಗಳು ನೆಲೆಯೂರಿರುವುದುನ್ನು ಈ ಕೆಳಕಂಡ ಕೋಷ್ಟಕದಲ್ಲಿ ಕಾಣಬಹುದು.

## ಕೋಷ್ಟಕ–೨೩

### ಸಮುದಾಯದ ಜಾತಿ ಸಂಘಟನೆ

| – | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| ಜಾತಿ ಸಂಘಟನೆ ಇದ್ದರೆಹೆಸರು | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಯಾದವ ಸಂಘಟನೆ | ೧೦೧ | ೬೬.೪೫ | ೦ | ೦.೦೦ | ೧೦೧ | ೫೮.೦೫ |
| ವಾಲ್ಮೀಕಿ ಸಂಘಟನೆ | ೦ | ೦ | ೧೨ | ೫೪.೫೫ | ೧೨ | ೬.೮೯ |
| ಯುವಕ ಸಂಘಟನೆ | ೪ | ೨.೬೩ | ೦ | ೦.೦೦ | ೪ | ೨.೨೯ |
| ಮಹಿಳಾ ಸಂಘಟನೆ | ೨೮ | ೧೮.೪೨ | ೪ | ೧೮.೧೮ | ೩೨ | ೧೮.೩೯ |
| ಜಾತಿ ಸಂಘಟನೆ ಇಲ್ಲದಿರುವುದು | ೧೯ | ೧೨.೫೦ | ೬ | ೨೭.೨೭ | ೨೫ | ೧೪.೩೭ |
| **ಒಟ್ಟು** | **೧೫೨** | ೧೦೦.೦೦ | **೨೨** | ೧೦೦.೦೦ | **೧೭೪** | ೧೦೦.೦೦ |

ಕೋಷ್ಟಕ ೨೩ ರಲ್ಲಿ ವ್ಯಕ್ತವಾಗುವುದೇನೆಂದರೆ ಗೊಲ್ಲರಹಟ್ಟಿಯಲ್ಲಿ ಶೇಕಡ ೬೬.೪೫ ರಷ್ಟು ಯಾದವ ಸಂಘಟನೆಯು ನೆಲೆಯೂರಿರುವುದನ್ನು ಕಾಣಬಹುದು. ಮ್ಯಾಸಬೇಡರ ಸಮುದಾಯದಲ್ಲಿ ವಾಲ್ಮೀಕಿ ಸಂಘಟನೆ ನೆಲೆಯೂರಿರುವುದರ ಪ್ರಮಾಣ ಶೇಕಡ ೫೪.೫೫ ರಷ್ಟು ಕಂಡುಬರುವುದು. ಒಟ್ಟಾರೆ ಎರಡು ಸಮುದಾಯಗಳು ಆ ಸಮುದಾಯಗಳಿಗೆ ತಕ್ಕಂತೆ ಸಂಘಟನೆಯಾಗಿರುವುದು ಪ್ರಸ್ತುತ ಅಧ್ಯಯನದಿಂದ ತಿಳಿದು ಬರುವುದು.

### ಏ) ಹಟ್ಟಿಗಳ ಒಳಾಡಳಿತ ವ್ಯವಸ್ಥೆ

ಹಟ್ಟಿ ತಮ್ಮದೇ ಆದ ನೀತಿ ನಿಯಮಗಳು, ವಿಧಿ ವಿಧಾನಗಳು ಕಟ್ಟು ಕಟ್ಟಳೆಗಳನ್ನು ಹೊಂದಿರುತ್ತವೆ. ಕಾರಣವೆಂದರೆ ಈ ಎಲ್ಲಾ ಅಂಶಗಳು ಜನಜೀವನ ವಿಧಾನವನ್ನು ರೂಪಿಸುತ್ತವೆ. ಜನರ ನಡವಳಿಕೆಗಳನ್ನು ನಿಯಂತ್ರಿಸುತ್ತವೆ. ಜನನ, ಮರಣ, ವಿವಾಹ, ಹುಟ್ಟು ಹಬ್ಬಗಳು, ಜಾತ್ರೆಗಳು, ಉತ್ಸವಗಳು ಇಂತಹ ಸಂದರ್ಭಗಳಲ್ಲಿ ಹಟ್ಟಿಯ ಆಡಳಿತ ವ್ಯವಸ್ಥೆ ಪ್ರಮುಖ ಪಾತ್ರವಹಿಸುತ್ತದೆ. ಈ ಸಮುದಾಯಗಳಲ್ಲಿ ಜಗಳ, ಹೊಡೆದಾಡಿದರೆ ಜಾತಿ ನಿಯಮಗಳನ್ನು ಮೀರಿ ನಡೆದರೆ, ಶಿಕ್ಷಿಸುವ, ದಂಡಿಸುವ ಅಧಿಕಾರ ಹಟ್ಟಿಯ ನಾಯಕರಿಗಿರುತ್ತದೆ. ದೇವರಿಗೆ ದಂಡ ಕಟ್ಟಿಸುವ ಹಟ್ಟಿಯ ಹೊರಗೆ ಹಾಕುವ ಅಧಿಕಾರವು ಹಟ್ಟಿಯ ಯಜಮಾನರಿಗಿರುತ್ತದೆ. ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ಜನರ ಸ್ವರೂಪ ತೀರಾ ಭಿನ್ನವಲ್ಲದಿದ್ದರೂ ಕೆಲವೊಂದು ಲಕ್ಷಣಗಳು ಭಿನ್ನವಾಗಿ ಒಂದು ಪ್ರದೇಶಕ್ಕೆ ಸೀಮಿತವಾದ ರಾಜಕೀಯ, ಸಾಮಾಜಿಕ ಹೊಣೆಗಾರಿಕೆ, ಜೀವನ ಶೈಲಿ, ಆಚಾರ ವಿಚಾರ, ಆಡಳಿತ ಇತರ ಎಲ್ಲಾ ಲಕ್ಷಣಗಳಲ್ಲಿ ಏಕತೆ ಸ್ವಾತಂತ್ರ್ಯವನ್ನು ಹೊಂದಿದ್ದರೆ ಬುಡಕಟ್ಟು ಎಂದು ಕರೆಯಬಹುದು. ಕಾಡುಗೊಲ್ಲರು ಮತ್ತು ಮ್ಯಾಸಬೇಡರು ಈ ನಿಟ್ಟಿನಲ್ಲಿ ವಿಕಾಸ ಹೊಂದಿದ ಬುಡಕಟ್ಟುಗಳಾಗಿ ಪರಿವರ್ತನೆ ಹೊಂದಿದ್ದಾರೆ.

**ಕಾಡುಗೊಲ್ಲರಿಗೆ ಮೂರು ಕಟ್ಟೆಮನೆಗಳು**

ಕಟ್ಟೆಮನೆಗಳೆಂದರೆ ಜನಾಂಗದ ನ್ಯಾಯ ತೀರ್ಮಾನ ಮಾಡುವ ಪಂಚಾಯಿತಿ ಕಟ್ಟೆಗಳು. ಅವು ಇಡೀ ಜನಾಂಗವನ್ನು ನಿಯಂತ್ರಿಸಿ ಹದ್ದುಬಸ್ತಿನಲ್ಲಿಡುವುವು. ಆ ಕಟ್ಟೆಮನೆಗೆ ಸೇರಿದ ಹಟ್ಟಿಗಳೇನಿದ್ದರು, ಆ ಕಟ್ಟೆಮನೆಗೆ ದೂರು ಸಲ್ಲಿಸಬೇಕು. ಪೂಜಾರಿಯೇ ಯಜಮಾನನಾಗಿರುತ್ತಾನೆ ಈತನು ದೇವರ ಪ್ರತಿನಿಧಿಯಂತಿದ್ದು ಪ್ರತ್ಯೇಕ ಮನೆಯಲ್ಲಿ ವಾಸಿಸುತ್ತಾನೆ ಇದಕ್ಕೆ 'ಭವಂತಿ ಮನೆ' ಎನ್ನುತ್ತಾರೆ. ಇದು ಹುಲ್ಲಿನಿಂದ ಕಟ್ಟಿದ ಚಿಕ್ಕ ಗುಡಿಸಲು. ಈಗಲೂ ಅವುಗಳನ್ನು ಯರಬಳ್ಳಿ ಗೊಲ್ಲರಹಟ್ಟಿಯಲ್ಲಿ ನೋಡಬಹುದಾಗಿದೆ. ಪೂಜಾರಿಯು ತಂಬಾ ಕಟ್ಟು ನಿಟ್ಟಿನ ಕ್ರಮವನ್ನು ಹೊಂದಿದ್ದು ಬೇರೆಯವರ ಮನೆಯಲ್ಲಿ ಊಟ ಮಾಡುವುದಿಲ್ಲ, ಬಸ್ಸು ಹತ್ತುವುದಿಲ್ಲ, ಕಾಲಿಗೆ ಚಪ್ಪಲಿ ಹಾಕುವುದಿಲ್ಲ, ದಿನಾಲೂ ಒರತೆ ನೀರಿನಿಂದ ಮುಖ ತೊಳೆಯುವುದು ಹೀಗೆ ಕಾಡುಗೊಲ್ಲರ ಪೂಜಾರಿಗಳು ತುಂಬಾ ಕಟ್ಟು ನಿಟ್ಟಿನ ಜೀವನವನ್ನು ನಿರ್ವಹಿಸುತ್ತಾರೆ.

**ಕಾಡುಗೊಲ್ಲರ ಮೂರು ಕಟ್ಟೆಮನೆಗಳು**

೧) ಕರಿಯೋಬೇನಹಳ್ಳಿ ಕಟ್ಟೆಮನೆ-ಹಿರಿಯೂರು ತಾಲ್ಲೂಕು (ಚಿತ್ತಮುತ್ತಿ ಕುಲದವರಿಗೆ ಬಂದ ಕರಡಿಗೊಲ್ಲರ ಕಟ್ಟೆಮನೆ).

೨) ತಾಳವಟ್ಟಿ ಕಟ್ಟೆಮನೆ - ಚಿತ್ರದುರ್ಗ ತಾಲ್ಲೂಕು (ಚಂದಮುತ್ತಿ ಕುಲದವರಿಗೆ).

೩) ರಾಮನಹಳ್ಳಿ ಕಟ್ಟೆಮನೆ-ಚಿತ್ರದುರ್ಗ ತಾಲ್ಲೂಕು (ರಾಮೇಗೌಡನ ಕುಲದವರಿಗೆ).

ಈ ಮೂರು ಕಟ್ಟೆಮನೆಗಳಿಗೆ ಆನೇಕ ಗುಡಿಕಟ್ಟುಗಳು ಸೇರುತ್ತವೆ.

**ಕಾಡುಗೊಲ್ಲ ಬುಡಕಟ್ಟಿನ ಆಡಳಿತದ ಶ್ರೇಣಿ ವ್ಯವಸ್ಥೆ:**

೧) ಪೂಜಾರಿ

೨) ಯಜಮಾನ

೩) ಗೌಡ

೪) ತಳವಾರ

ಹೀಗೆ ಶ್ರೇಣಿ ವ್ಯವಸ್ಥೆಯಿದ್ದು ನ್ಯಾಯ ತೀರ್ಮಾನಮಾಡುವಲ್ಲಿ ಕಟ್ಟೆಮನೆಯ ಪೂಜಾರಿ ಮತ್ತು ಯಾಜಮಾನನದ್ದೆ ಪ್ರಮುಖ ಪಾತ್ರವಿರುತ್ತದೆ, ಗೌಡನು ಸಹ ಪ್ರಮುಖ ಪಾತ್ರ ವಹಿಸುತ್ತಾನೆ, ಸಹಾಯಕನಾಗಿ ತಳವಾರ ಸುದ್ದಿ ತಲುಪಿಸುವುದು ಅವನ ಕೆಲಸ, ಜಾತ್ರೆ ಉತ್ಸವಗಳಲ್ಲಿ ಎಲ್ಲರನ್ನು ಕಲೆ ಹಾಕುವುದು. ಹೀಗೆ ಒಬ್ಬೊಬ್ಬರು ಒಂದೊಂದು ಕೆಲಸವನ್ನು ನಿರ್ವಹಿಸುತ್ತಾರೆ. ಎಲ್ಲರ ಕೆಲಸವೂ ಪ್ರಮುಖವಾದುದು ಮತ್ತು ಮಹತ್ತರವಾದುದಾಗಿರುತ್ತದೆ. ಕಟ್ಟೆಮನೆಯ ನ್ಯಾಯ ತೀರ್ಮಾನ ಕುರಿತಾದ ಒಂದು ಮಾತಿದೆ. 'ಹಾಲು ಅನ್ನ ಉಂಬೋರು ಕುಂತು ನ್ಯಾಯ ಮಾಡೋರು. ತುಪ್ಪ

ಅನ್ನ ಉಂಬೋರು ತೂಗಿ ನ್ಯಾಯ ಮಾಡೋರು' ಎಂದು ಜುಂಜಪ್ಪನ ಕಥೆಯಲ್ಲಿಯೇ ಉಲ್ಲೇಖವಿದೆ. ಹೀಗೆ ಕಾಡುಗೊಲ್ಲರ ಹಟ್ಟಿಗಳ ಒಳಾಡಳಿತ ವ್ಯವಸ್ಥೆಯಿದ್ದು ಹಟ್ಟಿಯನಿಯಮಗಳನ್ನು ತಪ್ಪದೆ ಪಾಲಿಸಲು ಅನೌಪಚಾರಿಕ ನಿಯಂತ್ರಣ ವ್ಯವಸ್ಥೆ ಇರುತ್ತದೆ. ಈಗೀಗ ನಿಯಮಗಳು ಸಡಿಲಗೊಂಡಿದ್ದು ನ್ಯಾಯ ತೀರ್ಮಾನಕ್ಕೆ ಆರಕ್ಷಕ ಠಾಣೆ, ಕೋರ್ಟ್ ಕಛೇರಿಗಳ ಮೊರೆ ಹೋಗುತ್ತಿದ್ದಾರೆ. ಸಾಮಾಜಿಕ ವ್ಯವಸ್ಥೆಗೆ ಸಂಬಂಧಿಸಿದ ಚಿಕ್ಕ ಪುಟ್ಟ ಜಗಳಗಳನ್ನು ಹಟ್ಟಿಯ ಪೂಜಾರಿ ಮತ್ತು ಯಜಮಾನರೇ ಬಗೆಹರಿಸುತ್ತಾರೆ. ಕ್ಷೇತ್ರ ಕಾರ್ಯಕ್ಕೆ ಹೋದ ಸಂದರ್ಭದಲ್ಲಿ ಪ್ರಮುಖವಾಗಿ ಕಂಡುಬಂದಂತಹ ಅಂಶವೆಂದರೆ ದೇವರ ಮೇಲೆ ಅವರಿಗೆ ಅಪಾರ ಭಕ್ತಿ ಶ್ರದ್ಧೆ ಮತ್ತು ಭಯ ಇದೆ. ಹಾಗಾಗಿಯೇ ಹಟ್ಟಿಯ ನಿಯಮಗಳನ್ನು ಮೀರದೆ ವಾಸಿಸುವುದು ಕಂಡು ಬರುತ್ತದೆ. ಊರುಗೊಲ್ಲರು ಹಟ್ಟಿಗೊಲ್ಲರಿಗಿಂತ ತುಂಬ ಭಿನ್ನವಾಗಿ ಸಾಮಾಜಿಕ, ಆರ್ಥಿಕ, ರಾಜಕೀಯ ವ್ಯವಸ್ಥೆಯಲ್ಲಿ ಪರಿವರ್ತನೆ ಹೊಂದಿದವರಾಗಿದ್ದಾರೆ.

ಮ್ಯಾಸಬೇಡರು ಮಾಡುವ ವೃತ್ತಿಯ ವೈವಿಧ್ಯತೆಯಿಂದಾಗಿ ಹಲವಾರು ಹೆಸರುಗಳಿಂದ ಕರೆಯಲ್ಪಟ್ಟಿದ್ದಾರೆ. ಕಾಡುಸಂಚರು, ನಾಯಕರು, ಪಾಳೆಯಗಾರರು, ದೊರೆಗಳು, ರಾಜಪರಿವಾರದವರು, ತಳವಾರರು, ಹೀಗೆ ಮಾಡುವ ವೃತ್ತಿಯಿಂದ ಅವರಲ್ಲಿ ವೈವಿಧ್ಯತೆ ಇತ್ತು.

ಯಾವುದೇ ಸಮುದಾಯ ಮೇಲ್ನೋಟಕ್ಕೆ ಸರಳವಾಗಿ ಕಂಡರೂ ಆಂತರಿಕವಾಗಿ ಸಾಮಾಜಿಕ ದೃಷ್ಟಿಯಿಂದ ಸಂಕೀರ್ಣವಾಗಿರುತ್ತದೆ. ಕಾರಣವೆಂದರೆ ರಕ್ಷಣೆ, ಭದ್ರತೆ, ನಿರಂತರತೆಗಾಗಿ ಒಂದು ಸಮುದಾಯ ನೀತಿ ನಿಯಮಗಳು ವಿಧಿನಿಷೇಧಗಳು, ನಿಯಂತ್ರಣ ವ್ಯವಸ್ಥೆ ಇರಲೇಬೇಕಾಗುತ್ತದೆ. ಅಂದಾಗ ಮಾತ್ರ ಸುಗಮವಾಗಿ ಆ ಸಮುದಾಯ ಮುಂದುವರೆಯಲು ಸಾಧ್ಯ. ಈ ಉದ್ದೇಶಗಳಿಗೆ ಅಧಿಕಾರದ ಶ್ರೇಣಿ ವ್ಯವಸ್ಥೆಯು ಮ್ಯಾಸಬೇಡರಲ್ಲೂ ಹೊರತಾಗಿಲ್ಲ, ಅತ್ಯಂತ ನಿಷ್ಠೆಯಿಂದ ತಮ್ಮ ಕೆಲಸ ಕಾರ್ಯಗಳನ್ನು ಮುಂದುವರೆಸಿಕೊಂಡು ಹೋಗುವಲ್ಲಿ ಕಾರಣೀಭೂತರಾಗಿದ್ದಾರೆ.

ಮ್ಯಾಸಬೇಡರಲ್ಲೂ ನ್ಯಾಯ ಪದ್ಧತಿ ವಿಶಿಷ್ಟವಾದುದ್ದಾಗಿದೆ. ಒಂದು ಬುಡಕಟ್ಟು ತನ್ನ ಜಾತಿ ಮತ್ತು ಪ್ರಾದೇಶಿಕತೆಗೆ ಅನುಗುಣವಾಗಿ ನ್ಯಾಯ ಪದ್ಧತಿಯನ್ನು ಹೊಂದಿರುವುದು ಸಹಜವಾದುದು, ಏಕೆಂದರೆ ಒಂದು ಸಮುದಾಯದ ನಂಬಿಕೆ, ಆಚರಣೆ, ಆದರ್ಶಗಳು, ಮೌಲ್ಯಗಳು ಇವುಗಳನ್ನಾಧರಿಸಿ ನ್ಯಾಯವನ್ನು ರೂಪಿಸಬೇಕಾಗುತ್ತದೆ. ಮ್ಯಾಸನಾಯಕರು ಪರಂಪರಾನುಗತವಾಗಿ ತಮ್ಮದೇ ಆದ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ. ಮ್ಯಾಸ ಬೇಡ ಜನಾಂಗದಲ್ಲೂ ಕಟ್ಟೆಮನೆಗಳನ್ನು ಕಾಣಬಹುದಾಗಿದೆ.

**ಮ್ಯಾಸಬೇಡರ ಕಟ್ಟೆಮನೆಗಳು**

೧) ಗೋನೂರು ಕಟ್ಟೆಮನೆ–ಹೂಡೇಂ (ಕೂಡ್ಲಿಗಿ ತಾಲ್ಲುಕು, ಬಳ್ಳಾರಿ ಜಿಲ್ಲೆ).

೨) ನನ್ನಿವಾಳ ಕಟ್ಟೆಮನೆ–ನನ್ನಿವಾಳ (ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ).

೩) ನಾಯಕನಪಟ್ಟಿ ಕಟ್ಟೆಮನೆ–ನಾಯಕನಹಟ್ಟಿ (ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ).

ವ್ಯಾಜ್ಯ, ಜಗಳಗಳನ್ನು ಕಟ್ಟೆಮನೆಯ ಯಜಮಾನ ಬಗೆಹರಿಸುತ್ತಾನೆ, ಅವನ ತೀರ್ಪೇ ಅಂತಿಮವಾಗಿರುತ್ತದೆ.

**ಮ್ಯಾಸಬೇಡರ ಸಾಮಾಜಿಕ ಶ್ರೇಣಿ ವ್ಯವಸ್ಥೆ**

೧) ದೊರೆಗಳು

೨) ಯಜಮಾನ

೩) ದಾಸಯ್ಯ

೪) ಕಿಲಾರಿಗಳು

ದೊರೆಗಳು ಪ್ರಥಮ ಸ್ಥಾನ ಹೊಂದಿದ್ದು ಕಟ್ಟೆ ಮನೆಯ ಅಧಿಕಾರಿಯಾಗಿರುತ್ತಾನೆ. ಯಜಮಾನನದ್ದು ದ್ವಿತಿಯ ಶ್ರೇಣಿಯಾಗಿದ್ದು ಕುಲಸಂಬಂಧಿ ವ್ಯಾಜ್ಯ ಮತ್ತು ಮದುವೆ, ಉತ್ಸವ ಪ್ರಮುಖ ಕಾರ್ಯಗಳಲ್ಲಿ ಯಜಮಾನನಿಲ್ಲದೆ ನಡೆಯುವಂತಿಲ್ಲ. ದಾಸಯ್ಯನವರದು ತೃತೀಯ ಶ್ರೇಣಿಯನ್ನು ಹೊಂದಿದ್ದು ಯಾವುದೇ ಹಬ್ಬಗಳಲ್ಲಿ ಶಂಖ, ಜಾಗಟೆ, ಗರುಡ ಸ್ಥಂಭ ಹಿಡಿದು ಶಂಖ ಊದಿ ಗೋವಿಂದ ಗೋವಿಂದ ಎನ್ನುತ್ತಾರೆ. ಕಿಲಾರಿಗಳು ನಾಲ್ಕನೇ ಸ್ಥಾನವನ್ನು ಹೊಂದಿದ್ದು ಅವರನ್ನು ಎತ್ತಿನ ಕಿಲಾರಿಗಳೆಂದೇ ಕರೆಯುತ್ತಾರೆ, ಅವರು ಶುದ್ಧೀಕರಿಸುವ ಕಾರ್ಯವನ್ನು ನಿರ್ವಹಿಸುತ್ತಾರೆ.[೯]

ಹೀಗೆ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಎಲ್ಲರ ಕೆಲಸವು ಮಹತ್ವದ್ದಾಗಿದ್ದು ತರತಮವಿಲ್ಲದೆ ಕೆಲಸವನ್ನು ನಿರ್ವಹಿಸುತ್ತಾರೆ. ಒಟ್ಟಾರೆಯಾಗಿ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಸಾಮಾಜಿಕ ವ್ಯವಸ್ಥೆ ಸುಲಲಿತವಾಗಿ ನಡೆಯಲು ಕಟ್ಟೆ ಮನೆಗಳು, ಕುಲ ಪಂಚಾಯಿತಿಗಳು ತಮ್ಮ ಕುಲದ ನ್ಯಾಯ ತೀರ್ಮಾನವನ್ನು ಮಾಡಿ ದಂಡಿಸುವ, ಶಿಕ್ಷಿಸುವ, ಹಟ್ಟಿಯಿಂದ ಹೊರಹಾಕುವ ಮತ್ತು ದೇವರಿಗೆ ತಪ್ಪು ದಂಡ ಕಟ್ಟಿಸುವ ಕಾರ್ಯವನ್ನು ಅಂದಿನ ದಿನಗಳಲ್ಲಿ ಕಟ್ಟೆಮನೆಯ ದೊರೆ, ಗೌಡ ಮಾಡುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಈ ಸಮುದಾಯಗಳು ಜಗಳ, ವ್ಯಾಜ್ಯ ಇತ್ಯಾದಿ ಸಂಧರ್ಭಗಳಲ್ಲಿ ಪೋಲಿಸ್ ಠಾಣೆ, ಕೋರ್ಟು ಕಛೇರಿಗಳಿಗೆ ಹೋಗುವುದು ಕಂಡುಬರುತ್ತದೆ.

**ಹಟ್ಟಿಗಳ ಆರ್ಥಿಕ ಸ್ಥಿತಿಗತಿಗಳು**

ಅ) **ಬೇಟೆ:**

ಮಾನವ ಸಮಾಜದ ಚಾರಿತ್ರಿಕ ಹಂತಗಳಲ್ಲಿ ಆಹಾರಸಂಗ್ರಹಣೆ, ಬೇಟೆಗಾರಿಕೆ ಪಶುಸಂಗೋಪನೆ. ಮತ್ತು ಕೃಷಿ ಹಂತಗಳಿವೆ. ಈ ಉತ್ಪಾದನಾ ಹಂತಗಳು ಒಂದರೊಳಗೆ ಇನ್ನೊಂದು ಬೆರೆತು ಮನುಷ್ಯ ಸಮಾಜವನ್ನು ಸಂಕೀರ್ಣವಾಗಿ ರೂಪಿಸುತ್ತಾ ಬಂದಿವೆ. ಈ ನಾಲ್ಕು ಪಾರಂಪರಿಕ ಉತ್ಪಾದನಾ ವ್ಯವಸ್ಥೆಗಳು ಮಾನವ ಸಮಾಜದಲ್ಲಿ ಇಂದಿಗೂ ಆಚರಣೆಯಲ್ಲಿವೆ. ಮಾನವ ಹಸಿವು, ಬಾಯಾರಿಕೆಗಳನ್ನು ಸ್ವಾಭಾವಿಕ ಬಯಕೆಗಳನ್ನು ತೀರಿಸಿಕೊಳ್ಳಲು ಆಹಾರಕ್ಕಾಗಿ ಅಲೆದಾಡಬೇಕು. ಈ ಅಲೆದಾಟದಲ್ಲಿ ಆರಂಭದಲ್ಲಿ ಗೆಡ್ಡೆ, ಗೆಣಸು, ಸೊಪ್ಪು, ಮೊದಲಾದ ಸಸ್ಯಾಹಾರಗಳ ಸೇವನೆ

ಕಂಡುಬರುತ್ತದೆ. ಎರಡನೆಯದಾಗಿ ಪ್ರಾಣಿಗಳನ್ನು ಕೊಂದು ಅವುಗಳ ಮಾಂಸವನ್ನು ಆಹಾರವನ್ನಾಗಿ ಬಳಸಲು ಶುರುಮಾಡಿದನು.ಆದಿಮಾನವ ಕಂಡುಕೊಂಡ ಮೊದಲ ವೃತ್ತಿ ಆಹಾರ ಉಡುಕುವುದು ಇದು ಒಂದು ಉದ್ಯೋಗವಾಗಿ, ಆಹಾರ ಮಾಧ್ಯಮವಾಗಿ ಮಾರ್ಪಟ್ಟಿತು. ಬೇಟೆಗಾರನಿಗೆ ಹಸಿವನ್ನು ತೀರಿಸುವ ಮಾರ್ಗವಾಗಿತ್ತು. ಶಿಲಾಯುಗದಿಂದಲೂ ಬೇಟೆಯಾಡುವುದು ಸಾಮಾನ್ಯವಾಗಿತ್ತು, ಆದಿಮಾನವನು ಶಿಲಾಯುಧಗಳಿಂದಲೇ ಪ್ರಾಣಿಗಳನ್ನು ಕೊಲ್ಲುತ್ತಿದ್ದನು. ಯಾವುದೇ ಪ್ರಾಣಿ ತನ್ನ ಹಸಿವನ್ನು ನೀಗಿಸಲು ಆಹಾರಕ್ಕಾಗಿ ಇತರೆ ಜೀವಂತ ಪಶು-ಪಕ್ಷಿ ಪ್ರಾಣಿಗಳನ್ನು ಹಿಡಿದು ಕೊಲ್ಲುವ ಕಲೆಗಾರಿಕೆಯನ್ನು ಬೇಟೆ ಎಂದು ಕರೆಯುವುದು ರೂಢಿ.

ಆಹಾರ ನಿರ್ವಹಣೆಗಾಗಿ ಮಾನವ ಕೈಗೊಂಡ ವೃತ್ತಿಗಳಲ್ಲಿ ಬೇಟೆ ಪ್ರಮುಖವಾದುದು. 'ಬೇಟೆ'ಎನ್ನುವ ಪದಕ್ಕೆ ಪ್ರಾಣಿಗಳನ್ನು ಹಿಂಸಿಸುವ, ಕೊಲ್ಲುವ ಅರ್ಥ ರೂಢಿಯಲ್ಲಿದೆ. ಇಲ್ಲಿ ಪ್ರಾಣಿ, ಪಕ್ಷಿ, ಜಲಚರಗಳನ್ನು ನಾನಾ ತರಹದ ಆಯುಧಗಳಿಂದ ಕೊಲ್ಲುವ ಪ್ರಕ್ರಿಯೆಗೆ ಬೇಟೆ ಎನ್ನಲಾಗುತ್ತಿದೆ. ಇದಕ್ಕೆ ಶಿಕಾರಿ, ಮೃಗಯಾ ಎಂತಲೂ ಕರೆಯುವರು.[೧೦] ಮಾನವನ ಆರಂಭಿಕ ಹಂತದ ಬದುಕು ತುಂಬಾ ಕಷ್ಟದಾಯಕವಾಗಿತ್ತು. ಏಕೆಂದರೆ ಹಸಿವನ್ನು ನೀಗಿಸಿಕೊಳ್ಳುವುದೇ ಅವರ ಮುಖ್ಯ ಪರಿಶ್ರಮವಾಗಿತ್ತು. ಎಲ್ಲಾ ಜನಾಂಗಗಳು ಬೇಟೆಯ ಹಂತದಿಂದಲೇ ವಿಕಾಸಗೊಂಡಿವೆ. ಹೀಗಾಗಿ ಕಾಡುಗೊಲ್ಲರ ಮತ್ತು ಮ್ಯಾಸಬೇಡರ ಬದುಕು ಒಂದು ಕಡೆ ಬೇಟೆ ಮತ್ತೊಂದು ಅಲೆಮಾರಿತನ ಇವೆರಡೂ ಬದುಕಿನ ಶ್ರಮದಾಯಕ ಸ್ಥಿತಿಯಾಗಿತ್ತು.

ಪ್ರಾಚೀನ ಕಾಲದಿಂದಲೂ ಬೇಟೆ ನೆಡೆಸುತ್ತಿದ್ದ ಸಂಗತಿಗಳನ್ನು ಚರಿತ್ರೆಯೂ ದಾಖಲಿಸಿದೆ. ಬೇಟೆಗೆ ಹೆಸರಾದ ಬೇಡರು ಶೌರ್ಯ, ಸಾಹಸಿಗಳು, ಪರಾಕ್ರಮಿಗಳು, ದೃಢಕಾಯರು ಆಗಿದ್ದರು. ಬೇಡರ ಕಣ್ಣಪ್ಪ, ವಾಲ್ಮೀಕಿ, ಏಕಲವ್ಯ ಅವರೆಲ್ಲ ಬೇಟೆ ಮತ್ತು ಬಿಲ್ವಿದ್ಯೆಯಲ್ಲಿ ಪರಿಣಿತರಾಗಿದ್ದರು. ಚಿತ್ರದುರ್ಗ ನಾಯಕ ಅರಸರು ಮೂಲತಃ ಬೇಟೆ ಪ್ರವೃತ್ತಿವುಳ್ಳವರು. 'ಗಾದ್ರಿಮಲೈ ಹೆಬ್ಬುಲಿ' ಎಂಬ ಬಿರುದು ಅವರ ಬೇಟೆ ಸಾಹಸಕ್ಕೆ ಬಂದಿದೆ. ಬೇಡ ಎಂದರೆ ಬೇಟೆಗಾರ ಎಂದರ್ಥ. ಬೇಟೆಯನ್ನು ವೃತ್ತಿಯಾಗಿವುಳ್ಳಭಿಲ್ಲ ಜಾತಿಗೆ ಸೇರಿದವನು ಎಂದರ್ಥ. ಎಂ.ಜಿ.ಈಶ್ವರಪ್ಪನವರು 'ಮ್ಯಾಸಬೇಡರು' ಎಂಬ ಕೃತಿಯು ಬೇಟೆಯ ಮೂಲಕ ಬೇಡರನ್ನು ಗುರುತಿಸುವ ಪ್ರಯತ್ನಮಾಡಲಾಗಿದೆ.

ಆರಂಭದಲ್ಲಿ ಬೇಟೆಗಾರರು ಶಿಲಾಯುಧ, ಕತ್ತಿ, ಕೊಡಲಿ, ಬಿಲ್ಲು-ಬಾಣಗಳನ್ನು ಬಳಸುತ್ತಿದ್ದರು. ಕಾಲಗತಿಸಿದಂತೆಲ್ಲಾ ಬೇಟೆಗಾರಿಕೆಯ ತಂತ್ರವನ್ನು ಬದಲಿಸಿಕೊಂಡರು. ಕಾಡುಗೊಲ್ಲ ಮತ್ತು ಮ್ಯಾಸಬೇಡರು ಬೇಟೆಯಾಡುವಾಗ ಭರ್ಚಿ, ಕತ್ತಿ, ಗಂಡುಗೊಡಲಿ, ಚಿಪ್ಪುಗೊಡಲಿ, ಈಟಿ, ಉರುಲುಬುಟ್ಟಿ, ಬಲೆ ಇವುಗಳನ್ನು ಬಳಸಿ ಬೇಟೆಯಾಡುತ್ತಾರೆ. ಇಂದಿಗೂ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಮನೆಗಳಲ್ಲಿ ಈ ರೀತಿಯ ಆಯುಧಗಳಿರುವುದು ಕಂಡುಬರುತ್ತದೆ. ಇವುಗಳನ್ನು ಬಳಸಿ ಮೊಲ, ಜಿಂಕೆ, ಉಡ, ಕೌಜು, ಮೀನು, ಏಡಿ, ಕಾಡುಹಂದಿ ಮೊದಲಾದ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡುತ್ತಿದ್ದರು. ಹೀಗೆ ಬೇಡರು ಬಹುದೀರ್ಘಕಾಲದವರೆಗೆ ಬೇಟೆಯನ್ನು

ಅವಲಂಬಿಸಿದ್ದರು ಎಂಬುದು ಚರಿತ್ರಾರ್ಹ ಸಂಗತಿಗಳಿಂದ ತಿಳಿದುಬರುತ್ತದೆ. ಬೇಡರಬದುಕಿಗೂ ಬೇಟೆಗೂ ಅವಿನಾಭಾವ ಸಂಬಂಧವಿದೆ. ಶಿವರಾತ್ರಿಯಲ್ಲಿ ಮೊಲದಬೇಟೆ, ಮುಂಗಾರಿನಲ್ಲಿ ಹೊಲಮೇರಿಬೇಟೆ, ಮಳೆಬಂದಾಗ ಮೀನಿನ ಬೇಟೆ, ಹೀಗೆ ಬೇಟೆ ಬೇಡರ ಪ್ರವೃತ್ತಿಯಾಗಿದೆ. ಸರ್ಕಾರದ ಕಾಯ್ದೆಯಿಂದಾಗಿ ಬೇಟೆ ವೃತ್ತಿ ಪ್ರವೃತ್ತಿಯಾಗಿ ಮಾರ್ಪಟ್ಟಿದೆ. ಅಲ್ಲದೆ ಈಗ ಬೇಟೆಯಾಡುವಂತಿಲ್ಲ, ಕಾಡುಪ್ರಾಣಿಗಳನ್ನು ಕೊಲ್ಲುವಂತಿಲ್ಲ.

ಈಗಲೂ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ, ಮೊಳಕಾಲ್ಮೂರು ತಾಲ್ಲೂಕಿನ ಮ್ಯಾಸಬೇಡರು ಸಾಂಕೇತಿಕವಾಗಿಯೂ ಬೇಟೆ ಪ್ರವೃತ್ತಿಯನ್ನು ರೂಢಿಸಿಕೊಂಡಿದ್ದಾರೆ. ಯುಗಾದಿ ಹಬ್ಬದ ಎರಡನೆ ದಿನದಲ್ಲಿ ಕಾಡುಸೋಸಿ ಬೇಟೆಯಾಡುವುದು ವಾಡಿಕೆ. ಹಟ್ಟಿಗಳಲ್ಲಿನ ಯುವಕರು ಹಿರಿಯರು ಸೇರಿ ಭರ್ಚಿ, ಕತ್ತಿ, ಕಂದ್ಲಿ ಬಳಸಿ ಬೇಟೆ ಸಿಗುವವರೆಗೂ ತಿರುಗುತ್ತಾರೆ. ಕೇಕೆ ಹಾಕುತ್ತಾ ತಪ್ಪಡೆ ಬಡಿಯುತ್ತಾ ಕಾಡೆಲ್ಲ ತಿರುಗಿ ಚಿಕ್ಕ ಪ್ರಾಣಿಯನ್ನಾದರೂ ಹೊಡೆದು ತಂದೆ ತರುತ್ತಾರೆ. ಅದು ಹಟ್ಟಿಗೆ 'ಹುಲುಸು' ಎಂದು ಹೇಳುತ್ತಾರೆ, ಹಾಗಾಗಿ ಬೇಡನನ್ನು 'ವ್ಯಾಧ'ಎಂದು ಕರೆಯುತ್ತಾರೆ. ವ್ಯಾಧಎಂದರೆ ಬೇಟೆಗಾರ ಎಂದರ್ಥ. ಕಾಡುಗೊಲ್ಲರಗಿಂತ ಮ್ಯಾಸಬೇಡರು ಬೇಟೆಗೆ ಹೆಚ್ಚು ಒಲವುಳ್ಳವರಾಗಿದ್ದಾರೆ. ಬೇಟೆಯಾಡುವಾಗ ತಮ್ಮ ಕಾಡಿನ ಸರಹದ್ದುಗಳನ್ನು ದಾಟಿಹೋಗುವ ಹಾಗಿಲ್ಲ ಏಕೆಂದರೆ ಬೇರೆ ಹಟ್ಟಿಯವರು ಬಂದಾಗ ತಮ್ಮ ಗಡಿ ಹೊರಗಿನ ಬೇಟೆಯನ್ನು ಹೊಡೆದಾಗ ಜಗಳಗಳು ಪ್ರಾರಂಭವಾಗಿ ಬೇಟೆಯನ್ನು ಬಿಟ್ಟು ಕೊಡುವುದಿಲ್ಲ. ಇನ್ನೊಂದು ವಿಶೇಷವೆಂದರೆ ಬೇಟೆಗೆ ಹೋಗುವಾಗ ಬೇಟೆನಾಯಿಗಳನ್ನು ಕರೆದುಕೊಂಡು ಹೋಗುತ್ತಾರೆ.

ಚಳ್ಳಕೆರೆ ತಾಲ್ಲೂಕಿನ ನನ್ನಿವಾಳದ ಹಟ್ಟಿಯಲ್ಲಿ ಗಾದ್ರಿಪಾಲನಾಯಕನ ಉತ್ಸವ ನಡೆದ ಮಾರನೆಯದಿನ ಜಾತ್ರೆಯಲ್ಲಿ ಸೇರಿದ ಮ್ಯಾಸಮಂಡಲ ಯುವಕರೆಲ್ಲ ಬೇಟೆಗೆ ಹೊರಡುವರು. ಬೇಟೆಗೆ ಹೋಗುವಾಗ ಉರಿಮೆ, ತಪ್ಪಡೆ ಬಡಿಸಿಕೊಂಡು ಒಂದು ಬಂಡೆಯಕಡೆ ಬರುತ್ತಾರೆ. ಆ ಬಂಡೆಯ ಹತ್ತಿರ ಮನಮಲೋರ ಕೋಮಿನವರು ಹೊಂಬಾಳೆ, ಎಲೆ, ಅಡಿಕೆ ತಂದಿಟ್ಟುಕೊಂಡು ಕೂತಿರುತ್ತಾರೆ. ಬೇಟೆಯಾಡಲು ಹೋಗುವ ಪ್ರತಿಯೊಬ್ಬರಿಗೂ ವೀಳ್ಯ ಕೊಡುವರು. ವೀಳ್ಯ ತೆಗೆದುಕೊಂಡವರು ದೇವರಿಗೆ ಕೈಮುಗಿದು ಅರಣ್ಯದಕಡೆ ಹೊರಡುತ್ತಾರೆ. ನನ್ನಿವಾಳಕ್ಕೆ ಹತ್ತಿರವಿರುವ ಸೋಮಲಬಂಡೆ ಕಾಡಿನಲ್ಲಿ ಒಂದೋ ಎರಡೋ ಮೊಲ ಇತ್ಯಾದಿಯಾದಿ ಬೇಟೆಯಾಡಿಕೊಂಡು ಬರುತ್ತಾರೆ. ಹಿಂದೆ ಅರಣ್ಯವು ಸಮೃದ್ಧವಾಗಿದ್ದಾಗ ಜಿಂಕೆ, ಕಡವೆ, ಹಂದಿ ಮುಂತಾದ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದರು. ಒಟ್ಟಾರೆಯಾಗಿ ಕಾಡುಗೊಲ್ಲರು ಮತ್ತು ಮ್ಯಾಸಬೇಡರು ಇಂದಿಗೂ ಸಹ ಬೇಟೆ ವೃತ್ತಿಯನ್ನು ಸಾಂಕೇತಿಕವಾಗಿಯಾದರೂ ಉಳಿಸಿಕೊಂಡಿರುವುದು ಕಂಡುಬರುತ್ತದೆ.

**ಆ) ಪಶುಪಾಲನೆ:**

ಉತ್ಪಾದನಾ ವಿಕಾಸದ ಹಂತಗಳಲ್ಲಿ ಆಹಾರ ಸಂಗ್ರಹಣೆ ಬೇಟೆ. ಬೇಟೆಯ ಮುಂದಿನ ಹಂತವೇ ಪಶುಪಾಲನೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರ ಪಾರಂಪರಿಕ ವೃತ್ತಿಯಾಗಿ

ಪಶುಪಾಲನೆಯನ್ನು ಹೊಂದಿದ್ದವರು. ಗೊಲ್ಲಜನಾಂಗದ ಸಾಂಪ್ರದಾಯಿಕ ಕಸುಬು ಪಶುಪಾಲನೆ. ಕಾಡು-ಮೇಡುಗಳು ಹೆಚ್ಚಾಗಿದ್ದ ಕಾಲದಲ್ಲಿ ಹೆಚ್ಚಾಗಿ ದನ ಕರುಗಳನ್ನು ಸಾಕಿ ಅವುಗಳ ಹಾಲು, ಮೊಸರು, ತುಪ್ಪವನ್ನು ಮಾರಿ ಜೀವನ ಸಾಗಿಸುತ್ತಿದ್ದರು. ಪಶುಗಳೇ ಬುಡಕಟ್ಟು ಜನರ ಆರ್ಥಿಕ ಸಂಪತ್ತು. ಹೈನುಗಾರಿಕೆಯಲ್ಲಿ ತುಂಬಾ ಶ್ರದ್ಧೆವುಳ್ಳವರು. ಕಾಡುಗೊಲ್ಲರು ದನಗಳ ಬಗ್ಗೆ ಅಪಾರ ಪ್ರೀತಿಯನ್ನು ಹೊಂದಿದ್ದವರು. ಎಷ್ಟು ಕಾಳಜಿಎಂದರೆ ತಮಗೆ ಊಟವಿಲ್ಲದಿದ್ದರೂ ದನಕರುಗಳಿಗೆ ಹೊಟ್ಟೆ ತುಂಬಾ ಮೇವು ಕೊಟ್ಟು ಅವುಗಳನ್ನು ಪೋಷಿಸುತ್ತಾರೆ. ಇಂತಹ ಬರಗಾಲದ ಸಂದರ್ಭದಲ್ಲಿಯೂರಾಸುಗಳೊಂದಿಗೆ ಹುಲ್ಲುಗಾವಲುಗಳಿರುವ ಪ್ರದೇಶಗಳಿಗೆ ಹೋಗಿ ದನ ಕರುಗಳನ್ನು ಸಲುಹಿಕೊಂಡು ಬರುತ್ತಾರೆ. ಇಂತಹ ಸನ್ನಿವೇಶವನ್ನು ನಾವು ಜುಂಜಪ್ಪ ಮತ್ತು ಎತ್ತಪ್ಪನ ಕಾವ್ಯಗಳಲ್ಲಿ ನೋಡಬಹುದು. ಗೊಲ್ಲಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಜೀವನ ಅವರ ದನಕರುಗಳ ಪಾಲನೆ ಪೋಷಣೆಯಲ್ಲಿ ಹಾಸುಹೊಕ್ಕಾಗಿದೆ. ಅವರು ತಾವು ಮಲಗುವ ವರಾಂಡದ ಪಕ್ಕದಲ್ಲಿಯೇ ದನಗಳ ಕೊಟ್ಟಿಗೆ ನಿರ್ಮಿಸಿ, ಅವುಗಳ ಪಕ್ಕದಲ್ಲೇ ತಾವು ಮಲಗುತ್ತಾರೆ. 'ದನಗಳೇ ಧನ' ಎಂಬ ತತ್ವಕ್ಕೆ ಬದ್ಧರಾಗಿರುವರು. ಕಾಡುಗೊಲ್ಲರು ಇತ್ತೀಚಿಗೆ ಕುರಿ, ಮೇಕೆಗಳನ್ನು ಹೆಚ್ಚಾಗಿ ಸಾಕುವುದು ಕಂಡುಬರುತ್ತದೆ. ಚಿತ್ರದುರ್ಗ, ತುಮಕೂರು, ಬಳ್ಳಾರಿ ಜಿಲ್ಲೆಗಳಲ್ಲಿ ಹೆಚ್ಚಾಗಿ ಸಾಕುವುದು ಕಂಡುಬರುತ್ತದೆ. ಕುರುಚಲುಕಾಡು ಮತ್ತು ಬಯಲುಸೀಮೆಯ ಪ್ರದೇಶವಾದ ಚಿತ್ರದುರ್ಗ ಜಿಲ್ಲೆಯ ಹಿರಿಯೂರು, ಚಳ್ಳಕೆರೆ, ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಹೆಚ್ಚು ಕುರಿ ಸಾಕಣೆ ಮಾಡುತ್ತಿದ್ದಾರೆ. ಗೊಲ್ಲರು ಕನಿಷ್ಠ ಎಂಟು ಹತ್ತರಿಂದ ಸಾವಿರ ಕುರಿಗಟ್ಟಲೆ ಸಾಕುತ್ತಾರೆ. ಕುರಿಯ ಜೊತೆಯಲ್ಲಿ ಕತ್ತೆಗಳನ್ನು ಮತ್ತು ನಾಯಿಗಳನ್ನು ಸಾಕುತ್ತಾರೆ. ಏಕೆಂದರೆ ದವಸ ಧಾನ್ಯಗಳನ್ನು ಮತ್ತು ಪಾತ್ರೆ ಪಗಡಗಳನ್ನು ಕತ್ತೆಯ ಮೇಲೆ ಹೇರಿಕೊಂಡು ಹೋಗುತ್ತಾರೆ. ತೋಳ, ಕಿರುಬ, ಇತ್ಯಾದಿ ಪ್ರಾಣಿಗಳು ಕುರಿಗಳ ಮೇಲೆ ಬೀಳುವ ಸಂಧರ್ಭದಲ್ಲಿ ಕತ್ತೆಗಳು ಕಿರುಚುತ್ತವೆ. ನಾಯಿಗಳೂ ಸಹ ರಾತ್ರಿ ಹೊತ್ತು ರೊಪ್ಪದ ಸುತ್ತ ಎಚ್ಚರವಾಗಿದ್ದು ಬೊಗಳುತ್ತವೆ. ಗೊಲ್ಲರು ಕೃಷಿ ಭೂಮಿಗಳಲ್ಲಿ ಕುರಿಮಂದೆ ಮಲಗಿಸುತ್ತಾರೆ, ಪ್ರತಿಫಲವಾಗಿ ಧವಸ, ಧಾನ್ಯ, ಒಂದಷ್ಟು ಹಣ ಸಂಪಾದಿಸುತ್ತಾರೆ. ಕುರಿಹಾಕುವ ಪಿಚ್ಚಿಗೆ ಮತ್ತು ಗಂಜಳದಿಂದ ತೋಟಗಳು ಸಮೃದ್ಧವಾಗಿ ಬೆಳೆದು ಫಸಲಿಗೆ ಅನುಕೂಲವಾಗುತ್ತದೆ. ಗೊಲ್ಲ ಮತ್ತು ಕುರುಬ ಸಮುದಾಯಗಳಿಗೆ ಸಾಮ್ಯತೆ ಗುರುತಿಸಬಹುದಾಗಿದೆ. ಗೊಲ್ಲರು ಕುರಿಸಾಕಿದರೆ, ಕುರುಬರು ಕಂಬಳಿ ನೇಯುತ್ತಾರೆ. ಕುರುಬರಿಗೆ ಕಂಬಳಿಗೆ ಉಣ್ಣೆ ಬೇಕಾಗಿರುವುದರಿಂದ ಸಹಜವಾಗಿ ಗೊಲ್ಲರೊಡನೆ ವ್ಯವಾಹಾರಿಕ ಸಂಬಂಧವಿದೆ. ಪ್ರತಿಫಲವಾಗಿ ಗೊಲ್ಲರಿಗೆ ಕಂಬಳಿ ಕೊಡುತ್ತಾರೆ. ಕುರುಬರು ಮತ್ತು ಗೊಲ್ಲರ ಸಂಬಂಧ ಕುರಿತು ದೇ.ಜ.ಗೌ.ರವರು ಕುಂಚುಟಿಗರು, ಕುರುಬರು, ಗೊಲ್ಲರು ಮೂಲತಃ ಒಂದೇ ವಂಶದವರಿರಬೇಕು, ಅಣ್ಣತಮ್ಮಂದಿರಂತೆ ನಡೆದುಕೊಳ್ಳುತ್ತಾರೆ.ಅವರು ಕಸುಬುಬೇರೆಯಾದ ಕಾರಣ ಅವರು ಬೇರೆಯಾದರು ಎಂಬುದಾಗಿ ಅಭಿಪ್ರಾಯ ಪಡುತ್ತಾರೆ.

## ಕೋಷ್ಟಕ-೨೫

### ಕುಟುಂಬದ ಮೂಲ ವೃತ್ತಿಯನ್ನು ಮುಂದುವರಿಸುವ ಮತ್ತು ಮುಂದುವರಿಸದಿರುವ ತಾತ್ವಿಕ ಕಾರಣಾಂಶಗಳು

| ವೃತ್ತಿಯನ್ನು ಮುಂದುವರಿಸದಿದ್ದರೆ | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಹೆಚ್ಚು ಆದಾಯ ವಿಲ್ಲದಿರುವುದು | ೨ | ೧.೩೨ | ೧ | ೪.೫೫ | ೩ | ೧.೭೨ |
| ಪಶು ಅಥವಾ ಕುರಿ ಸಾಕಾಣಿಕೆಗೆ ಹುಲ್ಲುಗಾವಲು ಇಲ್ಲದಿರುವುದು | ೨ | ೧.೩೨ | ೦ | ೦.೦೦ | ೨ | ೧.೧೫ |
| ಗೋಮಾಳ ಮತ್ತು ಕಾಡುಇಲ್ಲದಿರುವುದು | ೫ | ೩.೨೯ | ೦ | ೦.೦೦ | ೫ | ೨.೮೭ |
| ತುಂಬಾ ಶ್ರಮದಾಯಕ ಕೆಲಸ | ೪ | ೨.೬೩ | ೦ | ೦.೦೦ | ೪ | ೨.೩೦ |
| ವೃತ್ತಿಯನ್ನು ಮುಂದುವರಿಸಿದವರು | ೧೩೯ | ೯೧.೪೫ | ೨೧ | ೯೫.೪೫ | ೧೬೦ | ೯೧.೯೫ |
| ಒಟ್ಟು | ೧೫೨ | ೧೦೦.೦೦ | ೨೨ | ೧೦೦.೦೦ | ೧೭೪ | ೧೦೦.೦೦ |

### ರೇಖಾನಕ್ಷೆ-೫ ಕುಟುಂಬದ ಮೂಲ ವೃತ್ತಿಯನ್ನು ಮುಂದುವರಿಸುವ ಮತ್ತು ಮುಂದುವರಿಸದಿರುವ ತಾತ್ವಿಕ ಕಾರಣಾಂಶಗಳು




ಕೋಷ್ಟಕ ೨೫ ರಲ್ಲಿ ತಿಳಿದು ಬರುವ ಅಂಶವೆಂದರೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರು ತಮ್ಮ ವೃತ್ತಿಯನ್ನು ಮುಂದುವರಿಸದಿರಲು ಕಾರಣವೆಂದರೆ, ಪಶುಗಳನ್ನು ಮತ್ತು ಕುರಿಗಳನ್ನು ಸಾಕುವುದಕ್ಕೆ ಹುಲ್ಲುಗಾವಲು ಇಲ್ಲದಿರುವುದು, ಗೋಮಾಳಗಳು ಇಲ್ಲದಿರುವುದು, ಕಾಡುಇಲ್ಲದಿರುವುದು

ಕಂಡುಬರುತ್ತದೆ. ಆದರೂ ಸಹ ಕಾಡುಗೊಲ್ಲರಲ್ಲಿ ಮೂಲ ವೃತ್ತಿಯನ್ನು ಬಿಡದೆ ಮುಂದುವರಿಸಿದವರ ಪ್ರಮಾಣ ಶೇಕಡ ೯೧.೪೫ ರಷ್ಟು ಕಂಡುಬಂದರೆ. ಮ್ಯಾಸಬೇಡರಲ್ಲಿ ಮೂಲ ವೃತ್ತಿಯನ್ನು ಮುಂದುವರಿಸಿದವರ ಪ್ರಮಾಣ ಶೇಕಡ ೯೫.೪೫ ರಷ್ಟು ಕಂಡುಬಂದಿದೆ. ಒಟ್ಟಾರೆ ಈ ಎರಡು ಸಮುದಾಯಗಳಲ್ಲಿ ಮೂಲ ವೃತ್ತಿಯನ್ನು ಮುಂದುವರಿಸಿದವರ ಪ್ರಮಾಣ ಶೇಕಡ ೯೧.೯೫ರಷ್ಟು ಕಂಡುಬಂದಿದೆ. ಕುರಿಸಾಕಣಿಕೆ ಶ್ರಮದಾಯಕ ಕೆಲಸವೆಂದು ಶೇಕಡ ಪ್ರಮಾಣ ೨.೩೦ ರಷ್ಟು ಎಂಬುದು ಅಧ್ಯಯನದಿಂದ ಕಂಡುಬಂದಿದೆ.

ಸಾಮಾನ್ಯವಾಗಿ ಚಿತ್ರದುರ್ಗ ಪ್ರದೇಶದ ಕುರಿಗಾರರು ಮಲೆನಾಡುಪ್ರದೇಶ ಮತ್ತು ಮೈಸೂರು ಕಡೆಗೆ ವಲಸೆ ಹೋಗುತ್ತಾರೆ. ಮಳೆ, ಗಾಳಿ, ಬಿಸಿಲೆನ್ನದೆ ಕುರಿಗಳ ಹಿಂದೆ ಮುಂದೆ ತಿರುಗಬೇಕಾಗುತ್ತದೆ. ಕುರಿಸಾಕಾಣಿಕೆ ಕಷ್ಟದಾಯಕ ಕೆಲಸವಾದ್ದರಿಂದ ಕುರಿಸಾಕಣೆ ಮತ್ತು ಪಶುಪಾಲನೆ ಕಡಿಮೆಯಾಗುತ್ತಿದೆ.

ಎ.ಎ.ಡಿ.ಲೂಯಿಸ್‌ರವರು ಕಾಡುಗೊಲ್ಲರ ಕುರಿಸಾಕಣೆ ಮತ್ತು ಉದ್ಯೋಗ ಕುರಿತು ಈರೀತಿ ಅಭಿಪ್ರಾಯ ಪಡುತ್ತಾರೆ. "Kadugollas are hereditary herdsmen. Those settled cultivate whenever land is available and engage others to tend their live stock. Rearing sheep, cows and buffaloes and trading in them in a limited way and vending milk products are their popular occupation. Kadugollas present the disappointing aspects of tribal economy and its connected miseries".[11] ಈಗಲೂ ಕಾಡುಗೊಲ್ಲರು ಹಟ್ಟಿಹಬ್ಬಗಳಲ್ಲಿ ಗೂಡಿನಹಬ್ಬ, ದೀವಳಿಗೆಗಳಲ್ಲಿ ದನ ಕರುಗಳನ್ನು ಸಿಂಗರಿಸಿ ಪೂಜಿಸುತ್ತಾರೆ.

ಕಾಡುಗೊಲ್ಲರಂತೆ ಮ್ಯಾಸಬೇಡರೂ ಸಹ ಪಶುಪಾಲನೆಯನ್ನು ರೂಢಿಸಿಕೊಂಡವರಾಗಿದ್ದಾರೆ. ಆದರೆ ಕಾಡುಗೊಲ್ಲರು ಸ್ವಾಭಾವಿಕವಾಗಿ ಆಯ್ಕೆ ಮಾಡಿಕೊಂಡಿದ್ದು ಪಶುಪಾಲನೆಯನ್ನೆ ಮ್ಯಾಸಬೇಡರು ಆಂಧ್ರಪ್ರದೇಶದ ಶ್ರೀಶೈಲದಿಂದ ಬಂದವರು ಎಂಬುದಾಗಿ ಹೇಳಿಕೊಳ್ಳುತ್ತಾರೆ. ಪಶುಪಾಲನೆ, ಸೈನಿಕವೃತ್ತಿ, ತಳವಾರಿಕೆಯಲ್ಲಿದ್ದವರು. ವಿಜಯನಗರ ಸಾಮ್ರಾಜ್ಯದ ಪತನಾನಂತರ ಸಣ್ಣ, ಸಣ್ಣ ಪಾಳೆಯಪಟ್ಟುಗಳು ಉಗಮವಾಗಿ, ಪಾಳೆಗಾರಿಕೆ ಮತ್ತು ಅರಸರಾಗಿ ಆಳ್ವಿಕೆಯನ್ನು, ಮಾಡಿದಂತೆ ತೋರುತ್ತದೆ.

ಮ್ಯಾಸಬೇಡರೂ ಸಹ ಪಶುಪಾಲನೆಯನ್ನು ವೃತ್ತಿಯನ್ನಾಗಿರಿಸಿಕೊಂಡಿದ್ದವರು. ಅವರ ಸಾಂಸ್ಕೃತಿಕ ವೀರರಾದ ಜಗಲೂರು ಪಾಪನಾಯಕ, ನನ್ನಿವಾಳ ಗುಡ್ಡದಲ್ಲಿ ಗಾದರಿಪಾಲನಾಯಕರು, ಮಿಂಚೇರಿ ಗುಡ್ಡದಲ್ಲಿ ದನಗಾಹಿಗಳಾಗಿದ್ದರು. ಚಿತ್ರದುರ್ಗ ಪ್ರದೇಶವು ಕುರುಚಲುಕಾಡು, ಹುಲ್ಲು, ನೀರು ಮತ್ತು ಗೋಮಾಳಗಳು ಸಮೃದ್ಧವಾಗಿದ್ದುದರಿಂದ ಪಶುಪಾಲನೆಗೆ ಯೋಗ್ಯವಾದ ಪ್ರದೇಶವಾಗಿತ್ತು. ಎಂ. ಜಿ. ಈಶ್ವರಪ್ಪನವರು 'ಮ್ಯಾಸಬೇಡರು'ಪುಸ್ತಕದಲ್ಲಿ ಅವರು ಪಶುಪಾಲನೆ ಮಾಡುತ್ತಿದ್ದರೆಂದು ಮತ್ತು ಶ್ರೀಶೈಲದ ಕಡೆಯಿಂದ ಪಶುಗಳನ್ನು ಮೇಯಿಸಿಕೊಳ್ಳುತ್ತಾ ಕರ್ನಾಟಕದ ಕಡೆಗೆ ಬಂದರೆಂದು ಕೆಲವು ಐತಿಹ್ಯಗಳ ಆಧಾರದ ಮೇಲೆ ತಿಳಿಯುತ್ತದೆ. ಮ್ಯಾಸಬೇಡರೂ ಸಹ ದನಗಳಿಗೆ ಅಷ್ಟೇ ಮಹತ್ವಕೊಡುತ್ತಾರೆ. ಇತ್ತೀಚಿಗೆ ಪಶುಪಾಲನೆ ಕಡಿಮೆಯಾಗಿದ್ದು ಧಾರ್ಮಿಕ ಆಚರಣೆಗಳನ್ನು ಮಾಡಲು ಮಾತ್ರ ಸಾಂಕೇತಿಕವಾಗಿ ಉಳಿಸಿಕೊಂಡಿದ್ದಾರೆ. ಮುತ್ತಿಗಾರನ ಹಳ್ಳಿಯ ಕಾವಲಿನಲ್ಲಿ ಸುಮಾರು

ಎಪ್ಪತ್ತು ರಾಸುಗಳಿವೆ ಅವುಗಳನ್ನು ನೋಡಿಕೊಳ್ಳುವವರಿಗೆ, 'ಕಿಲಾರಿ'ಗಳು ಎಂದು ಕರೆಯುತ್ತಾರೆ. ಈ ಎತ್ತುಗಳು ಶ್ರೀಶೈಲ ಕಡೆಯಿಂದ ಬಂದವು ಎಂಬುದಾಗಿ ವಕ್ತೃ ಹೂಡೇಂ ಸಣ್ಣಮಲ್ಲಯ್ಯನವರು ತಿಳಿಸುತ್ತಾರೆ. ಈ ಎತ್ತುಗಳನ್ನು ದೇವರೆತ್ತುಗಳು ಎಂದು ಕರೆಯುತ್ತಾರೆ. ಅವುಗಳ ಮೇಲೆ ಸೂರ್ಯನ ಮುದ್ರೆ ಹಾಕಿರುತ್ತಾರೆ. ಕಂಪಳದೇವರ ದೀವಳಿಗೆ ಮತ್ತು ಜಾತ್ರೆಯಲ್ಲಿ ದೇವರೆತ್ತುಗಳು ಬರದೆ ಓಡಿಸದೆ ಜಾತ್ರೆಯಾಗುವುದಿಲ್ಲ. ಪಶುಗಳನ್ನು ದೇವರಿಗೆ ಸಮಾನವಾಗಿ ಪೂಜಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಲಾಭದಾಯಕ ಉದ್ದೇಶಕಾಗಿ ಕುರಿಗಳನ್ನು ಸಾಕುವುದು ಕಂಡುಬರುತ್ತದೆ. ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು, ಚಳ್ಳಕೆರೆ ತಾಲ್ಲೂಕಿನಲ್ಲಿ ಹೆಚ್ಚಾಗಿ ಕುರಿಸಾಕಾಣಿಕೆ ಕಂಡುಬರುತ್ತದೆ. ಕುರಿಸಾಕಾಣಿಕೆ ತ್ರಾಸದಾಯಕವಾದರೂ ಸಾವಿರಾರು ಕುರಿಗಳನ್ನು ಸಾಕಿರುವುದು ಕಂಡುಬರುತ್ತದೆ. ಚಳ್ಳಕೆರೆ ತಾಲ್ಲೂಕಿನ ಹಟ್ಟಿಗಳಾದ ನೆಲಗೇತಲಹಟ್ಟಿ, ನನ್ನಿವಾಳಹಟ್ಟಿ, ಚನ್ನಬಸಯ್ಯವಹಟ್ಟಿ ಚಳ್ಳಕೆರೆ ಸುತ್ತಮುತ್ತಲಿನ ಹಟ್ಟಿಗಳಲ್ಲಿ ಕುರಿಸಾಕಾಣಿಕೆ ಹೆಚ್ಚಾಗಿದೆ. ನಾಯಕನಹಟ್ಟಿಯ ಸಮೀಪದಲ್ಲಿ ಖುದಾಪುರದಲ್ಲಿ ಕುರಿಫಾರಂನ್ನು ಸರ್ಕಾರದವರು ಸ್ಥಾಪಿಸಿರುತ್ತಾರೆ. ನೆಲಗೇತಲಹಟ್ಟಿಯ ಜೋಗಯ್ಯ ಮತ್ತು ತಿಪ್ಪಣ್ಣ ಎಂಬ ಕುರಿಗಾಹಿಗಳನ್ನು ಸಂದರ್ಶಿಸಿದಾಗ. ಕುರಿಸಾಕುವುದು ಬಹಳ ಕಷ್ಟದ ಕೆಲಸ, ಮಳೆಇಲ್ಲ, ನೀರುಇಲ್ಲ, ಹುಲ್ಲುಇಲ್ಲ ಮಳೆಸೀಮೆಗೆ ವಲಸೆ ಹೋಗಬೇಕು. ಒಂದು ಕಡೆ ಆಹಾರದ ಸಮಸ್ಯೆಯಾದರೆ ಮತ್ತೊಂದು ಕಡೆ ಅವುಗಳಿಗೆ ಬರುವ ರೋಗ, ಮತ್ತೊಂದು ಕಡೆ ಡಿ.ಆರ್.ಡಿ.ಓ.ಸಂಸ್ಥೆಯವರು ಕಾಡನ್ನು ವಶಪಡಿಸಿಕೊಂಡಿರುವುದು. ಕುರಿಗಾಹಿಗಳ ಪಶುಪಾಲನೆಗೆ ಗೋಮಾಳಗಳೇ ಇಲ್ಲದಂತಾಗಿದೆ. ಜೋಗಯ್ಯ ಅವರ ಕುರಿಗಳು ೮೦೦ ಇದ್ದು ಜೊತೆಗೆ ಎರಡುಕತ್ತೆಗಳು, ಎರಡುನಾಯಿಗಳು, ನಾಲ್ಕುಜನ ಮನುಷ್ಯರು ಇದ್ದಾರೆ. ಕುರಿಗಾಹಿಗಳು ಮಳೆ, ಗಾಳಿ, ಬಿಸಿಲೆನ್ನದೆ ಕುರಿಗಳ ಆಹಾರಕ್ಕಾಗಿ ಊರಿಂದೂರಿಗೆ ಅಲೆಯಬೇಕಾಗುತ್ತದೆ. ರಾತ್ರಿ ಹೊತ್ತು ವ್ಯವಸಾಯದ ಜಮೀನಿನಲ್ಲಿ ತೋಟಗಳಲ್ಲಿ ತಾತ್ಕಾಲಿಕ ರೊಪ್ಪಕಟ್ಟಿ(ತಂಡುಗಳು-ಬಿದಿರಿನಿಂದ ಮಾಡಿದ ರಕ್ಷಣಾ ತಡಿಕೆ) ಅದರಲ್ಲಿ ಕೂಡುತ್ತಾರೆ.

ಹಟ್ಟಿಗಳಲ್ಲಿ ಇಂದೂ ಸಹ ರೊಪ್ಪ ಸಂಸ್ಕೃತಿಯನ್ನು ಕಾಣಬಹುದಾಗಿದೆ. ಚಳ್ಳಕೆರೆ ತಾಲ್ಲೂಕು ರಾಮಜೋಗಿಹಳ್ಳಿ ಮಾರ್ಗದಿಂದ ಇಪ್ಪತ್ತು ಕಿ.ಮೀ ದೂರದಲ್ಲಿ ನನ್ನಿವಾಳ ಕಟ್ಟೆಮನೆಯಿದೆ. ಈ ಕಟ್ಟೆಮನೆಗೆ ಹಲವಾರು ಹಟ್ಟಿಗಳು ಸೇರಿರುತ್ತವೆ. ನನ್ನಿವಾಳ ಸಮೀಪದ ಬೊಮ್ಮದೇವರ ಹಟ್ಟಿಯ ವರವು ಕಾವಲ್‌ನಲ್ಲಿ ಮುತ್ತಯ್ಯಗಳ ಗೂಡು ಇದೆ. ಇಲ್ಲಿ ನಾಲ್ಕುನೂರು ರಾಸುಗಳಿವೆ. ಇವುಗಳನ್ನು ಸಂರಕ್ಷಿಸುವ ಹೊಣೆಗಾರಿಕೆ ಕಿಲಾರಿಗಳದ್ದಾಗಿದೆ. ಲಕ್ಕಲಿಕಡಿಯಿಂದ ಎತ್ತರವಾಗಿ ಹಟ್ಟಿಯನ್ನು(ರೊಪ್ಪ) ನಿರ್ಮಿಸಿ ರಾಸುಗಳೊಟ್ಟಿಗೆ ಹಗಲು, ರಾತ್ರಿ ವಾಸಿಸುತ್ತಾರೆ. ಅವುಗಳನ್ನು ದೇವರೆತ್ತುಗಳೆಂದೇ ಕರೆಯುತ್ತಾರೆ. ಮೂಲತಃ ಕಾಡಾಡಿ ಬದುಕಿನಲ್ಲಿ ಪಶುಪಾಲನೆಯನ್ನು ವೃತ್ತಿಯನ್ನಾಗಿಸಿಕೊಂಡಿದ್ದ ಅವರು ಗೋವುಗಳನ್ನು ದೈವತ್ವಕ್ಕೇರಿಸಿ ಪೂಜಿಸುತ್ತಾರೆ. ಅವುಗಳಿಗೆ ಮ್ಯಾಸಮಂಡಲದವರು ಪವಿತ್ರವಾದ ದೇವರ ಸ್ಥಾನವನ್ನು ಕೊಟ್ಟು ಪೂಜಿಸುತ್ತಾರೆ. ಕಿಲಾರಿಗಳು ಮಳೆ, ಗಾಳಿ, ಬಿಸಿಲೆನ್ನದೆ ಅವುಗಳರಕ್ಷಣೆ ಮಾಡುತ್ತಾರೆ. ಕಿಲಾರಿಗಳ ಉಡುಪು ತುಂಬಾ ಸರಳವಾಗಿದ್ದು ದಟ್ಟಿ, ಚಲ್ಲಣ, ಕರಿಕಂಬಳಿಯನ್ನು ಹೆಗಲಮೇಲೆ ಹಾಕಿರುತ್ತಾರೆ, ತಲೆಗೆ ರುಮಾಲು ಸುತ್ತಿ, ಕೈಯಲ್ಲಿ ಒಂದು ಕೋಲನ್ನು ಹಿಡಿದಿರುತ್ತಾರೆ.

ಐದು ಜನ ಕಿಲಾರಿಗಳು ಅಷ್ಟು ರಾಸುಗಳ ರಕ್ಷಣೆ ಮಾಡುತ್ತಾರೆ. ಹಿರಿಕಿಲಾರಿ ಎತ್ತಿನ ಪಾಪಯ್ಯ, ಚಿನ್ನಯ್ಯ, ಊಲೆಪಾಲಯ್ಯ, ಕಿಲಾರಿಜೋಗಯ್ಯ, ಕಿಲಾರಿಬೋರಯ್ಯ, ಹಾಲಿ ಇರುವ ಕಿಲಾರಿಗಳು ದಿನಾಲೂ ಸೂರ್ಯ ಹುಟ್ಟುವುದಕ್ಕೆ ಮೊದಲು ಎದ್ದು ದನಗಳ ಸಗಣಿ ಎತ್ತಿಹಾಕುತ್ತಾರೆ. ಅವರು ಹಟ್ಟಿಯನ್ನು ಸ್ವಚ್ಛಮಾಡಿ ದೇವರೆತ್ತುಗಳನ್ನು ಪೂಜಿಸಿ ಸೂರ್ಯನಿಗೆ ನಮಸ್ಕಾರ ಮಾಡುತ್ತಾರೆ. ಆ ನಂತರಲ್ಲಿಯೇ ಪ್ರಸಾದ ಸ್ವೀಕರಿಸುವುದು. ಮ್ಯಾಸಮಂಡಲದ ಎಲ್ಲರೂ ರಾತ್ರಿ ಅಲ್ಲಿಯೇ ಮಲಗಿ ಬೆಳಿಗ್ಗೆ ಎದ್ದು ದೇವರೆತ್ತುಗಳನ್ನು ಪೂಜಿಸಿ ನಮಸ್ಕರಿಸಿ ದೇವರೆತ್ತುಗಳಿಗೆ ಬಾಳೆಹಣ್ಣು, ಬೆಲ್ಲ ತಿನ್ನಿಸುತ್ತಾರೆ. ನಿಯಮದಂತೆ ಪೂಜೆ ಮುಗಿಸಿ ನಂತರ ಎಲ್ಲರಿಗೂ ಮುತ್ತುಗದ ಎಲೆಯಿಂದ ಅಂಚಿಕಡ್ಡಿಯಿಂದ ಹೆಣೆದ ಎಲೆಯಲ್ಲಿ ಪ್ರಸಾದ ಕೊಡುತ್ತಾರೆ. ಗೋವುಗಳಿಂದ ಕರೆದ ಹಾಲು, ಮೊಸರು, ಮಜ್ಜಿಗೆ ಭಕ್ತಾದಿಗಳಿಗೆ ಕುಡಿಯಲು ಕೊಡುತ್ತಾರೆ. ನಂತರದಲ್ಲಿ ಕಿಲಾರಿಗಳು ಬಳಸುತ್ತಾರೆ. ದೇವರೆತ್ತುಗಳನ್ನು ಪೂಜಿಸುವುದರಿಂದ ನಮ್ಮ ಕಷ್ಟಕಾರ್ಪಣ್ಯಗಳು ಬಗೆಹರಿಯುತ್ತವೆ ಎಂಬ ನಂಬಿಕೆ ಮ್ಯಾಸಮಂಡಲದ ಸಮುದಾಯದಲ್ಲಿದೆ.

ಉದಿ-ಪದಿ-ನೋಮು ಎಂದು ಐದು ಪದಿಗಳನ್ನು ಇಡುತ್ತಾರೆ.

೧. ಮುತ್ತೈಗಳ ಪದಿ
೨. ಬೊಮ್ಮದೇವರ ಪದಿ
೩. ಗಾದ್ರಿದೇವರ ಪದಿ
೪. ಓಬಳದೇವರ ಪದಿ
೫. ಬಂಗಾರುದೇವರ ಪದಿ

"ಉದಿ ಎಂದರೆ 'ಉದ್ಭವಿಸು', ಪದಿ ಎಂದರೆ 'ಪವಿತ್ರ'ವಾದುದು ನೋಮು ಎಂದರೆ ನಿಯಮಗಳು"[೨] ಎಂದರ್ಥ. ಐದು ಪದಿಗಳ ದೇವರನ್ನು ಪೂಜಿಸಿ ಸೂರ್ಯನಿಗೆ 'ಮೊಕ್ಕು'ಎಂದು ಕೂಗುತ್ತಾರೆ. ಆಗ ಇಡೀ ಮ್ಯಾಸಮಂಡಲದವರು ಸೂರ್ಯನಿಗೆ ನಮಸ್ಕಾರ ಮಾಡುತ್ತಾರೆ. ಮೊಕ್ಕು(ಕೈಮುಗಿ,ನಮಸ್ಕರಿಸು), ಎಂದರ್ಥ. ಇವೆಲ್ಲವುಗಳ ಮೇಲುಸ್ತುವಾರಿಯು 'ದೊರೆ'ಯ ಮೂಲಕವೇ ನಡೆಯುತ್ತದೆ. ದೊರೆಯ ಕಟ್ಟೆ ಇಲ್ಲದೆ ಏನೂ ನಡೆಯುವಂತಿಲ್ಲ, ಆ ಸಮುದಾಯದ ಬಹುದೊಡ್ಡ ಸಮಸ್ಯೆ ಎಂದರೆ, ಕಾಡಿನ ಜಾಗವನ್ನು ಸಂಪೂರ್ಣವಾಗಿ ಡಿ.ಆರ್.ಡಿ.ಓ ಸಂಸ್ಥೆಯವರು ವಶಪಡಿಸಿಕೊಂಡಿರುವುದರಿಂದ ದೇವರೆತ್ತುಗಳಿಗೆ, ಕುರಿ ಮೇಕೆಗಳಿಗೆ ಹುಲ್ಲು, ನೀರಿಲ್ಲದೆ ಸಮಾಸ್ಯೆಯಾಗಿದೆ. ವಿಜ್ಞಾನದ ಹೆಸರಿನಲ್ಲಿ ಪ್ರಗತಿ ಎಂದುಕೊಂಡರು ಈ ಸಮುದಾಯದ ಬದುಕು ಅತಂತ್ರ ಮತ್ತು ತಾವುನಂಬಿಕೊಂಡಿದ್ದ ಪಾರಂಪರಿಕವಾದ ಪಶುಪಾಲನೆಯ ತೊಡಕಿನಿಂದಾಗಿ ಬಹುಪಾಲು ಜನರಿಗೆ ತೊಂದರೆಯಾಗಿದೆ. ಪ್ರಗತಿಗಿಂತಲೂ ಪಶುಸಂಗೋಪನೆಗಿರುವ ಕುರುಚಲು ಕಾಡು ವಶವಾಗಿರುವುದು ಅನೇಕ ಜೀವ, ಜಾನುವಾರುಗಳ ಬದುಕಿಗೆ ಮಾರಕವಾಗಿದೆ.

ಒಟ್ಟಾರೆಯಾಗಿ ಕಾಡುಗೊಲ್ಲ ಮತ್ತು ಮ್ಯಾಸಬೇಬೇಡರು ಕೃಷಿಗೆ ನೆಲೆನಿಂತರೂ ಬೇಟೆಯಂತಹ, ಪಶುಪಾಲನೆಯಂತಹ, ಮೂಲ ವೃತ್ತಿಗಳನ್ನು ಮರೆಯದೆ ಸಾಂಪ್ರದಾಯಿಕ ಬದುಕನ್ನು ತಮ್ಮೊಟ್ಟಿಗಿಟ್ಟುಕೊಂಡು ಇಂದಿಗೂ ಜೀವನ ಸಾಗಿಸುವುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

ಇ) ಕೃಷಿ:

ಕಾಡುಗೊಲ್ಲ ಮತ್ತು ಮ್ಯಾಸಬೇಡರು ಪಶುಪಾಲನೆಯ ನಂತರದಲ್ಲಿ ಕೃಷಿಗೆ ನೆಲೆನಿಂತರು, ಗೊಲ್ಲ ಜನಾಂಗದವರು ವ್ಯವಸಾಯದಲ್ಲಿ ಹಿಂದುಳಿದವರಾಗಿದ್ದಾರೆ. ಅವರಲ್ಲಿ ಜಮೀನು ಇರುವವರು ತುಂಬಾ ಕಡಿಮೆ. ಸಣ್ಣರೈತರೇ ಹೆಚ್ಚಾಗಿದ್ದಾರೆ. ಅವರಲ್ಲಿ ಕೃಷಿ ಕೂಲಿಕಾರ್ಮಿಕರು ಹೆಚ್ಚು. ಭೂಮಿ ಇದ್ದರು ಯೋಗ್ಯವಲ್ಲದ ಭೂಮಿ ಬಹಳವಿರುತ್ತದೆ. ಅವರಲ್ಲಿ ಕೃಷಿ ಕಾರ್ಮಿಕರ ಸ್ಥಿತಿಗತಿ ತುಂಬಾ ನಿಕೃಷ್ಟ ಜೀವನವಾಗಿದೆ. ಅಲ್ಪಸ್ವಲ್ಪ ನೀರಾವರಿ ಭೂಮಿ ಇದ್ದರು ಆಧುನಿಕ ಕೃಷಿ ಪದ್ಧತಿಯನ್ನಳವಡಿಸಿಕೊಂಡಿಲ್ಲ. ಮಳೆಯಾಶ್ರಿತ ಭೂಮಿ ಹೆಚ್ಚಾಗಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಚಳ್ಳಕೆರೆ, ಹಿರಿಯೂರು, ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಹೆಚ್ಚಾಗಿ ಜೋಳ, ಸಜ್ಜೆ, ನವಣೆ, ರಾಗಿ, ಬೆಳೆಯುತ್ತಾರೆ. ಇತ್ತೀಚಿನ ದಿನಗಳಲ್ಲಿ ಕೊಳವೆಬಾವಿಗಳಿಂದಾಗಿ ರಾಗಿ, ಮೆಕ್ಕೆಜೋಳ, ಹತ್ತಿ, ಹೆಚ್ಚಿನದಾಗಿ ಬೆಳೆಯುತ್ತಾರೆ. ಬೆಳೆದ ಫಸಲಿಗೆ ಸರಿಯಾಗಿ ಬೆಂಬಲಬೆಲೆಸಿಗದೆ ಮಧ್ಯವರ್ತಿ ಮತ್ತು ದಲ್ಲಾಳಿಗಳ ಹಾವಳಿಯಿಂದಾಗಿ ಸಂಕಷ್ಟಕ್ಕೀಡಾಗಿದ್ದಾರೆ. ಮಳೆಯಾಶ್ರಿತ ಬೆದ್ದಲುಗಳಿರುವುದರಿಂದ ಮಳೆಯೂ ಸಹ ಸಕಾಲಕ್ಕೆ ಬರದೇ ಇರುವುದು ಕೈತುಂಬ ಬೆಳೆ ಬರದಿರುವುದು ಮಳೆ ಬಂದರೂ ಅಕಾಲಿಕವಾಗಿ ಬರುವುದು. ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಹೆಚ್ಚಾಗಿ ಜೋಳ, ಸಜ್ಜೆ, ನವಣೆ, ವಾಣಿಜ್ಯ ಬೆಳೆಯಾದ ಶೇಂಗಾ ಬೆಳೆಯುತ್ತಾರೆ. ಈಗ ಎರಡು ವರ್ಷ ಮಳೆಯ ಅಭಾವದಿಂದ ಬರದ ಸ್ಥಿತಿ ತಲೆದೋರಿ ಅತಂತ್ರ ಸ್ಥಿತಿಯಲ್ಲಿ ನಿಕೃಷ್ಟಮಟ್ಟದ ಜೀವನ ನಿರ್ವಹಿಸುತ್ತಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಹೆಚ್ಚಾಗಿ ವಾಸಿಸುವ ಮ್ಯಾಸಬೇಡರೂ ಸಹ ಮಳೆಯಾಶ್ರಿತ ಬೆದ್ದಲು ಜಮೀನನ್ನೆ ಹೊಂದಿದಾರೆ. ಪ್ರಧಾನವಾಗಿ ಶೇಂಗಾ, ಜೋಳ, ಸಜ್ಜೆ, ನವಣೆ, ರಾಗಿ ಬೆಳೆಯುತ್ತಾರೆ. ಅವರಲ್ಲಿಯೂ ಕೃಷಿಕಾರ್ಮಿಕರಾಗಿ ಕೂಲಿಕಾರರಾಗಿ ಉಪಜೀವನವನ್ನು ನಿರ್ವಹಿಸುತ್ತಾರೆ. ಈ ಎರಡು ಸಮುದಾಯಗಳು ಕೃಷಿಗೆ ನೆಲೆನಿಂತರೂ ಸಹ ಹೆಚ್ಚು ಋಣಬಾಧೆ ಅವರಿಗಂಟಿಕೊಂಡಿದೆ. ದಲ್ಲಾಳಿ ಅಂಗಡಿಗಳಲ್ಲಿ ಶ್ರೀಮಂತರ ಬಳಿ ಬಡ್ಡಿಗೆ ಸಾಲ ತೆಗೆದುಕೊಂಡು ಭೂಮಿಗೆ ಹಾಕುತ್ತಾರೆ. ಬೆಳೆಬಂದ ನಂತರ ಸಾಲ ತೀರಿಸುವುದು ಇಲ್ಲವೆ ಒಡವೆ ವಸ್ತುಗಳನ್ನು ಶ್ರೀಮಂತರ ಬಳಿ ಅಡವಿಟ್ಟು ಸಾಲ ಪಡೆಯುತ್ತಾರೆ. ಹೀಗೆ ಕಾಡುಗೊಲ್ಲರು ಮತ್ತು ಮ್ಯಾಸಬೇಡರು ಆರ್ಥಿಕವಾಗಿ ಪ್ರಬಲವಾಗಿಲ್ಲದಿರುವುದು ಕಂಡುಬರುತ್ತದೆ. ಸರ್ಕಾರಿ ಸೌಲಭ್ಯಗಳು ಈ ಹಟ್ಟಿಗಳಿಗೆ ತಲುಪಿಲ್ಲವಾದರೂ, ಅವರೂ ಸಹ ಪಡೆಯುವಲ್ಲಿ ಹಿಂದುಳಿದಿದ್ದಾರೆ. ಏಕೆಂದರೆ ಅನಕ್ಷರತೆ, ಅಜ್ಞಾನ, ಶಿಕ್ಷಣಮಟ್ಟ ಕಡಿಮೆ ಇರುವುದರಿಂದ ಸರ್ಕಾರದ ಯೋಜನೆಗಳನ್ನು ಬಳಸಿಕೊಳ್ಳುವಲ್ಲಿ ಅಸಹಾಯಕರಾಗಿದ್ದಾರೆ.

## ಕೋಷ್ಟಕ-೨೬

### ಜಮೀನು ಇರುವ ಪ್ರಮಾಣ

| ಜಮೀನು ಇದ್ದರೆ | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಒಂದು ಎಕರೆಗಿಂತ ಕಡಿಮೆ | ೧೦ | ೬.೫೮ | ೦ | ೦.೦೦ | ೧೦ | ೫.೭೫ |
| ೧-೨ | ೩೩ | ೨೧.೭೧ | ೬ | ೨೭.೨೭ | ೩೯ | ೨೨.೪೧ |
| ೨-೩ | ೨೧ | ೧೩.೮೨ | ೧ | ೪.೫೫ | ೨೨ | ೧೨.೬೪ |
| ೩-೪ | ೨೬ | ೧೭.೧೧ | ೬ | ೨೭.೨೭ | ೩೨ | ೧೮.೩೯ |
| ೪-೫ | ೧೧ | ೭.೨೪ | ೨ | ೯.೦೯ | ೧೩ | ೭.೪೭ |
| ೫ ಕ್ಕಿಂತ ಹೆಚ್ಚು | ೪೦ | ೨೬.೩೨ | ೬ | ೨೭.೨೭ | ೪೬ | ೨೬.೪೪ |
| ಜಮೀನು ಇಲ್ಲದವರ ಪ್ರಮಾಣ | ೧೧ | ೭.೨೪ | ೧ | ೪.೫೫ | ೧೨ | ೬.೯೦ |
| ಒಟ್ಟು | ೧೫೨ | ೧೦೦.೦೦ | ೨೨ | ೧೦೦.೦೦ | ೧೭೪ | ೧೦೦.೦೦ |

### ರೇಖಾನಕ್ಷೆ-೬ ಜಮೀನು ಇರುವ ಪ್ರಮಾಣ




ಕೋಷ್ಟಕ ೨೬ ರ ಪ್ರಕಾರ ಸಣ್ಣ ಭೂಹಿಡುವಳಿದಾರರು ಅಂದರೆ ಮೂರು ಎಕರೆಗಿಂತ ಕಡಿಮೆ ಇರುವವರು. ಅವರ ಪ್ರಮಾಣ ಕಾಡುಗೊಲ್ಲರಲ್ಲಿ ಶೇಕಡ ೧೩.೮೨ ರಷ್ಟು ಕಂಡುಬಂದರೆ, ಅದೆ ಮ್ಯಾಸಬೇಡರಲ್ಲಿ ಶೇಕಡ ೪.೫೫ ರಷ್ಟು ಕಂಡುಬರುತ್ತದೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಜಮೀನು ಇಲ್ಲದವರ ಪ್ರಮಾಣ ಶೇಕಡ ೬.೯೦ ರಷ್ಟು ಇರುವುದು ಕಂಡುಬಂದಿದೆ.

## ಕೋಷ್ಟಕ-೨೭

### ಸಾಲ ಮಾಡಿದ ಉದ್ದೇಶ

| - | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| - | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಕೃಷಿಗೆ | ೩೩ | ೨೧.೭೧ | ೧೨ | ೫೪.೫೫ | ೪೫ | ೨೫.೮೬ |
| ಮಕ್ಕಳ ಮದುವೆ | ೪೯ | ೩೨.೨೪ | ೨ | ೯.೦೯ | ೫೧ | ೨೯.೩೧ |
| ಮಕ್ಕಳ ವಿದ್ಯಾಭ್ಯಾಸ | ೮ | ೫.೨೬ | ೨ | ೯.೦೯ | ೧೦ | ೫.೭೫ |
| ಮನೆ ಕಟ್ಟಲು | ೧೧ | ೭.೨೪ | ೦ | ೦.೦೦ | ೧೧ | ೬.೩೨ |
| ವ್ಯಾಪಾರಕ್ಕೆ | ೩ | ೧.೯೭ | ೦ | ೦.೦೦ | ೩ | ೧.೭೨ |
| ಇತರೆ | ೪೮ | ೩೧.೫೮ | ೬ | ೨೭.೨೭ | ೫೪ | ೩೧.೦೩ |
| **ಒಟ್ಟು** | ೧೫೨ | ೧೦೦.೦೦ | **೨೨** | ೧೦೦.೦೦ | **೧೭೪** | ೧೦೦.೦೦ |

ಕೋಷ್ಟಕ ೨೭ ರಲ್ಲಿ ತಿಳಿಯುವ ಅಂಶವೆಂದರೆ. ಈ ಎರಡು ಸಮುದಾಯಗಳು ಯಾವುದಾರೂ ಒಂದು ಕೆಲಸ ಅಥವ ಕಾರ್ಯಕ್ಕಾಗಿ ಸಾಲ ಮಾಡಿರುತ್ತಾರೆ. ಕಾಡುಗೊಲ್ಲರಲ್ಲಿ ತಮ್ಮ ಮಕ್ಕಳ ಮದುವೆ ಕಾರ್ಯವನ್ನು ಮಾಡಬೇಕಾದಾಗ ಗಂಡಿಗೆ ವರದಕ್ಷಣೆಯ ರೂಪದಲ್ಲಿ ಹಣವನ್ನು ಕೊಡಬೇಕಾಗುತ್ತದೆ. ಆಗ ಶ್ರೀಮಂತರ ಬಳಿ ಬಡ್ಡಿಗೆ ಸಾಲ ತೆಗೆದುಕೊಂಡು ಬೆಳೆಬಂದ ನಂತರ ಸಾಲ ತೀರಿಸುವುದು ಇಲ್ಲವೆ ಒಡವೆ ವಸ್ತುಗಳನ್ನು ಶ್ರೀಮಂತರ ಬಳಿ ಅಡವಿಡುವುದು. ಹೀಗೆ ಕಾಡುಗೊಲ್ಲರು ತಮ್ಮ ಮಕ್ಕಳ ಮದುವೆಗಾಗಿ ಶೇಕಡ ೩೨.೨೪ ರಷ್ಟು ಸಾಲ ಮಾಡಿರುವುದು ಕಂಡುಬಂದಿದೆ. ಮ್ಯಾಸಬೇಡರು ತಮ್ಮ ಮೂಲ ವೃತ್ತಿಯಾದ ಕೃಷಿಯನ್ನು ಮುಂದುವರೆಸಿದ್ದಾರೆ. ಅವರಲ್ಲಿ ಮಳೆಯಾಶ್ರಿತ ಬೆದ್ದಲುಗಳಿರುವುದರಿಂದ ಮಳೆಯೂ ಸಹ ಸಕಾಲಕ್ಕೆ ಬರದೇ ಇರುವುದು ಕೈತುಂಬ ಬೆಳೆ ಬರದಿರುವುದು, ಮಳೆ ಬಂದರೂ ಅಕಾಲಿಕವಾಗಿ ಬರುವುದು. ಅದರೂ ಸಹ ತನ್ನ ಯಾವುದೋ ಒಂದು ನಂಬಿಕೆಯಿಂದ ಕೃಷಿಗೆ ಶೇಕಡ ೫೪.೫೫ ರಷ್ಟು ಸಾಲ ಮಾಡಿರುವುದು ಕಂಡುಬಂದಿದೆ. ಈ ಎರಡು ಸಮುದಾಯಗಳು ಇತರೆ ಕೆಲಸಗಳಿಗೆ ಅಥಾವ ಕಾರ್ಯಗಳಿಗೆ ಸಾಲಮಾಡಿರುವ ಪ್ರಮಾಣ ಶೇಕಡ ೩೧.೦೩ ರಷ್ಟು ಅಧ್ಯಯನದಿಂದ ಕಂಡುಬಂದಿದೆ.

## ಕೋಷ್ಟಕ-೨೮

### ಕುಟುಂಬದ ಮೂಲ ವೃತ್ತಿ

| - | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| - | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಪಶುಸಾಕಾಣಿಕೆ | ೨೯ | ೧೯.೦೭ | ೧ | ೪.೫೫ | ೩೦ | ೧೭.೨೪ |
| ಕೃಷಿ | ೧೧೭ | ೭೬.೯೭ | ೧೭ | ೭೭.೨೭ | ೧೩೪ | ೭೭.೦೧ |
| ಕೂಲಿ | ೬ | ೩.೯೫ | ೪ | ೧೮.೧೮ | ೧೦ | ೫.೧೭ |
| ಒಟ್ಟು | ೧೫೨ | ೧೦೦.೦೦ | ೨೨ | ೧೦೦.೦೦ | **೧೭೪** | ೧೦೦.೦೦ |

ಕೋಷ್ಟಕ ೨೮ ಪ್ರಕಾರ ತಿಳಿಯುವ ಅಂಶವೆಂದರೆ. ಈ ಎರಡು ಸಮುದಾಯದವರು ತಮ್ಮ ಮೂಲ ವೃತ್ತಿಯನ್ನಾಗಿ ಕೃಷಿ ಮತ್ತು ಪಶುಸಾಕಾಣಿಕೆಯನ್ನು ಅವಲಂಬಿಸಿದ್ದಾರೆ. ಅದರಲ್ಲಿ ಈ ಎರಡು ಸಮುದಾಯದವರು ತಮ್ಮ ಕುಟುಂಬದ ಮೂಲ ವೃತ್ತಿ ಕೃಷಿಯನ್ನಾಗಿಸಿಕೊಂಡವರ ಪ್ರಮಾಣ ಶೇಕಡ ೭೭.೦೧ ರಷ್ಟು ಇರುವುದು ಕಂಡುಬಂದಿದೆ. ಪಶುಸಾಕಾಣಿಕೆಯನ್ನು ಕೂಡ ಕೆಲವರು ತಮ್ಮ ಕುಟುಂಬದ ಮೂಲ ವೃತ್ತಿಯನ್ನಾಗಿಸಿಕೊಂಡವರ ಪ್ರಮಾಣ ಶೇಕಡ ೧೭.೨೪ ರಷ್ಟು ಇರುವುದು ಕಂಡುಬಂದಿದೆ. ಈ ಎರಡು ಸಮುದಾಯಗಳು ಕೃಷಿ ಮತ್ತು ಪಶುಸಾಕಾಣಿಕೆಯಿಂದ ಜೀವನ ನಡೆಸುತ್ತಿರುವುದು ಅಧ್ಯಯನದಿಂದ ತಿಳಿಯುತ್ತದೆ.

**ಈ) ಕೃಷಿಯೇತರ ವೃತ್ತಿ:**

ಕಾಡುಗೊಲ್ಲ ಮತ್ತು ಮ್ಯಾಸಬೇಬೇಡರು ಕೃಷಿ ಹೊರತಾಗಿ ಜೀವನೋಪಾಯಕ್ಕೆ ಉಪವೃತ್ತಿಗಳನ್ನು ಮಾಡುತ್ತಾರೆ. ಅವರುಗಳಲ್ಲಿ ಸಂತೆಗೆ ಹೋಗಿ ಕುರಿವ್ಯಾಪಾರ ಮಾಡುವುದು, ದನಗಳ ಜಾತ್ರೆಗಳಲ್ಲಿ ಎತ್ತು, ಎಮ್ಮೆ, ಹಸು ವ್ಯಾಪಾರ ಮಾಡುವುದು ಕಂಡುಬರುತ್ತದೆ. ವಾರಕ್ಕೊಮ್ಮೆ ನಡೆಯುವ ಸಂತೆಗಳಲ್ಲಿ ಗೊಲ್ಲ ಮತ್ತು ಮ್ಯಾಸಬೇಡರೆ ಹೆಚ್ಚಾಗಿ ಕಂಡುಬರುತ್ತಾರೆ. ಕುರಿಸಾಕಾಣಿಕೆ ಮಾಡುವುದು, ಸಂತೆಗಳಲ್ಲಿ ಸಣ್ಣ ಪುಟ್ಟ ತರಕಾರಿ ವ್ಯಾಪಾರ ಮಾಡುವುದು, ಚಳ್ಳಕೆರೆ ಸುತ್ತಮುತ್ತಲಿನ ಗೊಲ್ಲ ಮತ್ತು ಮ್ಯಾಸಬೇಡ ಗಂಡಸರು ಮಾರುಕಟ್ಟೆಯಲ್ಲಿ ಹಮಾಲಿಗಳಾಗಿಯೂ ಕೆಲಸ ಮಾಡುತ್ತಾರೆ. ಅವರು ಹೂ, ಹಣ್ಣಿನ ವ್ಯಾಪಾರ ಮಾಡುತ್ತಾರೆ, ಹೆಚ್ಚಿನದಾಗಿ ಕಷ್ಟದಾಯಕ ಕೆಲಸಗಳನ್ನು ಮಾಡಿ ಜೀವನ ಸಾಗಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಸ್ವಲ್ಪಮಟ್ಟಿಗೆ ಯುವಕರು ನಗರಗಳಿಗೆ ಹೋಗಿ ಶಿಕ್ಷಣ ಕಲಿಯುತ್ತಿದ್ದು ಸರ್ಕಾರಿ ಉದ್ಯೋಗಗಳಲ್ಲಿ, ಖಾಸಗಿಸಂಸ್ಥೆಗಳಲ್ಲಿ ನೌಕರಿ ನಿರ್ವಹಿಸಲು ಮುಂದಾಗುತ್ತಿರುವುದು ಕಂಡುಬರುತ್ತದೆ. ಅದೆ ಸ್ತ್ರೀಯರಲ್ಲಿ ಶಿಕ್ಷಣದ ಮಟ್ಟ ಕಡಿಮೆಯಿದೆ. ಹಿರಿಯ ಪೀಳಿಗೆಯವರಲ್ಲಂತೂ ಶಿಕ್ಷಣ ಕಲಿಯದವರೇ ಬಹಳ ಇದ್ದಾರೆ. ಈಗಲೂ ಸಹ ಶಿಕ್ಷಣವನ್ನು ಅರ್ಧಕ್ಕೆ ಮೊಟಕುಗೊಳಿಸಿರುವುದು ಕಂಡುಬರುತ್ತದೆ. ಕಾರಣ ವಕ್ತೃಗಳು ಹೇಳುವ ಪ್ರಕಾರ ಬಡತನದ ಕಾರಣದಿಂದ ದೂರದ ಶಿಕ್ಷಣ ಸಂಸ್ಥೆಗಳಿಗೆ ಕಳುಹಿಸದಿರುವುದು. ದುಬಾರಿ ಶಿಕ್ಷಣ, ಕುರಿಸಾಕಲು ಕೃಷಿಗೆ ತೊಡಗಿಸಿಕೊಳ್ಳುವುದು ಹಲವು ಕಾರಣಗಳನ್ನು ಕೊಡುತ್ತಾರೆ. ಇನ್ನು ಹೆಣ್ಣು ಮಕ್ಕಳನ್ನು ದೂರದ ನಗರಗಳಿಗೆ ವಸತಿಶಾಲೆಗಳಿಗೆ ಕಳುಹಿಸಲು ಹಿಂಜರಿಯುವುದು. ಸಂಪೂರ್ಣವಾಗಿ ಶಿಕ್ಷಣವನ್ನು ಮುಗಿಸದೆ ಅರ್ಧಕ್ಕೆ ಮೊಟುಕುಗೊಳಿಸಿ ಮದುವೆ ಮಾಡುವುದು. ಇಲ್ಲವೆ ಮನೆಕೆಲಸ, ಜಮೀನು ಕೆಲಸಗಳಿಗೆ ತೊಡಗಿಸಿಕೊಳ್ಳುವುದರಿಂದ ಶಿಕ್ಷಣದಿಂದ ಹಿಂದುಳಿದಿರುವಿಕೆ ಮತ್ತು ಸರ್ಕಾರಿ ಉದ್ಯೋಗಗಳನ್ನು ಹೊಂದದೇ ಇರಲು ಕಾರಣವಾಗಿದೆ.

## ಕೋಷ್ಟಕ-೨೯

### ಸಂಪಾದನೆ ಮತ್ತು ಉಳಿತಾಯದ ಮೂಲಗಳು

| - | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| -- | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಸ್ತ್ರೀ ಶಕ್ತಿ ಸಂಘಗಳು | ೧೧೮ | ೭೭.೬೩ | ೧೬ | ೭೨.೭೨ | ೧೩೪ | ೭೭.೦೧ |
| ಬ್ಯಾಂಕ್ | ೩೦ | ೧೯.೭೩ | ೫ | ೨೨.೭೨ | ೩೫ | ೨೦.೧೧ |
| ಅಂಚೆ ಕಛೇರಿ | ೦ | ೦.೦೦ | ೦ | ೦.೦೦ | ೦ | ೦.೦೦ |
| ಜೀವ ವಿಮೆ | ೪ | ೨.೬೩ | ೧ | ೪.೫೫ | ೫ | ೨.೮೭ |
| **ಒಟ್ಟು** | ೧೫೨ | ೧೦೦.೦೦ | **೨೨** | ೧೦೦.೦೦ | **೧೭೪** | ೧೦೦.೦೦ |

ಕೋಷ್ಟಕ ೨೯ ರ ಪ್ರಕಾರ ಈ ಎರಡು ಸಮುದಾಯಗಳು ತಮ್ಮ ಮೂಲ ವೃತ್ತಿ ಕೃಷಿ, ಪಶುಪಾಲನೆ, ಕುರಿಸಾಕಾಣಿಕೆ, ಕೂಲಿ ಇದರಿಂದ ಬಂದ ಸಂಪಾದನೆಯನ್ನು ಸ್ತ್ರೀ ಶಕ್ತಿ ಸಂಘ, ಬ್ಯಾಂಕ್, ಜೀವವಿಮೆಯಲ್ಲಿ ಹಣವನ್ನು ಕಟ್ಟಿ ಉಳಿತಾಯ ಮಾಡಿಕೊಳ್ಳುತ್ತಿದ್ದಾರೆ. ಅದರಲ್ಲಿ ಈ ಎರಡು ಸಮುದಾಯಗಳು ಅತೀ ಹೆಚ್ಚಾಗಿ ಸ್ತ್ರೀಶಕ್ತಿ ಸಂಘವನ್ನು ಉಪಯೋಗಿಸುತ್ತಿವೆ.ಅದರ ಪ್ರಮಾಣ ಶೇಕಡ ೭೭.೦೧ ರಷ್ಟು ಕಂಡುಬಂದಿದೆ. ಒಟ್ಟಾರೆಯಾಗಿ ಕಾಡುಗೊಲ್ಲ, ಮತ್ತು ಮ್ಯಾಸಬೇಡರು ಕುರಿಸಾಕಾಣಿಕೆ, ಪಶುಪಾಲನೆ ಕೃಷಿ, ಹೀಗೆ ಸಮ್ಮಿಶ್ರಗೊಂಡ ಉತ್ಪಾಧನಾ ಸಂಬಂಧಗಳೊಂದಿಗೆ ಆರಕ್ಕೇರದೆ, ಮೂರಕ್ಕಿಳಿಯದೆ ಸರಳವಾದ ಜೀವನವನ್ನು ನಿರ್ವಹಿಸುತ್ತಾರೆ ವಿಕಾಸದ ಹಂತದಲ್ಲಿ ಹಿಂದುಳಿದಿದ್ದಾರೆ.

**ಅಡಿಟಿಪ್ಪಣಿಗಳು**

೧. ಶಂಕರನಾರಾಯಣ. ತೀ.ನಂ., ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ೧೯೮೨ ಪುಟ :೧೫೦.

೨. ಕೃಷ್ಣಮೂರ್ತಿ ಹನೂರ, ಮ್ಯಾಸಬೇಡರು, ೧೯೯೩ ಪುಟ : ೭೦

೩. ಅದೇ- ಪುಟ:೭೧.

೪. ಅದೇ- ಪುಟ:೭೭.

೫. ಲಿಂಗಯ್ಯ ಡಿ. ಸಂಧ್ಯಾರೆಡ್ಡಿ. ಕೆ.ಆರ್. ಜಾನಪದ ಸ್ವರೂಪ ಮತ್ತು ಸಾಹಿತ್ಯ, ೧೯೯೭, ಪುಟ: ೨೭

೬. ಶಂಕರ್‌ರಾವ್.ಚ.ನ.ಸಮಾಜಶಾಸ್ತ್ರದ ಮೂಲತತ್ವಗಳು ೨೦೦೭, ಪುಟ : ೩೮.

೭. ಅದೇ- ಪುಟ:೨೦೪.

೮. ಶಂಕರನಾರಾಯಣ ತೀ.ನಂ.ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು,೧೯೮೨, ಪುಟ: ೨೭.

೯. ಬೋರಜ್ಜ. ಕಟ್ಟೆಮನೆಗಳ ಮಾಹಿತಿ, ಕಂಪಳದೇವರಹಟ್ಟಿ

೧೦. ವಿರೂಪಾಕ್ಷಿ ಪೂಜಾರಹಳ್ಳಿ ಬೇಟೆ ಮತ್ತು ಬೇಡರು೨೦೦೭.ಪುಟ : ೧೨.

11. Luiz A. A.D. The tribes of Mysore, 1963, P-86.

೧೨. ಊಲೆ ಪಾಲಯ್ಯ. ಎತ್ತಿನ ಕಿಲಾರಿ, ನನ್ನಿವಾಳ.

# ಅಧ್ಯಾಯ : ನಾಲ್ಕು

# ಹಟ್ಟಿಗಳ ಭಾಷೆ, ಕಲೆ ಹಾಗೂ ಸಾಹಿತ್ಯ

# ಅಧ್ಯಾಯ: ನಾಲ್ಕು

## ಹಟ್ಟಿಗಳ ಭಾಷೆ, ಕಲೆ ಹಾಗೂ ಸಾಹಿತ್ಯ

ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಮತ್ತು ಮ್ಯಾಸಬೇಡ ಸಮುದಾಯಗಳು ಸಾಂಸ್ಕೃತಿಕವಾಗಿ ಶ್ರೀಮಂತವಾಗಿವೆ. ತಮ್ಮ ಮೂಲ ಸಾಂಸ್ಕೃತಿಕ ಪರಂಪರೆಯನ್ನು ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ. ಅವರ ಭಾಷೆ, ಕಲೆ, ಸಾಹಿತ್ಯ ಕ್ಷೇತ್ರಗಳಲ್ಲಿ ಬೇರೆ ಸಮುದಾಯಗಳಿಗಿಂತ ಭಿನ್ನವಾಗಿವೆ. ಅಪ್ಪಟ ಜನಪದ ಸಂಸ್ಕೃತಿಯನ್ನು ರೂಢಿಸಿಕೊಂಡಿರುವ ಈ ಸಮುದಾಯಗಳು ಪ್ರಾಚೀನ ಕಾಲದಿಂದಲೂ ತಮ್ಮದೇ ಆದ ರೀತಿಯಲ್ಲಿ ಸಾಂಸ್ಕೃತಿಕ ಅನನ್ಯತೆಯನ್ನು ಹೊಂದಿದ್ದಾರೆ. ಈ ಬುಡಕಟ್ಟುಗಳಲ್ಲಿ ಭಾಷೆ, ಪ್ರದರ್ಶನಕಲೆ, ಜನಪದ ಸಾಹಿತ್ಯ ಮೂರ್ತರೂಪವಾಗಿವೆ.

### ೪.೧ ಭಾಷೆ:

ಯಾವುದೇ ಸಮುದಾಯಕ್ಕೆ ಭಾಷೆ ಅಗತ್ಯವಾದುದು. ಭಾಷೆ ಭಾವನೆಗಳನ್ನು ಹೊರುವ ಸಾಧನ. 'Launguage is viechle of thoughts' ಹಾಗಾಗಿ ಮೂಲತಃ ಜನಪದರಲ್ಲಿ ತಮ್ಮ ದಿನನಿತ್ಯದ ಬದುಕಿನಲ್ಲಿ ಭಾಷೆ ಸಹಜವಾಗಿಯೇ ಹುಟ್ಟಿಕೊಂಡಿತು. ಪ್ರತಿಯೊಂದು ಸಮುದಾಯಕ್ಕೆ ತನ್ನದೇ ಆದ ಭಾಷೆ ಇರುತ್ತದೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರ ಜೀವನ, ಕಲೆ, ನಂಬಿಕೆ, ಆಚರಣೆಗಳು, ಸಂಪ್ರದಾಯಗಳು ಪ್ರದೇಶಿಕವಾಗಿ ಭಿನ್ನವಾಗಿರುತ್ತವೆ. ಅಲ್ಲದೆ ಈ ಎರಡು ಸಮುದಾಯಗಳಲ್ಲಿ ಸಾಮ್ಯತೆ ಇದ್ದರೂ ಭಾಷೆಯಲ್ಲಿ ಭಿನ್ನತೆ ಇರುವುದು ಕಂಡುಬರುತ್ತದೆ. ಕಾಡುಗೊಲ್ಲರು ಸ್ಪಷ್ಟವಾಗಿ ಕನ್ನಡ ಮಾತನಾಡುತ್ತಾರೆ. ಕನ್ನಡ ಅವರ ಮಾತೃಭಾಷೆಯಾಗಿರುತ್ತದೆ ಅವರು ಉತ್ತರ ಭಾರತದಿಂದ ವಲಸೆ ಬಂದವರು ಎಂಬ ಐತಿಹ್ಯಗಳನ್ನು ನೋಡಿದರೆ, ಅವರು ಹಿಂದಿ, ಉರ್ದು ಮಾತಾನಾಡಬೇಕಿತ್ತು. ಆದರೆ ಚಿತ್ರದುರ್ಗ ಜಿಲ್ಲೆಯ ಗೊಲ್ಲರು ಸ್ಪಷ್ಟವಾಗಿ ಕನ್ನಡ ಮಾತನಾಡುವರಾಗಿದ್ದಾರೆ. ಅವರು ನಮ್ಮ ರಾಜ್ಯದ ಮೂಲನಿವಾಸಿಗಳೇ ಎಂಬುದರಲ್ಲಿ ಸಂದೇಹವಿಲ್ಲ.

ಹೆಚ್.ವಿ.ನಂಜುಂಡಯ್ಯನವರು ಕಾಡುಗೊಲ್ಲರ ಭಾಷೆಯ ಕುರಿತಾಗಿ "kadGollas invariably speak kannada, in this state, and are said to have adopted the language prevailing wherever they settled, having no distict language for the caste".[1] ಹಾಗಾಗಿ ಕಾಡುಗೊಲ್ಲರ ಮಾತೃಭಾಷೆ ಕನ್ನಡವೇ ಎಂದು ಹಲವು ಅಧ್ಯಯನಗಳು ನಿರೂಪಿಸುತ್ತವೆ.

ಎ.ಎ.ಡಿ.ಲೂಯಿಸ್‌ರವರು ಕಾಡುಗೊಲ್ಲರ ಬಗ್ಗೆ ಅವರು ಕಾಡುಗೊಲ್ಲರು ಮತ್ತು ಊರುಗೊಲ್ಲರ ಭಾಷೆಯ ಕುರಿತಾಗಿ 'Unlike urugollas, who speak a dialect of telugu the kaduGollas of this state speak a dialect with many wards and phreses form Marathi and urdu and have a talking knowledge of kannada'.[2] ಆದರೆ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲರು ಎಲ್ಲಿಯೂ ಕನ್ನಡವನ್ನು ಬಿಟ್ಟರೆ ಬೇರೆ ಭಾಷೆಯ ಬಳಕೆ ಮಾಡುವುದು ಕಂಡುಬರುವುದಿಲ್ಲ. ಆದರೆ ಕನ್ನಡ ಬಳಸುವಾಗ ಕೆಲವು ಪದಗಳನ್ನು ಅಪಭ್ರಂಶವಾಗಿ ಬಳಸುವುದುಂಟು. ಸಕ್ಕರೆ-ಸಕ್ರೆ, ಜ್ವರ-ಜರ ಹೀಗೆ ಕಾಡುಗೊಲ್ಲರು ಜನಪದದ ರೀತಿಯಲ್ಲಿ ಕನ್ನಡವನ್ನೆ ಮಾತನಾಡುತ್ತಾರೆ.

ಮ್ಯಾಸಬೇಡರು ಮೂಲತಃ ಆಂಧ್ರ ಪ್ರದೇಶದಿಂದ ಬಂದವರಾಗಿರುವುದರಿಂದ ಅವರ ಮಾತೃಭಾಷೆ ತೆಲುಗು, ಆಂಧ್ರಪ್ರದೇಶ ಮತ್ತು ಕರ್ನಾಟಕದ ಗಡಿಭಾಗದಲ್ಲಿರುವ ಗುಡ್ಡ, ಬೆಟ್ಟಗಳಲ್ಲಿ ವಾಸವಾಗಿರುವ ಮ್ಯಾಸಬೇಡರು ತೆಲುಗನ್ನೇ ಮಾತನಾಡುತ್ತಾರೆ. ಭಾಷೆಯು ಕೇವಲ ಸಂವಹನ ಮಾಧ್ಯಮವಷ್ಟೆ ಆಗಿರುವುದಿಲ್ಲ. ಭಾಷೆಯಿಂದ ಒಂದು ಸಮುದಾಯ, ಒಬ್ಬ ವ್ಯಕ್ತಿಯ ಇತಿಹಾಸ, ಸಂಸ್ಕೃತಿ, ಬದುಕುವ ಕ್ರಮ, ಜೀವನ ಪದ್ಧತಿ, ಜೀವನ ಮೌಲ್ಯ, ಆಲೋಚನಾ ವಿಧಾನ, ಆಚಾರವಿಚಾರ, ಸಂಪ್ರದಾಯ, ದೈವ, ನಂಬಿಕೆ ಮುಂತಾದ ಸಾಂಸ್ಕೃತಿಕ ಅಂಶಗಳ ಬೆಳವಣಿಗೆಗೆ ಸಹಾಯಕವಾಗುತ್ತದೆ. ಸಮಾಜ ಮತ್ತು ಭಾಷೆ ಇವೆರಡರ ಆಂತರಿಕ ಸಂಬಂಧ ವಿಶಿಷ್ಟವಾದುದು. ಭಾಷೆ ಸಮಾಜದ ಎಲ್ಲ ಚಟುವಟಿಕೆಗಳ ಬುನಾದಿ. ಸಮುದಾಯಗಳ ಜನರು ಬೇರೆ ಬೇರೆ ಭೂ ಪ್ರದೇಶಗಳಲ್ಲಿ ವಲಸೆ ಹೋಗಿ ನೆಲೆಸುವುದು ಅನಿವಾರ್ಯವಾಗುತ್ತದೆ. ಇಂತಹ ಪರಿಸ್ಥಿತಿಗಳು ಬಹು ಹಿಂದಿನಿಂದಲೂ ಉಂಟಾಗಿರುವುದನ್ನು ಚರಿತ್ರೆಯ ಮೂಲಕ ಗುರುತಿಸಬಹುದಾಗಿದೆ. ಇಂತಹ ಸನ್ನಿವೇಶಗಳಲ್ಲಿ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿತು ಬಳಸಬೇಕಾದ ಅವಕಾಶ ಒತ್ತಡಗಳು ಉಂಟಾಗುತ್ತವೆ. ಚಿತ್ರದುರ್ಗ ಜಿಲ್ಲೆಯ ಮ್ಯಾಸಬೇಡರಲ್ಲಿ ತಮ್ಮ ಸಾಂಸ್ಕೃತಿಕ ವಲಯದಲ್ಲಿ ತಮ್ಮ ಮಾತೃ ಭಾಷೆಯಾದ ತೆಲುಗು ಭಾಷೆಯನ್ನು ಬಳಸುತ್ತಾರೆ. ವ್ಯವಹಾರಿಕವಾಗಿ ಪ್ರಾದೇಶಿಕ ಭಾಷೆಯಾದ ಕನ್ನಡವನ್ನು ಬಳಸುವುದು ಕಂಡುಬರುತ್ತದೆ. ಮ್ಯಾಸಬೇಡರು ತೆಲುಗು ಮತ್ತು ಕನ್ನಡ ಮಿಶ್ರಿತ 'ಕಂದೆಲುಗು' ಬಳಸುವುದು ಕಂಡುಬರುತ್ತದೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರ ಪಂಗಡಗಳನ್ನು ಎರಡು ರೀತಿಯಲ್ಲಿ ವಿಂಗಡಣೆ ಮಾಡಬಹುದು. ಒಂದು, ಕಾಡುಗೊಲ್ಲರು-ಊರುಗೊಲ್ಲರು, ಎರಡು, ಮ್ಯಾಸಬೇಡರು-ಊರುಬೇಡರು, ಯಾರು ಯಾವಗೊಲ್ಲರು, ಯಾರು ಯಾವಬೇಡರು ಎಂಬುದಾಗಿ ವಿಂಗಡಿಸುವುದು ಕಷ್ಟಸಾಧ್ಯವಾಗುತ್ತದೆ. ಆದರೂ ಈ ಎರಡೂ ಸಮುದಾಯಗಳಲ್ಲಿ ನಗರಗಳಲ್ಲಿ ವಾಸಿಸುವ ಗೊಲ್ಲರು ಮತ್ತು ಬೇಡರು ಕನ್ನಡ ಮಾತನಾಡುವುದು ಕಂಡುಬರುತ್ತದೆ. ಮ್ಯಾಸಬೇಡರಲ್ಲಿ ಹೆಚ್ಚಿನದಾಗಿ ಚಳ್ಳಕೆರೆ, ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ವಾಸವಾಗಿರುವ ಮ್ಯಾಸಬೇಡರು ಹೆಚ್ಚಾಗಿ ತೆಲುಗನ್ನೇ ಮಾತನಾಡುತ್ತಾರೆ. ಮಿಕ್ಕುಳಿದ ಹಿರಿಯೂರು, ಹೊಳಲ್ಕೆರೆ ಹೊಸದುರ್ಗ ತಾಲ್ಲೂಕುಗಳ ಮ್ಯಾಸನಾಯಕರು ಹೆಚ್ಚಾಗಿ ಕನ್ನಡ ಮಾತನಾಡುತ್ತಾರೆ.

**ಕಾಡುಗೊಲ್ಲ ಮತ್ತು ಮ್ಯಾಸಬೇಡರ ಕೆಲವೊಂದು ಪದ ಬಳಕೆಯ ನಿದರ್ಶನಗಳು:**

| ಕ್ರಸಂ | ಶಿಷ್ಟಕನ್ನಡ | ಶಿಷ್ಟತೆಲುಗು | ಮ್ಯಾಸಬೇಡರತೆಲುಗು | ಕಾಡುಗೊಲ್ಲರಭಾಷೆ |
|---|---|---|---|---|
| ೧ | ಕಟ್ಟಿಗೆ | ಕಟ್ಟಲು | ಪುಡುಕಲು | ಕಟ್ಟಿಗೆ |
| ೨ | ಚೀಲ | ಸಂಚಿ | ತಿತ್ತಿ | ಚೀಲ |
| ೩ | ಬೆಳಿಗ್ಗೆ | ಪೊದ್ದುನ | ರೇಕಾಡು | ಬೆಳಿಗ್ಗೆ |
| ೪ | ಮೊಲೆ | ಕೊಮ್ಮು | ಸೊನ್ನು | ಮೊಲ |
| ೫ | ಹೊರಗೆ | ಬಯಟ | ಎಲ್ಲಿಕೆ | ಹೊರಗೆ |
| ೬ | ದೊಡ್ಡಪ್ಪ | ಪೆದ್ದನಾಯನ | ಗೊಪ್ಪಯ್ಯ | ದೊಡ್ಡಪ್ಪ |
| ೭ | ತಂದೆ | ನಾಯನ | ಅಯ್ಯ | ಅಪ್ಪ |
| ೮ | ಅಜ್ಜ | ತಾತ | ಮುತ್ತೆ | ತಾತ |
| ೯ | ಮಗಳು | ಕೂತ್ರ | ಬಿಡ್ಡ(ಕೂತ್ರು) | ಮಗಳು |
| ೧೦ | ಮಗ | ಕೊಡಕು | ಕೊಡಕು | ಮಗ |
| ೧೧ | ನೀರು | ನೀಳ್ಳು | ನೀಡ್ಲು | ನೀರು |
| ೧೨ | ಮುದ್ದೆ | ಸಂಗಟಿ | ಮುದ್ದ | ಮುದ್ದೆ |
| ೧೩ | ದುಡ್ಡು | ಡಬ್ಲು | ದುಡ್ಲು | ದುಡ್ಡು |

ಪ್ರಸ್ತುತ ಬುಡಕಟ್ಟು ಸಮುದಾಯದ ಮ್ಯಾಸಬೇಡರು ಆಧುನಿಕ ದಿನಗಳಲ್ಲಿ ಮೂಲ ಸೌಲಭ್ಯಗಳನ್ನು ಪಡೆಯುವ ಸಲುವಾಗಿ ಹಾಗು ಪ್ರಾದೇಶಿಕ, ಶೈಕ್ಷಣಿಕ, ರಾಜಕೀಯ ಸೌಲಭ್ಯಗಳನ್ನು ಹೊಂದುವ ಸಲುವಾಗಿ ಕನ್ನಡ ಭಾಷೆಯನ್ನು ಕಲಿಯುವ ಅವಶ್ಯಕತೆ ಮತ್ತು ಅನಿವಾರ್ಯತೆ ಅವರಲ್ಲಿ ಎದ್ದು ಕಾಣುತ್ತದೆ.

ಪ್ರಸ್ತುತ ಈ ಎರಡೂ ಬುಡಕಟ್ಟುಗಳಲ್ಲಿ ಇತರ ಬೇರೆ ಜಾತಿಯ ಪ್ರಭಾವದಿಂದಾಗಿ ಭಾಷೆಯೂ ಸಹ ಮಿಶ್ರಿತವಾದ ಮತ್ತು ಭಾಷೆಯ ಶೈಲಿಯೂ ಬದಲಾವಣೆಯಾಗುತ್ತಿರುವುದು ಕಂಡುಬರುತ್ತದೆ.

**೪.೨ ಕಲೆ:**

ಮನುಷ್ಯನ ಸಾಂಸ್ಕೃತಿಕ ಚರಿತ್ರೆಗೂ ಜನಪದ ಕಲೆಗಳ ಉಗಮಕ್ಕೂ ಅವಿನಾಭಾವ ಸಂಬಂಧವಿದೆ. ಧರ್ಮ, ದೇವರು, ಆರಾಧನೆ, ಪಂಗಡ ಹಾಗೂ ಸಾಮಾಜಿಕ ಶ್ರೇಣೀಕರಣಗಳ ಸಂಕೀರ್ಣ ಬದುಕು ಹೇಗೆ ಕಲೆಯ ಮೇಲೆ ಪ್ರಭಾವ ಬೀರಿತೆಂದರೆ ಮನುಷ್ಯನಿಗೂ ಮತ್ತು ಕಲೆಗಳ ಉಗಮದ ಸಂಬಂದ ಗೊತ್ತಾಗುತ್ತದೆ. ಆ ನಿಟ್ಟಿನಲ್ಲಿ ಕರ್ನಾಟಕದ ಜನಪದ ಕಲೆಗಳು ಹೆಚ್ಚು ವೈವಿಧ್ಯಮಯವೂ.

ಅಷ್ಟೇಅಲ್ಲದೇ ಅಸಂಖ್ಯಾತವಾದವು. ಕಲೆಯ ಸ್ವರೂಪಗಳು ವೈವಿಧ್ಯಮಯವಾಗಿದ್ದು ಭೌಗೋಳಿಕತೆಯ ಹಿನ್ನೆಲೆಯಲ್ಲಿ ಭಿನ್ನ ರೂಪಗಳನ್ನು ಪಡೆದಿದ್ದು ಆಯಾ ಪ್ರದೇಶದ ಜನ ಸಮುದಾಯದ ಆಶೋತ್ತರಗಳನ್ನು ಬಿಂಬಿಸುತ್ತವೆ. ಈ ನಿಟ್ಟಿನಲ್ಲಿ ಬಯಲು ಸೀಮೆ, ಪಶ್ಚಿಮ ಘಟ್ಟಗಳು, ಪಶ್ಚಿಮ ಕರಾವಳಿಯ ಕಲೆಗಳು ಅವುಗಳ ಸ್ವರೂಪ, ಪ್ರದೇಶ ಮತ್ತು ಜನ ಸಮುದಾಯಗಳಿಗನುಗುಣವಾಗಿ ಬಿನ್ನವಾಗಿರುತ್ತವೆ. ಆರಾಧನೆ ಮತ್ತು ಆಚರಣೆಗಳ ಕ್ರಿಯೆಗಳೇ ಕಲೆಗಳು. ಸಂಸ್ಕೃತಿಯ ಭಾಗವಾಗಿ ಕಲೆಗಳು ಬಹುತೇಕ ದುಡಿಯುವ ವರ್ಗದ ಜನರ ಇತಿಹಾಸನ್ನು ಅರ್ಥೈಸಿಕೊಳ್ಳಲು ಸಾಧ್ಯ.

### ೪.೨.೧. ಜನಪದ ಪ್ರದರ್ಶನ ಕಲೆಗಳು

ಕಾಡುಗೊಲ್ಲ ಮತ್ತು ಮ್ಯಾಸಬೇಡ ಸಮುದಾಯಗಳಲ್ಲಿ ಜನಪದ ಕಲೆಗಳು ತುಂಬಾ ಶ್ರೀಮಂತವಾಗಿವೆ. ಸಾಂಸ್ಕೃತಿಕ ಅಧ್ಯಯನಕ್ಕೆ ಕಲೆಗಳು ತುಂಬಾ ಮಹತ್ವವುಳ್ಳವು. ಯಾವುದೇ ಸಮುದಾಯದ ಕಲೆ, ಸಾಹಿತ್ಯದ ಆಧಾರದ ಮೇಲೆ ಅವರ ಸಂಸ್ಕೃತಿ ಮತ್ತು ಸಂಪ್ರದಾಯಗಳನ್ನು ಗುರುತಿಸಬಹುದು. ಪ್ರತಿಯೊಂದು ಬುಡಕಟ್ಟು ಸಮೂಹ ತನ್ನದೇ ಆದ ಕಲೆ, ಸಾಹಿತ್ಯವನ್ನು ಹೊಂದಿರುತ್ತದೆ. ಒಂದೊಂದು ಸಮುದಾಯದಲ್ಲೂ ಅಸಂಖ್ಯಾತವಾದ ಕಲಾಕಾರರು ಕಂಡುಬರುತ್ತಾರೆ. ಪ್ರಸ್ತುತ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ, ಮ್ಯಾಸಬೇಡರಲ್ಲಿ ಕೋಲಾಟ, ಗಣೆ ಊದುವುದು, ಭಜನೆ, ನಾಟಕ, ಹಚ್ಚೆಹಾಕುವುದು, ರಂಗೋಲಿ, ವಾದ್ಯಗಳು, ಲಾವಣಿ, ಕ್ರೀಡೆಗಳು ಹೀಗೆ ಹತ್ತಾರು ಕಲೆಗಳು ಬುಡಕಟ್ಟು ಜೀವನದ ಅವಿಭಾಜ್ಯ ಅಂಗವಾಗಿ ಅವರ ಬದುಕಿನೊಂದಿಗೆ ನಿಕಟ ಸಂಬಂಧ ಹೊಂದಿವೆ. ಅವರ ಕಲೆಯು ಜನಪದ ಕಲೆಯಾಗಿದ್ದು ಬುಡಕಟ್ಟು ಸಂಸ್ಕೃತಿಗೆ ಪರಸ್ಪರ ಸಂಬಂಧವಿರುತ್ತದೆ

**ಅ) ಕೋಲಾಟ:**

ಕಾಡುಗೊಲ್ಲ ಮತ್ತು ಮ್ಯಾಸಬೇಡರ ಹಟ್ಟಿಗಳಲ್ಲಿ ಕೋಲಾಟ ಒಂದು ಪ್ರಮುಖ ಜನಪದ ಕಲೆ, ಬೇಸಿಗೆ ಕಾಲದಲ್ಲಿ ಹಬ್ಬ, ಉತ್ಸವ, ಜಾತ್ರೆ ಸಂದರ್ಭಗಳಲ್ಲಿ ಕೋಲಾಟದ ಕಲೆ ಬಹಳ ಗಮನ ಸೆಳೆಯುತ್ತದೆ. ಹಟ್ಟಿಗಳಲ್ಲಿ ಹಗಲಿಡೀ ದುಡಿದು ರಾತ್ರಿ ಸಮಯದಲ್ಲಿ ಬೆಳದಿಂಗಳಲ್ಲಿ ಕೋಲಾಟ ಆಡುತ್ತಾರೆ. ಕೋಲಾಟದಲ್ಲಿ ಒಬ್ಬ ಹಿರಿಯವ್ಯಕ್ತಿ ಕೋಲು ಪದ ಹೇಳುತ್ತಾನೆ ಅದು ಮುಮ್ಮೇಳ, ಹಿಮ್ಮೇಳದಲ್ಲಿ ಎಲ್ಲರೂ ಕೋಲು ಹಾಕುತ್ತಾ ಹಾಡು ಹೇಳುತ್ತಾ ಕುಣಿಯುತ್ತಾರೆ. ಕೋಲಾಟದಲ್ಲಿ ದೇವರ ಮೇಲಿನ ಹಾಡು, ಪ್ರೇಮ, ಹಾಸ್ಯಭರಿತ ಹಾಡುಗಳನ್ನು ಹಾಡುತ್ತಾರೆ. ಕೋಲಾಟದ ಹುಡುಗರು ಕಾಲಿಗೆ ಗೆಜ್ಜೆ, ನಿಕ್ಕರ್ ಮತ್ತು ಬನಿಯನ್ ಇಲ್ಲವೆ ಕಚ್ಚೆಪಂಚೆ ಹಾಕಿರುತ್ತಾರೆ. ಬುಡಕಟ್ಟು ಕಲೆಗಳಲ್ಲಿ ಹೆಚ್ಚಿನದಾಗಿ ಜನಪದ ಸಾಹಿತ್ಯವೇ ತುಂಬಿರುತ್ತದೆ. ಮೊಳಕಾಲ್ಮೂರು ತಾಲ್ಲೂಕಿನ ಕಂಪಳದೇವರ ಹಟ್ಟಿಯಲ್ಲಿ ಕೋಲಾಟ ಆಕರ್ಷಣೀಯ ಪ್ರದರ್ಶನವಿರುತ್ತದೆ. ದೊಡ್ಡವರು ಮತ್ತು ಮಕ್ಕಳು ಜಡೆಕೋಲು ಹಾಕುತ್ತಾರೆ. ಕೂಡ್ಲಿಗಿ ತಾಲ್ಲೂಕಿನ ಕರ್ನಾರಹಟ್ಟಿ, ಚಿನ್ನೋಬನ ಹಳ್ಳಿಯ ಪಾಪಣ್ಣ ಕೋಲು ಮೇಷ್ಟ್ರು, ಹೀಗೆ ಹಟ್ಟಿಗಳಲ್ಲಿ ಜನಪದ ಕಲೆಯಾಗಿ ಇಂದಿಗೂ ಸೊಗಡನ್ನು ಉಳಿಸಿಕೊಂಡಿದೆ.

ಕಾಡುಗೊಲ್ಲರಲ್ಲಿಯೂ ಯರಬಳ್ಳಿ, ರಂಗೇನಹಳ್ಳಿ, ಚಿತ್ರದುರ್ಗ ಇಸಾಮುದ್ರ ಗೊಲ್ಲರ ಹಟ್ಟಿ, ಚಳ್ಳಕೆರೆಯ ಕಾಟಪ್ಪನ ಹಟ್ಟಿ ಇವುಗಳಲ್ಲಿ ಬಹಳ ಪ್ರಸಿದ್ಧಿ ಪಡೆದ ಕಲೆಯಾಗಿದೆ. ಕೋಲು ಪದಗಳು ಮೌಖಿಕವಾಗಿದ್ದು ಲಿಖಿತ ರೂಪದಲ್ಲಿರುವುದಿಲ್ಲ. ಇತ್ತೀಚೆಗೆ 'ಕಾಡುಗೊಲ್ಲರ ಕೋಲಾಟದ ಪದಗಳು' ಎಂಬ ಶೀರ್ಷಿಕೆಯಡಿಯಲ್ಲಿ ಎನ್.ಮೋಹನ್‌ಕುಮಾರ್ ರವರು ಕೋಲಾಟದ ಪದಗಳನ್ನು ಸಂಗ್ರಹಿಸಿದ್ದಾರೆ. ಕೋಲು ಪದಗಳಲ್ಲಿ ದೇವರ ಮೇಲಿನ ಹಾಡುಗಳು, ತಮಾಷೆ ಹಾಡುಗಳನ್ನು ಹಾಡುತ್ತಾರೆ. ಕೋಲಿನ ಹಾಡುಗಳಲ್ಲಿ ಪಸಿಗೆ ಹಾಕುತ್ತಾ ಥೈಯ್ಯ, ದಿತ್ತಯ್ಯ ಎಂದು ಕೋಲು ಮುಗಿಸುತ್ತಾರೆ. ಪ್ರಮುಖವಾಗಿ ಈ ಎರಡು ಸಮುದಾಯಗಳಲ್ಲಿ ಕೋಲಾಟ ಪ್ರಮುಖ ನೃತ್ಯವಾಗಿದೆ.

**ಆ) ಭಜನೆ:**

ಕಾಡುಗೊಲ್ಲ ಮತ್ತು ಮ್ಯಾಸಬೇಡರ ಹಟ್ಟಿಗಳಲ್ಲಿ ಸಾಯಂಕಾಲದ ಸಂದರ್ಭದಲ್ಲಿ ದೈವಭಕ್ತಿಯ ಧ್ಯೋತಕವಾಗಿ ಭಜನೆ ಮಾಡುತ್ತಾರೆ. ಚಿಕ್ಕವರು, ದೊಡ್ಡವರು ಕೂಡ ದೇವಸ್ಥಾನಗಳಲ್ಲಿ ಕುಳಿತು ಭಜನೆ ಮಾಡುತ್ತಾರೆ. ಹಣೆಗೆ ವಿಭೂತಿ ಧರಿಸಿ ಕೊರಳಲ್ಲಿ ರುದ್ರಾಕ್ಷಿ ಧರಿಸಿ ದೇವರನ್ನು ಸ್ಮರಿಸುತ್ತಾ ಭಜನೆ ಮಾಡುವುದುಂಟು. ಅಲ್ಲಿ ನೆರೆದ ಎಲ್ಲರೂ ಸರಳ ಮಾಮೂಲಿ ಉಡುಪಿನಲ್ಲಿಯೇ ಇರುತ್ತಾರೆ. ಭಜನೆಗಳಲ್ಲಿ ಜಾನಪದ ಸೊಗಡು ಎದ್ದುಕಾಣುತ್ತದೆ. ಭಜನೆಗೆ ಬೇಕಾದ ಅತಿಮುಖ್ಯ ಪರಿಕರಗಳೆಂದರೆ ತಾಳ, ತಂಬೂರಿ, ಢಕ್ಕೆ, ಗೆಜ್ಜೆ, ಮೃದಂಗ ಬಳಸಿ ಹಾಡಿಗೆ ಸರಿಯಾಗಿ ಲಯಬದ್ಧತೆಯಿಂದ ಹಾಡುತ್ತಾರೆ. ಹಾಡುಗಳನ್ನು ತಾವೆ ರಚಿಸಿದ ದೇವರ ಹಾಡುಗಳನ್ನು ಹಾಡುತ್ತಾರೆ. ಅನಕ್ಷರಸ್ಥರಾದರೂ ಭಜನೆ ಹಾಡುಗಳನ್ನು ತಾಳಕ್ಕೆ ಹೊಂದಿಸಿ ಹಾಡುವುದರಲ್ಲಿ ತುಂಬಾ ನಿಪುಣರು. ಭಜನೆ ಹಾಡುಗಳಲ್ಲಿ ಆಧ್ಯಾತ್ಮಿಕ ತತ್ವಗಳು, ಹುಟ್ಟು ಸಾವು ಮೊದಲಾದ ಪಾರಮಾರ್ಥಿಕ ಅಂಶಗಳನ್ನು ಒಳಗೊಂಡಿರುತ್ತವೆ. ಭಜನೆ ಮಾಡುವಾಗ ಉಳಿದವರು ಸುತ್ತ ಕುಳಿತು ಕೇಳುತ್ತಾರೆ. ಭಜನಾಮಂಡಳಿಯವರು ಬೇರೆ ಬೇರೆ ಊರುಗಳಿಗೆ ಹೋಗಿ ಭಜನೆ ಮಾಡುತ್ತಾರೆ. ಭಜನೆಯನ್ನು ಕಾರ್ತೀಕ ಮಾಸ, ಶ್ರಾವಣಮಾಸ, ಯಾರದರೂ ಸತ್ತಾಗ ಶಿವನ ಬಿಟ್ಟಿಯೆಂದು ರಾತ್ರಿಯೆಲ್ಲಾ ಭಜನೆ ಮಾಡುತ್ತಾರೆ. ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಭಜನಾ ಮಂಡಳಿಗಳನ್ನು ಮಾಡಿಕೊಂಡಿದ್ದಾರೆ. ಶಿವರಾತ್ರಿಯ ಸಂದರ್ಭದಲ್ಲಿ ಭಜನೆಗೆ ಬಹಳ ಮಹತ್ವವಿರುತ್ತದೆ. ಶಿವಭಜನೆಗೆ ಹೆಚ್ಚು ಪ್ರಾಧಾನ್ಯತೆ ಕೊಡುತ್ತಾರೆ. ಭಜನೆಯ ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ 'ಜಯಾ ಜಯ ನಮಃ ಪಾರ್ವತಿ ಪತಿ ಹರಹರಮಹಾದೇವ' ಎಂದು ಹೇಳುತ್ತಾರೆ. ಮತ್ತು ಗೋವಿಂದ ನನ್ನು ನೆನೆಯುತ್ತಾ, ವೆಂಕಟರಮಣ 'ಗೋವಿಂದಾ ಗೋವಿಂದ' ಎನ್ನುತ್ತಾರೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರ ಹಟ್ಟಿಗಳಲ್ಲಿ ಪ್ರತ್ಯೇಕವಾಗಿ ಭಜನಾಮಂಡಳಿಗಳಿವೆ. ಯರಬಳ್ಳಿ, ದೊಡ್ಡ ಗೊಲ್ಲರಹಟ್ಟಿ, ಬ್ಯಾಡರಹಳ್ಳಿ, ರಂಗೇನಹಳ್ಳಿ, ಮಾರೇನಹಳ್ಳಿ, ನಾಯಕನಹಟ್ಟಿ, ಕಂಪಳ ದೇವರಹಟ್ಟಿ ಹೀಗೆ ಭಜನಾ ತಂಡಗಳು ಊರಿಂದ ಊರಿಗೂ ಸಹ ಹೋಗಿ ಭಜನೆ ಮಾಡುತ್ತಾರೆ.

**ಭಜನಾ ತಂಡದ ಮುಖ್ಯಸ್ಥ ಗಿರಿಸ್ವಾಮಿ, ಕೃಷ್ಣಮೂರ್ತಿ, ಮಾರೇನಹಳ್ಳಿ ತಂಡದವರು.**

ಮಾರೇನಹಳ್ಳಿ ಭಜನಾ ತಂಡದಲ್ಲಿ ಎರಡು ಕಣ್ಣಿಲ್ಲದ ಕುರುಡ ರವೀಂದ್ರ ತಬಲ ನುಡಿಸುತ್ತಾರೆ. ಭಜನೆಯಲ್ಲಿ ತಂಬೂರಿಯೂ ಸಹ ಮಹತ್ವದ್ದಾಗಿದ್ದು ತಂತಿಯನ್ನು ಮೀಟದರೆ ಓಂ ಎಂಬ ಶಬ್ಧ ಹೊರಬರುತ್ತದೆ. ಹೆಣ್ಣು ಮಕ್ಕಳೂ ಸಹ ಭಜನೆ ಹಾಡನ್ನು ಹಾಡುತ್ತಾರೆ. ದೇವರನ್ನು ಕುರಿತಾದ ಹಾಡುಗಳಲ್ಲಿ ನಾಯಕನಹಟ್ಟಿ ತಿಪ್ಪೇಸ್ವಾಮಿ, ಗೌರಸಂದ್ರಮಾರಮ್ಮ, ಕ್ಯಾತೇಲಿಂಗ, ದೇವರ ಮೇಲಿನ ಹಾಡುಗಳನ್ನು ಭಜನೆಯಲ್ಲಿ ಹಾಡುತ್ತಾರೆ. ಎನ್ನುವದನ್ನು ಸೈದ್ಧಾಂತಿಕ ನೆಲೆಗಟ್ಟಲ್ಲಿ ಪರಾಮರ್ಶಿಸಿದರೆ ಇದರಮೇಲೆ ಬಹುಪ್ರಕಾರದ ಅಧ್ಯಯನಗಳು ನಡೆದಿರುವುದರಿಂದ ಆಮೂಲಕ ಸಾಂಸ್ಕೃತಿಕ ಬದುಕನ್ನು ಭಜನೆಯ ಮೂಲಕ ಅರ್ಥಮಾಡಿಕೊಳ್ಳಬಹುದಾಗಿದೆ.

ಅಯ್ಯ ನಮೋ ತಿಪ್ಪಯ್ಯ ನಮೋ
ಅಯ್ಯ ನಮೋರುದ್ರಯ್ಯ ನಮೋ ॥ಪ॥
ಅಯ್ಯನ ಪಾದಕೆ ನಮೋ ನಮೋ
ತಿಪ್ಪಯ್ಯನ ಪಾದಕೆ ನಮೋನಮೋ
ಪ್ರೀತಿಲಿ ಎರಗುವ ನಮೋ ನಮೋ
ಭಕ್ತಿಲಿ ನಮಿಸುವೆ ನಮೋನಮೋ
ಅಯ್ಯಾ ಎಂದರೆ ದಿನವೆಲ್ಲಾ
ತಿಪ್ಪಯ್ಯಾ ಎಂದರೆ ಹಗಲೆಲ್ಲಾ
ಯಾತರ ಭೀತಿಯುನಮಗಿಲ್ಲ
ಯಾತರ ಭಯವೂನಮಗಿಲ್ಲ
ಅಯ್ಯನ ಪಾದಕೆ ನಮೋನಮೋ
ತಿಪ್ಪಯ್ಯನಪಾದಕೆ ನಮೋನಮೋ
ಅಯ್ಯನ ನಂಬಿದ ಸಜ್ಜನರು
ಚಿರಸುಖದೊಳು ನಲಿದಾಡುವರು
ನಿಜ ಸುಖದೊಳು ಲೋಲಾಡುವರು ॥ಪ॥
ಧರೆಯೊಳು ಹಟ್ಟಿಯ ಪುರವಾಸ
ದೊಡ್ಡಯತಿಗಳು ಕೂಡುವ ಕೈಲಾಸ
ನಿಜ ಶರಣರು ನೆಲೆಸಿಹ ಕೈಲಾಸ.
ಅಯ್ಯನಪಾದಕೆ ನಮೋನಮೋ
ತಿಪ್ಪಯ್ಯನಪಾದಕೆ ನಮೋನಮೋ. ॥ಪ॥

ಹೀಗೆ ದೇವರ ಮೇಲೆ ಹತ್ತಾರು ಹಾಡುಗಳನ್ನು ತಾವೇ ರಚಿಸಿ ಹಾಡುತ್ತಾರೆ. ನಾಯಕನಹಟ್ಟಿ ಬಳಿ ಚನ್ನಬಸಯ್ಯನ ಹಟ್ಟಿಯ ಡಿ.ಟಿ.ತಿಪ್ಪೇಸ್ವಾಮಿ ಇಂತಹ ಹಲವಾರು ಭಜನೆ ಹಾಡುಗಳನ್ನು

ತಾವೇ ರಚಿಸಿ ಕಲಿಸುತ್ತಾರೆ. ಹೀಗೆ ಭಜನೆ ಧಾರ್ಮಿಕ ಮತ್ತು ಆಧ್ಯಾತ್ಮಿಕತೆಯ ದ್ಯೋತಕವಾಗಿ ಇಂದು ಸಹ ಹಾಡಿನ ಮೂಲಕ ದೇವರನ್ನು ಸ್ತುತಿಸುವುದನ್ನು ಹಟ್ಟಿಗಳಲ್ಲಿ ಕಾಣಬಹುದಾಗಿದೆ.

**ಇ) ಮಣೇವು ಕುಣಿತ:**

ಜನಪದ ಕಲೆಗಳಲ್ಲಿ ಮಣೇವು ಕುಣಿತವೂ ಒಂದಾಗಿದೆ. ದೇವರ ಹಬ್ಬ, ಜಾತ್ರೆ ಉತ್ಸವಗಳಲ್ಲಿ ಮಣೇವು ಕುಣಿತ ಒಂದು ಧಾರ್ಮಿಕ ಆಚರಣೆಯಾಗಿದೆ. ದೇವರ ಕಾರ್ಯಕ್ರಮಗಳು ನಡೆಯುತ್ತಿರುವಾಗಲೇ ಮಧ್ಯ ಮಧ್ಯ ಮಣೇವು ಕುಣಿತದ ಸಂಪ್ರದಾಯ ಇಟ್ಟು ಕೊಂಡಿರುತ್ತಾರೆ. ದೇವರು ಗುಡಿಯಿಂದ ಹೊರಡುವಾಗ, ಗಂಗೆ ಪೂಜೆಮಾಡಿದಾಗ, ಹಟ್ಟಿಯ ಹುದಿಗೆ ದೇವರು ಬಂದಾಗ ಮುಂತಾದ ದೇವರ ಕಾರ್ಯಕ್ರಮಗಳಿದ್ದಾಗ ಮಣೇವು ಕುಣಿತ ಇರುತ್ತದೆ.

ಮಡಿವಾಳರು ತಂದ ಮಡಿಬಟ್ಟೆ ಇಲ್ಲವೆ ಕರಿ ಕಂಬಳಿಯನ್ನು ಮಡಿಚಿ ಪೂರ್ವ–ಪಶ್ಚಿಮಕ್ಕೆ ಮುಖಮಾಡಿ ಗದ್ದಿಗೆ ಹಾಸಿ ಅದರ ಮೇಲೆ ಬೆಲ್ಲ, ಬಾಳೆಹಣ್ಣು, ಮಂಡಕ್ಕಿ, ತೆಂಗಿನಕಾಯಿ ಚೂರುಗಳನ್ನು ಮಾಡಿ ಮೂರು ಇಲ್ಲವೆ ಐದು ಕುಪ್ಪೆಗಳನ್ನು ಗದ್ದಿಗೆ ಮೇಲೆ ಇಡುತ್ತಾರೆ. ಆಗ ದಾಸಯ್ಯಗಳು ಕಂಬಳಿ ಗದ್ದಿಗೆಯನ್ನು ಮೂರು ಸುತ್ತು ತಿರುಗಿ ಉರುಮೆಯ ವಾದ್ಯದ ಗತ್ತಿಗೆ ಕುಣಿಯುತ್ತಾ, ಕೈಯಲ್ಲಿ ಮುಟ್ಟದಂತೆ ಬಗ್ಗಿ ಬಾಯಲ್ಲಿ ತಿನ್ನುತ್ತಾರೆ, ಇದನ್ನೇ ಮಣೇವು ಕುಣಿತ ಎನ್ನುತ್ತಾರೆ.

ಕ್ಯಾತದೇವರ ಜಾತ್ರೆ, ಮಾರಮ್ಮನ ಜಾತ್ರೆ, ಕಂಪಳದೇವರ ಜಾತ್ರೆ ಇತ್ಯಾದಿ ಮಹತ್ವದ ಜಾತ್ರೆ ಉತ್ಸವದ ಸಂದರ್ಭದಲ್ಲಿ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಮಣೇವು ಆಡುತ್ತಾರೆ. ಗೊರವರು ಮತ್ತು ವೆಂಕಟರಮಣನ ಭಕ್ತರಲ್ಲಿಯೂ ಈ ಸಂಪ್ರದಾಯ ರೂಢಿಯಲ್ಲಿರುತ್ತದೆ. ಮಣೇವು ಕುಣಿತ ಎಲ್ಲರಿಗೂ ಬರುವುದಿಲ್ಲ. ಪೂಜಾರಿಗಳು, ದಾಸಯ್ಯಗಳು ಉರುಮೆಯ ವಾದ್ಯಕ್ಕೆ ತಕ್ಕಂತೆ ಕುಣಿಯುತ್ತಾ ಹೊಹೋ, ಹೊಹೋ ಎಂದು ಹೆಜ್ಜೆ ಹಾಕುತ್ತಾ ಕುಣಿಯುತ್ತಾರೆ.

**ಈ) ಗಣೆ ಊದುವುದು:**

ಕಾಡುಗೊಲ್ಲರು ಬಳಸುವ ಒಂದು ವಿಶಿಷ್ಟವಾದ್ಯ ಗಣೆ. ಕಾಡುಗೊಲ್ಲರಲ್ಲಿ ಜುಂಜಪ್ಪನ ಕಾವ್ಯವನ್ನು ಹಾಡುವವರಿಗೆ 'ಗಣೆ'ಯವರು ಎಂದು ಕರೆಯತ್ತಾರೆ. ಗಣೆ ಎಂದರೆ ಸುಮಾರು ನಾಲ್ಕು ಅಡಿ ಉದ್ದದ ಬಿದಿರಿನ'ಗಳು'. ಇದಕ್ಕೆ ತುದಿಯಲ್ಲಿ ಒಂದು ರಂಧ್ರವಿರುತ್ತದೆ. ಇನ್ನು ಐದು ಸಣ್ಣ ರಂಧ್ರಗಳನ್ನು ಕೊರೆದಿರುತ್ತಾರೆ. ಮೇಲೆ ಮತ್ತು ಕೆಳಗೆ ಭದ್ರವಾಗಿ ಮುಚ್ಚಿರುತ್ತಾರೆ ಐದು ಸಣ್ಣ ರಂಧ್ರಗಳ ಮೇಲೆ ಬೆರಳುಗಳನ್ನಿಟ್ಟು ಮೇಲಿನ ರಂಧ್ರದಲ್ಲಿ ತುಟಿಯಿಟ್ಟು ನುಡಿಸುತ್ತಾರೆ. ಇಂಪಾಗಿ ನಾದ ಹೊರಡುತ್ತದೆ. ಇದಕ್ಕೆ ಬಿದಿರು ಹೊಡೆದು ಹೋಗದಿರಲೆಂದು ಬೆಳ್ಳಿಯ ಇಲ್ಲವೆ ತಾಮ್ರದ ಒಂದಿಂಚಿನಷ್ಟು ಪಟ್ಟಿ ಕಟ್ಟಿರುತ್ತಾರೆ. ಗಣೆಯನ್ನು ಕೊಳಲಿನ ವಿಸ್ತೃತ ರೂಪ ಎನ್ನಬಹುದು. ಗಣೆ ಊದುವವರು ಪ್ರತಿಯೊಂದು ಹಟ್ಟಿ ಅಥವಾ ದೇವಸ್ಥಾನದ ಮುಂದೆ ಸುಶ್ರಾವ್ಯವಾಗಿ ಊದುತ್ತಾರೆ.

ಇವರು ಎತ್ತಪ್ಪ ಜುಂಜಪ್ಪನ ಸಾಹಸದ ಕಥೆಗಳನ್ನು ಗಣೆ ಊದುವುದರ ಮೂಲಕ ಹೇಳುತ್ತಾರೆ. ಗಣೆ ಊದುವವರು ಕರಿ ಕಂಬಳಿ ಹಾಸಿಕೊಂಡು ತಲೆಗೆ ರುಮಾಲು ಸುತ್ತಿಕೊಂಡು ಕುಳಿತು ಊದುತ್ತಾರೆ. ಯರಬಳ್ಳಿ ದೊಡ್ಡಗೊಲ್ಲರ ಹಟ್ಟಿಯ ದೇವಸ್ಥಾನದ ಮುಂದೆ ಗಣೆ ಊದುತ್ತಾರೆ ಗಣೆಗೂ ಕಾಡುಗೊಲ್ಲರ ಗೋಪಾಲಕ ಸಂಸ್ಕೃತಿಗೂ ತನ್ನದೆ ಆದ ಸಾಂಸ್ಕೃತಿಕ ಮಹತ್ವವಿದೆ. ದ್ವಾಪರ ಯುಗದ ಶ್ರೀಕೃಷ್ಣ ಕೊಳಲನ್ನು ಬಳಸುತ್ತಿದ್ದನೆಂಬ ಪ್ರತೀತಿ ಇದೆ.

**ಗಣೆಯನ್ನು ಪ್ರಧಾನವಾಗಿ ಮೂರುರೀತಿಯಾಗಿ ವಿಂಗಡಿಸಬಹುದು**

೧. ಕಥನ ಗಣೆ ೨. ಹೇಳಿಕೆ ಗಣೆ ೩. ಹೊತ್ತಾಡೋ ಗಣೆ.[೩]

೧. ಕಥನ ಗಣೆಯನ್ನು ಸಾಂಸ್ಕೃತಿಕ ವೀರರ ಹೋರಾಟದ ಕಥೆಗಳನ್ನು ಗಣೆ ಮೂಲಕ ಹಾಡುವುದು.

೨. ಹೇಳಿಕೆ ಗಣೆ ದೇವಸ್ಥಾನದಲ್ಲಿ ಪೂಜಾರಿಯು ಜನರ ಕಷ್ಟ ಸುಖಗಳನ್ನು ಮತ್ತು ಭವಿಷ್ಯವನ್ನು ನುಡಿಯುವಾಗ ಊದುತ್ತಾರೆ. ಇದನ್ನು ದೈವವಾಣಿ ಎಂದು ಭಕ್ತರು ನಂಬುತ್ತಾರೆ.

೩. ಹೊತ್ತಾಡೋ ಗಣೆ ಜುಂಜಪ್ಪನ ಸಂಪ್ರದಾಯದಲ್ಲಿ ಬರುವ ನಡಾವಳಿಯ ಕೆಲವು ಭಕ್ತರು ಗಣೆ ತುದಿಗೆ ನಾಗರ ಹೆಡೆಯೊಂದನ್ನು ಸಿಕ್ಕಿಸಿಕೊಂಡು, ನವಿಲು ಗರಿ ಸಿಕ್ಕಿಸಿಕೊಂಡು ಹೆಗಲ ಮೇಲೆ ಹೊತ್ತು ಊರಾಡೋ ಗಣೆಯಾಗಿ ಚರ ದೈವವನ್ನಾಗಿ ಮಾಡಿದ್ದಾರೆ.

ಒಟ್ಟಾರೆ 'ಗಣೆ' ಕಾಡುಗೊಲ್ಲರ ಸಂಸ್ಕೃತಿಯ ಜೀವಂತ ಪರಂಪರೆಯಾಗಿದೆ. ಇದಕ್ಕೆ ಇಂದೂ ಸಹ ವಿಶೇಷ ಮಹತ್ವವಿರುವುದು ಕಾಡುಗೊಲ್ಲರ ಹಟ್ಟಿಗಳಲ್ಲಿ ಕಂಡುಬರುತ್ತದೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಕೊಳಲಿಗೂ ಸಹ ಮಹತ್ವವಿದೆ. ಕೊಳಲು ಒಂದೂವರೆ ಅಡಿ ಉದ್ದವಿದ್ದು ಅದಕ್ಕೆ ರಂಧ್ರಗಳನ್ನು ಮಾಡಿ ಸ್ವರ ತುಂಬಿ ಹಾಡುತ್ತಾರೆ. ದನ ಕುರಿಗಳನ್ನು ಕಾಯಲು ಹೋದಾಗ ಬೇಸರ ಕಳೆದು ಕೊಳ್ಳಲು ಊದುತ್ತಾರೆ. ಕೊಳಲಿಗೂ, ಗಣೆಗೂ ವ್ಯತ್ಯಾಸವೆಂದರೆ ಕೊಳಲು ಚಿಕ್ಕದಾಗಿರುತ್ತದೆ,'ಗಣೆ' ಉದ್ದವಾಗಿರುತ್ತದೆ. ಕೊಳಲನ್ನು ಯಾರು ಬೇಕಾದರು ನುಡಿಸಬಹುದು ಆದರೆ ಗಣೆಯನ್ನು ಯಾರು ಬೇಕಾದರೂ ನುಡಿಸುವಂತಿಲ್ಲ. ಪೂಜಾರಿಯು ಗಣೆ ಊದುತ್ತಾನೆ. ಗಣೆಯನ್ನು ವಿಶೇಷ ಸಂದರ್ಭಗಳಲ್ಲಿ ಊದಲಾಗುತ್ತದೆ.

ಕೊಳಲನ್ನು ಗೋಪಾಲಕರು ಬಳಸುತ್ತಿದ್ದರೆಂಬುದಕ್ಕೆ 'ಗೋವಿನ ಹಾಡು' ಎಂಬ ಪದ್ಯ ರೂಪದ ಹಾಡಿನಲ್ಲಿ

ಗಂಗೆಬಾರೆ ಗೌರಿಬಾರೆ
ತುಂಗ ಭದ್ರೆ ನೀನು ಬಾರೆ
ಕಾಮಧೇನು ನೀನು ಬಾರೆ
ಪುಣ್ಯ ಕೋಟಿ ನೀನು ಬಾರೆಂದು
ಪ್ರೇಮದಲಿ ಗೊಲ್ಲ ಕರೆದನು.

ಕೊಳಲನೂದುತ್ತ ಗೊಲ್ಲಗೌಡನು
ಬಳಸಿನಿಂದ ತುರುಗಳನ್ನು
ಬಳಿಗೆ ಕರೆದನು ಹರುಷದಿ.

ಎಂಬ ಪದ್ಯ ಭಾಗದಲ್ಲಿ ಕೊಳಲು ಗೋಪಾಲಕ ಸಂಸ್ಕೃತಿಯಲ್ಲಿ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಊದುತ್ತಾರೆ. ಇದನ್ನು ಗ್ರಾಮ್ಯಭಾಷೆಯಲ್ಲಿ 'ಪಿಳಗೋವಿ', 'ಪಿಳ್ಳಂಗೋವಿ' ಎಂದು ಸಹ ಕರೆಯುತ್ತಾರೆ. ಪಿಳ್ಳಂಗೋವಿ ಎಂದರೆ ಗೋಪಾಲಕ ಬಳಸುವ ಚಿಕ್ಕಬಿದಿರಿನ 'ಕೊಳಲು' ಎಂದಾಗುತ್ತದೆ. ಮ್ಯಾಸಬೇಡರಲ್ಲಿ ಕೊಳಲನ್ನು ಹೆಚ್ಚಾಗಿ ಬಳಸುತ್ತಾರೆ.

**ಉ) ಹಚ್ಚೆ:**

ಕ್ಷೇತ್ರ ಅಧ್ಯಯನ ಸಂದರ್ಭದಲ್ಲಿ ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ಸಂಸ್ಕೃತಿಯಲ್ಲಿ ಹಚ್ಚೆ ಹಾಕಿಸಿಕೊಳ್ಳುವುದು ಪರಂಪರಾನುಗತವಾಗಿ ಬಂದ ಸಂಗತಿಯಾಗಿದೆ. ಹಚ್ಚೆ ಪ್ರಧಾನವಾಗಿ ಸ್ತ್ರೀಯರು ಹಾಕಿಸಿಕೊಳ್ಳುತ್ತಾರೆ ಹಚ್ಚೆಯನ್ನು ಸೋದರಮಾವ, ಬಂಧುಗಳು, ಸ್ನೇಹಿತರು, ತಮ್ಮಪ್ರೀತಿ ಕುರುಹು ಆಗಿ ಹಚ್ಚೆ ಹಾಕಿಸುತ್ತಾರೆ. ಇತ್ತೀಚೆಗೆ ಗಂಡಸರೂ ಸಹ ಪ್ರಿಂಟೆಡ್ ಹಚ್ಚೆ ಹಾಕಿಸಿಕೊಳ್ಳತ್ತಾರೆ. ಹಚ್ಚೆ ಹಾಕಿಸಿಕೊಂಡ ಮಹಿಳೆ ಮಾಡಿದ ಅಡುಗೆ 'ಹಳಸುವುದಿಲ್ಲ' ಹಚ್ಚೆ ಇಲ್ಲದವಳು ಮುದ್ದೆ ಸ್ವಾರ್ಯಾಗೆ ಕೈ ಇಡಬಾರದು ಎಂಬ ಮುಂತಾದ ನಂಬಿಕೆಯಿಂದ ಈ ಕಾಡುಗೊಲ್ಲ, ಮ್ಯಾಸಬೇಡರು ಹಚ್ಚೆಹಾಕಿಸಿ ಕೊಳ್ಳುತ್ತಾರೆ. ಹಚ್ಚೆಯನ್ನು ಕೈಯಮೇಲೆ ಗರುಡ, ಹಾವು, ತನ್ನ ಪ್ರೀತಿ ಪಾತ್ರರಾದ ಹೆಸರನ್ನು ಹಾಕಿಸಿಕೊಳ್ಳುತ್ತಾರೆ. ಹಣೆಯ ಮಧ್ಯಭಾಗದಲ್ಲಿ ಕುಂಕುಮ ಇಡುವ ಸ್ಥಾನಕ್ಕೆ ದುಂಡಾಗಿ ಹಾಕಿಸಿಕೊಳ್ಳುತ್ತಾರೆ. ಹಚ್ಚೆಯನ್ನು ಶೋಭಾಚಾರಕ್ಕೂ ಹಾಕಿಸಿಕೊಳ್ಳುತ್ತಾರೆ. ಪಿತ್ತ, ವಾತ, ಸಂದು ಇತ್ಯಾದಿ ರೋಗಗಳಿಗೆ ಚಿಕಿತ್ಸೆ ನೀಡುತ್ತದೆ ಎಂಬುದಾಗಿಯೂ ಹೇಳುತ್ತಾರೆ. ಹಚ್ಚೆ ಹಾಕುವ ಹೆಂಗಸರು ಹಾಡುಹೇಳುತ್ತಾ ಅರಿಶಿಣ ಮತ್ತು ಹಚ್ಚೆಸೊಪ್ಪನ್ನು ಅರೆದು ರಸವಾಗುವಂತೆ ಮಾಡಿ ದೀಪದಲ್ಲಿ ಕಾಸಿ ಅದನ್ನು ಸೂಜಿಯಿಂದ ಅದ್ದಿ ಚುಚ್ಚುತ್ತಾರೆ. ಚುಚ್ಚುವಾಗ ಹಾಕಿಸಿಕೊಳ್ಳುವವರು ನೋವು ಮರೆಯಲೆಂದು ಅವರದೇ ಭಾಷೆಯಲ್ಲಿ ಹಾಡನ್ನು ಹೇಳುತ್ತಾ ಚುಚ್ಚುತ್ತಾರೆ, ಸಾಮಾನ್ಯವಾಗಿ ಹಚ್ಚೆ ಹಾಕುವವರು ಕೊರವಂಜಿಗಳು ಮತ್ತು ಕಿಳ್ಳೇಕ್ಯಾತರ ಹೆಂಗಸರು ಹಾಕುತ್ತಾರೆ. ಅವರು ಮೂಲತಃ ಆಂಧ್ರ ಪ್ರದೇಶದಿಂದ ವಲಸೆ ಬಂದವರು ಎಂಬುದಾಗಿ ಎಸ್.ಕೆ.ಸಣ್ಣೋಬಯ್ಯರವರು ತಮ್ಮ ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳು ಪ್ರಬಂಧದಲ್ಲಿ ಹೇಳುತ್ತಾರೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ತಾವು ಆರಾಧಿಸುವ ದೇವರ ಸಂಪ್ರದಾಯಗಳನ್ನು ಆಧರಿಸಿ ಪ್ರಾಣಿ, ಪಕ್ಷಿ, ಹೂವು, ಬಳ್ಳಿ, ತ್ರಿಶೂಲ, ಬಾಣ, ಬಿಲ್ಲು ಬುಟ್ಟಿ, ನಂದಿ, ಹಣತೆ, ಇತ್ಯಾದಿ ಚಿತ್ರಗಳ ರೂಪದ ಚಿತ್ರವನ್ನು ಹಚ್ಚೆ ಮೂಲಕ ಹಾಕಿಸಿಕೊಳ್ಳುತ್ತಾರೆ. ಕೆಲವು ಕಡೆ ಹಚ್ಚೆ ಸೊಪ್ಪಿಗೆ ಬದಲಾಗಿ, ಅಗಸೆಯ ಸೊಪ್ಪು, ತುಂಬೆ ಸೊಪ್ಪು ಮುಂತಾದ ಸೊಪ್ಪುಗಳನ್ನು ಬಳಸಿ ಹಚ್ಚೆ ರಸ ತಯಾರಿಸಿ ಒಂದು ಚಿಕ್ಕ ಕುಡಿಕೆಯಲ್ಲಿ ಹಾಕಿ ಬಟ್ಟೆ ಮುಚ್ಚಿ ದಾರಕಟ್ಟುತ್ತಾರೆ. ಒಮ್ಮೆ ಹಚ್ಚೆ

ಹಾಕಿಸಿಕೊಂಡರೆ ಅದು ಹೋಗುವುದೇ ಇಲ್ಲ ಪ್ರಸ್ತುತ ದಿನಗಳಲ್ಲಿ ಹಚ್ಚೆ ಸಂಸ್ಕೃತಿ ಕಡಿಮೆಯಾಗುತ್ತಿದೆ. ಏಕೆಂದರೆ ಒಬ್ಬರಿಗೆ ಚುಚ್ಚಿದ ಸೂಜಿ ಹಲವಾರು ಜನರಿಗೆ ಚುಚ್ಚುವುದರಿಂದ ಎಚ್.ಐ.ವಿ ಯಂತಹ ಏಡ್ಸ್ ರೋಗ ಉಂಟಾಗುತ್ತದೆ ಎಂಬ ನಂಬಿಕೆ ಆಧುನಿಕ ದಿನಗಳಲ್ಲಿ ಪ್ರಚಾರದಲ್ಲಿರುವುದರಿಂದ ಹಚ್ಚೆಹಾಕಿಸಿಕೊಳ್ಳುವವರ ಸಂಖ್ಯೆ ಕಡಿಮೆಯಾಗುತ್ತಿದ್ದು ಪ್ರಿಂಟೆಂಡ್ ಹಚ್ಚೆ(ಟ್ಯಾಟ್ಯೂಸ್) ಹಾಕಿಸುವುದು ಕಂಡುಬರುತ್ತಿದೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಅಲ್ಪಸ್ವಲ್ಪ ಉಳಿದುಕೊಂಡಿರುವುದು ಕಾಣಬರುತ್ತದೆ.

**ಊ) ರಂಗೋಲಿ:**

ಹಿರಿಯೂರು ತಾಲ್ಲೂಕಿನ ಯರಬಳ್ಳಿ ದೊಡ್ಡಗೊಲ್ಲರಹಟ್ಟಿ, ರಂಗೇನಹಳ್ಳಿ, ಚಿತ್ರದುರ್ಗ ಜಿಲ್ಲೆಯ ಜಂಪಯ್ಯನಹಟ್ಟಿ, ಕಳ್ಳಿಹಟ್ಟಿ, ಮ್ಯಾಸಬೇಡರ ಗುರುಸಂಸ್ಥಾನವಾದ ಕಂಪಳದೇವರಹಟ್ಟಿ, ಚಳ್ಳಕೆರೆ ತಾಲ್ಲೂಕಿನ ನನ್ನಿವಾಳ ಹಟ್ಟಿಗಳಲ್ಲಿ ರಂಗೋಲಿ ಬಿಡಿಸುವ ಸಂಪ್ರದಾಯವಿರುವುದು. ಬುಡಕಟ್ಟುಗಳಲ್ಲಿ ರಂಗೋಲಿಯು ಒಂದು ಜನಪದ ಕಲೆ. ಅರವತ್ನಾಲ್ಕು ಕಲೆಗಳಲ್ಲಿ ರಂಗೋಲಿ ಕಲೆಯೂ ಒಂದು. ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಸರಳವಾಗಿ ಚುಕ್ಕೆಗಳ ಮೂಲಕ ಗೆರೆ ಎಳೆದು ಕೂಡಿಸುವುದು. ರಂಗೋಲಿ ಎಂದರೆ ಮನೆಯ ಒಳಗೆ ಮತ್ತು ಹೊರಗೆ ಹಾಕುವ ಕಲಾತ್ಮಕ ಗೆರೆಗಳು. ಈ ಎರಡೂ ಸಮುದಾಯಗಳ ಗುಡಿಸಲುಗಳಲ್ಲಿ ಇತ್ತೀಚಿನ ಮಾಳಿಗೆ ಮನೆಗಳಲ್ಲಿ, ತೊಲೆಗಳಮೇಲೆ, ಗೋಡೆಗಳಮೇಲೆ, ಮೇಜು ಕಟ್ಟಿನ ಮೇಲೆ, ರಂಗೋಲಿ ಹಾಕಿರುವುದನ್ನು ಕಾಣಬಹುದಾಗಿದೆ. ಗುಡಿಸಲುಗಳ ಬಾಗಿಲಿನ ಪಕ್ಕದ ಗೋಡೆಯಮೇಲೆ ಸುಣ್ಣದಿಂದ ದೀಪದ ರಂಗೋಲಿ, ಕಮಲದ ಹೂವಿನ ಚಿತ್ರದ ರಂಗೋಲಿಯನ್ನು ಕಾಣಬಹುದು. ಹೆಣ್ಣು ಮಕ್ಕಳು ಸೂರ್ಯೋದಯಕ್ಕೂ ಮುಂಚೆ ಎದ್ದು ಬಾಗಿಲಿಗೆ ಕಾರಣಿ ಇಕ್ಕಿ ಆಕಳ ಸಗಣಿಯಿಂದ ಅಂಗಳ ಸಾರಿಸಿರಂಗೋಲಿ ಇಡುತ್ತಾರೆ. ಈ ಎರಡೂ ಜನಾಂಗದಲ್ಲೂ ರಂಗೋಲಿ ಕಲೆಯು ತುಂಬ ಸರಳವಾಗಿರುತ್ತದೆ. ದೇವಸ್ಥಾನಗಳ ಮುಂದೆಯೂ ಕಸ ಗುಡಿಸಿ ನೀರು ಹಾಕಿ ರಂಗೋಲಿ ಇಡುತ್ತಾರೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರು ಮದುವೆಯ ಸಂದರ್ಭದಲ್ಲಿ ಕಂಬಳಿ ಹಾಸಿ ಅಕ್ಕಿ ಇಲ್ಲವೆ ಜೋಳದಿಂದ ರಂಗೋಲಿ ಬರೆಯುತ್ತಾರೆ. ದಿನ ನಿತ್ಯವೂ ರಂಗೋಲಿ ಹಿಟ್ಟಿನಿಂದ ಅಂದರೆ ಕಲ್ಲನ್ನು ಪುಡಿಮಾಡಿಟ್ಟುಕೊಂಡು ರಂಗೋಲಿ ಬಿಡುತ್ತಿದ್ದರು. ಇತ್ತೀಚಿಗೆ ಅಕ್ಕಿಹಿಟ್ಟು ಇಲ್ಲವೆ ಕೊಳವೆ ಬಾವಿಗಳು ಹಾಕಿದಾಗ ಅದನ್ನು ಜರಡಿ ಹಿಡಿದು ಅದರ ಪುಡಿಯನ್ನು ರಂಗೋಲಿ ಹಾಕಲು ಬಳಸುತ್ತಾರೆ. ರಂಗೋಲಿ ಬಿಡಿಸಿ ಅದರೊಳಗೆ ಕುಂಕುಮ, ಹರಿಶಿಣ ಇತ್ಯಾದಿ ಬಣ್ಣ ತುಂಬುತ್ತಾರೆ. ರಂಗೋಲಿಯು ಮನೆಯ ಪ್ರವೇಶ ಮಾಡುವ ಮೊದಲೆ ಮನೆ ಅಲಂಕಾರವನ್ನು ಹೆಚ್ಚಿಸುವ ಕಲಾತ್ಮಕವಾದ ಕಲೆಯಾಗಿದೆ. ರಂಗೋಲಿಯಲ್ಲಿ ಕೃಷ್ಣನ ತೊಟ್ಟಿಲು ಹಾಕುವುದು, ವಿವಿಧ ವಿನ್ಯಾಸದ ಬಳ್ಳಿಗಳು, ಪಟ್ಟಿಗಳನ್ನು ಹಾಕುತ್ತಾರೆ. ಮನೆಯ ಅಂಗಳಕ್ಕೆ ಸಗಣಿ ಸಾರಿಸಿ ರಂಗೋಲಿ ಹಾಕುವುದರಿಂದ

ಕ್ರಿಮಿ ಕೀಟಗಳು ಬರುವುದಿಲ್ಲ ಎಂಬುದು ಅವರ ನಂಬಿಕೆ. ಇತ್ತೀಚೆಗೆ ಕೃತಕವಾದ ರಂಗೋಲಿ ಪುಡಿ, ರಂಗೋಲಿಯ ಅಚ್ಚುಗಳು ಸಿಗುವುದರಿಂದ ಇತ್ತೀಚಿನ ದಿನಗಳಲ್ಲಿ ರಂಗೋಲಿಯ ಬಗ್ಗೆ ಆಸಕ್ತಿ ಕಡಿಮೆಯಾಗುತ್ತಿದೆ. ಆದರೂ ಹಟ್ಟಿಗಳ ವಸತಿ ನೆಲೆಗಳು ಇರುವಲ್ಲಿ ಇಂದಿಗೂ ರಂಗೋಲಿಯನ್ನು ಉಳಿಸಿಕೊಂಡು ಬಂದಿದ್ದಾರೆ.

**ಎ) ವಾದ್ಯಗಳು:**

ಕಾಡುಗೊಲ್ಲ ಮತ್ತು ಮ್ಯಾಸಬೇಡರು ವೈವಿಧ್ಯಮಯ ಜನಪದ ವಾದ್ಯಗಳನ್ನು ಬಳಸುತ್ತಾರೆ. ಈ ವಾದ್ಯಗಳಿಗೆ ಧಾರ್ಮಿಕ ಮತ್ತು ಸಾಂಸ್ಕೃತಿಕ ಮಹತ್ವವಿದೆ ಈ ವಾದ್ಯಗಳನ್ನು ಹಬ್ಬ, ಜಾತ್ರೆ, ಉತ್ಸವ, ಧಾರ್ಮಿಕ ಸಮಾರಂಭಗಳಲ್ಲಿ ಬಳಸುತ್ತಾರೆ. ಉರುಮೆ, ದಗಮ, ಕಹಳೆ, ಢಕ್ಕೆ, ತಾಳ. ತಂಬೂರಿ, ತಮಟೆ, ಡೊಳ್ಳು, ಶಂಖ, ಜಾಗಟೆ, ಕೊಳಲು, ಮೃದಂಗ, ಗಣೆ ಬಳಸುತ್ತಾರೆ. ಸಮಯ ಸಂದರ್ಭಕ್ಕನುಗುಣವಾಗಿ ಈ ವಾದ್ಯಗಳನ್ನು ಬಳಸುತ್ತಾರೆ. ಒಂದೊಂದು ವಾದ್ಯಗಳನ್ನು ನಿರ್ಮಿಸುವಾಗ ಅವರದೇ ಆದ ಕೆಲವು ನಿಯಮಗಳನ್ನು ಪಾಲಿಸುತ್ತಾರೆ.

**ಎ) ದಗಮು:**

ಹಲವು ವಾದ್ಯಗಳಲ್ಲಿ ದಗಮು ಹಟ್ಟಿ ಸಂಸ್ಕೃತಿಯಲ್ಲಿ ಪ್ರಮುಖವಾದುದು. ಒಂದು ವಿಶಿಷ್ಟವಾದ ನಗಾರಿಯಾಕಾರದ ಚರ್ಮವಾದ್ಯ. ಈ ವಾದ್ಯಕ್ಕೆ ಅಗತ್ಯವಾದ ಚರ್ಮವನ್ನು ಕೊಂಬು, ಕಿವಿ, ಬಾಲ ಕತ್ತರಿಸದೇ ಇರುವ ಗೊಡ್ಡು ಆಕಳು, ಸೂಲುಬಿಡೆಯದ ಆಕಳದ ಚರ್ಮ, ಸುಲಿದು ಹದ ಮಾಡಿ ಬಳಸುತ್ತಾರೆ, ಸುಮಾರು ಮೂರು ಅಡಿ ಅಗಲ ಬಾಯಿಯ ಎರಡುವರೆಯಿಂದ ಮೂರು ಅಡಿ ಎತ್ತರವಿರುವ ಕಬ್ಬಿಣದ ಕಡಾಯಿಗೆ ಚರ್ಮಹಾಕಿ ಬಿಗಿದಿರುತ್ತಾರೆ. ಈ ಚರ್ಮದ ಮೇಲೆ ಮಧ್ಯೆ ವೃತ್ತಾಕಾರವಾಗಿ ಕತ್ತರಿಸಿದ ಮತ್ತೊಂದು ಪದರದ ಚರ್ಮವನ್ನು ಬಿಗಿದು ಈ ಎರಡು ಚರ್ಮಗಳ ಅಂಚಿನಿಂದ ದಾರದಂತಹ ಬಾರು ಹೊರಡಿಸಿ ಬಿಗಿದಿರುತ್ತಾರೆ. ದಗಮಿನ ತಳ ಚಪ್ಪಟೆಯಾಗಿರುತ್ತದೆ. ದಗಮನ್ನು ಬಡಿಯಲು ಅದೇ ಚರ್ಮದಿಂದ ಪಾದರಕ್ಷೆಯಗಾತ್ರದ ಚರ್ಮದ ಪಟ್ಟಿಗಳನ್ನು ಉಪಯೋಗಿಸುತ್ತಾರೆ. ಹೊಸದಾಗಿ ತಯಾರಿಸಿದ ವಾದ್ಯವನ್ನು ಗಂಗಾಪೂಜೆಗೆ ತೆಗೆದುಕೊಂಡು ಹೋಗಿ ಪೂಜೆ ಮಾಡಿ ದೇವಸ್ಥಾನದ ಗುಡಿಗೌಡರಿಗೆ ಒಪ್ಪಿಸುತ್ತಾರೆ. ಗುಡಿಗೌಡರು ಶುದ್ಧಿಮಾಡಿಕೊಂಡು ತಂದು ದೇವರಿಗೆ ಒಪ್ಪಿಸುತ್ತಾರೆ. ದಗಮುವಾದ್ಯವನ್ನು ಕಾಡುಗೊಲ್ಲರು ಕಾಟಮಲಿಂಗ, ಚಿತ್ರಲಿಂಗ ಮುಂತಾದ ದೇವರ ಉತ್ಸವಗಳಲ್ಲಿ ಹಬ್ಬ ಮತ್ತು ಜಾತ್ರೆಗಳಲ್ಲಿ ಬಳಸುತ್ತಾರೆ. ಮ್ಯಾಸಬೇಡರ ಹನ್ನೆರಡು ಪೆಟ್ಟಿಗೆ ದೇವರುಗಳಲ್ಲಿ ಈ ವಾದ್ಯವಿರುತ್ತದೆ. ಪೂಜೆ ಮತ್ತು ಜಾತ್ರೆ ಸಂದರ್ಭಗಳಲ್ಲಿ ಬಡಿಯುತ್ತಾರೆ.

ಮೊಳಕಾಲ್ಮುರು ತಾಲ್ಲೂಕು ಕಂಪಳ ದೇವರಹಟ್ಟಿಯಲ್ಲಿ ಕಂಪಳ ದೇವರ ದಗಮು ಇದೆ. ದೀವಳಿಗೆ, ಜಾತ್ರೆ, ಪೂಜಾ ಸಂದರ್ಭಗಳಲ್ಲಿ ಬಡಿಯುತ್ತಾರೆ. ದಗಮುವನ್ನು ಎಲ್ಲರು ಬಡಿಯುವುದಿಲ್ಲ ಅದನ್ನು ಒಂದು ಕೋಮಿನವರು ಬಡಿಯುವ ಅಧಿಕಾರದ ಹಕ್ಕನ್ನು ಹೊಂದಿರುತ್ತಾರೆ. ನಗರಿ

ಪೂಜಾರಿಜೋರಯ್ಯ ದಗಮು ಬಡಿಯುವವರು. ದಗಮು ಬಾರಿಸುವ ಸಂದರ್ಭವೆಂದರೆ ದೇವರು ಹೊರಡುವ ಸಂದರ್ಭ, ದೇವರೆತ್ತುಗಳು ಹರಿಯುವ ಸಂದರ್ಭದಲ್ಲಿ ಪೂಜೆ ನಡೆಯುವ ಸಂದರ್ಭದಲ್ಲಿ ಸೂಚನೆಯಾಗಿ ದಗಮು ಬಡಿಯುತ್ತಾರೆ.

**ಐ) ಉರುಮೆ:**

ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಜಾತ್ರೆ, ಹಬ್ಬಗಳಲ್ಲಿ, ದೀವಳಿಗೆಯಲ್ಲಿ ಉರುಮೆ ವಾದ್ಯವು ಬಹುಮುಖ್ಯವಾದುದು. ಇದು ವಂಶಪಾರಂಪರ್ಯವಾಗಿ ಮುಂದುವರಿದುಕೊಂಡು ಬಂದಿದೆ. ಇದನ್ನು ಮಾಡುವಾಗ ದೇವರ ಅಪ್ಪಣೆ ಪಡೆದು ಜೀನುಗಾರರ ಬಳಿಯೆ ಮಾಡಿಸುತ್ತಾರೆ. ಉರುಮೆಯನ್ನು ಹಿತ್ತಾಳೆ, ಕಂಚು, ಇಲ್ಲವೆ ಕಟ್ಟಿಗೆಯಿಂದ ಸುಮಾರು ಹದಿನೈದು ಅಂಗುಲ ವ್ಯಾಸವಿರುವ ಇಪ್ಪತ್ತು ಅಂಗುಲ ಉದ್ದವಿರುವ ಎರಡೂ ಕಡೆ ಬಾಯಿಯಿರುವ ಕೊಳಗವನ್ನು ನಿರ್ಮಿಸಿ ಅದಕ್ಕೆ ಹದ ಮಾಡಿದ ಮೇಕೆ ಚರ್ಮವನ್ನು ಬಿಗಿದು ಕಟ್ಟುತ್ತಾರೆ. ಹರಳು ಬೀಜದಿಂದ ತಯಾರಿಸಿದ ಕಪ್ಪು ಬಣ್ಣವನ್ನು ಉರುಮೆಯ ಎಡಭಾಗಕ್ಕೆ ಹಚ್ಚಿ ನೆರಳಲ್ಲಿ ಒಣ್ಣಗಿಸುತ್ತಾರೆ. ಉರುಮೆ ಬಡಿಯಲು ಒಂದು ಕಡ್ಡಿ ಹಾಗು ಒಂದು ಜಿಗಿರು ಕಡ್ಡಿಯನ್ನು ಬಳಸುತ್ತಾರೆ. ಉರುಮೆಯನ್ನು ಹಗ್ಗದಿಂದ ಕಟ್ಟಿಕೊರಳಿಗೆ ನೇತುಹಾಕಿಕೊಳ್ಳುತ್ತಾರೆ. ಉರುಮೆ ಬಡಿಯುವ ವ್ಯಕ್ತಿಯು ತಲೆಗೆ ರುಮಾಲು ಸುತ್ತಿ ಬಿಳಿ ಬಟ್ಟೆಗಳನ್ನು ಧರಿಸಿ ಬರಿಗಾಲಿನಲ್ಲಿರುತ್ತಾರೆ. ಉರುಮೆಯ ಒಂದು ಕಡೆ ನಯವಾಗಿ ಉಜ್ಜುತ್ತಾ, ಒಂದು ಕಡೆ ಕಡ್ಡಿಯಿಂದ ಬಡಿಯುತ್ತಾನೆ. ಒಂದು ತೆರನಾದ ವಿಲಕ್ಷಣ ನಾದವು ಬರುತ್ತದೆ. ದೇವರ ಉತ್ಸವಮೂರ್ತಿ ಹೊರಡುವ ಸಂದರ್ಭದಲ್ಲಿ, ದೇವರು ಹೊಳೆಗೆ, ಗಂಗಾಪೂಜೆಗೆ ಹೊರಡುವ ಸಂದರ್ಭದಲ್ಲಿ, ಉರುಮೆ ಬಡಿಯುತ್ತಾರೆ. ಉರುಮೆ ಬಡಿಯುವ ಕಲಾವಿದರಿಗೆ ಪ್ರತಿಫಲವಾಗಿ ಹಟ್ಟಿಯ ಎಲ್ಲರೂ ಸೇರಿ ದವಸ, ಧಾನ್ಯ ಒಂದಷ್ಟುಹಣ ಕೊಡುತ್ತಾರೆ. ಕಾಡುಗೊಲ್ಲ ಬುಡಕಟ್ಟಿನವರು ಕ್ಯಾತೆದೇವರ ಜಾತ್ರೆ, ಗುಗ್ಗರಿಹಬ್ಬ, ಚಿತ್ರದೇವರ ಜಾತ್ರೆ ಇತ್ಯಾದಿ ಸಂದರ್ಭಗಲ್ಲಿ ದೇವರನ್ನು ಹೊಳೆಗೆ ಕರೆದೊಯ್ಯುವಾಗ ಉರುಮೆ ವಾದ್ಯ ಮುಖ್ಯವಾಗಿರುತ್ತದೆ. ಮ್ಯಾಸನಾಯಕರು ಹಟ್ಟಿ ದೇವತೆಗಳ ಜಾತ್ರೆಗಳಲ್ಲಿ, ಗೌರಸಂದ್ರಮಾರಮ್ಮ, ಕಂಪಳ ದೇವರ ಜಾತ್ರೆ, ಉತ್ಸವಗಳಲ್ಲಿ ಉರುಮೆ ಬಡಿಯುತ್ತಾರೆ. ಚಿತ್ರದುರ್ಗ, ಚಳ್ಳಕೆರೆ, ಮೊಳಕಾಲ್ಮೂರು, ಹೊಳಲ್ಕೆರೆ, ತಾಲ್ಲೂಕುಗಳಲ್ಲಿ ಉರುಮೆ ಬಡಿಯುವ ಕಲಾವಿದರು ಕಂಡುಬರುತ್ತಾರೆ. ದುರ್ಗಿಮುರ್ಗಿಯವರು ಈ ವಾದ್ಯದಿಂದಲೇ ಗುರುತಿಸಲ್ಪಡುತ್ತಾರೆ.

**ಒ) ಥಕ್ಕೆ:**

ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ವ್ಯಕ್ತವಾಗುವ ಅಂಶವೆಂದರೆ ಥಕ್ಕೆಯು ಭಜನೆ ಮಾಡುವ ಸಂದರ್ಭದಲ್ಲಿ ಬಳಸುವ ವಾದ್ಯ, ಭಜನೆಗೆ ಮೆರಗು ಕೊಡುವಂತಹ ತಾಳ ಮತ್ತು ಲಯಬದ್ಧವಾಗಿ ನುಡಿಸುವರು, ಥಕ್ಕೆಗೆ ಉಡದ ಚರ್ಮವನ್ನು ಕಟ್ಟಿರುತ್ತಾರೆ ಬಡಿಯುವಾಗ ಹರಳು ಉರಿದಂತೆ ಶಬ್ಧ ಬರುತ್ತದೆ. ಭಜನೆ ಹಾಡಿಗೆ ತಕ್ಕಹಾಗೆ ಥಕ್ಕೆ ಬಡಿಯುತ್ತಾರೆ. ಬಡಿಯುವಾಗ ಸ್ವಲ್ಪ ವ್ಯತ್ಯಾಸವಾದರೂ ತಾಳ, ಲಯ ತಪ್ಪಿಹೋಗುತ್ತದೆ.

೭) ಶಂಖ ಜಾಗಟೆ:

ಶಂಖ ಜಾಗಟೆಯು ಹೆಚ್ಚಿನದಾಗಿ ಕಾಡುಗೊಲ್ಲರಲ್ಲಿ ಬಳಸುತ್ತಾರೆ. ಜುಂಜಪ್ಪನ ಆರಾಧಕರು ಶಂಖ ಊದಿ ಜಾಗಟೆ ಬಾರಿಸುತ್ತಾರೆ. ಇದರಿಂದ ಓಂ ಎಂಬ ಝೇಂಕಾರ ಬರುತ್ತದೆ. ಜುಂಜಪ್ಪನ ಆರಾಧಕರು ಗರಡುಗಂಬ ಹಿಡಿದು, ಶಂಖ, ಜಾಗಟೆ ಹಿಡಿದು ಊರಿಂದ ಊರಿಗೆ ಹೋಗಿ ಬರುತ್ತಾರೆ. ಕಾಡುಗೊಲ್ಲರು ಮತ್ತು ಬೇರೆ ಜನಾಂಗದವರೂ ಸಹ ಹಣಕೊಡುತ್ತಾರೆ. ದಾಸಯ್ಯನವರು ಅವರಿಗೆ ಪ್ರತಿಫಲವಾಗಿ ಜುಂಜಪ್ಪಕಾಣಿಕೆ ಮುಟ್ಟಿದೆ ಅವರಿಗೆ ಮತ್ತು ಅವರ ದನಕರುಗಳಿಗೆ ಒಳ್ಳೆಯದಾಗಲಿ ಎಂದು ಹರಸುತ್ತಾ ಮುಂದೆ ಹೋಗುತ್ತಾರೆ. ಮ್ಯಾಸಬೇಡರಲ್ಲಿ ಸಾಮಾಜಿಕ ಶ್ರೇಣಿ ವ್ಯವಸ್ಥೆಯಲ್ಲಿ 'ದಾಸಯ್ಯ'ಗಳು ಪ್ರಮುಖ ಪಾತ್ರ ವಹಿಸುತ್ತಾರೆ. ಹಿರಿಯರ ಹಬ್ಬಗಳಲ್ಲಿ, ದೇವರ ಉತ್ಸವಗಳಲ್ಲಿ, ಹಬ್ಬಹರಿದಿನಗಳಲ್ಲಿ, ಪೂಜಾ ಸಂದರ್ಭದಲ್ಲಿ ಶಂಖಊದಿ, ಜಾಗಟೆಬಾರಿಸಿ ಗೋವಿಂದ ಗೋವಿಂದ ಎನ್ನುತ್ತಾರೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರು ವಾದ್ಯಗಳೊಂದಿಗೆ ಧಾರ್ಮಿಕ ಸಮಾರಂಭಗಳಲ್ಲಿ, ಜಾತ್ರೆಗಳಲ್ಲಿ, ಪೂಜಾಕಾರ್ಯಗಳಲ್ಲಿ, ಸಮಯ ಸಂದರ್ಭಕ್ಕನುಸಾರವಾಗಿ ಬಳಸುತ್ತಾರೆ. ಇನ್ನೂ ಕಹಳೆ ಊದುವವರು, ಡೊಳ್ಳು ಬಡಿಯುವವರು, ಜಾತ್ರೆಗಳಲ್ಲಿ ಭಾಗವಹಿಸುತ್ತಾರೆ. ಈ ಎರಡೂ ಸಮುದಾಯಗಳಲ್ಲಿ ಹೆಸರಾಂತ ಕಲಾವಿದರನ್ನು ಗುರುತಿಸಬಹುದು, ಕೋಲಾಟ, ಭಜನೆ, ನಾಟಕ, ಮಣೇವುಕುಣಿತ, ಜನಪದ, ಹಾಡುಗಾರಿಕೆ, ಗಾವುಸಿಗಿಯುವುದು, ಹೀಗೆ ಯಾವುದೇ ಹಟ್ಟಿಗೆ ಹೋದರೂ ಒಬ್ಬರಾದರೂ ಕಲಾವಿದರು ಸಿಗುತ್ತಾರೆ.

**೮) ಕರಕುಶಲ ಕಲೆಗಳು :** ಕರಕುಶಲ ಕಲೆಗಳು ದೈನಂದಿನ ಬದುಕಿನ ಉಪಯೋಗಿ ನೆಲೆಯಿಂದ ಹುಟ್ಟಿಕೊಂಡ ವಸ್ತುಗಳು ಮಾನವನ ಕರ ಕೌಶಲ್ಯ ಸೃಜನಶೀಲವಾದುದು.ಅದರ ಜೊತೆಗೆ ಮನವನ ಕಲ್ಪನೆ ಪ್ರಯೋಗಶೀಲತೆ ಮತ್ತು ಕೌಶಲ್ಯವೂ ಸೇರಿ ತನಗೆ, ತನ್ನ ಕುಟುಂಬಕ್ಕೆ, ಜನಾಂಗಕ್ಕೆ ಉಪಯೋಗಕ್ಕೆ ಬೇಕಾದ ವಸ್ತು, ಉಪಕರಣ, ಪರಿಕರ, ಸಾಧನ, ಸಲಕರಣೆಗಳನ್ನು ತಯಾರಿಸಿಕೊಂಡ, ಹಾಗೆ ತಯಾರಿಸಿದ ವಸ್ತುಗಳು ತಮ್ಮ ಬದುಕಿನ ಅವಶ್ಯಕ ಭಾಗವಾದವು.ಆದಿಕಾಲದ ಮಾನವನು ಬದುಕಿಗೆ ಅಗತ್ಯವೆನಿಸಿದ ವಸ್ತುಗಲನ್ನು ತಾನೇ ಸೃಷ್ಟಿಸಿಕೊಳ್ಳುತ್ತಿದ್ದ. ಆ ಪ್ರಕ್ರಿಯೆಯು ಸಮುದಾಯದ ಒಂದು ತಿಳುವಳಿಕೆಯಾಗಿ ತಲೆ ಮಾರಿನಿಂದ ತಲೆಮಾರಿಗೆ ಉಳಿದುಕೊಂಡುಬಂದಿದೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಬಲೆ ಹೆಣೆಯುವುದು, ಕೃಷಿ ಉಪಕರಣಗಳನ್ನು ತಯಾರಿಸಿಕೊಳ್ಳುವುದು, ಬೇಟೆಗೆ ಸಂಬಂದಿಸಿದ ಉಪಕರಣಗಳನ್ನು ತಯಾರಿಸಿಕೊಳ್ಳುತ್ತಾರೆ. ಕುರಿಗಳನ್ನು ಕೂಡಲು ಹಗ್ಗದಿಂದ ರೊಪ್ಪವನ್ನು ಆಧುನಿಕವಾಗಿ ತಾವೇ ನಿರ್ಮಿಸಿಕೊಳ್ಳುತ್ತಾರೆ. ಇತ್ತೀಚಿಗೆ ಆಧುನಿಕ ತಂತ್ರಜ್ಞಾನದಿಂದಾಗಿ ಲಭಿಸುವ ಹೊಸ ಹೊಸ ಉಪಕರಣಗಳ ಬಳಕೆಯಿಂದ ಕರಕುಶಲ ಕಲೆ ಕಡಿಮೆಯಾಗುತ್ತಿದೆ.

೯೦) ಕ್ರೀಡೆಗಳು:

ಮನುಷ್ಯನಿಗೆ ಗಾಳಿ, ನಿದ್ರೆ, ನೀರು, ಆಹಾರ ಎಷ್ಟು ಅವಶ್ಯಕವೋ ಮನೋರಂಜನೆ, ಕ್ರೀಡೆ, ಕಲೆ, ಇವುಗಳೂ ಸಹ ಮನಸ್ಸಿನ ಆಹ್ಲಾದಕತೆ ಅಥವಾ ಮಾನಸಿಕ ಆರೋಗ್ಯಕೆ ಅಷ್ಟೇ ಮುಖ್ಯವಾದವು.

"Sound mind is sound body" ಎನ್ನುವಂತೆ ಶಾರೀರಿಕ ಮತ್ತು ಮನಸ್ಸಿಕ ದೃಢತೆಗೆ ಆಹ್ಲಾದಕತೆಗೆ ಕ್ರೀಡೆ ಮತ್ತು ಕಲೆ ತುಂಬಾ ಮಹತ್ವವಾದವು. ಪ್ರಸ್ತುತ ಅಧ್ಯಯನದಲ್ಲಿ ಹಟ್ಟಿಗಳಲ್ಲಿ ಮಕ್ಕಳು, ಯುವಕ ವೃದ್ಧರು ತಮ್ಮದೇ ಆದ ಕ್ರೀಡೆ ಮತ್ತು ಕಲೆಗಳಲ್ಲಿ ಅಭಿರುಚಿಹೊಂದಿರುತ್ತಾರೆ. ಪರಂಪರಾನುಗತವಾಗಿ ಅತಂಹ ಕ್ರೀಡೆ ಮತ್ತು ಕಲೆಗಳು ಇಂದಿಗೂ ಜೀವಂತವಾಗಿ ಹಟ್ಟಿಗಳ ಮನೋರಂಜನೆಗೆ ಸಾಕ್ಷೀಭೂತವಾಗಿವೆ. ಮನೋರಂಜನೆ ಮತ್ತು ದೈಹಿಕ, ಮಾನಸಿಕ, ಬೌದ್ಧಿಕತೆಗೆ ಉಲ್ಲಾಸ ನೀಡುವ ಆಟವು ಮಾನವನಿಗೆ ಸಹಜ ಪ್ರವೃತ್ತಿಯಿಂದ ಬಂದದ್ದಾಗಿದೆ. ಶೈಶಾವಸ್ಥೆಯ ನಂತರ ಮಾನವನಲ್ಲಿ ಸಹಜವಾಗಿ ಆಟದ ಗೀಳು ಪ್ರಾರಂಭವಾಗುತ್ತದೆ. ಆಟದ ಉದ್ದೇಶ ಕೇವಲ ಸಂತೋಷ ಮತ್ತು ಮನೋರಂಜನೆಯಾಗಿರುತ್ತದೆ. ಕ್ರೀಡೆಗಳು ಹಟ್ಟಿಯ ಜನರಿಗೆ ಮನೋರಂಜನೆಯ ಜೊತೆಗೆ ಬುದ್ಧಿವಂತಿಕೆಯನ್ನು ಬೆಳೆಸುತ್ತವೆ. ಹುಲಿಕಟ್ಟೆ ಆಟ, ಗೊಟಗೋಣಿ(ಪತ್ತಮಣೆ), ಮಕ್ಕಳ ಆಟಗಳಲ್ಲಿ ಕುಂಟಾಪಿಲ್ಲಿ, ಚಿನ್ನಿದಾಂಡು, ಮರಕೋತಿಯಾಟ, ರಾಮಪಟ್ಟಿ, ಕಬಡ್ಡಿಯಾಟ ಇಂತಹ ಕ್ರೀಡೆಗಳು ಹಟ್ಟಿಗಳಲ್ಲಿ ತಾಳ್ಮೆ, ಸಾಮರಸ್ಯತೆ, ಮನಸ್ಸಿಗೆ ಉಲ್ಲಾಸ ಕೊಡುವುದು ಆರೋಗ್ಯಕರ ಬೆಳವಣಿಗೆಗೆ ಹಟ್ಟಿಯ ಕ್ರೀಡೆಗಳು ಆರೋಗ್ಯಪೂರ್ಣವಾದವು.

**ಹುಲಿಕಟ್ಟೆ ಆಟ:**

ಸಾಂಪ್ರದಾಯಿಕ ಕ್ರೀಡೆಗಳಲ್ಲಿ ಹುಲಿಕಟ್ಟೆ ಆಟ ಹಟ್ಟಿ ಸಂಸ್ಕೃತಿಯಲ್ಲಿ ಇನ್ನೂ ಜೀವಂತವಾಗಿದೆ. ಅಧ್ಯಯನ ಕ್ಷೇತ್ರದಲ್ಲಿ ಹುಲಿಕಟ್ಟೆ ಆಟದಲ್ಲಿ ಮೂರು ಹುಲಿ ದೊಡ್ಡಕಾಳು. ಹದಿಮೂರು ಸಣ್ಣ ಕಾಳು ಆಧುನಿಕವಾಗಿ ಈಗ ಆಡುವ ಚೆಸ್ ಆಟವಿದ್ದಹಾಗೆ. ತ್ರಿಭುಜಾಕೃತಿಯ ಹದಿನೈದು ಮನೆ ಬರೆದು ಆಟ ಆಡುತ್ತಾರೆ. ಈ ಆಟದಲ್ಲಿ ಮೂರು ಹುಲಿಕಾಳನ್ನು ಸಣ್ಣಕಾಳು ತಡೆಗಟ್ಟಬೇಕು. ಸಣ್ಣ ಕಾಳಿನ ಪಕ್ಕ ಒಂದು ಮನೆ ಖಾಲಿಯಾದರೆ ಹುಲಿಕಾಳು ಸಣ್ಣಕಾಳನ್ನು ಕಡಿದು ಎತ್ತಿಕೊಳ್ಳುತ್ತಾರೆ. ಮೂರು ಹುಲಿಕಾಳನ್ನು ಅಡ್ಡಕಟ್ಟಿ ನಿಲ್ಲಿಸಬೇಕು. ಕಡಿಯದ ಹಾಗೆ ನೋಡಿಕೊಳ್ಳಬೇಕು. ಇದರಲ್ಲಿ ಚತುರತೆ, ಬುದ್ಧಿವಂತಿಕೆಯನ್ನು ಬಳಸಿ ಆಟವಾಡಬೇಕು. ಹುಲಿಕಾಳನ್ನು ನಿಲ್ಲಿಸಿದರೆ ಆಟ ಮುಕ್ತಾಯವಾದ ಹಾಗೆ ಇಲ್ಲವಾದರೆ ಹುಲಿಕಾಳು ಎಲ್ಲ ಸಣ್ಣಕಾಳನ್ನು ಕಡಿದು ಎತ್ತಿಕೊಳ್ಳುತ್ತಾರೆ, ಅಲ್ಲಿಗೆ ಆಟ ಮುಗಿದ ಹಾಗೆ. ಹೀಗೆ ಹುಲಿಕಟ್ಟೆ ಆಟವು ಬುದ್ಧಿಶಕ್ತಿಯನ್ನು ಹೆಚ್ಚಿಸುತ್ತದೆ.

**ಗೊಟ ಗೋಣಿ ಆಟ(ಪತ್ತಮಣೆ):**

ಸಾಂಪ್ರದಾಯಕವಾಗಿ ರೂಢಿಸಿಕೊಂಡು ಬಂದಿರುವ ಆಟವೆಂದರೆ ಗೊಟಗೋಣಿ ಆಟ. ಇದನ್ನು ಪ್ರಮುಖವಾಗಿ ಸ್ತ್ರೀಯರು ಆಡುವ ಆಟಗಳಲ್ಲಿ ಗೊಟಗೋಣಿಯು ಒಂದು. ಇದು ಆಯತಾಕಾರದ ಎದುರು, ಬದುರಾಗಿ ಏಳು ಕುಣಿಗಳನ್ನು ಹೊಂದಿದ್ದು ಪ್ರತಿ ಕುಣಿಯಲ್ಲಿ ನಾಲ್ಕು ಹುಣಸೆ ಬೀಜಗಳನ್ನು ಹಾಕಿರುತ್ತಾರೆ. ಒಂದು ಕುಣಿಯಲ್ಲಿನವು ಎತ್ತಿಕೊಂಡು ಪ್ರತಿಯೊಂದಕ್ಕೂ ಒಂದೊಂದು ಹುಣುಸೆ ಪಿಕ್ಕ ಹಾಕುತ್ತಾರೆ. ಖಾಲಿಯಾದಾಗ ಪಕ್ಕದ ಕುಣಿಯಲ್ಲಿನ ಹುಣಸೆಬೀಜ ಎತ್ತಿಕೊಂಡು ಕುಣಿಗೆ ಒಂದಂದಂತೆ ಹಾಕಿ ಖಾಲಿಯಾಗಿ ಪಕ್ಕದ ಕುಣಿ ಖಾಲಿಯಿದ್ದರೆ ಅದನ್ನು

ಬೆರಳಿನಿಂದ ಸವರಿ ಪಕ್ಕದ ಕುಣಿಯಲ್ಲಿನ ಕಾಳನ್ನು ಎತ್ತಿಕೊಳ್ಳುತ್ತಾರೆ. ಯಾವ ಕುಣಿಯಲ್ಲಿ ನಾಲ್ಕುಕಾಳು ಇರುತ್ತವೆ ಅದನ್ನು ಪತ್ತ ಎಂದು ಎತ್ತಿಕೊಳ್ಳುತ್ತಾರೆ. ನಂತರ ಎದುರಿರುವವರು ಆಡುತ್ತಾರೆ, ಹೀಗೆ ಪತ್ತಮಣಿ ಸ್ತ್ರೀಯರು ವಿರಾಮ ಸಂದರ್ಭದಲ್ಲಿ ಬೇಸರ ಕಳೆದುಕೊಳ್ಳಲು ಆಡುವ ಆಟವಾಗಿದೆ.

**ಚೌಕಾ ಭಾರ:**

ಚೌಕಭಾರವು ಸ್ತ್ರೀಯರು ಆಡುವ ಆಟಗಳಲ್ಲೊಂದು ಇದರಲ್ಲಿ ಅಡ್ಡಲಾಗಿ ಐದು ಮನೆ, ಉದ್ದವಾಗಿ ಐದು ಮನೆ, ಬರೆಯುತ್ತಾರೆ. ಇದರ ಮಧ್ಯದಲ್ಲಿ ಕಟ್ಟೆ ಎಂದು (ಇಂಟು) ಮಾರ್ಕಿನ ತರಹ ಹಾಕಿರುತ್ತಾರೆ. ಮಧ್ಯದಲ್ಲಿ ಹಣ್ಣುಮಾಡುವ ಕಟ್ಟೆ ಇರುತ್ತದೆ. ಇದೂ ಸಹ ಇಬ್ಬರು ಆಡುವ ಆಟವಾಗಿದ್ದು ನಾಲ್ಕು ಕವಡೆಗಳು ಮತ್ತು ಏಂಟು ಕಾಳುಗಳು ಬೇಕು. ಕವಡೆ ಹಾಕಿದಾಗಿ ಕವಡೆ ಮೇಲ್ಮುಖವಾಗಿ ಬಿದ್ದವನ್ನು ಲೆಕ್ಕಹಾಕಿ ಮನೆಗಳಿಗೆ ಇಡಲಾಗುತ್ತದೆ. ಇಬ್ಬರು ಒಬ್ಬರ ನಂತರ ಒಬ್ಬರು ಕವಡೆ ಹಾಕಿ ಕಾಳು ಇಟ್ಟು ಎದುರಾಳಿಯ ಕಾಳನ್ನು ಕಡಿಯುತ್ತಾರೆ. ಅದಕ್ಕೆ ಕಡತ ಸಿಗುವುದು ಎನ್ನುತ್ತಾರೆ. ಕಡತ ಸಿಕ್ಕನಂತರ ಒಳಗಿನ ಕಟ್ಟೆಯೊಳಗೆ ಸೇರಿಸಿ ಹಣ್ಣುಮಾಡುತ್ತಾರೆ. ಹಣ್ಣಾದ ಕಾಳಿನವರು ಗೆದ್ದಹಾಗೆ ಇಲ್ಲಿಗೆ ಆಟಮುಗಿಯುತ್ತದೆ.

ಮಕ್ಕಳ ಆಟದಲ್ಲಿ ಕುಂಟಾಪಿಲ್ಲಿ, ಚಿನ್ನಿದಾಂಡು ಆಡುತ್ತಾರೆ. ಕುಂಟಾಪಿಲ್ಲಿ ಹೆಣ್ಣು ಹುಡುಗರು ಆಡಿದರೆ ಚಿನ್ನಿದಾಂಡು ಗಂಡು ಹುಡುಗರು ಆಡುವ ಆಟವಾಗಿದೆ ಇದರಲ್ಲಿ ಚಿನ್ನಿ, ಕಾಮ(ದಾಂಡು), ಎಂಬ ಎರಡು ಪರಿಕರವನ್ನು ಬಳಸುತ್ತಾರೆ. ಹಟ್ಟಿಗಳ ವಯಸ್ಕರ ಆಟಗಳಲ್ಲಿ ರಾಮಪಟ್ಟಿ ಆಟವೂ ಒಂದಾಗಿದೆ. ಕಾಯಿಗುದ್ದುವುದು-ಹಟ್ಟಿಗಳ ಹಬ್ಬ, ಜಾತ್ರೆಗಳಲ್ಲಿ ಬಂದ ನೆಂಟರಿಷ್ಟರಿಗೆ ತಮಾಷೆಯಾಗಿ ಪಂಥ ಕಟ್ಟುತ್ತಾರೆ ಕೈಯಿಂದ ಒಂದೇ ಬಾರಿಗೆ ಕಾಯಿ ತುಂಡಾಗುವಂತೆ ಗುದ್ದುವುದು. ಹೀಗೆ ಹಟ್ಟಿ ಕ್ರೀಡೆಗಳು ಮನಸ್ಸಿಗೆ ಆಹ್ಲಾದವನ್ನು ಕೊಡುತ್ತವೆ ಮತ್ತು ಚಿಂತನೆ ಮಾಡಲು ಹಚ್ಚುತ್ತವೆ, ಈಗೀಗ ಹಟ್ಟಿ ಕ್ರೀಡೆಗಳಲ್ಲಿ ಆಸಕ್ತಿ ಕಡಿಮೆಯಾಗುತ್ತಿದೆ. ಟಿ.ವಿ. ಮೊಬೈಲ್, ಕ್ರಿಕೆಟ್, ವಾಲಿಬಾಲ್ ಇತ್ಯಾದಿಗಳು ಹಟ್ಟಿಯ ಕ್ರೀಡೆಗಳಲ್ಲಿ ಯುವ ಪೀಳಿಗೆ ಆಸಕ್ತಿ ತೋರುತ್ತಿಲ್ಲದಿರುವುದು ಕಂಡುಬರುತ್ತಿದೆ.

ಚಿತ್ರದುರ್ಗ ಹಟ್ಟಿ ಸಂಸ್ಕೃತಿಯಲ್ಲಿ ಸಮುದಾಯದ ಆಟಗಳು ಶಾಶ್ವತವಾಗಿ ನೆಲೆಸಿವೆಯೆ? ನೆಲೆಸಿದ್ದರೆ ಯಾವ ಹಟ್ಟಿಯಲ್ಲಿ ನೆಲೆಸಿವೆ? ಯಾವ ಪ್ರಮಾಣದಲ್ಲಿ ನೆಲೆಸಿವೆ ಎನ್ನುವುದನ್ನು ಪ್ರಸ್ತುತ ಅಧ್ಯಯನ ಕೇಂದ್ರಿಕರಿಸಿದೆ. ಗೊಲ್ಲರ ಹಟ್ಟಿಗಳಲ್ಲಿ ಅನೇಕ ಪ್ರಕಾರದ ಕ್ರೀಡೆಗಳಿದ್ದರೂ ಅದರಲ್ಲಿ ಪ್ರಮುಖವಾಗಿ ಕಬಡ್ಡಿ ಆಟ ರೂಢಿಯಲ್ಲಿರುವುದರ ಪ್ರಮಾಣ ಶೇಕಡ ೫೮.೫೫ ರಷ್ಟು ಕಂಡುಬಂದರೆ. ಮ್ಯಾಸಬೇಡರ ಹಟ್ಟಿಗಳಲ್ಲಿ ಶೇಕಡ ೯೦.೯೦ ರಷ್ಟು ಪ್ರಮಾಣ ಕಂಡುಬರುತ್ತದೆ.

ನಮ್ಮ ಕಲೆಗಳು ಹುಟ್ಟಿಕೊಂಡ ಸಂದರ್ಭ ಅವು ಬೆಳೆದು ಬಂದ ಪರಂಪರೆ ಹಾಗೂ ಈಗ ಪ್ರದರ್ಶನವಾಗುತ್ತಿರುವ ರೀತಿಗಳನ್ನು ಗಮನಿಸಿದರೆ ಸಾಕಷ್ಟು ಸ್ಥಿತ್ಯಂತರಗಳಾಗಿವೆ. ಇಂದು ಸಮಾಜ ಬದಲಾಗಿದೆ. ಹಳ್ಳಿ ಮತ್ತು ನಗರಗಳ ನಡುವಿನ ಅಂತರ್ಗತ ಘರ್ಷಣೆ ಸೂಕ್ಷ್ಮವಾಗಿ ನಡೆಯುತ್ತಿದೆ.

ಈ ಹಿನ್ನೆಲೆಯಲ್ಲಿ ಸಿನಿಮಾ, ಟಿ.ವಿ, ವೀಡಿಯೋ, ಆಡಿಯೋ ಮುಂತಾದ ಆಧುನಿಕ ಉಪಕರಣಗಳು ಒಟ್ಟಾರೆ ಜನರ ಮನಸ್ಸು ಮತ್ತು ಮನೋಧರ್ಮದ ಮೇಲೆ ಭಾರಿ ಪ್ರಭಾವ ಬೀರುತ್ತಿವೆ. ಆದರೂ ಜನಪದ ಕಲೆಗಳು ಸಂಪೂರ್ಣವಾಗಿ ನಶಿಸಿಲ್ಲ, ಪ್ರದೇಶ, ಕಾಲ, ಸಂದರ್ಭಕ್ಕನುಸಾರವಾಗಿ ಆಚರಣೆಗಳೊಂದಿಗೆ ಉಳಿಸಿಕೊಂಡು ಬಂದಿರುವುದು ಕಂಡುಬರುತ್ತದೆ.

**ಆ) ಜನಪದ ರಂಗಭೂಮಿ :**

ಜನಪದ ರಂಗ ಭೂಮಿ ಒಂದು ಆರಾಧನೆಯ ಹಲವು ಕ್ರಿಯೆಗಳೇ ಮುಂದೆ ನಾಟ್ಯಾಂಶವನ್ನು ಪಡೆದ ಇತಿಹಾಸ ಈ ಕಲೆಗಳಿಗಿದೆ. ದೈವೀ ಸಂಬಂಧದ ಕಲೆಗಳೇ ಮುಂದೆ ರಂಗರೂಪ ಪಡೆಯುತ್ತಾ ಬಂದಿದ್ದು ಕುತೂಹಲಕರವಾದುದು. ಬಯಲು ಸೀಮೆಯಲ್ಲಿ ಸಂಸ್ಕೃತೀಕರಣಗೊಂಡ ಯಕ್ಷಗಾನ ಪ್ರಚಲಿತದಲ್ಲಿಲ್ಲದಿದ್ದರೂ ಬಯಲಾಟ, ಪೌರಾಣಿಕ, ಸಾಮಾಜಿಕ ನಾಟಕಗಳು ಇದ್ದವು. ಬಯಲು ಸೀಮೆಯ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ರಂಗಸಜ್ಜಿಕೆ ತಯಾರಿಸಿ ಪ್ರದರ್ಶಿಸುತ್ತಿರುವುದು ಇಂದಿಗೂ ಗಮನಿಸಬಹುದು.

**ನಾಟಕ:**

ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳ ನಾಟಕ ಸಾಹಿತ್ಯವನ್ನು ಸಮಾಜ ಶಾಸ್ತ್ರೀಯ ಆಯಾಮದಲ್ಲಿ ವಿಶ್ಲೇಷಿಸಿದರೆ ಪ್ರದರ್ಶನ ಕಲೆಗಳಲ್ಲಿ ನಾಟಕ ಬಹುಮುಖ್ಯವಾದುದು. ಕಾಡುಗೊಲ್ಲ ಮತ್ತು ಮ್ಯಾಸಬೇಡರ ಹಟ್ಟಿಗಳ ಹವ್ಯಾಸಿ ಕಲೆಯೆಂದರೆ ನಾಟಕ. ಸುಗ್ಗಿಯ ಕಾಲ ಮುಗಿದ ಮೇಲೆ ಫೆಬ್ರವರಿ ತಿಂಗಳಿನಿಂದ ಮೇ ತಿಂಗಳಿನವರೆಗೆ ಯುಗಾದಿ ಹಬ್ಬದಲ್ಲಿ, ಕಾರ್ತಿಕ, ದಸರಾ ಹಬ್ಬಗಳಲ್ಲಿ, ಜಾತ್ರೆಯ ಸಂದರ್ಭಗಳಲ್ಲಿ ನಾಟಕ ಆಡುತ್ತಾರೆ. ನಾಟಕಗಳಲ್ಲಿ ಸಾಮಾಜಿಕ ನಾಟಕಗಳು, ಪೌರಾಣಿಕನಾಟಕ, ಬಯಲುನಾಟಕಗಳು, ಎಂಬುದಾಗಿ ವಿಂಗಡಿಸುತ್ತಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಈ ಮೂರು ಪ್ರಕಾರದ ನಾಟಕಗಳನ್ನು ಆಡುತ್ತಾರೆ. ಪೌರಾಣಿಕ ನಾಟಕಗಳಿಗೆ ಹೆಚ್ಚು ಮಹತ್ವಕೊಡುತ್ತಾರೆ. ಅದೂ ಚಿತ್ರದುರ್ಗ ಜಿಲ್ಲೆಯಲ್ಲಿ ಬಯಲಾಟಗಳು ಹೆಚ್ಚು ಪ್ರಸಿದ್ಧಿ. ಕಗಿಬಂಟನ ಕಾಳಗ, ಕುರುಕ್ಷೇತ್ರ, ಕೃಷ್ಣ ಪಾರಿಜಾತ, ಶಬರಿಶಂಕರ ವಿಲಾಸ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಇಲಕಲ್ಲು ಮಹಂತೇಶಸ್ವಾಮಿ ನಾಟಕ, ನುಂಕೆಮಲೆ ಸಿದ್ದೇಶ್ವರ, ಹೀಗೆ ಅವರು ನಾಟಕಕ್ಕೆ ಒಬ್ಬ ಮೇಷ್ಟ್ರನ್ನು ಆರಿಸಿಕೊಂಡು ಹಾರ್ಮೋನಿಯಂನ್ನು ನುಡಿಸಲು ಹುಡುಕಿಕೊಳ್ಳುತ್ತಾರೆ. ಬಹುಕಾಲ ಅಭ್ಯಾಸ ಮಾಡಿ ನಾಟಕ ಪ್ರದರ್ಶನ ಮಾಡುತ್ತಾರೆ. ನಾಟಕಕ್ಕೆ ತಗುಲುವ ಖರ್ಚನ್ನು ಪಾತ್ರದಾರರೆ ಹಂಚಿಕೆ ಮಾಡಿಕೊಳ್ಳುತ್ತಾರೆ.

ಸಾಮಾಜಿಕ ನಾಟಕಗಳಲ್ಲಿ ಸರ್ಪಸಾಮ್ರಾಜ್ಯ, ಅತ್ತಿಗೆಯ ಕಣ್ಣೀರು, ಬಸ್‌ಕಂಡಕ್ಟರ್, ಅಣ್ಣತಂಗಿ, ಕಲಿಯುಗದ ಶಕುನಿ ಮೊದಲಾದ ಸಾಮಾಜಿಕ ನಾಟಕಗಳನ್ನು ಪ್ರದರ್ಶನ ಮಾಡುತ್ತಾರೆ. ಸಾಮಾಜಿಕ ನಾಟಕಗಳನ್ನು ಆಡಿಸುವ ಕಂಪಳದೇವರಹಟ್ಟಿಯ ನಾಟಕ ಮೇಷ್ಟು ನಾಗರಾಜ, ಬೈಯಣ್ಣ, ಗುರುಮೂರ್ತಿ, ಇತ್ಯಾದಿಯಾಗಿ ನಾಟಕ ಮೇಷ್ಟ್ರಗಳೂ ಸಹ ಇದ್ದಾರೆ. ನಾಟಕಕ್ಕೆ ತಬಲವಾದನವೂ ಮುಖ್ಯವಾದುದು. ಬಯಲು ನಾಟಕಗಳಲ್ಲಿ ಹಿಂದಿನ ದಿನಗಳಲ್ಲಿ ಗಂಡಸರೇ ಹೆಂಗಸರ ಪಾತ್ರ

ಮಾಡುತ್ತಿದ್ದರು ಈಗೀಗ ಚಿತ್ರದುರ್ಗ, ದಾವಣಗೆರೆ, ಹೊಸಪೇಟೆ, ಮರಿಯಮ್ಮನಹಳ್ಳಿ, ಕೂಡ್ಲಿಗಿಯಿಂದ ಹೆಂಗಸರನ್ನು ಹೆಣ್ಣು ಮಕ್ಕಳ ಪಾತ್ರಕ್ಕೆ ಕರೆತರುತ್ತಾರೆ. ನಾಟಕ ಆಡುವ ಹಟ್ಟಿಯ ಜನರು ಅನಕ್ಷರಸ್ಥರಾದರೂ ಮೇಷ್ಟ್ರು ಹೇಳಿಕೊಟ್ಟ ಹಾಡನ್ನು, ಮಾತನ್ನು ಕಂಠಪಾಠಮಾಡಿ ಅಭ್ಯಾಸ ಮಾಡಿ, ಸಂಭಾಷಣೆಯನ್ನು, ಹಾಡನ್ನು, ಚಾಚೂ ತಪ್ಪದೆ ಲಯಬದ್ಧವಾಗಿ ಹಾಡುತ್ತಾರೆ. ನಾಟಕ ಬರೀ ಮನರಂಜನೆಕಲೆಯಲ್ಲ. ಸಮಾಜಕ್ಕೆ ಒಳ್ಳೆಯ ಸಂದೇಶವನ್ನು ಕೊಡುತ್ತದೆ. ನಾಟಕಕ್ಕೆ ಬೇಕಾದ ಪರಿಕರಗಳೆಂದರೆ(ವಾದ್ಯಗಳು) ಹಾರ್ಮೋನಿಯಂ, ತಬಲ, ಮೃದಂಗ ಬೇಕಾಗುತ್ತದೆ. ಅವುಗಳನ್ನು ನುಡಿಸುವ ಮೇಷ್ಟ್ರುಗಳನ್ನು ಹುಡುಕಿ ಬಹುಕಾಲ ಅಭ್ಯಾಸ ಮಾಡಿ ನಾಟಕ ಪ್ರದರ್ಶನ ಮಾಡುತ್ತಾರೆ. ನಾಟಕಕಲೆ ಗ್ರಾಮ್ಯರಿಗೆ, ಉತ್ತಮ ಮನೋರಂಜನಾ ಕಲೆಯಾಗಿದ್ದು ಇತ್ತೀಚೆಗೆ ಸಿನಿಮಾ, ಟಿ.ವಿ, ಧಾರವಾಹಿಗಳು ಬಂದ ನಂತರದಲ್ಲಿ ನಾಟಕ ಕಲೆ ಕಡಿಮೆಯಾಗುತ್ತಿರುವುದು ದುರದೃಷ್ಟಕರ ಸಂಗತಿಯಾಗಿದೆ. ಯುವ ಪೀಳಿಗೆಯಲ್ಲಿ ನಾಟಕ ಕಲೆ ಕಡಿಮೆಯಾಗುತ್ತಿದ್ದು ಆಸಕ್ತಿಯ ಕೊರತೆಯೂ ಎದ್ದು ಕಾಣುತ್ತದೆ.

**೪.೩. ಸಾಹಿತ್ಯ:**

ಪ್ರಸ್ತುತ ಅಧ್ಯಯನದಲ್ಲಿ ಜನಪದ ಸಾಹಿತ್ಯ ಹುಟ್ಟಲು ಕಾರಣವಾದ ಬುಡಕಟ್ಟು ಸಂಸ್ಕೃತಿ ತಮ್ಮ ದಿನ ನಿತ್ಯದ ಜೀವನದ ಅನುಭವ, ಅಲೌಕಿಕ ಆಧ್ಯಾತ್ಮಿಕ ಸಂಗತಿಗಳ ಅನುಭವಗಳನ್ನು ವ್ಯಕ್ತಪಡಿಸುವಾಗ ಮಾಮೂಲಿಯಾಗಿದ್ದ ಮಾತು ಸಾಹಿತ್ಯದ ಮಟ್ಟಕ್ಕೇರಿತು. ಮನುಷ್ಯನ ಜೀವನಕ್ಕೆ ಸಂಬಂಧಿಸಿದ ಸಾಹಿತ್ಯವು ಅವನು ಬೆಳೆದಂತೆಲ್ಲಾ ವಿಸ್ತೃತಗೊಳ್ಳುತ್ತಾ ಬಂದಿತು. ಅನುಭವಗಳ ಪ್ರಮಾಣ ಹೆಚ್ಚಾದಂತೆ ಸಾಹಿತ್ಯದ ವ್ಯಾಪ್ತಿಯೂ ಹೆಚ್ಚಾಯಿತು. ಹೀಗೆ ಜನಗಳ ಬಾಯಿಂದ ಬಾಯಿಗೆ ಜನಗಳ ಸಾಹಿತ್ಯವು ಜನಪದ ಸಾಹಿತ್ಯವಾಯಿತು. ಈ ಜನಪದ ಸಾಹಿತ್ಯವು ಆಯಾ ಜನಸಮುದಾಯಗಳ ಸಂಸ್ಕೃತಿಯ ಪ್ರತಿಬಿಂಬವಾಗಿರುತ್ತದೆ ಜನಸಮುದಾಯಗಳು ಹೆಚ್ಚು ನಾಗರಿಕಗೊಂಡಂತೆಲ್ಲಾ ಗ್ರಾಂಥಿಕ ಭಾಷೆಯನ್ನು ರೂಢಿಸಿಕೊಂಡು ಪ್ರೌಢಸಾಹಿತ್ಯ ನಿರ್ಮಾಣಗೊಂಡಿತು. ಆದರೂ ಈ ಪ್ರೌಢಸಾಹಿತ್ಯಕ್ಕೆ ಮೂಲ ಪರಂಪರೆಯಿಂದ ಬಂದ ಜನಪದ ಸಾಹಿತ್ಯವೇ ಮೂಲ.

ದುಷ್ಟಶಕ್ತಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಮಾರಿ, ಮಸಣಿ, ಭೂತಗಳನ್ನು, ಕಲ್ಪಿಸಿಕೊಳ್ಳಲಾಯಿತು. ಈ ಹಿನ್ನಲೆಯಲ್ಲಿ ದೈವಾರಾಧನೆ ಬದುಕಿನ ಅವಿಭಾಜ್ಯ ಅಂಗವಾಗಿ ಬೆಳೆಯಿತು, ದೇವರನ್ನು ಒಲಿಸಿಕೊಳ್ಳಲು ಪ್ರಾರ್ಥನೆ ವರ್ಣನೆಗಳ ಸಾಹಿತ್ಯ ನಿರ್ಮಾಣವಾಯಿತು. ಜನಪದದಲ್ಲಿ ಜನರ ಭಾಷೆ, ಅವರ ಸ್ಥಳ, ಅಥವಾ ದೇಶ, ಜಾತಿ-ಪಂಗಡ, ಆಚಾರ-ವಿಚಾರ, ಕಲೆ, ಸಾಹಿತ್ಯ, ಮೊದಲಾದವು ಅಡಕವಾಗಿವೆ. ಜೀವಕೋಟಿಯ ನಿರ್ದಿಷ್ಟ ಜನಸಮುದಾಯ ತನ್ನ ಉಳಿವಿಗೆ, ಸಮಾಜಕ್ಕೆ, ಬದುಕಿಗೆ, ಹುಟ್ಟಿನಿಂದ ಅಂತ್ಯದವರೆಗೆ ಕೆಲವು ಸಂಪ್ರದಾಯ ರೀತಿ-ನೀತಿ, ಆಚಾರ-ವಿಚಾರ. ಆಚರಣೆ, ಆಲೋಚನೆ ಮೊದಲಾದುವುಗಳು ರೂಢಿಗೆಬಂದಿತು. ಇದೆಲ್ಲ ಜನಪದ ಅಂಗವಾಗಿ ಜನರು ಮತ್ತು ಜನರ ಬದುಕು ಜನಪದವಾಯಿತು. ಜಾನಪದ ಎಂಬುದು ಮಾತು

ಮತ್ತು ಕೃತಿ ಅಥವಾ ಕ್ರಿಯೆಗಳಿಂದ ಅಭಿವ್ಯಕ್ತವಾಗುತ್ತದೆ. ಜನಪದಕಥೆ, ನೀತಿ, ಗಾದೆ, ಒಗಟು, ಲಾವಣಿ, ಮೊದಲಾದ ಸಂಪ್ರದಾಯ, ಆಚರಣೆಗಳು ಕುಣಿತ ನಂಬಿಕೆಗಳು ಪೂಜೆ ಮುಂತಾದುವು ಕ್ರಿಯೆಗೆ ಮಾಧ್ಯಮವಾಗುತ್ತವೆ, ಇವೆಲ್ಲವೂ ಜನಪದ ಸಂಸ್ಕೃತಿಯ ಅಂಗವಾಗಿವೆ. ಒಟ್ಟಾರೆಯಾಗಿ'ಜನಪದ ಸಂಸ್ಕೃತಿಯ ತಿಳುವಳಿಕೆಯೇ ಜಾನಪದ' ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಅನೇಕ ಜಾನಪದ ಸಾಹಿತ್ಯ ಕಂಡುಬರುತ್ತದೆ. ಈ ಎರಡು ಬುಡಕಟ್ಟುಗಳು ಸಾಂಸ್ಕೃತಿಕ ಅನನ್ಯತೆಯನ್ನು ಉಳಸಿಕೊಂಡಿವೆ. ಈ ಎರಡು ಬುಡಕಟ್ಟುಗಳಲ್ಲಿಯೂ ಪುರಾಣಗಳು, ಐತಿಹ್ಯಗಳು, ಕಥೆಗಳು, ಕಾವ್ಯಗಳು, ಒಗಟು, ಗಾದೆಗಳು, ಹೀಗೆ ಸಮೃದ್ಧವಾಗಿ ಸಿಗುತ್ತವೆ. ಅಂತಹ ಹಲವಾರು ಅಂಶಗಳನ್ನು ಸಂಶೋಧಕರು ದಾಖಲಿಸುವ ಗ್ರಾಂಥಿಕ ರೂಪದಲ್ಲಿಡುವ ಕೆಲಸ ಆಗಬೇಕಾಗಿದೆ. ಆಧುನಿಕ ದಿನಗಳಲ್ಲಿ ಯುವಪೀಳಿಗೆಯಲ್ಲಿ ಅವುಗಳು ಜನಪದ ರೂಪದಲ್ಲಿರುವುದು ವಿಷಾದದ ಸಂಗತಿ, ಹಾಗಾಗಿ ಪಳೆಯುಳಿಕೆಗಳಂತೆ ಹಿರಿಯ ವಕ್ತೃಗಳನ್ನು ಕೇಳಿ ದಾಖಲಿಸಿಕೊಳ್ಳುವ ಕಾರ್ಯ ಆಗಬೇಕಿದೆ. ಆಧುನಿಕ ಮಾಧ್ಯಮಗಳ ಪ್ರಭಾವದಿಂದಾಗಿ ಜನಪದ ಸಾಹಿತ್ಯದ ಗೀಳು ಕಡಿಮೆಯಾಗುತ್ತಿದ್ದು ಸಂಶೋಧಕರು ಹಳೆಯ ಸಾಹಿತ್ಯಿಕ ಅಂಶಗಳಿಗೆ ಸಂಬಂಧಿಸಿದಂತೆ ಸಂಗ್ರಹಿಸಿ ದಾಖಲಿಸಬೇಕಾದ ಅಗತ್ಯತೆ ಇದೆ. ಪ್ರಸ್ತುತ ಅಧ್ಯಯನದಲ್ಲಿ ಹಾಲಿ ನೆಲೆಸಿರುವ ಸಾಹಿತ್ಯವನ್ನು ಕಂಡುಕೊಳ್ಳಲಾಗಿದೆ..

ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಸಮುದಾಯಗಳಲ್ಲಿ ಇರುವ ಮಾಹಿತಿಯನ್ನು ಪ್ರಸ್ತುತ ಅಧ್ಯಯನ ಕೇಂದ್ರೀಕರಿಸಿದೆ. ಅವುಗಳಲ್ಲಿ ಜನಪದ ಹಾಡು, ಸೋಬಾನೆ ಹಾಡು, ಕಥೆಗಳು ಹಾಗೂ ಭಜನೆ ಹಾಡುಗಳು ಶ್ರೀಮಂತವಾಗಿರುವುದು ಕಂಡಬರುವುದು

**ಸಂಪ್ರದಾಯಿಕ ಹಾಡುಗಾರರು:**

ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಜನಪದ ಹಾಡುಗಳು ಸಮೃದ್ಧವಾಗಿವೆ. ಕಾಡುಗೊಲ್ಲರಲ್ಲಂತೂ ಹಾಡುಗಳು ಯಥೇಚ್ಛವಾಗಿ ಹಾಡುತ್ತಾರೆ. ಗಂಡಸರು ಮತ್ತು ಹೆಂಗಸರು ಇಬ್ಬರು ಸಹ ಹಾಡುತ್ತಾರೆ. ಹೆಚ್ಚಿನದಾಗಿ ಮ್ಯಾಸಬೇಡರಿಗಿಂತ ಕಾಡುಗೊಲ್ಲರಲ್ಲಿಯೇ ಹಾಡುಗಳು ಸಮೃದ್ಧಿಯಾಗಿವೆ. ಪಶುಪಾಲಕ ಸಂಸ್ಕೃತಿಯ ಇವರು ಬಿಡುವಾದಾಗ ಭಜನೆಹಾಡು, ಜನಪದಹಾಡು, ಲಾವಣಿ, ಕೋಲಾಟದ ಹಾಡುಗಳು ಹೆಚ್ಚಾಗಿವೆ. ಹಾಗೆಯೇ ಸೋಬಾನೆ ಪದಗಳು, ಒಸಗೆಹಾಡುಗಳು, ಕೂಡ ಹೆಚ್ಚಾಗಿವೆ. ಹಾಡುವ ಕಲಾವಿದರು ಹಟ್ಟಿಗೊಬ್ಬರಾದರೂ ಸಿಗುತ್ತಾರೆ. ಯರಬಳ್ಳಿ ದೊಡ್ಡಗೊಲ್ಲರ ಹಟ್ಟಿಯ ಈರಣ್ಣ, ಕರಿಹಟ್ಟಿ ಗೊಲ್ಲರಹಟ್ಟಿಯ ಕೃಷ್ಣಪ್ಪ, ಕಂದಿಕೆರೆಯ ಗಿರಿಸ್ವಾಮಿ ಗೊಲ್ಲರಳ್ಳಿಯ ಲಲಿತಮ್ಮ, ರಂಗೇನಹಳ್ಳಿಯ ಶಾಂತಮೂರ್ತಿ, ಮಾರೇನಹಳ್ಳಿಯ ಕೃಷ್ಣಮೂರ್ತಿ, ಚನ್ನಮ್ಮನಾಗತಿಹಳ್ಳಿಯ ಈರಜ್ಜ ಹೀಗೆ ಕಾಡುಗೊಲ್ಲರಲ್ಲಿ ಸಾಹಿತ್ಯ ಖಣಿಯೆ ಇದೆ.

ಮ್ಯಾಸಬೇಡರಲ್ಲೂ ಹಾಡು ಹೇಳುವ ಕಲಾವಿದರು ಇದ್ದಾರೆ ಗಾದ್ರಿಪಾಲನಾಯಕ, ಪಾಪನಾಯಕ ದೇವರು ಜಗಲೂರಜ್ಜ ಮೂಗನಾಯಕ ಹೀಗೆ ಸಾಂಸ್ಕೃತಿಕ ವೀರರ ಮೇಲಿನ ಹಾಡುಗಳನ್ನು ನನ್ನಿವಾಳದ ದೊರೆಹಟ್ಟಿಯ ಪಾಲಮ್ಮ ಕಂಪಳ ದೇವರ ಹಟ್ಟಿಯ ಗಂಗಮ್ಮ, ಪಾಲಕ್ಕ, ಸೂರಮ್ಮ,

ಗೋನೂರು ಪಾಲಮ್ಮ, ಮಂಜಮ್ಮ, ಹೀಗೆ ಸೋಬಾನೆ ಪದಗಳನ್ನು ಹಾಡುತ್ತಾರೆ. ಹೀಗೆ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಸಮುದಾಯಗಳಲ್ಲಿ ಗುಂಪು ಗುಂಪಾಗಿ ಹಾಡುತ್ತಾರೆ ಸೋಬಾನೆ, ದೇವರ, ಹಾಡುಗಳನ್ನು ಜೊತೆ ಜೊತೆಯಾಗಿಯೇ ಹಾಡುತ್ತಾರೆ ಹಾಗಾಗಿ ಈ ಎರಡು ಸಮುದಾಯಗಳಲ್ಲಿ ಕೆಲವೊಂದು ಅಂಶಗಳಲ್ಲಿ ಸಾಮ್ಯತೆ ಕಂಡುಬರುತ್ತದೆ. ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಸಮುದಾಯಗಳಲ್ಲಿ ಸಾಂಪ್ರದಾಯಕ ಹಾಡುಗಾರರು ಇರುವ ಮಾಹಿತಿಯನ್ನು ಪ್ರಸ್ತುತ ಅಧ್ಯಯನ ಕೇದ್ರಿಕರಿಸಿದೆ..

**೪.೩.೧. ಸೃಷ್ಟಿ ಪುರಾಣಗಳು ಹಾಗೂ ಸಾಂಸ್ಕೃತಿಕ ನಾಯಕರು**

ವಿಶ್ವದ ಉಗಮವನ್ನು ಕುರಿತ ಕತೆಗಳೇ ಸೃಷ್ಟಿ ಪುರಾಣಗಳು. ಈ ಸೃಷ್ಟಿಗೆ ಸಂಬಂಧಿಸಿದಂತೆ ಮನುಷ್ಯ, ಮರ, ಗಿಡ, ಪ್ರಾಣಿ, ಪಕ್ಷಿ, ಸೂರ್ಯ, ಚಂದ್ರ, ನೀರು, ಭೂಮಂಡಲ, ಮುಂತಾದ ಅನೇಕ ವಿವರಗಳಿಗೆ ಸಂಬಂಧಪಟ್ಟಂತೆ ಸಾವಿರಾರು ಪುರಾಣಗಳನ್ನು ನಾವು ನೋಡಬಹುದು. ಈ ಭೂಮಂಡಲದಲ್ಲಿ ನಡೆಯುವ ಪ್ರತಿಯೊಂದು ವೈಚಿತ್ರ್ಯಗಳಿಗೂ ಒಂದೊಂದು ಕಾರಣಗಳಿವೆ. ನಾವು ಮಾಡುವ ಒಂದೊಂದು ಕತೆಗಳಿಗೂ ಒಂದೊಂದು ಕಾರಣಗಳಿವೆ. ಆರಾಧಿಸುವ ದೈವ, ಆಚರಿಸುವ ಧರ್ಮ, ನಂಬಿದ ನಂಬಿಕೆ ಎಲ್ಲದಕ್ಕೂ ಒಂದು ಹಿನ್ನೆಲೆ ಇದೆ. ಅದನ್ನು ಸಮರ್ಥಿಸುವ, ನಂಬಿಕೆ ಹುಟ್ಟಿಸುವ ಧಾರ್ಮಿಕ ಪುರಾಣಗಳು ಕೂಡ ಯಥೇಚ್ಛವಾಗಿರುವುದನ್ನು ಕಾಣಬಹುದು.

'ಮನುಷ್ಯನಿಗೆ ಮೂಲಭೂತವಾಗಿ ಅವಶ್ಯವಿರುವ ಎಲ್ಲ ವಸ್ತುಗಳ ಬಗೆಗೆ ಮತ್ತು ಅವನಿಗೆ ಚೈತನ್ಯ ನೀಡುವ ಅನೇಕಾನೇಕ ಪುರಾಣಗಳಿವೆ. ಇವು ಎಲ್ಲಾ ಬಗೆಯ ಪುರಾಣಗಳಿಗಿಂತ ಹಳೆಯವು. ಅಂದರೆ ಆದಿಕಾಲದ ಪುರಾಣಗಳು ಎಂದು ಕರೆಸಿಕೊಂಡಿವೆ.'ಕಾಲ ಕಲ್ಪನೆಗಳು ಪ್ರಮುಖವಾಗಿ ಸ್ವರ್ಗ, ನರಕಗಳೆಂಬ ಲೋಕಗಳನ್ನು ಒತ್ತಿ ಹೇಳುತ್ತವೆ. ಯಾವ ಯಾವ ಕಾಲಕ್ಕೆ ಮನುಷ್ಯ ಹೇಗಿರಬೇಕು. ಹಾಗಿರದಿದ್ದರೆ ಏನಾಗುತ್ತದೆ ಅಲ್ಲದೆ ಪರಕಾಯದ ಪುರಾಣಗಳು ಮತ್ತು ಆಯಾ ಸಮುದಾಯಗಳ ನಾಯಕರು ಅರ್ಥಾತ್ ಸಾಂಸ್ಕೃತಿಕ ನಾಯಕ- ನಾಯಕಿಯರನ್ನು ಕುರಿತು ಪುರಾಣಗಳಿರುತ್ತವೆ'.[೪]

ಪ್ರತಿಯೊಂದು ಬುಡಕಟ್ಟುಗಳಲ್ಲಿಯೂ ಒಂದೊಂದು ಸೃಷ್ಟಿಪುರಾಣಗಳಿರುವುದನ್ನು ಕಾಣಬಹುದು. ಆ ಸಮುದಾಯದ ನಂಬಿಕೆ ಆಚಾರ, ವಿಚಾರ, ಸಂಪ್ರದಾಯಗಳಿಗೆ ಆ ಪುರಾಣಗಳು ಸಮರ್ಥನೆ ನೀಡುತ್ತವೆ. 'ಪುರಾಣಗಳು ಎಲ್ಲಿಯವರೆಗೆ ಜೀವಂತವಾಗಿರುತ್ತವೋ ಅಲ್ಲಿಯವರೆಗೂ ತನ್ನ ಸಮಾಜದ ಅಥವಾ ಬುಡಕಟ್ಟಿನ ಸಂಘಟನೆಯನ್ನು ಉಂಟುಮಾಡುತ್ತವೆ. ತನ್ನ ಸಮಾಜದ ಅಥವಾ ಬುಡಕಟ್ಟಿನ ಜನರಲ್ಲಿ ಏಕತೆಯನ್ನು ಉಂಟುಮಾಡುತ್ತವೆ. ಈ ದೃಷ್ಟಿಯಿಂದ ಪುರಾಣ ತನ್ನ ಸಮಾಜದಲ್ಲಿ ಅಥವಾ ಬುಡಕಟ್ಟಿನಲ್ಲಿ ಸಕ್ರಿಯವಾದ ಪಾತ್ರವಹಿಸುತ್ತದೆ. ಅಲ್ಲದೆ ಜೀವಂತ ಶಕ್ತಿಯಾಗಿರುತ್ತದೆ. ಪುರಾಣಗಳು ಒಂದು ಸಮಾಜದ ಅಥವಾ ಬುಡಕಟ್ಟಿನ ಜನರಿಗೆ ಪವಿತ್ರವಾದವುಗಳಾಗಿವೆ'.[೫]

ಪುರಾಣಗಳನ್ನು ಕುರಿತು ಇ.ಡಿ.ಜೇಮ್ಸ್‌ರವರು ಅಭಿಪ್ರಾಯಪಡುವಂತೆ ಪುರಾಣವೆಂಬುದು ಕೇವಲ ಕಟ್ಟು ಕತೆಯಲ್ಲ. ಅಲೌಕಿಕ ಅತಿಮಾನುಷ ವ್ಯಕ್ತಿಗಳ ಸಾಹಸವನ್ನು ನೈಸರ್ಗಿಕ ಘಟನೆಗಳ ಅಸಾಧಾರಣ ವಿಚಿತ್ರ ಪ್ರವೃತ್ತಿಯನ್ನೋ ಅಥವಾ ಐತಿಹಾಸಿಕ ಘಟನೆಯನ್ನೋ ಅದು ವರ್ಣಿಸುವುದಿಲ್ಲ. ಪುರಾಣಗಳ ಪ್ರಧಾನ ಉದ್ದೇಶವೇನೆಂದರೆ ಪ್ರಕೃತಿಯಲ್ಲೊ ಸಮಾಜದಲ್ಲೋ ಸ್ಥಾಪಿತವಾದ ಕಟ್ಟು ಕಟ್ಟಳೆಗಳನ್ನು ಸ್ಥಿರಗೊಳಿಸುವುದು, ಅದು ನಂಬಿಕೆಗಳನ್ನು ದೃಢಪಡಿಸುವುದು. ದೇವದೇವತೆಗಳ ಉಪಾಸನೆಯ ಸಮರ್ಪಕತೆ ಸಾರ್ಥಕತೆಗಳನ್ನು ಸಮರ್ಥಿಸುವುದು ಹಾಗೂ ಸಾಂಪ್ರದಾಯಿಕ ವ್ಯವಸ್ಥೆ ವರ್ತನೆಗಳನ್ನು ಅಭಿವ್ಯಕ್ತಿಸುವುದು. ಅಲೌಕಿಕ ಆದರ್ಶ ಮತ್ತು ದಂಡನೆಗಳ ಮೂಲಕ ಸುಗಮವಾಗಿ ಕಾಪಾಡುವುದು ಎಂದಿದ್ದಾರೆ. ಹಿ.ಚಿ.ಬೋರಲಿಂಗಯ್ಯನವರು ಪುರಾಣ ಕುರಿತು 'ಸಮುದಾಯಗಳ ವಿವಿಧ ಸ್ಥರಗಳ ಸಂಸ್ಕೃತಿಯ ಸ್ವರೂಪ ಮತ್ತು ಅವುಗಳ ಭಿನ್ನತೆಯನ್ನು ಪುರಾಣಗಳ ಮೂಲಕ ಅರ್ಥ ಮಾಡಿಕೊಳ್ಳಬಹುದು. ಶ್ರೇಣೀಕೃತ ಸಮಾಜ, ಬೇಟೆ, ಪಶುಪಾಲನೆ, ಕೃಷಿ ಮತ್ತು ಉಪಕಸುಬುಗಳು ಶೂದ್ರವರ್ಗ, ಶೂದ್ರರಲ್ಲಿಯೇ ಇರುವ ಅಸ್ಪೃಶ್ಯತೆಯ ತಾರತಮ್ಯಭಾವ ಹಾಗೂ ಈ ಎಲ್ಲಾ ಆಂಶಗಳನ್ನು ಗಟ್ಟಿಗೊಳಿಸುವ ಅಥವಾ ಛಿದ್ರಗೊಳಿಸುವ ಪರಸ್ಪರ ವಿರುದ್ಧಾಶಯಗಳೇ ಐತಿಹ್ಯ ಮತ್ತು ಪುರಾಣಗಳು ಇವೆಲ್ಲಾ ಈ ನಾಡಿನ ಬಹುಮುಖ್ಯ ಸಾಂಸ್ಕೃತಿಕ ಚಿಂತನೆಯ ವಸ್ತುಗಳು ಎಂದು ಹೇಳುತ್ತಾ ಶಿಷ್ಟಲೋಕದ ಜನ ವಿಶ್ವವನ್ನು ಬ್ರಹ್ಮ ಸೃಷ್ಟಿಸಿದನೆಂದೂ ಆದ್ದರಿಂದಲೇ ಅದು ಬ್ರಹ್ಮಾಂಡ ಎಂದು ಕರೆಸಿಕೊಳ್ಳುತ್ತದೆ ಎಂದು ಹೇಳುತ್ತಾರೆ. ಶಿಷ್ಟಪುರಾಣಗಳ ಪ್ರಕಾರ ಬ್ರಹ್ಮನಿಂದಲೇ ಸರ್ವಸೃಷ್ಟಿಯಾಯಿತು ಎನ್ನುವರು. ಜನಪದ ಮತ್ತು ಬುಡಕಟ್ಟು ಸಮುದಾಯಗಳಲ್ಲಿ ಪ್ರಚಲಿತವಿರುವ ಸೃಷ್ಟಿ ಪುರಾಣಗಳಲ್ಲಿ ಇದಕ್ಕೆ ಭಿನ್ನವಾದ ದೃಷ್ಟಿಕೋನವಿದೆ ಎನ್ನುತ್ತಾರೆ.

ಈ ಅಧ್ಯಯನಕ್ಕೆ ಅಳವಡಿಸಿಕೊಂಡಿರುವ ಬುಡಕಟ್ಟು ಸಮುದಾಯಗಳಾದ ಕಾಡುಗೊಲ್ಲರು ಮತ್ತು ಮ್ಯಾಸಬೇಡರ ಸೃಷ್ಟಿಪುರಾಣಗಳು ಬೇಟೆಯಿಂದ ಆರಂಭಗೊಂಡು ತದನಂತರದಲ್ಲಿ ಪಶುಪಾಲನೆಯನ್ನು ಅವಲಂಬಿಸಿ ಕೃಷಿಯನ್ನೆ ಪ್ರಧಾನವಾಗಿ ನಂಬಿ ಬದುಕುತ್ತಿರುವ ಸಮುದಾಯಗಳು. ಈ ಸಮುದಾಯಗಳಲ್ಲಿ ಬೇಟೆ ಮೊದಲ ಹಂತ, ಪಶುಪಾಲನೆ ಎರಡನೆಯ ಹಂತ, ಕೃಷಿ ಮೂರನೆಯ ಹಂತ. ಆರಂಭದಲ್ಲಿ ಬೇಟೆಯನ್ನೇ ಮೂಲವೃತ್ತಿಯಾಗಿಸಿಕೊಂಡ ಈ ಸಮುದಾಯಗಳು ಪಶುಪಾಲನೆ ಮತ್ತು ಕೃಷಿ ಅವಲಂಬಿಸಿ ಬದುಕು ರೂಪಿಸಿಕೊಂಡಿರುವುದನ್ನು ಕಾಣಬಹುದು. ಈ ಸಮುದಾಯಗಳು ತಮ್ಮ ಬದುಕಿನ ಪ್ರತಿಯೊಂದು ಹಂತವನ್ನು ಪುರಾಣದಿಂದಲೇ ಗುರುತಿಸಿಕೊಂಡಿದ್ದಾರೆ.

**ಮ್ಯಾಸಬೇಡರ ಸೃಷ್ಟಿ ಪುರಾಣಗಳು:**

ಈ ಸೃಷ್ಟಿ ಪುರಾಣದ ಕತೆಯನ್ನು ಹೀಗೆ ಹೇಳುತ್ತಾರೆ. ನಾವು ಶ್ರೀಶೈಲ ಕಡೆಯ ಜನ. ನಮ್ಮ ನಾಯಕ ಜನಾಂಗಕ್ಕೆ ಯಾವ ದೇವರು ಇರಲಿಲ್ಲ. ಶ್ರೀಶೈಲದ ಕಡೆ ಅಷ್ಟು ಕಷ್ಟಬಂತು. ನಾವು ಈ ಕಡೆಗೆ ವಲಸೆ ಬಂದಿರೋದು. ನಮ್ಮ ಮ್ಯಾಸ ಮಂಡಲ ಈ ಕಡೆ ವಲಸೆ ಬಂತು. ಶ್ರೀಶೈಲ ಮಲ್ಲಿಕಾರ್ಜುನನ ಬಸವಣ್ಣ ಹೋರಿಗಳನ್ನ ಹೊಡ್ಕೊಂಡು ಮಕ್ಕಳು ಮರಿ ದಂಡು ದಳ ಗಂಟು

ಮೂಟೆ ಕಟ್ಕೊಂಡು ಬರ್ತಾ ಇದ್ವಿ ಬರುವಾಗ ದಾರಿ ಮಧ್ಯದಲ್ಲಿ ಕೊಡಗಲಬೊಮ್ಮ ಎಂಬ ರಾಕ್ಷಸ ಕುಲದವನು ಎದರು ಸಿಕ್ಕನು. ಇವನು ಕ್ವಾಟೆ ಕಟ್ಕೊಂಡು ಮೊಳಕಾಲ್ಮೂರಿನ ಹತ್ತಿರ ಅಡವಿಯಲ್ಲಿದ್ದನು. ಹೀಗೆ ಬರಬೇಕಾದ್ರೆ ಅವನು ನಮ್ಮ ಮ್ಯಾಸಮಂಡಲವನ್ನೆಲ್ಲಾ ಹಿಡ್ಕೊಂಡುಬಿಟ್ಟನು. ಹಿಡ್ಕೊಂಡು ಕೋಟೆಯೊಳಗಡೆ ಹಾಕೊಂಡ್ ಬಿಟ್ಟ. ಅವನು ಏನ್ ಶಪಥ ತೊಟ್ಟಿದ್ದ ಅಂದ್ರೆ ನಮ್ಮ ಮ್ಯಾಸಮಂಡಲನಾ ನಿರ್ವಂಶ ಮಾಡ್‌ಬೇಕು ಅಂತ ಅವ್ನ ಮನಸ್ಸಲ್ಲಿತ್ತು. ಎಷ್ಟು ವರ್ಷಗಳಾದ್ರೂ ಬಿಡ್ದೆ ಅಲ್ಲೆ ಕೂಡಿಹಾಕೊಂಡ್‌ಬಿಟ್ಟ. ಅವನ ಉಪಟಳ ಬಾಳ ಇತ್ತು. ನಮ್ಮ ಹೊಟ್ಟೇಲಿ ಹುಟ್ಟಿದ ಹೆಣ್ಮಕ್ಕಳಿಗೆ ಹನ್ನೆರೆಡು ವರ್ಷ ಆದ ನಂತ್ರ ರಜಸ್ಸಾಗಿರ್‍ತಾರಲ್ಲಾ ಆ ಶಾಸ್ತ್ರಗಳನ್ನೆಲ್ಲಾ ಮುಗುಸ್ಕೊಂಡು ಆದ್ಮೇಲೆ ತಿರುಗ ದಿವ್ಸ ಅವನತ್ರ ಕಳುಸ್ಬೇಕಂತೆ. ಅವನು ಮುಟ್ಟಿದ ಮ್ಯಾಲೆ ಬ್ಯಾರೆ ಕಡೆ ಮದುವೆ ಮಾಡಿ ಕೊಡ್ಬೇಕಂತೆ, ಎಮ್ಮೆಆಗ್ಲಿ ಕುರಿಯಾಗ್ಲಿ ಹಸುವಾಗ್ಲಿ ಹೀದ್ರೆ ಮೊದಲು ಅವನಿಗೆ ಹಾಲು ತಗೊಂಡೋಗಿ ಕೊಡಬೇಕು. ಬೆಣ್ಣೆ ಹಾಲು ಎಲ್ಲವನ್ನು ತಗೊಂಡೋಗಿ ಕೊಡಬೇಕು. ಅವನ ಹೆಸ್ರನ್ನ ನಮ್ಮ ಮಕ್ಕಳಿಗೆ ಇಡಬೇಕು. ಅಷ್ಟು ಗಂಡಾಂತ್ರ ಬಂದಿತ್ತಂತೆ ನಮ್ಮ ನಾಯಕ ಜನಾಂಗಕ್ಕೆ ಯಾವ ದೇವರು ಯಾವ ಪರಮಾತ್ಮ ಇದಾನೆ ನಮ್ಮನ್ನ ಕಾಪಾಡೋಕೆ ನಾವು ಇಲ್ಲೆ ಸಮಾದಿ ಆಗ್ತಿವೇನೊ ಅನ್ನೊ ಚಿಂತೆಯಲ್ಲಿಯೇ ಎಷ್ಟೋ ವರ್ಷಗಳನ್ನ ಕಳುದ್ರು.

ಒಂದು ದಿನ ರಾತ್ರಿ ಅವನಿಗೆ ಎಲ್ಲೋ ಹೋಗೊ ಪ್ರೋಗ್ರಾಮ್ ಇತ್ತು. ಅದನ್ನ ಅಕ್ಕ ಪಕ್ಕ ಇರೊ ಶಿಷ್ಯರಿಗೆ ಹೇಳಿದ. ನಾನು ಹಿಂಗೆ ಹನ್ನೆರೆಡು ಗಂಟೆ ಟೈಂ ಸರಿಹೊತ್ತಿಗೆ ಹೊರಗಡೆ ಹೋಗ್ತಿನಿ ನೀವು ಕ್ವಾಟೆ ಕಡೆ ಹುಷಾರಾಗಿರ್‍ರಿ ಅಂತ ಹೇಳಿದ. ಹೇಳಬೇಕಾದ್ರೆ ಒಬ್ಬ ಬುದ್ದಿವಂತ ಕೇಳಿಸ್ಕೊಂಡು ಹೋಗಿ ಆ ವಿಷಯನ ಮ್ಯಾಸಮಂಡಲಕ್ಕೆಲ್ಲಾ ತಿಳಿಸಿಬಿಟ್ಟನು. ಆವಾಗ ಸರಿಹೊತ್ನಲ್ಲಿ ಅವನು ಹೋಗ್ತಾನಂತೆ ಎಲ್ಲಾ ಮಕ್ಕಳು ಮರಿ ಗಂಟು ಮೂಟೆ ಎಲ್ಲಾ ರಡಿಯಾಗಬೇಕು ಅಂತ ಹೇಳಿದ. ಅವರೆಲ್ಲಾ ರಡಿಮಾಡ್ಕೊಂಡು ಸಿದ್ದವಾಗಿದ್ರು, ಬೊಮ್ಮ ಹೋದ ತಕ್ಷಣ ಕ್ವಾಟೆ ಬಾಗ್ಲು ಮುರ್‍ದಾಕಿ ನಾವು ಹೋಗ್‌ಬಿಡಬೇಕು ಅಂತ ಧೈರ್ಯ ತುಂಬಿಕೊಂಡ್ರು, ಅವನು ಹೋಗುವ ದಾರಿಯನ್ನೆ ನೋಡಿಕೊಂಡೆ ಇದ್ರು ಅವನು ಹೋದ ತಕ್ಷಣಕ್ಕೆ ನಮ್ಮೆಲ್ಲಾ ದಂಡು ಬಾಕ್ಲು ಮುರ್‍ದು ಕುಟ್ಟಿ ಬಂದುಬಿಟ್ರಂತೆ. ರಾತ್ರಿ ರಾತ್ರಿಕೆ ಓಡೋಡಿ ಓಡೋಡಿ ಬಂದ್ರಂತೆ ಈ ಜಾಗಕ್ಕೆ (ಬೋರೆದೇವರಹಟ್ಟಿಗೆ ಇನ್ನೊಂದು ಹೆಸರು ಖುದಾಪುರ) ಮಕ್ಳು ಮರಿ ದಂಡು ಸೈನ್ಯ ದನ ಕರು ಗಂಟು ಮೂಟೆ ಎಲ್ಲಾ ಕಟ್ಕೊಂಡು ಬದ್ರಂತೆ. ಅವರಲ್ಲಿ ಒಬ್ಬ ಯಜಮಾನ ಇದ್ನಂತೆ ಅವ್ನು ಹೇಳ್ದ ಕಲ್ಲು ಮುಳ್ಳು ತುಳ್ದು ಕಾಲೆಲ್ಲಾ ರಕ್ತ ಸುರಿತಾ ಇದಾವೆ ಸ್ವಲ್ಪ ಹೊತ್ತು ಸುದಾರಿಸ್ಕೊಂಡು ಹೋಗಾನ ಅಂತ. ಆಗ ಎಲ್ಲಾರೂ ಮಲಗಿದ್ರಂತೆ ಶ್ರೀಶೈಲ ಮಲ್ಲಿಕಾರ್ಜುನ ಬಸವಣ್ಣ ಹೋರಿಗಳನ್ನ ಮಧ್ಯದಲ್ಲಿ ಹಾಕ್ಕೊಂಡು ಸುತ್ತಾ ನಾಯಕರ ಜನಾಂಗ ಮಲಗಿದಾರೆ.

ಶ್ರೀಶೈಲಮಲ್ಲಕಾರ್ಜುನನ ಬಸವಣ್ಣನ ಹೋರಿಗಳನ್ನ ಕಾಯುವ ಕೆಲಸ ಗಾದ್ರಿಪಾಲನಾಯಕನದು. ಅವನತ್ರ ಬಂಗಾರದ ಕೊಡ್ಲಿ ಇತ್ತಂತೆ. ಅದು ಎತ್ತುಗಳಿಗೆ ಮೇವು ಕಡಿದು ಹಾಕೋದಂತೆ. ಅದನ್ನು ತಲೆದಿಂಬಿಗೆ ಇಟ್ಕೊಂಡು ಎಲ್ಲರೂ ಮಲಗಿದ್ರಂತೆ. ಒಳ್ಳೆ ಒಂದು ಸರಿಹೊತ್ತು ಟೈಂಗೆ ಭೂಮ್

ಭೂಮಿನೇ ಒಂಥರಾ ಗಥ ಗಥ ಅಂತಂತೆ ಅಷ್ಟು ಭಯಂಕರ ಶಬ್ದ. ಆದ್ರೂ ಇವರು ಮೆಲಕ್ಕೇ ಎದ್ದೇಳಲಿಲ್ಲ. ಸುಸ್ತಾಗಿ ಬಂದಿದ್ರಲ್ಲಾ ಅದ್ಕೆ ಸರಿಗೆ ಮಲಗ್‌ಬಿಟ್ಟದಾರೆ. ಹೋ ಹೋ ಇವರು ಎದ್ದೇಳದಿಲ್ಲ ಅಂದುಬಿಟ್ಟು ಭೂಮಿಯೊಳಗಿಂದ ಒಂದು ಕಲ್ಲು ಗುಂಡುಕಲ್ಲಷ್ಟು ದಪ್ಪ ಭೂಮಿಗೆ ಮಗ್ಗು ತಿವಿದು ಎತ್ತಿ ಬಿಸಾಡಿದ ಅಷ್ಟು ದೂರ ಬೀಳಂಗೆ. ಆವಾಗ ಗಾಬ್ರಿಯಾಗಿ ಎದ್ದು ಆ ಬಂಗಾರದ ಕೊಡ್ಲಿ ತಕ್ಕೊಂಡು ಗಾದ್ರಿಪಾಲನಾಯಕ ರಾಕ್ಷಸ ಬಂದುಬಿಟ್ಟದೆ ಅಂತ ಕೊಡ್ಲಿ ತಕ್ಕೊಂಡು ಭೂಮಿಗೆ ಒಡಿಬೇಕಾದ್ರೆ ಭೂಮಿಯೊಳಗಿಂದ ಅಂಗೆ ಮೇಲಕ್ಕೆ ಬರ್ತಾ ಅಂಗೆ ಉದ್ಭವಾಯ್ತಂತೆ ಲಿಂಗ. ಆವಾಗ ಇದೇನಿದು ಹಿಂಗೆ ಎದ್ದೇಳ್‌ಬಿಡ್ತಲ್ಲಾ ಗುಂಡು ಅಂತ ತಿಳಿಕೊಂಡ್ರಂತೆ ಆವಾಗ ಶಿವ ಪ್ರತ್ಯಕ್ಷವಾದ್ನಂತೆ ಆದ್ರೂ ಯಾರೂ ನಂಬದಲೆ ಇದು ಶಿವನ ವೇಷದಾರಿ ರಾಕ್ಷಸ ಅಂತ ಕಲ್ಲು ಮುಳ್ಳು ತಗಂಡು ಅವನಿಗೆ ಹೊಡಿತಿದ್ರಂತೆ. ಒಬ್ಬ ಬುದ್ಧಿವಂತ ನಾಯಕ ತಡೆಗಟ್ಟಿ ಎನೋ ಮಹಾತ್ಮ ಇದೆ ತಡೀರಿ ಎಂದು ಎಲ್ಲರೂ ಕೈ ಜೋಡಿಸಿದ್ರು ಬುದ್ಧಿವಂತ ಕೇಳಿದ ಸ್ವಾಮಿ ನೀನು ಶಿವನೋ, ಕೊಡಗಲು ಬೊಮ್ಮನೊ, ರಾಕ್ಷಸನೊ ನಮಗೆ ಗೊತ್ತಿಲ್ಲ. ನಾವು ಶಿವ ಅಂತ ಒಪ್ಕೊಂಡಿವಿ. ಇವಾಗ ನಾವು ಹೇಳಿದ್ ಪವಾಡಾನ ನೀನ್ ನಡುಸಬೇಕು ಅಂತ ಕೇಳಿದ. ಗಬ್ಬ ಆಗದಿದ್ದ ಆಕಳು ಶ್ರೀಶೈಲ ಕಡೆಯಿಂದ ಅಂಬಾ ಅಂತ ಓಡಿ ಬಂದು ನಿನ್ನ ತಲೆಯ ಮೇಲೆ ಭೋ ಅಂತ ಹಾಲ್ ಕರೀಬೇಕು ಹಂಗಾದ್ರೆ ನೀನು ದೇವ್ರು, ಇಲ್ಲಂದ್ರೆ ನೀನು ದೇವ್ರಲ್ಲ ಅಂತ ಕೇಳ್ಕೊಂಡ. ಆವಾಗ ಗಬ್ಬ ಆಗ್ದೆ ಇರೊ ಆಕಳು ಶ್ರೀಶೈಲ ಕಡೆಯಿಂದ ಅಂಬಾ ಅಂತ ಓಡಿ ಬಂದು ಭೋ ಅಂತ ಹಾಲು ಯಾವಾಗ ಕರೀತೋ ಆವಾಗ ಬೋರೆದೆವರು ಅಂತ ಹೆಸರಿಟ್ರು.

ಆಮೇಲೆ ಅವತ್ತು ರಾತ್ರಿಕೆ ಒಬ್ಬ ಆಯಮ್ಮ ಹೆರಿಗೆ ಆಗಿತ್ತಂತೆ ಆ ಕೂಸನ್ನ ಹಿಡ್ಕಂಡು ಕೊಯ್ದು ಬಿಸಾಕ್ತಿವಿ ಸ್ವಾಮಿ ತಲೆ ಒಂದು ಕಡೆ, ದಿಂಬ ಒಂದು ಕಡೆ, ಆ ತಲೆ ದಿಂಬ ತಾನೇ ತಾನಾಗಿ ಬಂದು ಜಂಟಿಯಾಗಿ ಎದ್ದು ನಿಂತು ಅಪ್ಪ ಅಮ್ಮ ಅಂತ ಮಾತಾಡ್ಬೇಕು, ಹಂಗಾದ್ರೆ ನೀನು ದೇವ್ರು ಇಲ್ಲಂದ್ರೆ ನೀನು ದೇವ್ರಲ್ಲ. ಅಂಗೆ ಆ ಕೂಸನ್ನು ಕೊಯ್ದು ಬಿಸಾಕಿದ್ರಂತೆ,ಅದು ಬಂದು ಜಂಟಿಯಾಗಿ ಅಪ್ಪ ಅಮ್ಮ ಅಂತಂತೆ, ಅಂಗೆ ಇನ್ನೊಂದ್ಸಲ ಕೊಯ್ದ್ರಂತೆ ಅಂಗೆ ಜಂಟಿಯಾಯ್ತಂತೆ ಅಂಗೆ ಏಳು ಸಾರಿ ಕೊಯ್ದ್ರಂತೆ ಏಳು ಸಲನೂ ಆ ಕೂಸು ಜಂಟಿಯಾಗಿ ಮಾತಾಡ್ತಂತೆ.

ಆಮೇಲೆ ಅಗ್ನಿಕೊಂಡ ಅಂತ ಎಲ್ಲಾ ಮರಗಳನ್ನ ತಂದು ಮುಂದೆ ಹಾಕಿದ್ರಂತೆ. ಅದನ್ನು ನಾವು ವಡತ ಹಾಕ್ರಿ ಅಂತಿವಿ. ಈ ಎಲ್ಲಾ ಮರಗಳನ್ನು ತಂದು ಹಾಕಿದ್ಮೇಲೆ ಬೆಂಕಿ ಹಚ್ಚಿದ್ರಂತೆ ಸ್ವಾಮಿ ನೀನು ದೇವರಾದ್ರೆ ಈಗ ಬೆಂಕಿ ಹಚ್ತಿವಿ ಆ ಬೆಂಕಿಯಲ್ಲಿ ಮರ ಆಗಿ ಕಳ ಕಳ ಅಂತ ಚಿಗುರ್ಬೇಕು. ಹಂಗಾದ್ರೆ ನೀನು ದೇವ್ರು ಅಂತ ಕೈ ಮುಗೀತಿವಿ ಅಂದ್ನಂತೆ. ಹಚ್ಚಿದ್ರೆ ಬೆಂಕಿ ಬೆಂಕಿನಲ್ಲಿ ಆ ಪವಾಡದ ಮರ (ಬೋರೆದೇವರಹಟ್ಟಿಲಿ ಈಗ ಇರೋ ಮರ ಇದೆ ಅಂತ ಹೇಳ್ತಾರೆ) ಕಳ ಕಳ ಚಿಗುರ್ತಂತೆ. ಆಮೇಲೇ ಕೊಡಗಲು ಬೊಮ್ಮ ಸಾಯಬೇಕು ಅವನು ಸತ್ತ ಅಂತ ನಮಗೆ ಹೆಂಗೆ ಗೊತ್ತಾಗಬೇಕು ಸ್ವಾಮಿ ಒಂದು ಕೂದಲು ಎಳೆಯಷ್ಟು ದಪ್ಪ ಹೊಗೆ ಅವನು ಸತ್ತಿರೋ

ಜಾಗದಲ್ಲಿ ಆಕಾಶಕ್ಕೂ ಭೂಮಿಗೂ ಒಂದೇ ಲೆವೆಲ್ ನಲ್ಲಿ ಹೊಗೆ ನಿಂತಿರ್‌ಬೇಕು. ಆ ಹೊಗೆ ನಮ್ಮ ಕಣ್ಣಿಗೆ ಕಾಣಬೇಕು. ಅಂಗಾದ್ರೆ ಅವ್ನು ಸತ್ತಾನೆ ಅಂತ ತಿಳಿಕೊತಿವಿ ಸ್ವಾಮಿ ಅಂತ ಕೈ ಮುಗುದ್ರಂತೆ. ಅತ್ಲಾಗೆ ನೋಡ್ರಿ ಅಂದ್ನಂತೆ. ಆಕಾಶಕ್ಕೂ ಭೂಮಿಗೂ ಒಂದು ಕೂದಲು ಎಳೆಯಷ್ಟು ಹೊಗೆ ನಿಂತಿತ್ತಂತೆ. ಆವಾಗ ಎನಂತ ಕೂಗಿದಾರೆ 'ಚಿಂತಗುಟ್ಲ ಬೋರವಾ ನಮ್ಮ ಮ್ಯಾಸಮಂಡಲಕ್ಕೆ ಬಂದಂತ ಚಿಂತೆನ ಪರಿಹಾರ ಮಾಡಿದ್ಯಾಲ್ಲ ಚಿಂತಗುಟ್ಲ ಬೋರವ ಗಂಡಾದಿ ಗಂಡ ಬೋರವಾ ನಮ್ಮ ಮ್ಯಾಸಮಂಡಲಕ್ಕೆ ಬಂದಂತ ಗಂಡಾಂತ್ರಾನ ಪರಿಹಾರ ಮಾಡಿದ್ಯಾಲ್ಲ ಗಂಡಾದಿ ಬೋರವಾ ಪಾಲಚೆಟ್ಲು ಪರಮೇಶ್ವರ ಶ್ರೀಶೈಲ ಮಲ್ಲಿಕಾರ್ಜುನ ಆಯಿತ್ವಾರದ ಈ ಹಾವು ಚೇಳು ಅಂತ ಕೂಗಿದ್ರಂತೆ'.

ಶಿವನ ಈ ಪವಾಡನಾ ನೋಡೊಕೆ ಭಯಂಕರ ಜನ ಕಲ್ತಕಂಡಿರ್ತಾರಂತೆ. ಆ ಶಿವನ್ನ ನೋಡೊಕೆ ನಾಮುಂದು ತಾಮುಂದು ಅಂತ ಜನ ತುಳ್ದು ತುಳ್ದು ಸಣ್ಣದೊಂದು ಮನುಷ್ಯರ ರಕ್ತದ ಕಾಲುವೆನೇ ಹರಿತಂತೆ. ಆಗ ಒಬ್ಬ ಬುದ್ದಿವಂತ ಕೈ ಜೋಡ್ಸಿ ನಮ್ಮ ನಾಯಕ ಜನಾಂಗ ಹನ್ನೆರಡು ಕುಲ ಆ ಕುಲಕ್ಕೆ ಹನ್ನೆರಡು ಪೆಟ್ಟಿಗೆ ದೇವರುಗಳು ಹೋಗಿದ್ವಂತೆ. ಈ ಸ್ಥಳದಿಂದಲೇ ಹನ್ನೆರೆಡು ಪೆಟ್ಟಿಗೆ ದೇವರುಗಳು ಅಗಲಿರೋದು.

ಆಗ ನಮ್ಮ ನಾಯಕ ಜನಾಂಗಕ್ಕೆ ಯಜಮಾನ ದೊರೆ ಯರಮಂಚಿನಾಯಕ ಅವನು ಎನ್ ಮಾಡ್ದ ಎಲ್ಲಾರ್‌ನ ಇಲ್ಲೇ ಮಲಗಿಸ್‌ಬಿಟ್ಟು ಒಳ್ಳೆ ಸರಿಹೊತ್ತಿಗೆ ಸೂಳೆ ಮನೆಗೆ ಹೊಗಿದ್ನಂತೆ. ತಿರುಗ ಬೆಳಗ್ಗೆ ಎದ್ದು ಹೊರುಟು ಬರಬೇಕಲ್ಲಾ ಬರಬೇಕಾದ್ರೆ ಕುದ್ರೆ ಮ್ಯಾಲೆ ಕುಂತ್ಕಂಡು ಛತ್ರಿ, ಛಾಮರ, ಢಮರುಗ ಹೊಡ್ಸ್ಕೊಂಡು ಬರ್ತಿದ್ನಂತೆ. ಬರಬೇಕಾದ್ರೆ ಇನ್ನಿದ್ದ ಕುಲದವರೆಲ್ಲ ಸೇರಿದ್ರಲ್ಲಾ ಈ ಜಾಗದಲ್ಲಿ ಅವರೆಲ್ಲಾ ಹೇ ಅವ್ನಂದೇನು ಎಷ್ಟೊತ್ತು ನೋಡ್ತಿರೋ ಪೂಜೆ ಮಾಡ್ರೊ ಅಂದ್ರಂತೆ. ಆವಾಗಿನ್ನೇನು ಪೂಜೆ ಆಗಿಬಿಡ್ತು ಸ್ವಾಮಿದು. ಚಿಂತಗುಟ್ಲ ಬೋರನಿಗೆ ಇವತ್ತು ಬಿಡುಗಡೆಯಾದ ಯರಮಂಚಿನಾಯಕ ಅಂತ ತಿಳಕಂಡು ಪೂಜೆ ಮಾಡಿದ್ರಂತೆ. ಪೂಜೆನೂ ಮುಗಿಯೊದಿಕ್ಕೆ ಅವನು ಬರೊದಿಕ್ಕೆ ನಾನು ಬರದಲೇ ಹೆಂಗೆ ಪೂಜೆ ಮಾಡಿದ್ರಿ ನೀವು ಅಂತ ಕೇಳಿದ. ಆಗ ಅವರು ನಿನ್ನ ಎಷ್ಟೊತ್ತು ನೊಡ್ಬೇಕು ನಮ್ಮನ್ನ ಮಲಗ್ಸಿ ನೀನು ಸರಿಹೊತ್ತನಲ್ಲಿ ಹೋಗಿ ಸೂಳೆ ಮನೆ ಸೇರ್ಕಂಡಿದ್ದೆ. ಈಗ ಇಷ್ಟು ತಡವಾಗಿ ಕುದ್ರೆ ಮ್ಯಾಲೆ ಕುಂತ್ಕಂಡು ಛತ್ರಿ, ಛಾಮರ, ಢಮರುಗ ಹೊಡ್ಸ್ಕೊಂಡು ಬಂದಿದಿಯಲ್ಲಾ ನಿನ್ನ ಎಷ್ಟೊತ್ತು ಕಾಯಬೇಕು ಪೂಜೆ ಮಾಡಿಬಿಟ್ವಿ ಹೋಗಿ ಕೈ ಮುಗಿ ಅಂದ್ರು. ನನಗೆ ನಿನಿಗೆ ಅಂತ ವಾದಿ ಬೀದಿ ಬಿದ್ದು ಯರಮಂಚನಾಯಕ ಹೆಗಲ ಮ್ಯಾಲೆ ಮಗನ್ನ ಕುಂದ್ರಸ್ಕಂಡು ಬಂದಿದ್ನಂತೆ. ಆ ಹುಡುಗನ್ನ ಏನ್ ಮಾಡ್ದ ಅಲ್ಲೆ ಕೊಯ್ದುಬಿಟ್ಟ ವಾಸೆ ಕೊಯ್ದಂಗೆ ಎಳು ವಾಸೆ ಹೊಳತಂಗೆ ಕೊಯ್ದು ಬಿಸಾಕಿ ಹಂಗೆ ಹೋಗಿಬಿಟ್ಟ. ಅಯ್ಯೋ ಇವ್ನ ಹುಡುಗನ್ನ ಕೊಯ್ದುಬಿಟ್ನಲ್ಲಾ ಅಂದುಬಿಟ್ಟು ದಂಡು ದಳ ಎಲ್ಲಾ ಅವನಿಗೆ ಬೆನ್ನು ಹತ್ತಿದ್ವಂತೆ. ಹೋಗ್ತಾ ಹೋಗ್ತಾ ಅಲ್ಲಿ ಒಂದು ಜಾತಿಯವರು ಕೊತ್ತೆ ಹೊಡಿತಿದ್ರು, ಹೊಡಿಬೇಕಾದ್ರೆ ಅವರು ರೊಸ್ಕೊಂಡು ಊಟ ಮಾಡ್ತಾ ಕುಂತಿಂದ್ರಂತೆ. ಅವನು ಮುಂದೆ ಇವರು ಹಿಂದೆ ಓಡುಸ್ಕಂಡು

ಹೊಗ್ತಾ ಹೊಗ್ತಾ ಅವನೇನ್ ಮಾಡ್ದ ತಬ್ಬಿಬ್ಬು ಮಾಡಿ ಹೋಗಿ ಅವರು ಮೂವರ ಜೊತೆ ಹೋಗಿ ಕುತ್ಕಂಡಬಿಟ್ಟ ನಾಲ್ಕನೆಯವನಾಗಿ. ಹೇ ಅಲ್ಲಿ ಹುಡುಕು ಇಲ್ಲಿ ಹುಡುಕು ಅಂತ ಅವ್ನು ಹೋಗಿ ಅವರ ಗಂಗಳದಾಗೆ ಕುತ್ಕಂಡಿದ್ನ ನೋಡಿದ್ರು ಓಹೊ ಬೇರೆ ಜಾತಿಯವರ ಗಂಗಳದಲ್ಲಿ ಕುಂತಿದಾನೆ ಇಲ್ಲಿಗೆ ಕಟಾಪ್ ಆತು. ಚಿಂತುಗುಟ್ಲು ನೋಮಿಗೆ ಅವ್ನು ಬರಂಗಿಲ್ಲ ಅಂತ ಆಯಿತು. ಈ ಜಾಗದಿಂದ ನಮ್ಮವರೆಲ್ಲಾ ಬೇರೆ ಬೇರೆ ಕಡೆಗೋಗಿ ನೆಲಸಿದಾರೆ ಅಂತ ನಮ್ಮ ದೊಡ್ಡೊರು ಹೇಳ್ತಿದ್ರು.

ನಮ್ಮವರು ಶ್ರೀಶೈಲ ಕಡೆಯಿಂದ ಅಂದರೆ ನಲ್ಲಮಲ ಅಡವಿಯಿಂದ ಬಂದವರು. ಅವರು ದನಗಳನ್ನ ಮೇಯಿಸ್ಕೊಂಡು ಬಂದ್ರು. ಆಸ್ತಿ ಪಾಸ್ತಿ ಏನು ಇಲ್ಲದಂಗೆ ಶ್ರೀಶೈಲ ಕಡೆಯಿಂದ ಬಂದ ಇವರಿಗೆ ನಾಯಕ ಎಂಬ ಹೆಸರು ಹೇಗೆ ಬಂತಂದ್ರೆ ತ್ರೇತಾಯುಗಕ್ಕಿಂತ ಮುಂಚೆ ಕೃತಯುಗದಲ್ಲಿ ಶ್ರೀ ಕೃಷ್ಣನ ಕೈಯಲ್ಲಿರುವ ಸುದರ್ಶನ ಚಕ್ರಕ್ಕೆ ಅಹಂಕಾರ ಉಂಟಾಯಿತಂತೆ. ನಾನು ನನ್ನಿಂದ ವಿಷ್ಣುವಿಗೆ ಈ ಸ್ಥಾನ. ಎಲ್ಲಾ ರಾಕ್ಷಸರನ್ನು ಸೆದೆ ಬಡಿಯುವ ಶಕ್ತಿ ನನ್ನಲ್ಲಿರುವುದರಿಂದ ನಾನೇ ಶಕ್ತಿಶಾಲಿ ಅನ್ಕೊಂಡನಂತೆ. ಆಗ ಶ್ರೀಕೃಷ್ಣ (ವಿಷ್ಣು) ಸುದರ್ಶನ ಚಕ್ರಕ್ಕೆ ಹೇಳ್ತಾನಂತೆ ನೀನು ಭೂಲೋಕದಲ್ಲಿ ಸಾಮಾನ್ಯ ವ್ಯಕ್ತಿಯಾಗಿ ಜನಿಸು. ನಾನು ಸಾಮಾನ್ಯ ವ್ಯಕ್ತಿಯಾಗಿ ಜನುಸ್ತಿನಿ ನಮ್ಮಿಬ್ಬರ ಬಲಾಬಲ ಭೂಲೋಕದಲ್ಲೇ ತಿಳಿಯಲಿ ಅಂತ ಸುದರ್ಶನ ಚಕ್ರವನ್ನು ಭೂಲೋಕದಲ್ಲಿ ಸಾಮಾನ್ಯ ವ್ಯಕ್ತಿಯಂತೆ ಜನಿಸುವ ಹಾಗೆ ಮಾಡಿದ. ಅಂಗೆ ಸಾಮಾನ್ಯನಾಗಿ ಹುಟ್ಟಿದವನೇ ಕಾರ್ತಿವೀರ್ಯಾರ್ಜುನ. ವಿಷ್ಣು ಜಮದಗ್ನಿ ಪುತ್ರನಾಗಿ ಪರುಶುರಾಮನೆಂಬ ಸಾಮಾನ್ಯವ್ಯಕ್ತಿಯಾಗಿ ಹುಟ್ಟಿದ. ಕಾರ್ತಿವಿರ್ಯಾರ್ಜುನನಿಗೂ ಮತ್ತು ವಿಷ್ಣುವಿಗೂ ಕಾಳಗ ಉಂಟಾಗುವ ಸಂದರ್ಭ ಬೇಕಲ್ಲವೇ ಹಿಂಗಿರಬೇಕಾದ್ರೆ ಒಂದು ದಿನ ಕಾರ್ತಿವಿರ್ಯಾರ್ಜುನ ಬೇಟೆಗೆಂದು ಕಾಡಿಗೆ ಬಂದಾಗ ಬಿಸ್ಲಿನ ತಾಪದಿಂದ ಬವಣೆಯುಂಟಾಗುತ್ತೆ. ಆಗ ಅಲ್ಲಿ ಜಮದಗ್ನಿಯ ಆಶ್ರಮ ಕಾಣುಸುತ್ತೆ. ಅಲ್ಲಿಗೊಗ್ತಾನೆ. ಹೋದಾಗ ಅವನಿಗೂ ಅವನ ಸೈನಿಕರಿಗೂ ವಿಶೇಶ ಊಟ ಸಿಗುತ್ತೆ. ಆ ಊಟದ ರುಚಿಯುಂಡ ಕಾರ್ತಿವೀರನಿಗೆ ಆನಂದ ಮತ್ತೆ ಆಶ್ಚರ್ಯವಾಗುತ್ತೆ. ಋಷಿಮುನಿಗಳ ಆಶ್ರಮವದಲ್ಲಿ ಇಷ್ಟು ಒಳ್ಳೆ ಊಟಕ್ಕೆ ಅಷ್ಟೊಂದು ದವಸ ಧಾನ್ಯಗಳು ಎಲ್ಲಿಂದ ಬಂದವು ಅಂತ ತಿಳ್ಕಬೇಕು ಅಂತ ಋಷಿಮುನಿಗಳತ್ರ ಹೋಗಿ ಕೇಳ್ತಾನೆ. ಆಗ ಜಮದಗ್ನಿ ಋಷಿಯು ದೇವಾನುದೇವತೆಗಳು ನೆಲೆಸಿರುವಂತ ಕಾಮಧೇನು ನನ್ನ ಹತ್ರ ಐತೆ. ಲೋಕಕಲ್ಯಾಣಕ್ಕಾಗಿ ದೇವತೆಗಳು ನಮಗೆ ವರವಾಗಿ ಕೊಟ್ಟಿದ್ದಾರೆ ಅಂತ ಹೇಳ್ತಾನೆ. ಆಗ ಕಾರ್ತಿವೀರ ಲೋಕ ಕಲ್ಯಾಣ ಅನ್ನೋದು ನಮ್ಮಿಂದ ಆಗಬೇಕಾದ ಕೆಲಸ ನಿಮ್ಮಂಥ ಸಾಧು ಸಜ್ಜನರಿಗೆ ಅದು ತರವಲ್ಲ. ಅದ್ಕೆ ಕಾಮಧೇನುನ ನನಗೆ ಕೊಡು ಅಂತ ಕೇಳ್ತಾನೆ. ಇದ್ಕೆ ಕೋಪಗೊಂಡ ಜಮದಗ್ನಿ ಮುನಿ ನಾನು ಕೊಡಲ್ಲ ಅಂತಾನೆ. ಇದ್ರಿಂದ ಇಬ್ಬರಿಗೂ ಘರ್ಷಣೆ ಆಗುತ್ತೆ. ಈ ಘರ್ಷಣೆಗೆ ಕಾರ್ತಿವೀರ ನನಗೆ ಬೇಕೇಬೇಕು ಅಂತಾ ಕಾಮಧೇನುವನ್ನು ಎಳಕಂಡು ಹೋಗಾಕೆ ಹೋಗ್ತಾನೆ. ಅಂಗೆ ಎಳಿಬೇಕಾದ್ರೆ ಆ ರಭಸಕ್ಕೆ ಕಾಮಧೇನುನಲ್ಲಿದ್ದ ಮುಕ್ಕೋಟಿ ದೇವತೆಗಳೆಲ್ಲಾ ಹೊರಗೆ ಬೀಳ್ತಾರೆ. ಇವರಿಬ್ಬರ ಘರ್ಷಣೆ ನೋಡಿದ

ದೇವತೆಗಳು ಕಾರ್ತಿರಾಜನ ಸೈನಿಕರನ್ನೆಲ್ಲಾ ಒಡ್ದು ಉರುಳುಸ್ತಾರೆ. ಇದ್ರಿಂದ ಅವಮಾನಗೊಂಡ ಕಾರ್ತಿವೀರ ಕೋಪಗೊಂಡು ತನ್ನಲ್ಲಿದ್ದ ಬಾಣಗಳನ್ನ ಒಂದೊಂದಾಗಿ ಜಮದಗ್ನಿಯ ಮೇಲೆ ಹೊಡಿತಾನೆ. ಆಗ ಜಮದಗ್ನಿ ಸಾಯ್ತಾನೆ. ಇಂಗೆ ಸತ್ತ ಜಮದಗ್ನಿಯ ಹೆಣದ ಮುಂದೆ ಹೆಂಡ್ತಿ ರೇಣುಕಾ ತನ್ನ ಮಗನ್ನ ನೆನಿಸ್ಕೊಳ್ತಾಳೆ. ತಾಯಿಯ ರೋಧನೆ ಪರುಶುರಾಮನಿಗೆ ಕೇಳ್ಸಿ ಆಗ ತಾಯಿ ಹತ್ರ ಬರ್ತಾನೆ. ತಂದೆ ಸ್ಥಿತಿ ನೋಡಿ ತನ್ನ ತಾಯಿಯ ಹತ್ರ ಪ್ರತಿಜ್ಞೆ ಮಾಡ್ತಾನೆ. ನನ್ನ ತಂದೆ ಸಾವಿಗೆ ಕಾರಣರಾದ ಕ್ಷತ್ರಿಯರನ್ನ ಅವರ ವಂಶವನ್ನ ನಿರ್ನಾಮ ಮಾಡ್ತಿನಿ ಅಂತ ಶಪಥ ಮಾಡ್ತಾನೆ. ಅದರಂಗೆ ಕಾರ್ತಿವೀರನನ್ನು ಅವರ ಕ್ಷತ್ರಿಯ ವಂಶವನ್ನು ನಾಶ ಮಾಡಬೇಕು ಅಂತ ಬರ್ತಾನೆ. ಪರುಶುರಾಮನ ಕೋಪ ಕ್ರೋಧಾಗ್ನಿ ಬವಣೆಯನ್ನು ತಡಕೊಳಾಕೆ ಆಗ್ದೆ ಕೆಲವು ರಾಜರು ಹೆಂಡ್ತಿ ಮಕ್ಕಳೊಂದ್ಗೆ ಕಾಡಿಗೆ ಓಡಿಹೋಗ್ತಾರೆ. ಹಿಂಗೆ ಓಡಿ ಬಂದ ರಾಜರು ಅವರ ಹಿಂಬಾಲಕರೆಲ್ಲಾ ಅರಣ್ಯದಲ್ಲಿ ಅಲ್ಲಲ್ಲಿ ಗುಂಪು ಗುಂಪಾಗಿ ವಾಸಮಾಡ್ತಾರೆ. ಈಗ ಈ ಗುಂಪನ್ನ ನೋಡಿಕೊಳ್ಳಾಕೆ ಒಬ್ಬ ರಾಜ ಬೇಕಲ್ಲ ಅದ್ಕೆ ಒಬ್ಬ ನಾಯಕನನ್ನು ನೇಮಿಸಿಕೊಳ್ತಾರೆ. ಹಿಂಗೆ ಕ್ಷತ್ರಿಯರು ಅಂತ ಕರ್‍ಸ್ಕೊತಿದ್ದ ಜನ ಅರಣ್ಯಕ್ಕೆ ಬಂದು ನಾಯಕರಾದ್ರು, ಜೀವನ ನಡೆಸೊದಿಕ್ಕಾಗಿ ಬೇಟೆ, ದರೋಡೆ, ಕಳ್ಳತನ ಮಾಡ್ಕೊಂಡು ಇದ್ರು.

ಹಿಂಗಿರಬೇಕಾದ್ರೆ ಗುಂಪಿನ ನಾಯಕನಿಗೆ ಮಕ್ಕಳಾಗಲಿಲ್ಲ. ಅದ್ಕೆ ಅವರೇ ಒಬ್ಬ ದೇವರನ್ನ ಸೃಷ್ಟಿಮಾಡ್ಕೊಂಡ್ರು, ಅಹೋಬಲಸ್ವಾಮಿ ಅಂತ ಆ ದೇವರ ಹೆಸ್ರು, ಅದ್ಕೆ ಹರಕೆ ಕಟ್ಟಿಕೊಂಡರು. ಆಮೇಲೆ ನಾಯಕನಿಗೆ ಒಬ್ಬ ಮಗ ಹುಟ್ತಾನೆ. ಆ ಮಗುಗೆ ರತ್ನಾಕರ ಅಂತ ನಾಮಕರಣ ಮಾಡ್ತಾರೆ. ಆ ಮಗು ದುಂಡುದುಂಡಾಗಿ ಇದ್ದುದರಿಂದ ಕಂಡ ಕಂಡ ಜನ ದುಂಡ ದುಂಡ ಅಂತ ಕರೆಯಾಕೆ ಹಚ್ಕೊಂಡ್ರು. ಹಿಂಗಿರುವಾಗ ಹಿಂದೆ ಕ್ಷತ್ರಿಯರಾಗಿದ್ದವರು ಅರಣ್ಯಕ್ಕೆ ಬಂದು ನಾಯಕರಾಗಿ ಹಲವಾರು ಗುಂಪುಗಳಾಗಿ ಆ ಅರಣ್ಯದಲ್ಲಿ ವಾಸಿಸ್ತಿದ್ರು, ಹಿಂಗೆ ವಾಸ ಮಾಡುತಿದ್ದ ಬೇರೆ ನಾಯಕರ ಮಗಳನ್ನು ಗುಂಡನಿಗೆ ಮದುವೆ ಮಾಡಿದ್ರು, ಮದುವೆಯಾದ್ಮೇಲೆ ಗುಂಡ ಒಂದು ದಿನ ಕಳ್ಳತನಕ್ಕೆ ಹೋದಾಗ ತನ್ನ ಹಿಂಬಾಲಕರನ್ನ ಕಳ್ಳತನಕ್ಕೆ ಕಳುಸಿ ಒಂದು ಮರದ ಕೆಳಗೆ ಮಲಗಿರ್ತಾನೆ. ಆಗ ಒಂದು ಕನಸು ಬಿದ್ದಂಗಾತು. ಆ ಕನಸಲ್ಲಿ ಅಶರೀರವಾಣೀಯೊಂದು ನುಡಿಯಿತಂತೆ 'ಸ್ವಾರ್ಥನಾಗಿ ತೊಳಲಿ ಬಳಲಬೇಡ ಪರಾರ್ಥದೊಳು ದೇಹವೆನಿಸಿಕೊಂಡು ನಿತ್ಯಾ ಪದವಿಯನ್ನು ಪಡೆದು ಸರ್ವ ಸೋದರನಾಗಿ ಬಾಳಿ ಬಾ' ಎಂದು ಅಶರೀರವಾಣಿಯೊಂದು ನುಡಿದಂಗೆ ಬಾಸವಾಯಿತಂತೆ. ಎದ್ದು ಆ ಅಶರೀರವಾಣಿಯನ್ನು ನೆನೆದು ಬರುವಾಗ ಕಳ್ಳತನಕ್ಕೆ ಹೋಗಿದ್ದ ತನ್ನ ಸಹಚರರು ಸಪ್ತ ಋಷಿಗಳನ್ನು ತಡೆದು ನಿಲ್ಲಿಸಿದ್ದರು. ಅಲ್ಲಿಗೆ ಬಂದ ದಂಡ ಆ ಋಷಿಗಳನ್ನು ತಡೆದು ನಿಲ್ಲಿಸಿದಕ್ಕೆ ಕಾರಣ ಕೇಳಿದ. ಆ ಅಶರೀರವಾಣಿ ನುಡಿಯಿಂದ ಏನೋ ಒಂಥರ ಆಗಿ ಅವರನ್ನ ಬಿಟ್ಟು ಬಿಡೋಕೆ ಹೇಳಿದ. ಆಗ ಅಲ್ಲಿದ್ದ ಋಷಿಗಳು ನಾಯಕ ದುಂಡನಿಗೆ ಇಂತ ಪಾಪದ ಕೆಲಸ ಮಾಡ್ತ ಇದಿಯಲ್ಲಾ ಇದು ಸರಿಯೇ ಎಂದು ಪ್ರಶ್ನಿಸ್ತಾರೆ. ಅದ್ಕೆ ನಮಗೆ ಪಾಪ ಪುಣ್ಯವೆಂಬುದು ಗೊತ್ತಿಲ್ಲ ನಮ್ಮ ಹಿರಿಕರು ಹಿಂದಿನಿಂದಲೂ ಕಾಯಕವಾಗಿ ಇದನ್ನೇ

ಮಾಡ್ಕೊಂಡು ಬಂದಿದಾರೆ ನಮಗೆ ಧರ್ಮ ಪಾಪ ಪುಣ್ಯ ಎಲ್ಲಾ ಗೊತ್ತಿಲ್ಲ ಅಂತ ಹೇಳ್ತಾನೆ. ಆಗ ಸಪ್ತಋಷಿಗಳು ಸರಿ ಹಂಗಾದ್ರೆ ನೀನು ಒಂದು ಕೆಲ್ಸ ಮಾಡು ನೀನು ಮಾಡೊ ಈ ಪಾಪದ ಕೆಲ್ಸದಲ್ಲಿ ನಿನ್ನ ನಂಬ್ಕೊಂಡಿರೊರು ಎಷ್ಟು ಪಾಲು ತಗೊಳ್ತಾರೆ ಕೇಳ್ಕಂಡ್ ಬಾ ಅಂತ ಹೇಳಿದ್ರು. ಆ ಮಾತನಾ ಕೇಳಿದ ಗುಂಡ ಸೀದಾ ತನ್ನ ಹೆಂಡ್ತಿಯತ್ರ ಬಂದ. ಬಂದು ಕೇಳ್ದ ನಾ ಮಾಡ್ತಿರೊ ಪಾಪದಲ್ಲಿ ನೀ ಎಷ್ಟು ಪಾಲು ತಗೊಳ್ತಿಯಾ ಅಂತ ಕೇಳಿದ. ಅದ್ಕೆ ಅವಳು ನೀನು ಸಂಸಾರದ ಜವಾಬ್ದಾರಿನ ಹೊತ್ಕೊಂಡಿರಬೇಕಾದ್ರೆ ನಿನ್ನ ಪಾಪದಲ್ಲಿ ನಾನ್ಯಾಕೆ ಪಾಲು ತಗೊಬೇಕು ಅಂದ್ಲು. ಆಗ ತನ್ನ ಪರಿವಾರದವರನಾ ಕೇಳ್ತಾನೆ ಅದ್ಕೆ ಅವರು ನಮಗೆ ಏನು ಗೊತ್ತಿಲ್ಲ. ನೀನು ಏನು ಹೇಳ್ತಿಯೊ ಅದನ್ನ ಕೇಳೋರು ನಾವು ಪಾಪ ಪುಣ್ಯವೆಲ್ಲಾ ನಿನ್ನದೆ ಅಂತ ಹೇಳ್ತಾರೆ. ಈ ಮಾತಗಳನ್ನು ಕೇಳಿದ್ಮೇಲೆ ಪಾಪ ಪ್ರಜ್ಞೆಯಿಂದ ಸಪ್ತ ಋಷಿಗಳತ್ರ ಬಂದು ನಂಗೆ ತುಂಬಿದ್ದ ಅಜ್ಞಾನವನ್ನ ಬಿಡಿಸಿದ್ರಿ ನೀವು ಅಂತ ಅವರ್ಗೆ ಸಾಷ್ಟಾಂಗ ನಮಸ್ಕಾರ ಮಾಡಿದ್ನಂತೆ. ಆಗ ನನ್ನ ಅಜ್ಞಾನ ಅಂಧಕಾರವನ್ನ ಹೊಗಲಾಡಿಸಿದ ನೀವೇ ನಂಗೆ ಸರಿಯಾದ ದಾರಿ ತೋರುಸ್ಬೇಕೆಂತ ಕೇಳಿಕೊಂಡ. ಆಗ ಋಷಿಗಳು ಎರಡು ಆಲದ ಮರಗಳ ಮಧ್ಯ ಕೂರ್‍ಸಿ ಆ ಮರ ಈ ಮರ ಅಂತ ನುಡಿತಾ ಇರು ಅಂತ ಹೇಳಿದ್ರಂತೆ ಅವನು ಹಂಗೆ ಹೇಳ್ತಾ ಇರಬೇಕಾದ್ರೆ ರಾಮ ರಾಮ ಅನ್ನೊ ಶಬ್ದ ಬಂದೇಟಿಗೆ ಅವರು ಮಾಯವಾಗಿಬಿಟ್ರು.

ಈ ಕತೆ ಹಿಂಗಿರಬೇಕಾದ್ರೆ ಭೂ ಪ್ರದೇಶದಲ್ಲಿ ರಾವಣನ ಉಪಟಳ ವಿಪರೀತವಾಗಿರಲು ರಾವಣ ನರನಿಂದಲ್ಲದೇ ದೇವರುಗಳಿಂದ ನನಗೆ ಸಾವು ಬರಬೇಕೆಂದು ಕೇಳಿಕೊಂಡಿರ್ತಾನೆ. ಹಿಂಗಿರಬೇಕಾದ್ರೆ ದೇವಾನುದೇವತೆಗಳು ಅಂದ್ರೆ ಮುಕ್ಕೋಟಿ ದೇವತೆಗಳು ರಾವಣನ ಉಪಟಳವನ್ನ ಸಹಿಸ್ಕಂಬಾಕೆ ಆಗದೆ ಗೋಮಾತೆಯ ಮೈಯಲ್ಲಿ ಹುದುಗಿಕೊಳ್ತಾರೆ. ಅಲ್ಲಿನೇ ದೇವಾನುದೇವತೆಗಳೆಲ್ಲರೂ ಒಂದು ಕಡೆ ಸೇರಿ ರಾವಣನ ಸಂಹಾರ ಹೆಂಗೆ, ಯಾರು ಹೆಂಗೆ ಯಾರ ಹೊಟ್ಟೇಲಿ ಹುಟ್ಬೇಕು ಅಂತ ಮೀಟಿಂಗ್ ಮಾಡ್ತಾರೆ. ಆಗ ಶ್ರೀಮನ್ನಾರಾಯಣನೇ ರಾಮನಾಗಿ ಹುಟ್ಬೇಕು ಎಂದು ತೀರ್ಮಾನಿಸ್ತಾರೆ. ಹಿಂಗೆ ತಿರ್ಮಾನಿಸಿದ ವಿಚಾರನಾ ಗೌಪ್ಯವಾಗಿಟ್ಕಬೇಕು ಅಂತ ಅಂದ್ಕೊಳ್ತಾರೆ. ಆದ್ರೆ ಆ ಗುಂಪ್ನಲ್ಲಿ ನಾರದ ಇರ್ತಾನೆ. ನಾರದನಿಗೆ ಯಾವುದೇ ಗೌಪ್ಯವನ್ನ ತನ್ನಲ್ಲೆ ಇಟ್ಟುಕೊಳ್ಳದಿರುವ ಶಾಪ ಇರ್ತತೆ. ಅದ್ಕೆ ನಾರದ ಈ ವಿಚಾರನಾ ಯಾರಿಗೇಳಬೇಕು ಅಂತ ಯೋಚಿಸ್ತಾ ಬರ್‍ತಿರ್‍ಬೇಕಾದ್ರೆ ದಾರಿನಲ್ಲಿ ರಾಮ ರಾಮ ಅಂಬ ಶಬ್ದ ಬರ್ತಿತ್ತು. ಇದನ್ನ ಕೇಳಿದ ನಾರದ ಎಲ್ಲಿಂದ ಬರ್ತಾ ಐತೆ ಈ ಶಬ್ದ ಅಂತ ತಿಳಿದು ನೋಡಿದ್ರೆ ಹಿಂದೆ ಕುಂತಿದ್ದ ದುಂಡನ ಜಾಗದಲ್ಲಿ ಒಂದು ದೊಡ್ಡ ಹುತ್ತ ಬೆಳ್ದು ಆ ಹುತ್ತದೊಳಗಿಂದ ಶಬ್ದ ಬರ್ತಿತ್ತು. ಇದನ್ನ ಮನಗಂಡ ನಾರದರು ಹುತ್ತದ ಹತ್ರಕ್ಕೆ ಹೊಗಿ ತನ್ನ ಕಮಂಡಲದಲ್ಲಿನ ಮಂತ್ರಯುಕ್ತ ನೀರನ್ನ ಹುತ್ತಕ್ಕೆ ಹಾಕ್ತಾರೆ. ಆ ಹುತ್ತದ ಮಣ್ಣೆಲ್ಲಾ ಹೋಗಿ ಕುಳಿತಿದ್ದ ದುಂಡ ಪುಟಕಿಟ್ಟ ಚಿನ್ನದಂತೆ ಹೊಳೆದಂಗೆ ನಾರದರಿಗೆ ಕಂಡ್ನಂತೆ. ಆಗ ನಾರದರು ನೀನು ವಾಲ್ಮೀಕ ಹುತ್ತದಿಂದ ಬಯಲಿಗೆ ಬಂದಿರೊದ್ರಿಂದ ನೀನು ಇನ್ಮೇಲೆ ವಾಲ್ಮೀಕಿ ಅನ್ನೊ ಹೆಸರಿಂದ ಕರೆಯಲ್ಪಡುತ್ತಿಯಾ. ಇನ್ನು ಮುಂದೆ ಶ್ರೀಮನ್ನಾರಾಯಣ ರಾಮನಾಗಿ ರಾವಣನ

ಸಂಹಾರಕ್ಕಾಗಿ ಅವತಾರವಾಗ್ತಾನೆ. ಈ ಕತೆಯನ್ನ ನೀನು ಬರೀಬೇಕು. ಅದು ರಾಮಾಯಣವಾಗುತ್ತೆ ಅಂತ ಹೇಳಿದ. ಅಲ್ಲೆ ಕಾಡ್ನಲ್ಲೆ ಜೀವನ ನಡಿಸಿಕೊಂಡು ಅಲ್ಲೆ ಸೇರ್ಕೊಂಡಬಿಟ್ರು, ಹಿಂಗೆ ಕ್ಷತ್ರಿಯರೋಗಿ ನಾಯಕರಾಗಿದ್ದು. ಅದೇ ಒಂದು ಇದ್ರಲ್ಲಿ ಬಂದಿದ್ದು,

ಮತ್ತೆ ದ್ವಾಪರ ಯುಗದಲ್ಲಿ ಶ್ರೀಮನ್ನಾರಾಯಣ ಪಾಂಡವರು ಕೌರವರು ಅಂತ್ಯಕಾಲದಲ್ಲಿ ಇವರೆಲ್ಲಾ ಹೋಗಿಬಿಟ್ರು ಆವಾಗ ಒಂದು ದಿವ್ಸ ಬೇಟೆಯಾಡಬೇಕಾದ್ರೆ ಅಡವಿಯಲ್ಲಿ ಹಸುಗಳನ್ನಹೊಡ್ಕೊಂಡು ಹೋಗಿದ್ದ. ಒಂದು ಆಲದ ಮರದ ಕೆಳಗೆ ಕಾಲು ಅಲ್ಲಾಡ್ಸಕೊಂಡು ಮಲಗಿದ್ನಂತೆ. ಮಲಗಿರ್ಬೇಕಾದ್ರೆ ಒಬ್ಬ ವ್ಯಾದ (ವ್ಯಾದ ಅಂದ್ರು ಬ್ಯಾಡ್ರೆ) ಬೇಟೆಗಾಗಿ ಬಂದಿದ್ನಂತೆ. ದೂರದಿಂದ ನೋಡಿದ್ರೆ ಒಂದು ಚಿಗುರೆ ಕಾಲು ಮಿಸಿಕಿದಂಗೆ ಕಾಣ್ತಂತೆ. ಬಿಲ್ಲು ಇಟ್ಟು ಹೊಡ್ದ. ಅಂಗಾಲಾಗೆ ತೂರಿ ಹೊಂಟೊಯ್ತಂತೆ. ಆವಾಗ ಆಹಾ ಎಂಬ ಶಬ್ದ ಬಂದೈತೆ. ಬಂದಾಗ ಹತ್ರ ಹೋಗಿ ನೋಡಿದ್ರೆ ಶ್ರೀಮನ್ನಾರಾಯಣ. ಆಯ್ತಪ್ಪ ಹಿಂದೆ ತೇತ್ರಾಯುಗದಲ್ಲಿ ನೀನು ವಾಲಿ ನಾನು ರಾಮನಾಗಿ ಜನಿಸಿದಾಗ ನಿನ್ನ ಮರೇಲಿ ನಿಂತು ಹೊಡ್ದಿದ್ದೆ. ಇದು ಅಲ್ಲಿಗೆ ಸಮಾಪ್ತಿಯಾಯ್ತು. ಇನ್ನು ಈ ಗೋವುಗಳು ಈ ಬಿರುದಾವಳಿಗಳು ಎಲ್ಲವನ್ನ ಮುಂದೆ ನೀನು ನಡ್ಸ್ಕೊಂಡು ಹೋಗ್ಬೇಕು. ಅಂತ ಹೇಳಿಬಿಟ್ಟು ಅಲ್ಲಿ ಐಕ್ಯವಾದ ಅಂತ ಹೇಳ್ತಾರೆ. ಅದಕ್ಕಾಗಿ ಆ ಗೋವುಗಳನ್ನೇ ಇವತ್ತು ದೇವರೆತ್ತುಗಳು ಅಂತ ಮಾಡಿಕೊಂಡಿರಾದು. ನಮ್ಮಲ್ಲಿ ದಾಸಯ್ಯಗಳು ಇರ್ತಾರೆ. ಅವರ ಹತ್ರ ಶಂಖಚಕ್ರ ಅದೆ ಲಾಂಛನ. ಇದ್ರಲ್ಲಿ ಎರಡು ಪಂಗಡ ಬರ್ತಾವೆ. ಎನುಮ್ಲಾರು, ಮಂದ್ಲಾರು ಅಂತ. ಎನುಮ್ಲಾರಿಗೆ ಬಿಲ್ಲುದೇವರು, ಕತ್ತಿ ಇರ್ತಾವೆ. ಇವರು ದೊರೆಗಳು. ವಿಭೂತಿ ಪುರುಷರು. ಮಂದ್ಲಾರು ದಾಸಯ್ಯಗಳು ಮತ್ತು ಪೂಜಾರಿಗಳು. ಲಾಂಛನ ಅಂತ ಇಲ್ಲ ಶಂಖ, ಜಾಗಟೆ, ಗರುಡಗಂಭ. ಇವರು ಏಕನಾಮಧಾರಿಗಳು. ಈ ವಂಶದಲ್ಲಿ ಹುಟ್ಟಿದ ಮಂದರಾಜ ಅನ್ನೋನೇ ನಮ್ಮ ಮೂಲಪುರುಷ. ಮಂದರಾಜು ಹೊಟ್ಟೆಗೆ ದಾನಸಾಲಮ್ಮ ಹುಟ್ಟುತಾಳೆ. ಆ ದಾನಸಾಲಮ್ಮನ ಹೊಟ್ಟೇಲಿ ಏಳು ಜನ ಮಕ್ಕಳು ಹುಟ್ಟತ್ತಾರೆ.

**ಶುಕ್ಲಮಲ್ಲಿನಾಯಕ ದಾನಸಾಲಮ್ಮ ಬಿಡ್ಡಲು (ಮಕ್ಕಳು)**

೧. ಭಾನುಕೋಟಿರಾಜು ಕೊಡಕು ಯರಮಂಚಿನಾಯಕಡು

೨. ತಿಪ್ಪಂಡೆರಾಜು ಕೊಡಕು ದೊಡ್ಡಕಾಮಯ್ಯ

೩. ಕೊಂಡೆಮಲೆರಾಜು ಕೊಡಕು ಸೂರೆಪಾಪಯ್ಯ

೪. ಕಾಟಮಲೆರಾಜು ಕೊಡಗುಲು ಕಾಕಳ್ಳಿ ಕುಮಾರುಡು ಮತ್ತು ಕಾಕಾಮಂಚಿ ಕುಮಾರುಡು

೫. ಸೆಟ್ಲಪಟ್ಲಪ್ಪರಾಜು ಕೊಡಕು ರೆಪ್ಪಲಸೂರಿ

೬. ಸೂರಪ್ಪರಾಜು ಕೊಡಕು ಸೂರೇಚಿನ್ನಕಾಮುಡು

೭. ಚಿನ್ನಪ್ಪರಾಜು ಕೊಡಕು ಹೊಟ್ಯಾಳನಾಯಕುಡು

ಈ ಏಳು ಜನರಿಂದ ಇಷ್ಟು ದೊಡ್ಡ ಕಂಪಳ ಆಯ್ತು. ಇವರೆಲ್ಲಾ ಕಂಪಳರಂಗಸ್ವಾಮಿನ ತಮ್ಮ ಕಾಸು ಕಂಪಳಕ್ಕ ದೇವರನ್ನಾಗಿ ಮಾಡ್ಕೊಂಡಿದಾರೆ. ಎಂದು ಹೇಳುತ್ತಾರೆ.

**ಕಾಡುಗೊಲ್ಲರ ಸೃಷ್ಟಿ ಪುರಾಣಗಳು:**

'ಚಿತ್ರದೇವರ ಮತ್ತು ಕಾಟಮದೇವರ ಪುರಾಣದಲ್ಲಿ ಕಾಡುಗೊಲ್ಲರ ಮೂಲಪುರುಷರು ಹೇಗೆ ಜನ್ಮ ತಾಳಿದರು ಎಂದು ಹೇಳುವುದಕ್ಕೋಸ್ಕರ ಒಂದು ಕಥೆ ಇದೆ. ಒಂದು ಸಲ ಈಶ್ವರ ಪಾರ್ವತಿ ಆಕಾಶ ಮಾರ್ಗದಲ್ಲಿ ಪ್ರಪಂಚ ಸುತ್ತುತ್ತಾ ಬರುತ್ತಿದ್ದಾಗ ಕಾಡಿಗೆ ಬೆಂಕಿ ಬಿದ್ದಿರುವುದನ್ನು ಕಂಡರು. ಕಾಡಿನ ಪ್ರಾಣಿಗಳ ಗೋಳನ್ನು ಕೇಳಿದ ಈಶ್ವರ ಅವುಗಳನ್ನು ರಕ್ಷಿಸುವುದಕ್ಕೋಸ್ಕರ ಬೆಂಕಿಯನ್ನು ಆರಿಸಲು ಆರಂಭ ಮಾಡಿದ. ಆ ಪ್ರಯತ್ನದಲ್ಲಿ ಅವನು ಬೆವೆತ್ತಿದ್ದಾಗ ಪಾರ್ವತಿ ಅವನ ಮೈಯನ್ನು ತನ್ನ ಸೀರೆಯ ಸೆರಗಿನಿಂದ ಒರೆಸುತ್ತಿದ್ದಳು. ಆಗ ಈಶ್ವರನ ಬೆವರಿನ ಮೂರು ಬೆವರ ಹನಿಗಳು ನೆಲಕ್ಕೆ ಬಿದ್ದು ಅಲ್ಲಿ ಮೂವರು ಮಕ್ಕಳು ಹುಟ್ಟಿದರು. ಅವರಲ್ಲಿ ಮೊದಲನೆಯವನು ಕಾಟಯ್ಯ, ಎರಡನೆಯವನು ಚಿತ್ತಯ್ಯ, ಮೂರನೆಯವ ಓಬಳ ನರಸಿಂಹ. ಈಶ್ವರನ ಮೈಬೆವರಿನಿಂದ ಈ ಮಕ್ಕಳು ಹುಟ್ಟಿದ್ದರಿಂದ ಪಾರ್ವತಿ ಈ ಮೂವರು ನಮ್ಮ ಮಕ್ಕಳೆಂದೇ ಭಾವಿಸಿದಳು. 'ಆಗ ಈಶ್ವರ ಚಿತ್ರಗಿರಿ ಎಂಬ ಪಟ್ಟಣವನ್ನು ಕಟ್ಟಿ ಈ ಮೂವರು ಅಲ್ಲಿ ಸುಖವಾಗಿ ಜೀವನ ಮಾಡಲು ಅವಕಾಶ ಕಲ್ಪಿಸಿದ. ಕಾಟಯ್ಯನಿಗೆ ಚಿಂತಾಮಣಿ ಎಂಬ ಪುಸ್ತಕವನ್ನು, ಒಂದು ಚಿನ್ನದ ಗಿಂಡಿಯನ್ನು, ಒಂದು ಚಿನ್ನದ ಬೆತ್ತವನ್ನು ಕೊಟ್ಟು ಶಿವ–ಪಾರ್ವತಿ ಕೈಲಾಸಕ್ಕೆ ಹೊರಟು ಹೋದರು.[೬]

ಶಿವನ ಬೆವರಿನಿಂದ ಹುಟ್ಟಿದ ಕಾಟಯ್ಯ, ಚಿತ್ತಯ್ಯ, ಓಬಳನರಸಿಂಹನನ್ನು ಕಾಡುಗೊಲ್ಲರು ತಮ್ಮ ಕುಲದ ಮೂಲ ಪುರುಷರೆಂದು ಪೂಜಿಸುತ್ತಾರೆ. ಅವರಿಂದಲೇ ನಮ್ಮ ಸಂತತಿ ಬೆಳೆಯಿತೆಂದು ಹೇಳುತ್ತಾರೆ. ಜೀ.ಶಂ.ಪರಮಶಿವಯ್ಯರವರು ತಮ್ಮ ಮಹಾಪ್ರಬಂಧದಲ್ಲಿ ಶಿವನ ಬೆವರಿನಿಂದ ಕಾಟಯ್ಯ ಮತ್ತು ಚಿತ್ತಯ್ಯ ಹುಟ್ಟಿದರು ಎಂದು ಹೇಳುತ್ತಾ ಓಬಳನರಸಿಂಹನ ಬಗೆಗೆ ಏನನ್ನು ಹೇಳುವುದಿಲ್ಲ. ಚಿನ್ನಮ್ಮ ಎಂಬ ಹೆಂಗಸಿಗೆ ಮಕ್ಕಳಾಗದಿದ್ದಾಗ ಕಾಡುಗೊಲ್ಲರ ಮೂಲಪುರುಷ ಚಿತ್ತಯ್ಯನನ್ನು ಅವಳು ಸ್ಮರಿಸುತ್ತಾಳೆ. ಚಿತ್ತಯ್ಯ ಕಾಡುಗೊಲ್ಲ ಸಮುದಾಯದ ಮೂಲಪುರುಷ. ಇವನು ಶಿವನ ಬೆವರಿನಿಂದ ಹುಟ್ಟಿದವನು ಎಂಬುದನ್ನು ಕಾಡುಗೊಲ್ಲರ ಸೃಷ್ಟಿಪುರಾಣ ಹೇಳುತ್ತದೆ. ಆದರೆ ಜುಂಜಪ್ಪ ವೀರಭದ್ರನ ಅವತಾರ ಎಂಬುದು ಜುಂಜಪ್ಪನ ಹುಟ್ಟಿನ ಬಗೆಗಿರುವ ಪುರಾಣ ಹೇಳುತ್ತದೆ.

'ಅಪ್ಪನಗುಡ್ಡೆ ರೊಪ್ಪದ ಏಣು ಆಲಪ್ಪನ ಗುಡ್ಡೆ ಹಾಲು ಹರಿಯೋ ಬಯಲಿನಲ್ಲಿ ಹಂಚಿ ಹುಲ್ಲಿನ ಅರಮನೆಯಲ್ಲಿ ಮತ್ತು ಕೊಪ್ಪಿಗೆ ಅರಮನೆಯಲ್ಲಿ ಚಿನ್ನಮ್ಮ ಬಾಳು ಮಾಡುತ್ತಾ ಇದ್ದಳು. ಹೆಂಡತಿ ಮೈ ನೆರೆದು ವರ್ಷವಾದರೂ ಕೆಂಗುರಿ ಮಲ್ಲೇಗೌಡನ ಆವಿನ ಗೂಡಿನಲ್ಲಿ ಪಾಲು ಪಂಚಾಮೃತದ ಅಡುಗೆಯನ್ನು ಮಾಡಿಕೊಂಡು ಒಬ್ಬನೇ ಇದ್ದು ಬಿಟ್ಟ. ಅವನಿಗೆ ಏಳು ಗೂಡಿನ ದನ, ಏಳುಗೂಡಿನ ಕುರಿ ಇದ್ದವು.

ಹಂಚಿ ಹುಲ್ಲಿನ ಅರಮನೆಯಲ್ಲಿ ಚಿನ್ನಮ್ಮ ಒಬ್ಬಳೇ ಇದ್ದದ್ದು ಚಿನ್ನಮ್ಮನನ್ನು ಹೊಟ್ಟ್ಯಾಗ ಮಕ್ಕಳಿಲ್ಲದವಳು ಕಟ್ಟೇಗ ನೀರಿಲ್ಲದವಳು ಎಂದು ಕರಿತಲೆಯ ಮುಂಡೆಯರು ಹಂಗಿಸಿದರು. ನಿಂದಕರ ನುಡಿಗಳನ್ನು ತಾಳಲಾರದೇ ಚಿನ್ನಮ್ಮ ಮಂಚಕ್ಕೆ ಮಕಾಡೆ ಮಲಗಿಬಿಟ್ಟಳು.

ಮನೆದೇವರು ಚಿತ್ತಯ್ಯ ಕಾವಿ ಕಮಂಡಲ ಧರಿಸಿ, ಕೊರಳಲ್ಲಿ ರುದ್ರಾಕ್ಷಿ ಧರಿಸಿ ಬಂದನು.ಅದರೂ ಮಕ್ಕಳ ಫಲವನ್ನು ನೀಡಲು ಅವನಿಗೂ ಆಗಲಿಲ್ಲ. ತಿರುಪತಿ ತಿಮ್ಮಪ್ಪ ಅವಳ ಮೊರೆ ಕೇಳಿ ದಾಸನಾಗಿ ಬಂದನು. ಅವನಿಗೂ ಮಕ್ಕಳ ಭಾಗ್ಯ ನೀಡಲು ಸಾದ್ಯವಾಗಲಿಲ್ಲ. ಕೊನೆಗೆ ಚಿನ್ನಮ್ಮ ಅಯ್ಯೋ ಗೌರಸಮುದ್ರದ ಮಾರಿಯೇ ಈಶ್ವರನ ಮಗಳೇ ನೀನಾದರೂ ನನಗೆ ಮಕ್ಕಳನ್ನು ಕೊಡು ಎಂದು ಬೇಡಿಕೊಂಡಳು. ಗೌರಸಮುದ್ರ ಮಾರಿ ಬಡಗಲ ಸೀಮೆಯ ರಾಜ್ಯ ಬಿಟ್ಟು ಕರಿಕೋಣ, ಬಿಳಿಕೋಣದ ರಥದಲ್ಲಿ ಹಂಚಿ ಹುಲ್ಲಿನ ಅರಮನೆಗೆ ಬಂದಳು. ಮದುವೆಯಾಗಿ ಹನ್ನೆರೆಡು ವರ್ಷವಾಯಿತು. ಗಂಡ ಹೆಂಡತಿ ಬೇರೆ ಬೇರೆ ಇದ್ದರು. ಮಕ್ಕಳು ಹೇಗೆ ಆಗಬೇಕು. ನಿನಗೆ ಮಕ್ಕಳ ಫಲ ಇದ್ದರೂ ಗಂಡಿನ ಹಿಂದೆ ಒಂದು ಹೆಣ್ಣು ಸಂತಾನ ಇದೆ. ಅದು ಕೇಡು ಮಾರಿಯ ಫಲಪ್ರಸಿದ್ಧನಾಗಿ ಬಾಳಿ, ನಂತರ ಕೈಲಾಸಕ್ಕೆ ಬರಬೇಕೆಂದು ಆಜ್ಞೆ ಮಾಡಿದಳು. ಈಶ್ವರ, ವೀರಭದ್ರನ ಎಲ್ಲಾ ಸತ್ವಗಳನ್ನು ಒಂದು ಮಾವಿನ ಹಣ್ಣಿನಲ್ಲಿ ತುಂಬಿ ಅದನ್ನು ಗೌರಸಮುದ್ರದ ಮಾರಿಯ ಕೈಯಲ್ಲಿ ಕೊಡುತ್ತಾನೆ. ಆ ಮಾವಿನ ಹಣ್ಣನ್ನು ತಂದು ಗೌರಸಮುದ್ರದ ಮಾರಿ ಚಿನ್ನಮ್ಮನ ಕೈಗೆ ಕೊಡುತ್ತಾ ನೀನು ಎಲ್ಲರ ಎದುರಿಗೆ ಕಾಣುವಂತೆ ಗಂಡನ ಹತ್ತಿರ ಹೋಗಿ ಅವನ ನೆರಳು ಬೀಳಿಸಿಕೊಂಡು ಮಾವಿನ ಹಣ್ಣು ತಿನ್ನು ಎಂದು ಹೇಳುತ್ತಾಳೆ.

ಚಿನ್ನಮ್ಮನಿಗೆ ಮೂರು ತಿಂಗಳು ತುಂಬಿತು; ಅವಳ ಸಮಸ್ಯೆಗಳೂ ಆರಂಭವಾದವು. ವೀರಭದ್ರನ ರೂಪದಲ್ಲಿದ್ದ ಮಗು ಹೊಟ್ಟೆಯೊಳಗೆ ಮಾತನಾಡತೊಡಗಿತು. ಅದನ್ನು ಕೇಳಿದ ಚಿನ್ನಮ್ಮ ನನ್ನ ಹೊಟ್ಟೆಯೊಳಗೆ ಯಾವುದೇ ಪೀಡೆ ಪಿಶಾಚಿ ಸೇರಿಕೊಂಡಿದೆ ಎಂದು ಚಡಪಡಿಸುತ್ತಾ ಅಣ್ಣಂದಿರಿಗೆ ಹೇಳುತ್ತಾಳೆ. ನಿನ್ನ ಹೊಟ್ಟೆಯಲ್ಲಿ ಬೆಳೆಯತ್ತಿರುವುದು ಸಾಕ್ಷಾತ್ ಈಶ್ವರನ ಪುತ್ರ ವೀರಭದ್ರ, ಅವನು ನಿನ್ನ ನಡುಬೆನ್ನಿನಿಂದ ಹುಟ್ಟುತ್ತಾನೆ. ಯಾರಿಂದಲೂ ಶಾಸ್ತ್ರ ಕೇಳುವ ಅವಶ್ಯಕತೆ ಇಲ್ಲ ಎಂದು ಅಣ್ಣಂದಿರು ಹೇಳುತ್ತಾರೆ. ವೀರಭದ್ರ ಹೊಟ್ಟೆಯೊಳಗಿದ್ದುಕೊಂಡೇ ನಾನು ಹುಟ್ಟುವ ಮೊದಲು, ಹುಟ್ಟುವ ಸಂದರ್ಭದಲ್ಲಿ ಮತ್ತು ಹುಟ್ಟಿದ ನಂತರ ಏನೇನು ಮಾಡಬೇಕು ಎಂಬುದನ್ನು ಚಿನ್ನಮ್ಮನಿಗೆ ಹೇಳುತ್ತಿದ್ದ. ವೀರಭದ್ರನು ಹೇಳಿದಂತಯೇ ಚಿನ್ನಮ್ಮ ಎಲ್ಲಾ ಸಿದ್ಧತೆ ಮಾಡಿಕೊಂಡಳು. ಚಿನ್ನಮ್ಮನಿಗೆ ಒಂಬತ್ತು ತಿಂಗಳು ತುಂಬಿತು. ಸೋಮವಾರ ಸೂರ್ಯ ಹುಟ್ಟುವ ವೇಳೆಗೆ ಸರಿಯಾಗಿ ಚಿನ್ನಮ್ಮನ ನಡುಬೆನ್ನು ಪಟಪಟನೆ ಒಡೆಯಿತು. ಆ ನಡುಬೆನ್ನಿನಿಂದ ಮಗು ಎಗರಿ ಹತ್ತಿರದಲ್ಲಿದ್ದ ಹುತ್ತದ ಮೇಲೆ ಕುಳಿತುಕೊಂಡಿತು. ಮಗು ನೆಲಕ್ಕೆ ಬಿದ್ದಿತೆಂದು ಗಾಬರಿಯಿಂದ ಚಿನ್ನಮ್ಮ ಅದನ್ನು ಮುಟ್ಟಲು ಹೋದಳು. ಆಗ ಮಗು ಜುಂಜಪ್ಪ ನಿನ್ನ ನೆರಳನ್ನೇನಾದರೂ ನನಗೆ ಸೋಕಿಸಿದರೆ ನಿನ್ನನ್ನು ಸುಟ್ಟು ಬೂದಿ ಮಾಡ್ತಿನಿ ಎಂದು ಚಿನ್ನಮ್ಮನಿಗೆ ಕೂಗಿ ಹೇಳಿತು.

ಹೀಗೆ ಬುಡಕಟ್ಟು ಸಮುದಾಯಗಳ ಸೃಷ್ಟಿಪುರಾಣಗಳಲ್ಲಿ ಆ ಸಮುದಾಯದವರೇ ಕಟ್ಟಿಕೊಂಡಿರುವ ಅನೇಕ ಕಥೆಗಳಿವೆ. ಇಂತಹ ಅನೇಕ ಸೃಷ್ಟಿಕತೆಗಳು ಆ ಜನಾಂಗದ ಅಸ್ತಿತ್ವವನ್ನು ಕಾಪಾಡಿಕೊಳ್ಳಲು ಕಟ್ಟಿಕೊಂಡಂತಹ ಕತೆಗಳಿರಬಹುದು. 'ನಿರ್ಗತಿಕರಾಗಿ ಕಾಡಿನಿಂದ ನಾಡಿಗೆ ಆಗಮಿಸಿದ ಅನೇಕ ಮೂಲನಿವಾಸಿಗಳ ಬದುಕು ಅತಂತ್ರವಾಗಿತ್ತು. ನಾಗರಿಕತೆ, ಕೈಗಾರಿಕ ಕ್ರಾಂತಿ ಸಾಮಂತಶಾಹಿ ವ್ಯವಸ್ಥೆಯನ್ನು ನಿಯಂತ್ರಿಸುತ್ತಿದ್ದ ವೈದಿಕಶಾಹಿ ನೀತಿ ಇದಕ್ಕೆ ಪೂರಕವಾಗಿದ್ದ ಅರೆ ಊಳಿಗಮಾನ್ಯ ವ್ಯವಸ್ಥೆ ಮತ್ತು ಇವುಗಳಿಂದ ಸಾಮಾಜಿಕ ಮತ್ತು ರಾಜಕೀಯ ಅಧಿಕಾರಗಳನ್ನು ಕಿತ್ತುಕೊಳ್ಳಲು ಹವಣಿಸುತ್ತಿದ್ದ ವಸಾಹತುಶಾಹಿ ನೀತಿಯಿಂದ ಮೂಲನಿವಾಸಿಗಳು ಪರದಾಡುತ್ತಿದ್ದರು. ಅಧಿಕಾರಕ್ಕಾಗಿ ಈ ನಾಲ್ಕು ನೀತಿಗಳು ರಾಜಿ ಮಾಡಿಕೊಂಡಿದ್ದರಿಂದ ಮೂಲನಿವಾಸಿಗಳು ಸ್ವಾತಂತ್ರ್ಯಕ್ಕಾಗಿ ಪರದಾಡುವಂತಾಯಿತು. ಈ ಸಂಘರ್ಷದಲ್ಲಿ ನಮ್ಮ ಅಸ್ತಿತ್ವ ರೂಪಿಸಿಕೊಳ್ಳುವುದು ಹೇಗೆ? ಅಸ್ತಿತ್ವ ರೂಪಿಸಿಕೊಳ್ಳಬೇಕಾದರೆ ಏನು ಮಾಡಬೇಕು ಎಂಬ ಪ್ರಶ್ನೆಗಳೆಲ್ಲ ಉದ್ಭವಿಸಿದ್ದವು.ಆಲದ ಮರದಂತೆ ಬೇರು ಬಿಟ್ಟುಕೊಂಡು ಅಟ್ಟಹಾಸದಿಂದ ಮೆರೆಯುತ್ತಿದ್ದ ಪ್ರಬಲವಾದ ಸಂಸ್ಕೃತಿಗಳು ಇದ್ದವು. ಅಲ್ಲದೆ ಬಲಿಷ್ಠವಾದ ರಾಜಕೀಯ ವ್ಯವಸ್ಥೆಯ ಬಂಧನವೂ ಇತ್ತು ಇಂತಹುಗಳ ಮುಂದೆ ಮುಖಾಮುಖಿಯಾಗಿ ನಿಂತು ಹೋರಾಡುವ ಶಕ್ತಿ ಬುಡಕಟ್ಟು ಸಮುದಾಯಗಳಿಗಿರಲಿಲ್ಲ. ಇಂತಹ ಸಂದರ್ಭದಲ್ಲಿ ಭಕ್ತಿ ಚಳುವಳಿಯ ಕಾಲ ಪ್ರಾರಂಭವಾಯಿತು. ಆ ಭಕ್ತಿ ಚಳುವಳಿ ಸಾಮಾಜಿಕ ವಿಷಮತೆಗಳು ತುದಿಯಾವಸ್ಥೆಗೆ ತಲುಪಿ ಇಡೀ ಸಮಾಜ ವಿಘಟನೆಯ ಹಂತದಲ್ಲಿರುವಾಗ ಹುಟ್ಟಿಕೊಂಡಿತು. ಸಾಮಾಜಿಕವಾಗಿ ಸಮಾನರಲ್ಲದ ಜನರನ್ನು ಅದು ದೇವರೆದುರು ಸಮಾನರೆಂದು ವರ್ಣಿಸುತ್ತದೆ. ಅಂದರೆ ಅನೇಕ ಉಪಸಂಸ್ಕೃತಿಗಳನ್ನು ಮಾನಸಿಕವಾಗಿ ಸಮಪಾತಳಿಯಲ್ಲಿ ನಿಲ್ಲಿಸಲು ಭಕ್ತಿ ಚಳುವಳಿ ಪ್ರಯತ್ನಿಸುತ್ತದೆ. ಭಕ್ತಿ ಚಳುವಳಿಯ ಭಿನ್ನ ಸಂಸ್ಕೃತಿಗಳ ರೇಖಾತ್ಮಕ ಶ್ರೇಣಿಕರಣವನ್ನು ತಾತ್ವಿಕವಾಗಿ ನಿರಾಕರಿಸುತ್ತದೆ. ಅದರ ಬದಲು ಅದು ಎಲ್ಲಾ ಸಂಸ್ಕೃತಿಗಳನ್ನು ಸಮಪಾತಳಿಯಲ್ಲಿ ನಿಲ್ಲಿಸುತ್ತದೆ. ಇಂತಹ ನೀತಿಯನ್ನು ಬಳಸಿಕೊಂಡು ಅನೇಕ ನಿರ್ಲಕ್ಷ್ಯಕ್ಕೊಳಪಟ್ಟ ಸಮುದಾಯಗಳು ತಮ್ಮ ಸಮುದಾಯದ ಚಾರಿತ್ರಿಕ ವ್ಯಕ್ತಿಗಳ ಕಥೆಗಳನ್ನು ವಿಶಿಷ್ಟವಾಗಿ ಹೆಣೆದು ಹೊರಗಡೆ ಹಾಕಲು ಪ್ರಯತ್ನಿಸಿದವು. 'ಶ್ರೇಣೀಕೃತ ಸಮಾಜದಲ್ಲಿ ತಮ್ಮ ಅಸ್ತಿತ್ವವನ್ನು ಗುರುತಿಸಿಕೊಳ್ಳುವುದಕ್ಕಾಗಿ ಅನೇಕ ಸಮುದಾಯಗಳು ಆಯಾ ಸಮುದಾಯದ ಚಾರಿತ್ರಿಕ ವ್ಯಕ್ತಿಯನ್ನು ದೈವ ಮೂಲದಿಂದ ಬಂದವನೆಂದು ನಂಬುತ್ತಾರೆ. ಅವನು ಶಿವನ ಅಥವಾ ವೀರಭದ್ರನ ಅವತಾರ. ಸಮಾಜದ ದುಷ್ಟ ಶಕ್ತಿಗಳನ್ನೆಲ್ಲಾ ಶಿಕ್ಷಿಸಲು ಸಿದ್ಧನಾಗಿಯೇ ಧರೆಗೆ ಬಂದಿದ್ದಾನೆ ಎಂಬ ಕಲ್ಪನೆಗಳೊಂದಿಗೆ ಪುರಾಣ ಕಥೆಗಳು ಹೊರಗಿನ ಪ್ರಪಂಚಕ್ಕೆ ಕಾಲಿಟ್ಟವು. ಕಾಡಿನ ಮಧ್ಯದಲ್ಲಿದ್ದಾಗ ಮೂಲನಿವಾಸಿಗಳು ನಮ್ಮ ಮೂಲ ಪುರುಷರು ಶಿವನ ಬೆವರಿನಿಂದ ಸಾಮಾನ್ಯವಾಗಿ ಮನುಷ್ಯನಂತೆ ಹುಟ್ಟಿದ್ದರು ಎಂದು ಹೇಳುತ್ತಿದ್ದ ಸೃಷ್ಟಿ ಕಥೆಗಳು ಪ್ರಬಲ ರಾಜಕೀಯ ವ್ಯವಸ್ಥೆ, ಬಲಿಷ್ಠ ಸಂಸ್ಕೃತಿಗಳ ಮಧ್ಯೆ ತನ್ನನ್ನು ಗುರುತಿಸಿಕೊಳ್ಳಲು ಈ ಮೂಲನಿವಾಸಿಗಳ ಚಾರಿತ್ರಿಕ ವ್ಯಕ್ತಿಗಳು ಅನೇಕ ದೈವಗಳ ಅವತಾರ, ಶಕ್ತಿಗಳ ಪ್ರತಿರೂಪ ಪಡೆದು ಈ ಭೂಮಿಗೆ ಬಂದರು ಎಂದು ಹೇಳುವ ಪರಂಪರೆ ಪ್ರಾರಂಭವಾಯಿತು'.[೭]

ಕಾಡುಗೊಲ್ಲರು ಮತ್ತು ಮ್ಯಾಸಬೇಡರು ಎರಡು ಬುಡಕಟ್ಟುಗಳು ಮೊದಲು ಶೈವ ಮೂಲಕ್ಕೆ ಸೇರಿದ್ದು ವೈಷ್ಣವ ಸಂಪ್ರದಾಯದ ಪ್ರಭಾವಕ್ಕೆಒಳಗಾಗಿರುವುದನ್ನು ಕಾಣಬಹುದು. ಈ ಎರಡು ಸಮುದಾಯಗಳಲ್ಲಿ ಶೈವ ಮತ್ತು ವೈಷ್ಣವ ಎರಡೂ ಸಂಪ್ರದಾಯಗಳಿರುವುದನ್ನು ಕಾಣಬಹುದು. ವೈಷ್ಣವ ಸಂಪ್ರದಾಯದ ಪ್ರಭಾವ ಎಷ್ಟೇ ಇದ್ದರೂ ಅವರ ಮೂಲ ಮಾತ್ರ ಶೈವದ್ದೇ ಎಂದು ಗುರುತಿಸಬಹುದು.

**ಪುರಾಣಗಳು**

ಪ್ರಸ್ತುತ ಅಧ್ಯಯನದಲ್ಲಿ ಕಂಡುಬರುವ ಅಂಶವೆಂದರೆ ಪುರಾಣಗಳದು ಇತಿಹಾಸ ಪೂರ್ವಕಾಲ ಪುರಾಣಗಳ ಮಿತಿಯೆಂದರೆ ದೈವಿಕ ಅಥವಾ ದೇವತೆಗಳು ಎಂಬುದು. ಒಂದು ಘಟನೆ ದೈವಿಕ ನೆಲೆಯಲ್ಲಿ ಪುರಾಣವಾಗಬಹುದು. ಸ್ಥಳದಹುಟ್ಟು, ಸ್ಥಳದ ಮಹಿಮೆಯನ್ನು, ವಿವರಿಸುವುದನ್ನು ಸ್ಥಳ ಪುರಾಣಗಳು ಎನ್ನುವರು. ಇದೇ ರೀತಿ ಕುಲದ ಹುಟ್ಟನ್ನು ಕುಲಪುರಾಣ ಎಂದು ಕರೆಯುವ ವಾಡಿಕೆ ಇದೆ. ನಿಸರ್ಗ ರಹಸ್ಯವನ್ನು ವಿವರಿಸುವ ಪುರಾಣಗಳು, ಈ ಭೂಮಿಯ ಮೇಲೆ ಪ್ರಾಣಿ, ಪಕ್ಷಿ, ಮರ, ಗಿಡ, ಗುಡ್ಡ, ಸರೋವರ, ಹೇಗೆ ಸೃಷ್ಟಿಯಾದವು ಎಂಬುದರ ಬಗ್ಗೆ ಪುರಾಣ ಕಥೆಗಳು ವಿವರಿಸುತ್ತವೆ ಪುರಾಣಗಳಲ್ಲಿ ನಿಸರ್ಗದ ಸೃಷ್ಟಿ, ಮನುಕುಲದ ಸಂಪ್ರದಾಯ, ವೃತ್ತಿ, ಪದ್ಧತಿಗಳು ಹೀಗೆ ವಸ್ತುವಿಗೆ ತಕ್ಕಂತೆ ಇವುಗಳನ್ನು ಸೃಷ್ಟಿ ಪುರಾಣಗಳು, ಸ್ಥಳ ಪುರಾಣಗಳು, ಕುಲಪುರಾಣಗಳು, ಎಂದು ವಿಂಗಡಿಸಲಾಗಿದೆ.

ಪುರಾಣಗಳು ಸಾಮಾನ್ಯ ವಸ್ತುವಿಗೆ ಪಾವಿತ್ರ್ಯ, ಮಹತ್ವ, ಪ್ರಾಮುಖ್ಯತೆ ತಂದುಕೊಂಡುತ್ತವೆ. ಪುರಾಣಗಳು ಹೇಳುವ ಪ್ರತಿಯೊಂದು ಕುಲದ ಹುಟ್ಟು ಇರಬಹುದು, ಜಾತಿಯಹುಟ್ಟು ಇರಬಹುದು. ಆಯಾ ಕುಲ, ಜಾತಿಯವರಿಗೆ ನಂಬಿಕೆ ಹುಟ್ಟಿಸುತ್ತವೆ ಪಾವಿತ್ರ್ಯತೆ ಮೂಡಿಸುತ್ತವೆ. ಉದಾಹರಣೆಗೆ ಕಾಡುಗೊಲ್ಲರಲ್ಲಿ ತಾಳಿಕಟ್ಟದ ಚಿತ್ತಮುತ್ತಿ ಗೊಲ್ಲರ ಸಂಪ್ರದಾಯ, ಕ್ಯಾತೆಲಿಂಗ, ರೆಡ್ಡಿಗರ ಮನೆಯಿಂದ ಬಂದ ಬಗೆ, ಮ್ಯಾಸಬೇಡರಲ್ಲಿ ಗಾದ್ರಿಪಾಲನಾಯಕ ಹುಲಿಯೊಡನೆ ಹೋರಾಡಿದ ಪ್ರಸಂಗ ಹೀಗೆ ಪುರಾಣಗಳು ಆಯಾ ಕುಲದವರಿಗೆ ಪಾವಿತ್ರ್ಯತೆಯನ್ನು ಮೂಡಿಸುತ್ತವೆ. ಪುರಾಣಗಳು ಹಲವಾರು ಕಾರಣಗಳಿಗೆ ಮುಖ್ಯವೆನಿಸುತ್ತವೆ. ಭೌಗೋಳಿಕ ಪ್ರಾಕೃತಿಕ ಅಂಶಗಳ ಬಗ್ಗೆ, ಮಾನವ ಸಂಸ್ಕೃತಿಯ ವಿಕಾಸ, ನಡೆದ ಘಟನೆಗಳ ಪವಾಡ, ಅದ್ಭುತಗಳನ್ನು ಜನರ ನೆನಪಿನಲ್ಲಿ ಉಳಿಯುವಂತೆ ಅಂತ್ಯತ ಸರಳವಾಗಿ ವಿವರಿಸುತ್ತವೆ. ಎಲ್ಲರಿಗೂ ಅರ್ಥೈಸುತ್ತವೆ. ಮನುಷ್ಯನಿಗೆ ಪ್ರಕೃತಿಯೊಂದಿಗಿದ್ದ ಒಡನಾಟ, ಹೊಂದಾಣಿಕೆಯನ್ನು ಹಾಗು ಅದನ್ನು ಅರ್ಥಮಾಡಿಕೊಳ್ಳಲು ಪುರಾಣಗಳು ಮಹತ್ತರವಾದವು. "ಹರ್ಕ್ಸೋವಿಟ್ಸ್‌ರವರು ಪುರಾಣಕ್ಕೆ ಸಂಬಂಧಿಸಿದಂತೆ "Myth is the 'charter of belief' and gives point and meaning to the mitualistic behaviour that derives from its sanction" ಎಂದು ಹೇಳುತ್ತಾರೆ.[೯] ನಂಬಿಕೆಗೆ ಬರೆದ ಶಾಸನವನ್ನೇ ಪುರಾಣ ಎನ್ನುಬಹುದು. ಒಂದು ನಂಬಿಕೆ ಸರಿಯಾದುದೆಂಬುದನ್ನು ಸಮರ್ಥಿಸಿ ಅದಕ್ಕೆ ಮಹತ್ವ ತಂದುಕೊಡುತ್ತದೆ.

ಕಾಡುಗೊಲ್ಲರ ಪುರಾಣಗಳಲ್ಲಿ ಜುಂಜಪ್ಪನಪುರಾಣ, ಎತ್ತಪ್ಪನಪುರಾಣ, ಚಿತ್ರದೇವರಪುರಾಣ, ಕಾಟಮದೇವರಪುರಾಣ, ಪಾತೇದೇವರಪುರಾಣಗಳನ್ನು, ಗುರುತಿಸಬಹುದಾಗಿದೆ. ಜುಂಜಪ್ಪ ಮತ್ತು ಎತ್ತಪ್ಪ ಪುರಾಣಕ್ಕೆ ಸಂಬಂಧಿಸಿದ ಚರ್ಚೆಗಳನ್ನು ನಾಲ್ಕನೇ ಅಧ್ಯಾಯದ ಸೃಷ್ಟಿ ಪುರಾಣಗಳಲ್ಲಿ ತಿಳಿಸಲಾಗಿದೆ. ಮ್ಯಾಸಬೇಡರಲ್ಲೂ ಪುರಾಣಗಳು ಕುಲದ ಮೂಲದ ಬಗ್ಗೆ ಹುಟ್ಟಿಕೊಂಡಿರುವ ಪರಿಯನ್ನು ಮ್ಯಾಸಬೇಡರ ಸೃಷ್ಟಿ ಪುರಾಣವು ಹೇಳುತ್ತದೆ. ಮ್ಯಾಸಬೇಡ ಸಮುದಾಯದ ಮೂಲ ಪುರುಷನ ಹುಟ್ಟು ಬ್ರಹ್ಮ, ವಿಷ್ಣು, ಮಹೇಶ್ವರರಿಂದಾಯಿತು ಎಂದು ಹೇಳುತ್ತಾರೆ.

**ಮ್ಯಾಸಬೇಡರ ಸೃಷ್ಟಿ ಪುರಾಣ:**

ಚಿತ್ರದುರ್ಗ ಜಿಲ್ಲೆಯ ಮ್ಯಾಸಬೇಡರು ಬೇಟೆ ಪಶುಪಾಲನೆ ನಂತರ ಕೃಷಿ ವೃತ್ತಿ ಅನುಸರಿಸಿಕೊಂಡಿದ್ದಾರೆ. ಇಂದು ಬೇಟೆ ಅವರಲ್ಲಿ ಉಪಪ್ರಧಾನ ವೃತ್ತಿಯಾಗಿದೆ. ಅವರಲ್ಲಿರುವ ಸೃಷ್ಟಿ ಪುರಾಣ ಅವರ ಮೂಲವನ್ನು ಕುರಿತು ಹೀಗೆ ಹೇಳುತ್ತದೆ. ಮ್ಯಾಸಬೇಡರ ಸಮುದಾಯದ ಮೂಲ ಪುರುಷನ ಹುಟ್ಟು ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರಿಂದಾಯಿತು ಎಂದು ಹೇಳುತ್ತಾರೆ. ಈ ತ್ರಿಮೂರ್ತಿಗಳು ಒಂದು ಸಲ ಪ್ರಪಂಚ ಸುತ್ತುತ್ತಾ ಭೂಲೋಕಕ್ಕೆ ಬಂದರು. ಭೂಮಿಯ ಮೇಲೆ ಅರಣ್ಯ ಮಾತ್ರ ಇತ್ತು. ನರಮನುಷ್ಯರ ಸುಳಿವೇ ಇರಲಿಲ್ಲ. ತ್ರಿಮೂರ್ತಿಗಳು ಈ ಭೂಮಂಡಲದಲ್ಲಿ ಮೊಳಕಾಲ್ಮೂರು ಬಳಿ ಇರುವ ಬಿ.ಜಿ.ಕೆರೆಯ ಬಳಿ ಕಮರದ ಕಾನಿನಲ್ಲಿ ಒಂದು ಒಂದು ಸರೋವರದ ಮುಂದೆ ಇಳಿದರು. ಆಗ ಬೆಳಗಾಗಿತ್ತು. ಬ್ರಹ್ಮ, ವಿಷ್ಣು, ಮಹೇಶ್ವರರು ಮುಖ ತೊಳೆದುಕೊಂಡು ಹಣೆಗೆ ನಾಮ ಇಟ್ಟುಕೊಂಡರು. ನಾಮ ಇಟ್ಟುಕೊಳ್ಳುವಾಗ ಶುದ್ಧಿಗೊಳಿಸಿಕೊಳ್ಳಲು ಅವರಿಗೆ ಗೋಮೂತ್ರ ಬೇಕಾಗಿತ್ತು. ಆಗ ಬ್ರಹ್ಮನು ಒಂದು ಒಂಟಿ ಕೊಂಬಿನ ಬಲ್ಲಾವನ್ನು ಪಂಪಾದ್ರಿ ಎಂಬ ಬಸವನನ್ನು ಸೃಷ್ಟಿಸಿದ. ಗೋಮೂತ್ರದ ಹನಿಗಳನ್ನು ತೆಗೆದುಕೊಂಡು ಬ್ರಹ್ಮ ವಿಷ್ಣು ನಾಮವನ್ನು, ಮಹೇಶ್ವರ ವಿಭೂತಿಯನ್ನು ಧರಿಸಿಕೊಂಡರು. ಮಹೇಶ್ವರ ವಿಭೂತಿ ಹಚ್ಚಿಕೊಳ್ಳುವಾಗ ವಿಭೂತಿಯ ಒಂದು ಕಣ ಒಂಟಿಕೊಂಬಿನ ಬಲ್ಲಾವಿನ ಕಾಲಗೊರಸಿನಲ್ಲಿ ಸಿಕ್ಕಿಕೊಂಡಿತು. ಆ ಸರೋವರವನ್ನು ಬಿಟ್ಟು ಹೋಗುವಾಗ ಬಲ್ಲಾ ಮತ್ತು ಪಂಪಾದ್ರಿ ಬಸವನನ್ನು ಸಾಕುವವರು ಯಾರು ಎಂಬ ಚಿಂತೆ ವಿಷ್ಣು ಮಹೇಶ್ವರನಲ್ಲಿ ಮೂಡಿತು. ಆಗ ಬ್ರಹ್ಮನು ಆ ಎರಡು ಜೀವಿಗಳನ್ನು ಸಾಕಿ ಸಲಹುವವನು ಅವುಗಳಿಂದಲೇ ಹುಟ್ಟುತ್ತಾನೆ. ಬಲ್ಲಾವ ಮತ್ತು ಬಸವ ಕಾಡಿನಲ್ಲಿ ಮೇಯ್ದು, ಸರೋವರಕ್ಕೆ ಬಂದು ನೀರು ಕುಡಿದು ಹಾಯಾಗಿರುತ್ತವೆ. ಬಲ್ಲಾವಿನ ಕಾಲಗೊರಸಿಯಲ್ಲಿ ಸಿಕ್ಕಿಹಾಕಿಕೊಂಡಿದ್ದ ವಿಭೂತಿಯ ಒಂದು ಕಣ ಒಂಬತ್ತು ತಿಂಗಳು ಒಂಬತ್ತು ದಿವಸ ಒಂಬತ್ತು ಗಳಿಗೆಯಲ್ಲಿ ಬೆಳೆದು ಗರ್ಭಬಿಚ್ಚಿ ಅದರಲ್ಲಿ ಗಂಡು ಮಗು ಜನಿಸುತ್ತದೆ. ಆ ಮಗು ಕೊಳದ ದಡದಲ್ಲಿ ಬಿದ್ದು ಅಳುತ್ತಿರುವುದನ್ನು ಆಕಾಶದಲ್ಲಿ ಹೋಗುತ್ತಿದ್ದ ಶಿವ-ಪಾರ್ವತಿ ನೋಡುತ್ತಾರೆ. ಮಗುವಿನ ಹತ್ತಿರ ಬಂದು ಮಗುವಿನ ಹೊಕ್ಕಳ ಹುರಿ ಕೊಯ್ದು, ಹಣೆಗೆ ಸುಟಿಗೆ ಹಾಕಿ ಕೊಳದ ದಡದಲ್ಲಿ ಮಲಗಿಸಿ ಮಗುವಿಗೆ ಚೆಟ್ಲುಗೊಟ್ಲು ಮಲ್ಲನಾಯಕ ಎಂದು ಹೆಸರಿಡುತ್ತಾರೆ (ಆ ಮಗು ಕಾಡಿನಲ್ಲಿ ಗಿಡ-ಮರಗಳ ಮಧ್ಯದಲ್ಲಿ ಹುಟ್ಟಿದ್ದರಿಂದ ಹೀಗೆ ಹೆಸರನ್ನಿಟ್ಟರು). ಆ ಮಗು ಮಲಗಿದ

ಸ್ಥಳದಲ್ಲಿ ಒಂದು ಮರವಿತ್ತು. ಆ ಮರದ ಮೇಲೆ ತುಡುಬೆ ಜೇನು ಗೂಡು ಕಟ್ಟಿರುತ್ತದೆ. ಆ ಜೇನುಗೂಡಿನಿಂದ ಒಂದೊಂದೇ ಹನಿ ಜೇನುತುಪ್ಪ ಮಗುವಿನ ಬಾಯಿಗೆ ಬೀಳುತ್ತದೆ. ಹೀಗೆ ಮಲ್ಲನಾಯಕ ಬೆಳೆಯುತ್ತಾನೆ ದೊಡ್ಡವನಾದ ಮಲ್ಲನಾಯಕನ ಬಲ್ಲಾವನ್ನು ಪಂಪಾದ್ರಿ ಬಸವನನ್ನು ಪ್ರತಿದಿನ ಕಮರದ ಕಾನಿನ ಸರೋವರಕ್ಕೆ ಕರೆತಂದು ನೀರಾಟ ಆಡಿ ಹೋಗುತ್ತಿದ್ದ. ಒಂದು ದಿನ ಗಂಧರ್ವಕನ್ಯೆಯೊಬ್ಬಳು ಮಲ್ಲನಾಯಕನನ್ನು ಕಂಡು ಮೋಹಿತಳಾಗಿ ಅವನನ್ನೇ ಲಗ್ನವಾಗಿ ಕಾಡಿನಲ್ಲಿ ಉಳಿದುಕೊಳ್ಳುವಳು. ಅವರಿಗೆ ಚುಂಚುಲಕ್ಷ್ಮೀ ಎಂಬ ಹೆಣ್ಣು ಮಗಳು ಹುಟ್ಟುತ್ತಾಳೆ. ಅವಳು ಕಾಡಿನಲ್ಲಿ ಬೆಳೆದು ದೊಡ್ಡವಳಾಗುತ್ತಾಳೆ. ವಿಷ್ಣು ನರಸಿಂಹನ ಅವತಾರದಲ್ಲಿ ಹಿರಣ್ಯಕಶ್ಯಪನನ್ನು ಕೊಂದು ಕೋಪಾಗ್ನಿ ಆರಿಸಿಕೊಳ್ಳಲು ಬರುತ್ತಿರುವಾಗ ಚುಂಚಲಕ್ಷ್ಮೀ ನರಸಿಂಹನನ್ನು ತಡೆದು ಅವನ ಸಿಟ್ಟನ್ನು ಶಮನಗೊಳಿಸಿ ನನ್ನನ್ನು ಮದುವೆಯಾಗಬೇಕು ಮತ್ತು ನನ್ನ ವಂಶಕ್ಕೆ ದೇವತೆಯಾಗಿರಬೇಕೆಂದು ಬೇಡಿಕೊಳ್ಳುತ್ತಾಳೆ. ನರಸಿಂಹನು ಚುಂಚಲಕ್ಷ್ಮಿಯನ್ನು ಮದುವೆಯಾಗಿ ಅವಳೊಂದಿಗೆ ಸಂಸಾರ ನಡೆಸಿ ದೇವಲೋಕಕ್ಕೆ ಹೋಗುತ್ತಾನೆ. ಚುಂಚುಲಕ್ಷ್ಮಿಯ ಹೊಟ್ಟೆಯಿಂದ ಪೆದ್ದಪ್ಪನಾಯಕ, ಕೋರಿ ಯರಮಂಚನಾಯಕ ಮತ್ತು ಕೋರಿಪಾಪನಾಯಕ ಹುಟ್ಟುತ್ತಾರೆ. ಅವರೇ ಬೇಡನಾಯಕರ ಮೂಲ ಪುರುಷರೆಂದು ಅವರ ಸೃಷ್ಟಿ ಪುರಾಣ ಹೇಳುತ್ತದೆ.

'ಪಶುಪಾಲನೆಯ ಹಂತದಲ್ಲಿ ಸೃಷ್ಟಿಯಾದ ಈ ಪುರಾಣದಲ್ಲಿ 'ಬಸವ'ಅವರ ಕುಲ ಮೂಲದ ಪ್ರತೀಕ. ಬಸವನ ಗೊರಸಿನಿಂದ ಮ್ಯಾಸಬೇಡರ ಸಮುದಾಯದ ಮೂಲ ಪುರುಷನ ಸೃಷ್ಟಿಯಾಗುತ್ತದೆ. ಈ ಹಂತದವರೆಗೆ ತಮ್ಮ ಕುಲದ ಮೂಲವನ್ನು ಮತ್ತು ಕುಲಚಿನ್ಹೆ ಅಥವಾ ಕುಲಾರಾಧನೆಯನ್ನು ಗುರುತಿಸಿಕೊಳ್ಳುವ ಅವರು ಅನಂತರ ಚುಂಚಲಕ್ಷ್ಮಿಯ ಪ್ರಸ್ತಾಪ ತರುತ್ತಾರೆ. ಚುಂಚಲಕ್ಷ್ಮೀ ಮತ್ತು ನರಸಿಂಹನ ಕೂಡುವಿಕೆಯಿಂದ ಹುಟ್ಟಿದ ಮೂವರು ನಾಯಕರೇ, ಮೂಲ ಪುರುಷರು ಎಂದು ಹೇಳುವಲ್ಲಿ ಅವರು ತಮ್ಮ ಕುಲದ ಮೂಲವನ್ನು ಸಾಂಕೇತಿಕವಾಗಿ ಮೇಲ್‌ಸ್ಥರಕ್ಕೆ ಏರಿಸಿಕೊಳ್ಳುತ್ತಾರೆ. ತಮ್ಮ ಸುತ್ತಲಿನ ಶಿಷ್ಟ ಪಂಗಡಗಳ ಜೊತೆ ಗುರುತಿಸಿಕೊಳ್ಳಲು ಮಾಡಿದ ಪ್ರಯತ್ನ ಇದಾಗಿದೆ. ಅಂದರೆ ತಾವು ಕೂಡ ಉತ್ತಮ ಕುಲದವರಿಗಿಂತ ಕಡಿಮೆ ಇಲ್ಲ. ನಮ್ಮ ಮೂಲವು ದೊಡ್ಡ ವ್ಯಕ್ತಿಗಳಿಂದಲೇ ಆದದ್ದು ಎಂಬ ಈ ಧೋರಣೆ ಲೋಕದೃಷ್ಟಿಯ ಬ್ರಹ್ಮಾತ್ಮೀಕರಣಕ್ಕೆ ಸಾಕ್ಷಿ. ಆದರೆ ಅವರ ಪರಿಸರ ಅಂಥ ಒಂದು ಪುರಾಣದ ಸೃಷ್ಟಿಗೆ ಒತ್ತಾಯಿಸಿದೆ ಎಂಬ ಅಂಶವೂ ಇಲ್ಲಿ ಮುಖ್ಯವಾಗುತ್ತದೆ'ಹಿ.ಚಿ.ಬೋರಲಿಂಗಯ್ಯ ಹೇಳಿರುವ ಮಾತು ಮ್ಯಾಸಬೇಡರಲ್ಲಿರುವ ಸೃಷ್ಟಿ ಪುರಾಣಕ್ಕೆ ಮಾತ್ರವಲ್ಲ ಕಾಡಿನಲ್ಲಿ ಹುಟ್ಟಿ ಕಾಡಿನಿಂದ ನಾಡಿಗೆ ಆಗಮಿಸಿದ ಮತ್ತು ನಾಗರೀಕತೆಯ ಪ್ರಭಾವಕ್ಕೊಳಗಾದ ಅನೇಕ ಸಮುದಾಯಗಳಲ್ಲಿ ಪುರಾಣಗಳ ಸ್ಥಿತಿಯೂ ಅದಕ್ಕೆ ಹೊರತಾಗಿಲ್ಲ.

**ಐತಿಹ್ಯಗಳು:**

ಐತಿಹ್ಯಗಳು ಎನ್ನುವ ಪರಿಕಲ್ಪನೆ "ಒಂದು ನಿರ್ದಿಷ್ಟ ವ್ಯಕ್ತಿ, ಸ್ಥಳ, ಘಟನೆ, ಚರಿತ್ರೆ, ಸಮಾಜ, ಸಂಸ್ಕೃತಿಯ ಹಿನ್ನಲೆಯಲ್ಲಿ ಹುಟ್ಟಿಕೊಳ್ಳುವ ಕಥೆಯೇ ಐತಿಹ್ಯ". ಮೌಖಿಕ ಅಥವಾ ಗದ್ಯರೂಪದಲ್ಲಿ ನಿರೂಪಿಸುವ ಕಂಠಸ್ಥಸಂಪ್ರದಾಯದ ಕಥೆಗಳಲ್ಲಿ ಜನಪದ ಕಥೆ, ಐತಿಹ್ಯ ಮತ್ತು ಪುರಾಣ ಎಂಬ

ಮೂರು ಪ್ರಕಾರಗಳನ್ನು ಗುರುತಿಸುತ್ತಾರೆ (ರಾಲ್ಫ್‌ಸ್ಟೀಲ್‌ಬಾಗ್). ಕಥೆಗಳಿಗಿಂತ ಪುರಾಣ ಮತ್ತು ಐತಿಹ್ಯಗಳ ಉದ್ದೇಶ ಬೇರೆ, ಐತಿಹ್ಯ ಪುರಾಣಗಳಲ್ಲಿ ಕಾಲ, ವ್ಯಕ್ತಿ, ಸ್ಥಳದ ನಿರ್ದಿಷ್ಟತೆ ಇದೆ. ಪುರಾಣ ಮತ್ತು ಐತಿಹ್ಯಗಳು ನಿರ್ದಿಷ್ಟ ಸಾಮಾಜಿಕ ಅಥವಾ ಧಾರ್ಮಿಕ ಉದ್ದೇಶಕ್ಕಾಗಿ ನಿರೂಪಿತವಾಗಿರುತ್ತವೆ. ಕಥೆಗಳ ಉದ್ದೇಶ ಮನೋರಂಜನೆಯಾಗಿರುತ್ತದೆ. ಐತಿಹ್ಯಗಳಲ್ಲಿ ಕಥೆಗೆ ಕಾರಣವಾದ ವಸ್ತು ಮೊದಲೆ ವಾಸ್ತವ ಪ್ರಪಂಚದಲ್ಲಿ ನಡೆದಿರುತ್ತದೆ ಎಂದು ಜನ ಭಾವಿಸುತ್ತಾರೆ. ಐತಿಹ್ಯಗಳಲ್ಲಿ ಸಾಂಸ್ಕೃತಿಕ ಚರಿತ್ರೆ ಹಾಗು ಇತಿಹಾಸದ ಅನೇಕ ಅಂಶಗಳು ಹುದುಗಿರುತ್ತವೆ. ಇಂದು ಜನರಲ್ಲಿ ಪ್ರಚಲಿತವಿರುವ ನಂಬಿಕೆ ಆಚಾರವಿಚಾರ, ಸ್ಥಳ ಮಹಿಮೆಯನ್ನು ತಿಳಿದು ಕೊಳ್ಳುವುದಕ್ಕೆ ಐತಿಹ್ಯಗಳು ಬಹುಮುಖ್ಯ ಆಧಾರವಾಗುತ್ತವೆ. ಜನರ ದೃಷ್ಟಿಯಿಂದ ಅನೇಕ ಆಚರಣೆಗಳು. ನಂಬಿಕೆಗಳು ಸಂಪ್ರದಾಯಗಳು ಮರೆಯಾಗದಂತೆ ನೋಡಿಕೊಳ್ಳಲು ಐತಿಹ್ಯಗಳು ಮಹತ್ತರ ಪಾತ್ರವಹಿಸುತ್ತವೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಕುಲದ ಹುಟ್ಟಿನ ಬಗ್ಗೆ ಸಾಂಸ್ಕೃತಿಕ ವೀರರ ಬಗ್ಗೆ, ಬೆಡಗುಗಳ ಹುಟ್ಟಿನಬಗ್ಗೆ ಸಾಂಸ್ಕೃತಿಕ ವೀರ ದೈವವಾಗಿ ಪೂಜಿಸುವಂತಾಗಿದ್ದು ಹೀಗೆ ಹಲವಾರು ಐತಿಹ್ಯಗಳನ್ನು ಕಾಣಬಹುದು. ಕಾಡುಗೊಲ್ಲರ ಐತಿಹ್ಯಗಳಲ್ಲಿ ಅವರು ಉತ್ತರಭಾರತದಿಂದ ಬಂದ ಐತಿಹ್ಯ. ಕರಡಿಬುಳ್ಳಪ್ಪನ ಐತಿಹ್ಯ, ಗೌರಸಂದ್ರ ಮಾರಕ್ಕನ ಐತಿಹ್ಯ, ಕಂಬೇರ ಚಿನ್ನಮ್ಮ ಮಗನನ್ನು ಪಡೆದ ಐತಿಹ್ಯ, ಎತ್ತಪ್ಪ ಮತ್ತು ಜುಂಜಪ್ಪನ ಪವಾಡಗಳು ಮತ್ತು ಸಾಹಸದ ಐತಿಹ್ಯಗಳು, ಕ್ಯಾತೇಲಿಂಗನ ಐತಿಹ್ಯ, ನವಣೆ ಮತ್ತು ಹುರುಳಿಬತ(ವ್ರತ)ದ ಬಗೆಗಿನ ಐತಿಹ್ಯ ಹೀಗೆ ಹಲವಾರು ಐತಿಹ್ಯಗಳನ್ನು ಕಾಡುಗೊಲ್ಲರಲ್ಲಿ ಕಾಣಬಹುದಾಗಿದೆ.

**ಕರಡಿಗೊಲ್ಲರಿಗೆ ಸಂಬಂಧಿಸಿದ ಐತಿಹ್ಯ**

ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲರ ಹಟ್ಟಿಗಳಲ್ಲಿ ಪ್ರಾಚೀನಕಾಲದಿಂದಲು ಅಥವಾ ಹಿರಿಯ ತಲೆಮಾರುಗಳಿಂದಲು ರೂಢಿಸಿಕೊಂಡು ಬಂದಿರುವ ಕಥೆಯ ಒಂದು ರೂಪವೇ ಐತಿಹ್ಯ. ವಾಸ್ತವಿಕವಾಗಿ ನಡೆದ ಘಟನೆಗಳನ್ನು ಬಾಯಿಂದ ಬಾಯಿಗೆ ಬಿತ್ತರಿಸುವ ಒಂದು ವಿಧಾನವೆ ಐತಿಹ್ಯ. ಚಿತ್ತಿಮುತ್ತಿ ಮತ್ತು ಚಂದಮುತ್ತಿ ಚಿತ್ರದುರ್ಗ ದೇವಪುರದ ಹಟ್ಟಿಯ ಬಳಿ ಒಬ್ಬೊಬ್ಬರು ಒಂದೊಂದು ದಿನ್ನೆಗೆ ಆವಿನ ಗೂಡು ತಿರುವಿಕೊಂಡಿದ್ದರು. ಬೆಂಚನ ಮರಡಿ ಎಂಬಲ್ಲಿ ಅಕ್ಕಿಮಂಚಿ ಕಾಟಮ್ಮ ಎಂಬುವವಳಿದ್ದಳು. ಈಕೆ ಚಂದಮುತ್ತಿಯ ಮಗಳು ಮ್ಯಾಕೆಮಾರಗೊಂಡನಿಗೆ ಕೊಡಬೇಕೆಂಬುದಾಗಿ ಮಾತಾಗಿತ್ತು. ಸಮೀಪದಲ್ಲಿ ಬಂಟನ ಗವಿಕರಡಿ ತುಂಬಾ ತೊಂದರೆ ಕೊಡುತ್ತಿತ್ತು. ಸಂತೆಯಲ್ಲಿ ಗಂಟುಮೂಟೆ ಹೊತ್ತುಕೊಂಡು ಬರುತ್ತಿದ್ದ ಜನಗಳನ್ನು ಅಡ್ಡಕಟ್ಟಿ ಗಂಟುಗಳನ್ನು ಕಸಿದುಕೊಂಡು ಗವಿಯಲ್ಲಿ ತುಂಬುತ್ತಿತ್ತು, ಒಂಟಿಗಂಡು ಸಿಕ್ಕರೆ ಕಣ್ಣಿಗೆ ಬಗುಣಿಗೂಟ ಹೊಡಿಯೋದು, ಹೆಣ್ಣುಮಕ್ಕಳು ಸಿಕ್ಕರೆ ಕೆಡಿಸೋದು ಮಾಡುತ್ತಿತ್ತು.

ಅಕ್ಕಿಮಂಚಿಕಾಟಮ್ಮ ಸಂತೆಗೆ ಹೋಗಿ ಹಾಲು ಮಾರಿ ಬರುತಿದ್ದಳು. ಒಂದು ದಿನ ದೊಂಬರ ಆಟ ನೋಡುತ್ತಾನಿಂತಳು. ಕಣ್ಕಟ್ಟಿನ ಆಟನೋಡುತ್ತಾ ಮೈಮರೆತಳು. ಹೊತ್ತು ಜಾರಿದ್ದೇ ಗೊತ್ತಾಗಲಿಲ್ಲ

ಕತ್ತಲು ಕವಿಯುತ್ತಾಬಂತು. ಗೊಲ್ಲರ ಹೆಣ್ಣು ಹಟ್ಟಿಬಿಟ್ಟು ಹೊರಗೆ ಒಂದು ರಾತ್ರಿ ನಿದ್ರೆ ಮಾಡಿದರೆ ಮತ್ತೆ ಹಟ್ಟಿ ಸೇರಿಸುತ್ತಿರಲಿಲ್ಲ. ಆದದ್ದಾಗಲಿ ಎಂದು ಗಾಬರಿಯಿಂದ ಹೊರಟಳು. ದಾರಿಕಾಣದೆ ತಗ್ಗಿನ ಸೇದೆಯಲ್ಲಿ ಬಿದ್ದಳು. ಮ್ಯಾಕೆ ಮಾರಗೊಂಡ ಮಾವ ನನಗೆ ಗತಿ ಯಾರು ಎಂದು ಕೇಳಿದ್ದಕ್ಕೆ ನಿಮ್ಮ ಮಾವ ಮ್ಯಾಕೆ ಮಾರಗೊಂಡ ಎಂದು ಹೇಳಿತು. ಉಗುಣೆಬಳ್ಳಿ, ದಾಗಡಿಬಳ್ಳಿ ಹಗ್ಗ ಮಾಡಿ ಗುಂಡಿಗೆ ಇಳಿಬಿಟ್ಟಿತ್ತು ಮಾವನೆಂದು ಮೇಲೆ ಬಂದು ನೋಡಿದರೆ ಕರಡಿ, ತಗಂಡೋಗಿ ಗವಿಗೆ ಹಾಕ್ಕೊಂಡ್ತು ಅಕ್ಕಿಮಂಚಿ ಕಾಟಮ್ಮ ಉಪಾಯ ಹೂಡಿದಳು. ಹ್ಯಾಗೂ ನಿನ್ನ ಕೈಗೆ ಸಿಕ್ಕಿದೀನಿ ನಿನ್ನ ಮದುವೆ ಆಗೋಕೆ ಮುಂಚೆ ಗೋಪಿ ವ್ರತ ತೀರಬೇಕು ಇನ್ನು ಮೂರು ತಿಂಗಳವರೆಗೆ ನೀನು ಇರೊಂಗಿಲ್ಲ ಎಂದಳು. ಹೆಣ್ಣು ಕರಡಿ ಮರಿಗಳನ್ನು ಹಡೆದು ಸತ್ತು ಹೋಗಿತ್ತು. ಈ ಮರಿ ಕರಡಿಗಳನ್ನು ನೋಡಿಕೊಂಡು ಜೋಪಾನವಾಗಿರು ಎಂದು ಹೇಳಿ ಹೊರಟಾಗ, ಹೋಗಾನು ಹೋಗ್ತಿಯಾ ಎರಡು ಬೆಂಕಿ ಕೊಳ್ಳಿ ತಂದುಕೊಡು ಅಡಿಗೆ ಮಾಡೋಕೆ ಎಂದಳು. ಕರಡಿ ಬೆಂಕಿ ತರುವಾಗ ಮೈಸುಟ್ಟುಕೊಂಡು ಬೊಬ್ಬೆಯಾದವು ನಾನು ಮಲೆ ಸೀಮೆಗೆ ಹೋಗಿ ಚೆನ್ನಾಗಿ ಆಗಿ ಬರ್ತೀನಿ ಎಂದು ಗವಿಗೆ ಗುಂಡುದಬ್ಬಿ ಹೊರಟಿತು. ಇತ್ತ ಕಾಟಮ್ಮನನ್ನು ಹುಡುಕಿ ಸೋತರು, ಮ್ಯಾಕೆ ಮಾರಗೊಂಡ ಚಡ ಪಡಿಸುತ್ತಾ ಬಂಟನ ಗವಿ ಕರಡಿ ಹೊತ್ತಿರಬಹುದೆ ಎಂದು ಅನುಮಾನಿಸಿ ನೋಡಿದಾಗ ಹತ್ತಿರ ಹೋಗಿ ಏಳುಮಾರುದ್ದದ ಮಂಡೆ ಬಿಟ್ಟಿ ಕೂದಲನ್ನು ಗವಿಯೊಳಗೆ ಇಳಿಬಿಟ್ಟ, ಈ ಕೂದಲು ತನ್ನ ಮಾವ ಮ್ಯಾಕೆ ಮಾರ ಗೊಂಡನದೇ ಅಂತ ಗೊತ್ತಾಯ್ತು. ಮಾರಗೊಂಡ ಗುಂಡು ಅರುಗು ಮಾಡಿ ಮರಿ ಕರಡಿಗಳನ್ನು ಕೊಚ್ಚಿ ಬಟ್ಟೆಯಲ್ಲಿ ಕಟ್ಟಿ ಹಂಚಿಗೆ ಬೆಂಕಿಹಾಕಿ ಗಂಟನ್ನು ನೇತು ಹಾಕಿದ, ಕರಡಿಗಳ ರಕ್ತ ಸೊಂಯ್ ಎಂದು ತೊಟ್ಟಿಕ್ಕುತ್ತಿತ್ತು, ಮಲೆ ಸೀಮೆಗೆ ಹೋಗಿದ್ದ ಬಂಟನ ಗವಿ ಕರಡಿ ಬಂತು, ನೋಡಿದರೆ ಕರಡಿಸತ್ತಿದ್ದವು. ರೋಷಗೊಂಡು ಇದು ಮ್ಯಾಕೆ ಮಾರಗೊಂಡನೆ ಕೆಲಸವೇ ಎಂದು ಭಾವಿಸಿ ಕರಡಿಗಳನ್ನೆಲ್ಲಾ ಜೊತೆಗೂಡಿಸಿಕೊಂಡು ಹಟ್ಟಿಗೆ ಧಾವಿಸಿತು. ಹಟ್ಟಿಯ ಜನರು ಕವಣೆ ತಂಗೊಂಡು ಹೊಡಿತಾರೆ, ಕರಡಿಗಳೆಲ್ಲವೂ ನಾವ್ಯಾಕೆ ಅಕ್ಕಿಮಂಚಿಕಾಟಮ್ಮನನ್ನು ಗೆದ್ದುಕೊಡಬೇಕೆಂದು ಹೋಡಿದವು. ಆದರೆ ಬಂಟನಗವಿ ಕರಡಿ ಮಾತ್ರ ಅಲ್ಲೆ ತಿಪ್ಪೆಯ ಮರೆಯಲ್ಲಿ ಅವಿತುಕೊಂಡಿತು. ಮಾರನೆಯ ದಿನ ಬೆಳಿಗ್ಗೆ ಕಾಟಮ್ಮ ಕಸ ಹಾಕಲುತಿಪ್ಪೆಗೆ ಬಂದಾಗ ಕೈ ಹಿಡಿದು ಕೊಂಡಿತು, ಕಾಟಮ್ಮ ಕೂಗಿಕೊಂಡಳು. ಮ್ಯಾಕೆಮಾರಗೊಂಡ ಚಿಪ್ಪುಗೊಡಲಿ ತಂದು ಕರಡಿಯನ್ನು ಕಡಿದನು. ಕರಡಿಯು ನಿನ್ನ ವಂಶದಲ್ಲಿ ಹುಟ್ಟುವ ಮಕ್ಕಳು ಕರಡಿಯಾಗಿ ಹುಟ್ಟಲಿ ಎಂದು ಶಾಪ ಕೊಟ್ಟು ಸತ್ತಿತು. ಕಾಟಮ್ಮ, ಮಾರಗೊಂಡರ ಮದುವೆಯೂ ಆಯಿತು, ಹುಟ್ಟೋ ಮಕ್ಕಳು ಕರಡಿಯಾಗಿ ಹುಟ್ಟಿದವು ಹಿರಿಯರೆಲ್ಲ ಸೇರಿ ಗದ್ದಿಗೆ ವಿಚಾರಿಸಿದಾಗ 'ಕರಡೇರಗೊಲ್ಲರು' ಅಂತ ಹೆಸರು ಕರೆದರೆ ಶಾಪ ವಿಮೋಚನೆಯಾಗುತ್ತದೆ ಎಂದು ಬಂತು ಹಾಗಾಗಿ ಈಕೆಯ ಹೊಟ್ಟೆಯಲ್ಲಿ ಹುಟ್ಟಿದವರಿಗೆ ಕಲ್ಡಿದೊಡ್ಡ, ಕಲ್ಡಿಈರಬಾಲ, ಕಲ್ಡಿಭಡವ ಅಂತ ಹೆಸರು ಕರೆದರು. ಚಿತ್ತಮುತ್ತಿ ಕುಲದವರನ್ನು ಕರಡೇರುಗೊಲ್ಲರು ಎಂದು ಕರೆಯಲು ಪ್ರಾರಂಭಿಸಿದರು. ಗೊಲ್ಲರಲ್ಲಿ ಇದೂ ಒಂದು ಬೆಡಗು ಆಯಿತು. ಉಳಿದೆಲ್ಲ ಕುಲದವರು ಇವರೊಂದಿಗೆ ಸಂಬಂಧ ಬೆಳಸುತ್ತಾರೆ (ಚಂದಮುತ್ತಿ ಮತ್ತು ರಾಮೇಗೌಡನ ಕುಲದವರು).

ಮ್ಯಾಸಬೇಡರಲ್ಲೂ ಇಂತಹ ಐತಿಹ್ಯಗಳಿವೆ. ಮ್ಯಾಸಬೇಡರ ಕುಲದ ಮೂಲ, ಮ್ಯಾಸಬೇಡರು ಆಂಧ್ರದಿಂದ-ಕರ್ನಾಟಕಕ್ಕೆ ಬಂದದ್ದು, ಗಾದ್ರಿಪಾಲನಾಯಕ ಮಿಂಚೇರಿ ಗುಡ್ಡದಲ್ಲಿ ಹುಲಿಯೊಂದಿಗೆ ಹೋರಾಡಿ ಸತ್ತ ಐತಿಹ್ಯ, ಮ್ಯಾಸಬೇಡ ಮತ್ತು ಕಾಡುಗೊಲ್ಲರ ಹುಲ್ಲುಗಾವಲುಗಳಿಗಾಗಿ ನಡೆಯುವ ಸಂಘರ್ಷ ಬೇಡವಾಲ್ಮೀಕಿಯಾದದ್ದು, ಜಗಳೂರಜ್ಜನ ಪವಾಡಗಳು, ಬೆಡಗುಗಳು ಹುಟ್ಟಿಕೊಂಡಿದ್ದು, ಮ್ಯಾಸಬೇಡ ಊರುಬೇಡರಾಗಿದ್ದು, ಬೇಟೆ ಮತ್ತು ಪಶುಪಾಲನೆಗೆ ಸಂಬಂಧಿಸಿದ ಅನೇಕ ಐತಿಹ್ಯಗಳು ಕಂಡುಬರುತ್ತವೆ.

## ಮ್ಯಾಸಬೇಡರ ಐತಿಹ್ಯ

### ಎತ್ತೈಗಳ ಹಟ್ಟಿ ಮುತ್ತೈಗಳ ಗೂಡು:

ಮ್ಯಾಸಬೇಡರ ಐತಿಹ್ಯಗಲ್ಲಿ ಬೇಟೆಯ ನಂತರದ ಹಂತದಲ್ಲಿ ಪಶುಪಾಲಕರಾಗಿದ್ದು. ಪಶುಪಾಲಕ ಸಂಸ್ಕೃತಿಯಲ್ಲಿ ಅವರು ಆಂಧ್ರಮೂಲದವರೆಂದು ಮತ್ತು ಶ್ರೀಶೈಲದಿಂದ ಬಂದವರೆಂದು ಹಲವಾರು ಐತಿಹ್ಯಗಳ ಪ್ರಕಾರ ತಿಳಿಯುತ್ತದೆ. ಅವರು ಚಿತ್ರದುರ್ಗ ಜಿಲ್ಲೆಯ ನಾಯಕನಹಟ್ಟಿ, ಚಳ್ಳಕೆರೆ, ಮೊಳಕಾಲ್ಮೂರು ಇತ್ಯಾದಿ ಕಡೆಗಳಲ್ಲಿ ನೆಲೆಸಿದರು. ಶ್ರೀಶೈಲದಿಂದ ಬರುವಾಗ ಪೆಟ್ಟಿಗೆ ದೇವರುಗಳನ್ನು ಹೊತ್ತುಕೊಂಡು ಪಶುಗಳನ್ನು ಹೊಡೆದುಕೊಂಡು ಬಂದಿರುವುದಾಗಿ ಹಲವು ಸಂಶೋಧಕರ ಅಧ್ಯಯನದಿಂದ ತಿಳಿದು ಬರುತ್ತದೆ, ಮ್ಯಾಸಬೇಡರ ವಕ್ತೃಗಳು ಮತ್ತು ಕಿಲಾರಿಗಳೂ ಸಹ ಅದನ್ನೆ ಹೇಳುತ್ತಾರೆ. ಮ್ಯಾಸಬೇಡರ ಕುಲದೈವಗಳಲ್ಲಿ ಗಾದ್ರಿಪಾಲನಾಯಕ, ಪಾಪನಾಯಕ, ಕಂಪಳರಂಗ, ಓಬಳದೇವರುಗಳನ್ನು ಬಿಟ್ಟರೆ ಕಾಣುವ ದೇವರೆಂದರೆ ದೇವರೆತ್ತುಗಳು. ಚಿತ್ರದುರ್ಗ ಜಿಲ್ಲೆಯ ಮ್ಯಾಸನಾಯಕರಿಗೆ ಗುರುಸಂಸ್ಥಾನಗಳನ್ನು ಬಿಟ್ಟರೆ ಮತ್ತೊಂದು ಪವಿತ್ರ ಧಾರ್ಮಿಕ ಕೇಂದ್ರವೆಂದರೆ ಎತ್ತೈಗಳ ಹಟ್ಟಿ. ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಮುತ್ತಿಗಾರಹಳ್ಳಿ ಕಾವಲಿನಲ್ಲಿ ನೂರರಿಂದ ಇನ್ನೂರು ರಾಸುಗಳಿರುವ ಎತ್ತೈಗಳಹಟ್ಟಿ ಇದೆ. ಮೊಳಕಾಲ್ಮೂರುವಿನ ಕಂಪಳ ದೇವರ ಹಟ್ಟಿಯ ಸಮೀಪದ ಕಾವಲಿನಲ್ಲಿ ಪಾಪನಾಯಕ ದೇವರ ಎತ್ತುಗಳಿವೆ. ಚಿತ್ರದುರ್ಗ ಜಿಲ್ಲೆಯ ಅಧ್ಯಯನ ಕ್ಷೇತ್ರಗಳಾದ ಮೊಳಕಾಲ್ಮೂರು, ಚಳ್ಳಕೆರೆ ತಾಲ್ಲೂಕುಗಳಲ್ಲಿ ಬಹುತೇಕ ಕಂಡುಬಂದಿರುವುದನ್ನು ಅಧ್ಯಯನ ಸಾಕ್ಷೀಕರಿಸುತ್ತದೆ.

ಮ್ಯಾಸಬೇಡರ ದೇವರೆತ್ತುಗಳನ್ನು ಪೂಜನೀಯ ಸ್ಥಾನಕೊಟ್ಟು ಪೋಷಿಸುತ್ತಾರೆ. ದೇವರೆತ್ತುಗಳನ್ನು ನೋಡಿಕೊಳ್ಳಲು ಮ್ಯಾಸಬೇಡರಲ್ಲಿಯೇ ಕಿಲಾರಿಗಳಿರುತ್ತಾರೆ. ಕಿಲಾರಿಗಳು ಹಟ್ಟಿಯಿಂದ ಹೊರಗೆ ದಟ್ಟವಾದ ಅಡವಿಗಳಲ್ಲಿ ರೊಪ್ಪವನ್ನು ನಿರ್ಮಿಸಿಕೊಂಡು ಸಂಜೆ ಕಿಲಾರಿಗಳು ಉಳಿಯಲು ಗುಡಿಸಲು ನಿರ್ಮಿಸಿಕೊಂಡಿರುತ್ತಾರೆ. ರೊಪ್ಪವನ್ನು ಲಕ್ಕಲಿ ಬರ್ಲಿನಿಂದ ಇಲ್ಲವೆ ಸುತ್ತಲೂ ಕಳ್ಳೆ ಮುಳ್ಳನ್ನು ಹಾಕಿ ರಾತ್ರಿಯಿಡೀ ರಾಸುಗಳನ್ನು ಅದರಲ್ಲಿ ಕೂಡುತ್ತಾರೆ. ಕಿಲಾರಿಗಳು ಅತ್ಯಂತ ಸರಳ ಮತ್ತು ಸಜ್ಜನಿಕೆಯಿಂದಿರುತ್ತಾರೆ. ಚಲ್ಲಣ, ತಲೆಗೆ ರುಮಾಲು, ಬರಿಮೈಯಲ್ಲಿ ಇಲ್ಲವೆ ತೆಳುವಾದಮಲ್ಲಿನ ಬನಿಯನ್, ಹೆಗಲಮೇಲೊಂದು ಕಂಬಳಿ, ಕೈಯಲ್ಲೊಂದು ಕೋಲು ಇವಿಷ್ಟು ಕಿಲಾರಿಗಳ ಪರಿಕರಗಳು,

ಒಂದು ದೇವರೆತ್ತುಗಳ ಹಟ್ಟಿಗೆ ನಾಲ್ಕೈದು ಜನ ಕಿಲಾರಿಗಳಿರುತ್ತಾರೆ. ಎತ್ತೈಗಳಹಟ್ಟಿಯೆಂದರೆ ಮುಳ್ಳು ಕಳ್ಳೆಗಳಿಂದ ರೊಪ್ಪವನ್ನು ನಿರ್ಮಿಸಿದವರು. ಉದಿ-ಪದಿ-ನೋಮುಗಳೊಂದಿಗೆ ದಟ್ಟಡವಿಯ ಪ್ರದೇಶದಲ್ಲಿ ಕಿಲಾರಿಗಳಿಂದ ಕಾಯಲ್ಪಡುವ ಶ್ರೀಶೈಲದಿಂದ ಬಂದ ಎತ್ತುಗಳಸಮೂಹದ ರೊಪ್ಪಕ್ಕೆ ಎತ್ತೈಗಳಹಟ್ಟಿ ಎಂದು ಕರೆಯುತ್ತಾರೆ. ದೇವರೆತ್ತುಗಳೆಂದರೆ ಬರೀ ಎತ್ತುಗಳು ಮಾತ್ರವಲ್ಲ ಹಸುಗಳೂ ಇರುತ್ತವೆ. ಕಿಲಾರಿಗಳು ಪ್ರಾತಃಕಾಲದಲ್ಲಿ ಬೇಗ ಎದ್ದು ಹಟ್ಟಿಯನ್ನು ಸ್ವಚ್ಛಮಾಡಿ ಸಗಣಿ ಎತ್ತಿ ಬಳಿಯುತ್ತಾರೆ. ಕೂಡಿದ್ದ ದೇವರೆತ್ತುಗಳನ್ನು ಬೆಳಿಗ್ಗೆಯೇ ಹೊರಕ್ಕೆ ಬಿಡುತ್ತಾರೆ, ಅವುಗಳು ಗುಂಪಾಗಿ ನಿಂತುಕೊಳ್ಳುತ್ತವೆ. ದೇವರೆತ್ತುಗಳನ್ನು ಕ್ರಯಕ್ಕೆ ಮಾರುವುದಿಲ್ಲ, ಅವುಗಳಿಂದ ಹಿಂಡಿದ ಹಾಲಿನಿಂದ ಮೊಸರು, ಮಜ್ಜಿಗೆ ಮಾಡಿ ಪ್ರಸಾದವಾಗಿ ಕೊಡುತ್ತಾರೆ. ಮ್ಯಾಸಬೇಡ ಭಕ್ತರು ಗುರುಸ್ಥಾನಗಳನ್ನು ಬಿಟ್ಟರೆ ಅಪಾರವಾದ ಭಕ್ತಿಯನ್ನು ದೇವರೆತ್ತುಗಳ ಮೇಲೆಯೂ ಇಟ್ಟಿರುವುದು ಕಂಡು ಬರುತ್ತದೆ. ಏನಾದರೂ ಕಷ್ಟಗಳು ಬಂದರೆ, ರೋಗರುಜಿನೆಯಾದರೆ. ಶುದ್ಧಿಯಾಗಬೇಕಾದರೆ ಎತ್ತೈಗಳ ಹಟ್ಟಿಗೆ ಬಂದು ಒಂದು ದಿನ ಅಲ್ಲಿಯೇ ತಂಗಿ ಬೆಳಿಗ್ಗೆ ದೇವರೆತ್ತುಗಳನ್ನು ಪೂಜಿಸಿ ಅವುಗಳಿಗೆ ಬಾಳೆಹಣ್ಣು, ಬೆಲ್ಲಕೊಟ್ಟು ಕಿಲಾರಿಗಳಿಂದ ಪ್ರಸಾದ ಸ್ವೀಕರಿಸುತ್ತಾರೆ. ಹೀಗೆ ಮಾಡಿದರೆ ಒಳ್ಳೆಯದಾಗುತ್ತದೆಂಬ ನಂಬಿಕೆ ಮ್ಯಾಸಬೇಡರಲ್ಲಿದೆ. ಕಿಲಾರಿಗಳು ದಾನದಿಂದ ಬಂದ ಹಣ ಮತ್ತು ಹಟ್ಟಿಗಳಿಗೆ ಹೋಗಿ ದವಸ, ಧಾನ್ಯ, ಹಿಟ್ಟು ಸಂಗ್ರಹಿಸಿಕೊಂಡುಬರುತ್ತಾರೆ. ಮ್ಯಾಸಬೇಡರು ಪ್ರೀತಿಯಿಂದ ಅಕ್ಕಿ, ಹಿಟ್ಟು ಕಿಲಾರಿಗಳಿಗೆ ಕೊಡುತ್ತಾರೆ. ಕಿಲಾರಿಗಳು ಬಂದ್ರಿಕೆ ಗಿಡದಿಂದ ತಡಿಕೆಯನ್ನು ಮಲಗಲು ಮಾಡಿಕೊಂಡಿದ್ದು ಹೊದಿಕೆಯಾಗಿ ಕಂಬಳಿ ಹೊದ್ದುಕೊಂಡರೆ ಸುರಕ್ಷಿತವಾಗಿರುತ್ತಾರೆ. ಕಿಲಾರಿಗಳು ಮಳೆ, ಗಾಳಿ, ಬಿಸಿಲೆನ್ನದೆ ದೇವರೆತ್ತುಗಳ ರಕ್ಷಣೆಯೇ ಪವಿತ್ರ ಕೆಲಸವೆಂದು ನಂಬಿ ಜೀವಿಸುತ್ತಾರೆ. ದೇವರೆತ್ತುಗಳಿಗೆ ಸೂರ್ಯ, ಚಂದ್ರನ ಮುದ್ರೆಯೊತ್ತಿರುತ್ತಾರೆ. ಸತ್ತರೆ ಹೂಳಿಡುತ್ತಾರೆ ದೇವರೆತ್ತುಗಳ ಮಹತ್ವದ ಕಾರ್ಯವೆಂದರೆ ಕಂಪಳದೇವರ ದೀವಳಿಗೆ, ಜಾತ್ರೆ, ಉತ್ಸವಗಳಲ್ಲಿ ದೇವರೆತ್ತುಗಳನ್ನು ಓಡಿಸದೆ ಜಾತ್ರೆ ನಡೆಯುವುದೇ ಇಲ್ಲ. ದೇವರೆತ್ತುಗಳನ್ನು ಪೋಷಿಸುವುದು ತ್ರಾಸದಾಯಕವಾದರು ಪ್ರೀತಿಯಿಂದ ದನವೇ ದೈವ ಎಂದು ನಂಬಿಕೆ ಇಟ್ಟು ಇಂದಿಗೂ ಮ್ಯಾಸಮಂಡಲದವರು ಪೂಜಿಸುವುದು ಕಂಡುಬರುತ್ತದೆ. ಪರಂಪರೆಯಿಂದ ಬಂದ ಆಚರಣೆಗಳನ್ನು ತಪ್ಪದೇ ಪಾಲಿಸುವುದು ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಕಂಡುಬರುತ್ತದೆ. ಹೀಗೆ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಪುರಾಣಗಳು ಮತ್ತು ಐತಿಹ್ಯಗಳು ತುಂಬಾ ಸರಳವಾದವುಗಳಾಗಿದ್ದು, ಸಾಮಾನ್ಯರು ಅರ್ಥೈಸಿಕೊಳ್ಳಬಲ್ಲವುಗಳಾಗಿದ್ದು ಸಾಮಾಜಿಕ ಜೀವನಕ್ಕೆ ದಾರಿದೀವಿಗೆಯಾಗಿವೆ. ಒಂದು ಸಮುದಾಯದ ನಂಬಿಕೆಗಳು, ಸಂಪ್ರದಾಯಗಳು, ಆಚರಣೆಗಳು, ಭೂತದ ಪರಂಪರೆಯನ್ನು ಮುಂದುವರಿಸಲು ಪುರಾಣಗಳು ಮತ್ತು ಐತಿಹ್ಯಗಳು ಮಹತ್ತರ ಪಾತ್ರವಹಿಸುತ್ತವೆ.

**ಸಾಂಸ್ಕೃತಿಕ ನಾಯಕರು**

ವೀರರ ಪೂಜೆ ಇಂದು ನೆನ್ನೆಯದಲ್ಲ. ಅನಾದಿಕಾಲದಿಂದಲೇ ನಡೆದುಕೊಂಡು ಬಂದಿದೆ. ಆ ವೀರರನ್ನು ಪೂಜಿಸುವುದು ಆರಾಧಿಸುವುದು, ಅವರ ಕತೆಗಳನ್ನು ಕೇಳುವುದು ನಮ್ಮ ದೇಶದಲ್ಲಿ

ಪ್ರಾಚೀನ ಕಾಲದಿಂದಲೂ ಸಂಪ್ರದಾಯಬದ್ಧವಾಗಿದೆ. ದಕ್ಷಿಣ ಕನ್ನಡದಲ್ಲಿ ಪ್ರಚಲಿತವಾಗಿರುವ ಭೂತಾರಾಧನೆ ವೀರರ ಪೂಜೆಯೇ ಆಗಿದೆ. ಕೋಟಿ ಚೆನ್ನಯ್ಯ, ಬೊಬ್ಬಯ್ಯ ಮೊದಲಾದ ವೀರರನ್ನು ಕುರಿತ ಪಾಡ್ದನಗಳು ಮೃತವೀರರನ್ನು ಕುರಿತ ಗುಣಗಾನ ಮತ್ತು ಅವರ ಸಾಹಸದ ವರ್ಣನೆಗಳೇ ಆಗಿವೆ. ನಂಜುಂಡ ಕವಿಯ 'ಕುಮಾರ ರಾಮ ಚರಿತೆ' ಕೂಡ ಕನ್ನಡದ ಒಂದು ಶ್ರೇಷ್ಠ ವೀರ ಕಾವ್ಯವಾಗಿದೆ. ಬುಡಕಟ್ಟು ಸಮುದಾಯಗಳಲ್ಲಿ ತಮ್ಮ ಜನಾಂಗದ ನಾಯಕರು, ವೀರರು ಲೌಕಿಕ ಜೀವನದಲ್ಲಿ ಪ್ರಭಾವಶಾಲಿಯಾಗಿರುವ ವ್ಯಕ್ತಿಗಳು ಸತ್ತ ನಂತರವೂ ತಮ್ಮ ಪ್ರಭಾವವನ್ನೂ ಉಳಿಸಿಕೊಳ್ಳುತ್ತಾರೆ. ಅವರು ಭೌತಿಕವಾಗಿ ನಶಿಸಿಹೋಗಿದ್ದರೂ ಅವರ ಆತ್ಮ ಬದುಕಿರುವ ನಮ್ಮನ್ನು ಕಾಪಾಡುತ್ತದೆ, ಕಾಯುತ್ತದೆ, ಎಂಬ ನಂಬಿಕೆ ಇದೆ. ಇದೊಂದು ರೀತಿಯಲ್ಲಿಭಯಮಿಶ್ರಿತ ಕೃತಜ್ಞತಾಭಾವವೊಂದು ಆ ಜನಾಂಗದವರಲ್ಲಿರುತ್ತದೆ.

ಸಾಮಾನ್ಯ ವ್ಯಕ್ತಿಗಳೇ ತಮ್ಮ ಸಾಧನೆಗಳಿಂದ ತಮ್ಮ ಸಾವಿನ ನಂತರದಲ್ಲಿ ದೇವತೆಗಳೆನಿಸಿಕೊಳ್ಳುತ್ತಾರೆ. ಮನುಷ್ಯರೇ ಆಗಿದ್ದವರು ದೇವತೆಗಳೆಂದು ಪೂಜೆಗೊಳ್ಳುವ ಪರಿ ಹೊಸ ವಿಚಾರವೇನಲ್ಲ. ರಾಮ, ಕೃಷ್ಣ, ಹನುಮಂತ, ಅರ್ಜುನ, ಭೀಮ, ಬುದ್ಧ, ಮೊದಲಾದವರು ಮನುಷ್ಯರಾಗಿದ್ದು ಸಾವಿನ ನಂತರದಲ್ಲಿ ದೇವರಾಗಿ ಪೂಜೆಗೊಂಡವರು.

ದೈವಾಂಶ ಸಂಭೂತರೆಂದೇ ಪರಿಗಣಿಸುವುದು. ಈ ರೀತಿಯ ಆರಾಧನಾ ಸಂಪ್ರದಾಯ ಕರ್ನಾಟಕದಲ್ಲಿಯೂ ಪ್ರಚಲಿತದಲ್ಲಿರುವುದನ್ನು ಗಮನಿಸಬಹುದು. 'ಒಂದು ಕಾಲದಲ್ಲಿ ವೀರನಾಗಿ ಮೆರೆದು ಅಸಹಾಯ ಶೂರನೆನಿಸಿದ ಕುಮಾರರಾಮ ತನ್ನ ಚಿಕ್ಕಮ್ಮನ ಕುಹಕಕ್ಕೆ ಬಲಿಯಾದರೂ, ತನ್ನ ಆದರ್ಶವನ್ನು ಬಿಡದೆ ಮಡಿದ. ಅವನ ಆದರ್ಶವನ್ನು ಕಂಡ ಮ್ಯಾಸಬೇಡರು ಅವನನ್ನು ಕುಲದೇವರನ್ನಾಗಿ ಸ್ವೀಕರಿಸಿದರು. ಕುರುಬ ಜನಾಂಗದಲ್ಲಿ ಪ್ರಚಲಿತವಿರುವ ಬೀರದೇವರ ಆರಾಧನೆಯೂ ಸಹ ಇದೇ ರೀತಿಯ ವೀರನ ಮೂಲವನ್ನು ಪಡೆದಿರಬೇಕು. ತನ್ನ ಒಡನಾಡಿಗಳ ಕುಹಕ, ಕುತಂತ್ರದಿಂದ ಮರಣವನ್ನಪ್ಪಿದ ಸಂಗೊಳ್ಳಿ ರಾಯಣ್ಣ ಸತ್ತ ಕೆಲವೇ ದಿನಗಳಲ್ಲಿ ಮಕ್ಕಳಿಲ್ಲದವರಿಗೆ ಮಕ್ಕಳನ್ನು ದಯಪಾಲಿಸುವ ಸಂತಾನದ ದೇವರಾದ ಎಂಬ ಅಂಶವನ್ನು ಗಮನಿಸಿದಾಗ ಈ ರೀತಿಯ ಆರಾಧನೆಯ ಗಾಢ ಪ್ರಭಾವದ ಅರಿವಾಗುತ್ತದೆ'.[೯]

ಹೀಗೆ ಆದರ್ಶಗಳಿಗೋಸ್ಕರ ಮತ್ತು ಜನಾಂಗದ ಒಳಿತಿಗೋಸ್ಕರ ತಮ್ಮನ್ನು ತೇದುಕೊಂಡವರು ದೈವತ್ವಕ್ಕೇರಿದ್ದಾರೆ. ಇವರು ಕ್ರಮೇಣ ಒಂದು ಉನ್ನತ ಸ್ಥಾನಕ್ಕೇರಿ ನಂತರ ದೈವಗಳೆಂದು ಪರಿಗಣಿಸಲ್ಪಡುತ್ತಾರೆ. ನಮ್ಮ ಸಂಸ್ಕೃತಿಯಲ್ಲಿ ಮನೆದೇವರು, ಕುಲದೇವರು, ಎಂದು ಜನ ಪೂಜೆ ಮಾಡುವುದನ್ನು ನೋಡಿದರೆ ಈ ದೇವರುಗಳು ಒಂದೊಂದು ಕಲ್ಪನೆಯ ಹಿನ್ನಲೆಯಲ್ಲಿ ಹೊರಹೊಮ್ಮಿರುವುದನ್ನು ಗಮನಿಸಬಹುದು. ಒಂದೊಂದು ಸಣ್ಣ ಗುಂಪಿಗೂ ಒಂದೊಂದು ದೇವರಿರುವುದನ್ನು ಕಾಣಬಹುದು. ಒಬ್ಬ ವೀರ ತನ್ನ ವಾಸ್ತವ ಬದುಕಿನಲ್ಲಿ ಅಸಾಮಾನ್ಯವಾದ ರೀತಿಯಲ್ಲಿ ಧೈರ್ಯ ಸಾಹಸಗಳನ್ನು ಪ್ರದರ್ಶಿಸಿ ಮರಣವನ್ನಪ್ಪಿದಾಗ ಅವನ ಧೈರ್ಯ, ಸಾಹಸ,

ಹೋರಾಟಗಳ ಬಗೆಗೆ ಜನರಲ್ಲಿ ಭಯ, ಭಕ್ತಿ, ಗೌರವ ಮೂಡಿ ಅವನನ್ನೇ ಆರಾಧ್ಯ ದೈವವನ್ನಾಗಿ ಪೂಜಿಸಲಾರಂಭಿಸುತ್ತಾರೆ.

ತಮ್ಮ ಸಮುದಾಯದ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಲು ಸ್ವಾರ್ಥವನ್ನು ತೊರೆದ ವ್ಯಕ್ತಿಯು ಇರುತ್ತಾನೆ. ಅವನು ಆ ಕುಲಕ್ಕೆ ತನ್ನನ್ನೇ ಅರ್ಪಿಸಿಕೊಂಡು ವೀರನಾಗುತ್ತಾನೆ. ಅವನು ತನ್ನ ಸಾವಿನ ತರುವಾಯ ಆ ಬುಡಕಟ್ಟಿನ ಆರಾಧ್ಯದೈವವಾಗಿ ಆರಾಧಿಸಲ್ಪಡುತ್ತಾನೆ. ಇದು ಬುಡಕಟ್ಟಿನ ಬಹು ಮುಖ್ಯ ಲಕ್ಷಣಗಳಲ್ಲಿ ಒಂದು. ಶೈವ ಮತ್ತು ವೈಷ್ಣವ ಆರಾಧಕರಾದ ಬೇಡರು ಕಾಲಕ್ರಮೇಣ ತಮ್ಮ ಸಮುದಾಯವನ್ನು ದುಷ್ಟಶಕ್ತಿಗಳಿಂದ ಕಾಪಾಡಿದ ವೀರರನ್ನು ಆರಾಧ್ಯದೈವಗಳನ್ನಾಗಿ ಮಾಡಿಕೊಂಡು ಪೂಜಿಸುವ ಸಂಸ್ಕೃತಿಯನ್ನು ಬೆಳೆಸಿಕೊಂಡರು. ಅವರು ಓಡಾಡಿದ ಸ್ಥಳಗಳಲ್ಲೆಲ್ಲಾ ದೇವಾಲಯಗಳನ್ನು ನಿರ್ಮಿಸಿದರು. ಅವರು ಬಳಸಿದ ಆಯುಧಗಳನ್ನು ದೇವರೆಂದು ನಂಬಿದರು. ಆ ಮೂಲಕ ತಮ್ಮ ಕುಲದ ವೀರರನ್ನು ಆರಾಧಿಸುತ್ತಿದ್ದಾರೆ. ಬೇಡರಲ್ಲಿ ಮೊದಲು ವೀರರಾಗಿ ನಂತರದಲ್ಲಿ ಆರಾಧ್ಯದೈವಗಳಾದ ಅನೇಕ ಅಸಾಮಾನ್ಯ ವ್ಯಕ್ತಿತ್ವಗಳಿವೆ. ಅವರನ್ನು ಸಾಂಸ್ಕೃತಿಕ ನಾಯಕರೆಂದು ಕರೆಯಲಾಗಿದೆ. ತಮ್ಮ ಕುಲದ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದ ನಾಯಕರಿವರು. ಮ್ಯಾಸಬೇಡರಲ್ಲಿ ಯರಮಂಚಿನಾಯಕ, ಗಾದರಿಪಾಲನಾಯಕ, ಜಗಳೂರು ಪಾಪನಾಯಕ, ದಡ್ಡಿಸೂರನಾಯಕ, ಯರಗಾಟನಾಯಕ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಕುಮಾರರಾಮ, ಗಲ್ಲುಗಲ್ಲುನಾಯಕ ಮುಂತಾದವರು. ಕಾಡುಗೊಲ್ಲರಲ್ಲಿ ಎತ್ತಪ್ಪ ಮತ್ತು ಜುಂಜಪ್ಪ ಪ್ರಸಿದ್ಧ ಸಾಂಸ್ಕೃತಿಕ ನಾಯಕರಾಗಿದ್ದು ತದನಂತರ ಆರಾಧ್ಯದೈವಗಳಾಗಿ ಇಂದಿಗೂ ಆರಾಧಿಸಲ್ಪಡುತ್ತಿದ್ದಾರೆ.

ಚಿತ್ರದುರ್ಗ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಪ್ರಖ್ಯಾತಿ ಪಡೆದು ತನ್ನದೇ ಆದ ಸಾಂಸ್ಕೃತಿಕ ಅಸ್ಮಿತೆಯನ್ನು ಉಳಿಸಿಕೊಂಡಿರುವ ಜನಪ್ರಿಯ ಆರಾಧ್ಯದೈವಗಳೆಂದರೆ ಗಾದರಿಪಾಲನಾಯಕ, ಜಗಳೂರು ಪಾಪನಾಯಕ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಎತ್ತಪ್ಪ, ಜುಂಜಪ್ಪ, ದೈವಗಳು. ಇವರುಗಳು ಅನೇಕ ಆಚರಣೆಗಳ ಮೂಲಕ ಬಹುಸಂಖ್ಯಾತ ವಿಭಿನ್ನ ಜಾತಿಯ ಭಕ್ತಾದಿಗಳನ್ನು ಹೊಂದಿದ್ದಾರೆ. ಒಂದೇ ಕೋಮಿನವರಷ್ಟೇ ಇವರನ್ನು ಆರಾಧಿಸದೇ ಬೇರೆ ಬೇರೆ ಕೋಮಿನವರು ಇವರನ್ನು ಪೂಜಿಸುತ್ತಾರೆ.

**ಮ್ಯಾಸಬೇಡರ ಸಾಂಸ್ಕೃತಿಕ ನಾಯಕರು:**

ಮ್ಯಾಸಬೇಡರಲ್ಲಿ ಯರಮಂಚಿನಾಯಕ, ಗಾದರಿಪಾಲನಾಯಕ, ಜಗಳೂರು ಪಾಪನಾಯಕ, ದಡ್ಡಿಸೂರನಾಯಕ, ಯರಗಾಟನಾಯಕ, ನಾಯಕನಹಟ್ಟಿ ತಿಪ್ಪೇಸ್ವಾಮಿ ಬಹು ಪ್ರಖ್ಯಾತ ಸಾಂಸ್ಕೃತಿಕ ನಾಯಕರು.

**ಯರಮಂಚಿನಾಯಕ:**

"ಆಗ ನಮ್ಮ ನಾಯಕ ಜನಾಂಗಕ್ಕೆ ಯಜಮಾನ ದೊರೆ ಯರಮಂಚಿನಾಯಕನಾಗಿದ್ದನು. ಅವನು ಎನ್ ಮಾಡ್ದ ಎಲ್ಲಾರ್‌ನ ಇಲ್ಲೇ ಬೋರೇದೇವರಟ್ಟಿಲಿ ಮಲಗಿಸ್‌ಬಿಟ್ಟು ಒಳ್ಳೆ ಸರಿಹೊತ್ತಿಗೆ ಸೂಳೆ ಮನೆಗೆ ಹೊಗಿದ್ನಂತೆ. ತಿರುಗ ಬೆಳಗ್ಗೆ ಎದ್ದು ಹೊರುಟು ಬರಬೇಕಲ್ಲಾ ಬರಬೇಕಾದ್ರೆ ಕುದ್ರೆ

ಮ್ಯಾಲೆ ಕುಂತ್ಕಂಡು ಛತ್ರಿ, ಛಾಮರ, ಢಮರುಗ ಹೊಡ್ಸ್ಕೊಂಡು ಬರ್ತಿದ್ನಂತೆ. ಬರಬೇಕಾದ್ರೆ ಇನ್ನಿದ್ದ ಕುಲದವರೆಲ್ಲ ಸೇರಿದ್ರಲ್ಲಾ ಈ ಜಾಗದಲ್ಲಿ ಅವರೆಲ್ಲಾ ಹೇ ಅವ್ನಂದೇನು ಎಷ್ಟೊತ್ತು ನೋಡ್ತಿರೋ ಪೂಜೆ ಮಾಡ್ರೊ ಅಂದ್ರಂತೆ. ಆವಾಗಿನ್ನೇನು ಪೂಜೆ ಆಗಿಬಿಡ್ತು ಸ್ವಾಮಿದು. ಚಿಂತಗುಟ್ಲ ಬೋರನಿಗೆ ಇವತ್ತು ಬಿಡುಗಡೆಯಾದ ಯರಮಂಚಿನಾಯಕ ಅಂತ ತಿಳಕಂಡು ಪೂಜೆ ಮಾಡಿದ್ರಂತೆ. ಪೂಜೆನೂ ಮುಗಿಯೊದಿಕ್ಕೆ ಅವನು ಬರೊದಿಕ್ಕು ನಾನು ಬರದಲೇ ಹೆಂಗೆ ಪೂಜೆ ಮಾಡಿದ್ರಿ ನೀವು ಅಂತ ಕೇಳಿದ. ಆಗ ಅವರು ನಿನ್ನ ಎಷ್ಟೊತ್ತು ನೊಡ್ಬೇಕು ನಮ್ಮನ್ನ ಮಲಗ್ಸಿ ನೀನು ಸರಿಹೊತ್ತನಲ್ಲಿ ಹೋಗಿ ಸೂಳೆ ಮನೆ ಸೇರ್ಕಂಡಿದ್ದೆ. ಈಗ ಇಷ್ಟು ತಡವಾಗಿ ಕುದ್ರೆ ಮ್ಯಾಲೆ ಕುಂತ್ಕಂಡು ಛತ್ರಿ, ಛಾಮರ, ಢಮರುಗ ಹೊಡ್ಸ್ಕೊಂಡು ಬಂದಿದಿಯಲ್ಲಾ ನಿನ್ನ ಎಷ್ಟೊತ್ತು ಕಾಯಬೇಕು ಪೂಜೆ ಮಾಡಿಬಿಟ್ವಿ ಹೋಗಿ ಕೈ ಮುಗಿ ಅಂದ್ರು, ನನಗೆ ನಿನಿಗೆ ಅಂತ ವಾದಿ ಬೀದಿ ಬಿದ್ದು ಯರಮಂಚನಾಯಕ ಹೆಗಲ ಮ್ಯಾಲೆ ಮಗನ್ನ ಕುಂಡ್ರಸ್ಕಂಡು ಬಂದಿದ್ನಂತೆ. ಆ ಹುಡುಗನ್ನ ಏನ್ ಮಾಡ್ದ ಅಲ್ಲೆ ಕೊಯ್ದುಬಿಟ್ಟ ವಾಸೆ ಕೊಯ್ದಂಗೆ ಏಳು ವಾಸೆ ಹೊಳತಂಗೆ ಕೊಯ್ದು ಬಿಸಾಕಿ ಹಂಗೆ ಹೋಗಿಬಿಟ್ಟ, ಅಯ್ಯೋ ಇವ್ನ ಹುಡುಗನ್ನ ಕೊಯ್ದುಬಿಟ್ನಲ್ಲಾ ಅಂದುಬಿಟ್ಟು ದಂಡು ದಳ ಎಲ್ಲಾ ಅವನಿಗೆ ಬೆನ್ನು ಹತ್ತಿದ್ವಂತೆ. ಹೋಗ್ತಾ ಹೋಗ್ತಾ ಅಲ್ಲಿ ಒಂದು ಜಾತಿಯವರು ಕೊತ್ಲೆ ಹೊಡಿತಿದ್ರು, ಹೊಡಿಬೇಕಾದ್ರೆ ಅವರು ರೋಸ್ಕೊಂಡು ಊಟ ಮಾಡ್ತಾ ಕುಂತಿಂದ್ರಂತೆ. ಅವನು ಮುಂದೆ ಇವರು ಹಿಂದೆ ರೋಸ್ಕಂಡು ಹೋಗ್ತಾ ಹೋಗ್ತಾ ಅವನೇನ್ ಮಾಡ್ದ ತಬ್ಬಿಬ್ಬು ಮಾಡಿ ಹೋಗಿ ಅವರು ಮೂವರ ಜೊತೆ ಹೋಗಿ ಕುತ್ಕಂಡಬಿಟ್ಟ ನಾಲ್ಕನೆಯವನಾಗಿ. ಹೇ ಅಲ್ಲಿ ಹುಡುಕು ಇಲ್ಲಿ ಹುಡುಕು ಅಂತ ಅವ್ನು ಹೋಗಿ ಅವರ ಗಂಗಳದಾಗೆ ಕುತ್ಕಂಡಿದ್ನ ನೋಡಿದ್ರು, ಓಹೊ ಬೇರೆ ಜಾತಿಯವರ ಗಂಗಳದಲ್ಲಿ ಕುಂತಿದಾನೆ ಇಲ್ಲಿಗೆ ಕಟಾಪ್ ಆತು. ಚಿಂತುಗುಟ್ಲು ನೋಮಿಗೆ ಅವ್ನು ಬರಂಗಿಲ್ಲ ಅಂತ ಆಯಿತು. ಈ ಜಾಗದಿಂದ ನಮ್ಮರೆಲ್ಲಾ ಬೇರೆ ಬೇರೆ ಕಡೆಗೋಗಿ ನೆಲಸಿದಾರೆ ಅಂತ ನಮ್ಮ ದೊಡ್ಡೊರು ಹೇಳ್ತಿದ್ರು.

ಹೀಗೆ ಯರಮಮಚಿನಾಯಕನ ಬಗ್ಗೆ ಊಹಾಪೋಹದ ಕಥೆಗಳಿದ್ದು ಒಬ್ಬೊಬ್ಬರ ಬಾಯಲ್ಲಿ ಒಂದೊಂದು ರೀತಿಯ ಕತೆಗಳು. ಆದರೆ ಪೂರ್ತಿ ಮೂಲವನ್ನು ಯರಮಂಚನಾಯಕನ ಹುಟ್ಟು ಮತ್ತು ಸಾವಿನ ಬಗ್ಗೆ ಹೇಳುವ ವಕ್ತೃಗಳೇ ಈಗ ಇಲ್ಲ ಎಂದೇ ಹೇಳಬಹುದು. .ವಿರೂಪಾಕ್ಷಿ ಪೂಜಾರಹಳ್ಳಿರವರು ಹೇಳುವ ಹಾಗೆ ಇವನು ಭಾನುಕೋಟಿ ರಾಜನ ಮಗನೆಂದು ಅವನು ಮ್ಯಾಸ ಮಂಡಲ ಸ್ಥಾಪಿಸಿದ್ದು, ಪವಾಡಗಳು, ಜಾತಿಗಾಗಿ ಅವನು ಮಾಡಿದ ಕಾರ್ಯಗಳನ್ನು ಹೇಳುತ್ತಾ ಎಲ್ಲಾ ಜನಾಂಗೀಯ ಕಾರ್ಯಕ್ರಮಗಳನ್ನು ಮಾಡಿ ಮುಪ್ಪಾದ ಯರಮಂಚಿನಾಯಕ ಓಬಣ್ಣನಹಳ್ಳಿಯ ನೆಲಮಾಳಿಗೆಯೊಳಗೆ ಜೀವೈಕ್ಯನಾದನು ಎಂದು ಹೇಳಿದ್ದಾರೆ.

**ಗಾದ್ರಿಪಾಲನಾಯಕ:**

"ಗಾದ್ರಿಪಾಲನಾಯಕ ಮೂಲತಃ ಆಂಧ್ರಪ್ರದೇಶದ ನಲ್ಲಮಲ ಸುಕ್ಷೇತ್ರದವನು. ಶ್ರೀ ಕೋರಮಲ್ಲಯ್ಯ ಮತ್ತು ಮಲ್ಲಮ್ಮ ದಂಪತಿಗಳ ೨ನೇ ಮಗ. ಈತನ ಸಹೋದರರಾದ ಜಗಳೂರಜ್ಜ, ಕೊಳಾಳ್

ಕೆಂಚೇಶ, ವದ್ದಿಕೆರೆ ಸಿದ್ದಪ್ಪ, ನಾಯಕನಹಟ್ಟಿ ತಿಪ್ಪೇಸ್ವಾಮಿ ಮುಂತಾದವರು ಆಂಧ್ರದಿಂದ ಗುಂಪು ಗುಂಪಾಗಿ ಬಂದು ನಂತರ ಚೆಲ್ಲಾಪಿಲ್ಲಿಯಾದರು ಎಂಬುದೊಂದು ಪ್ರತೀತಿ.

ಗಾದ್ರಿಪಾಲನಾಯಕ ಗೋವುಗಳನ್ನು ಕಾದುಕೊಂಡು ನನ್ನಿವಾಳದಲ್ಲಿದ್ದ. ಬರಗಾಲ ಆವರಿಸಿದ್ದರಿಂದ ಪಶುಗಳಿಗೆ ಆಹಾರವಿಲ್ಲದೆ ಸೊರಗಿದ್ದವು. ಪಾಲಯ್ಯನ ಕನಸಿನಲ್ಲಿ ಒಬ್ಬ ಸ್ವಾಮಿ ಬಂದು 'ಬಿಳಿಮಲೆ ಕರಿಮಲೆ ಒಳಮಲೆ ಹೊರಮಲೆ' ಎಂಬುವುಗಳಿವೆ. ಅಲ್ಲಿ ನಿನಗೂ ನಿನ್ನ ಬೇಡ ಕಂಪಳಕ್ಕೂ ದನಕರುಗಳಿಗೂ ಒಳ್ಳೆಯದಾಗುತ್ತದೆ ಅಲ್ಲಿಗೆ ಹೋಗು ಪಾಲಯ್ಯ ಎಂದಾಗಾಯಿತು. ಎಚ್ಚೆತ್ತು ನೋಡಿದಾಗ ದನಕರುಗಳು ಹೊಟ್ಟೆತುಂಬಿದಂತೆ ಕಂಡವು. ಅಂದಿನಿಂದ ಆತ ನನ್ನಿವಾಳ ಬಿಟ್ಟು ಮಿಂಚೇರಿ ಅರಣ್ಯಕ್ಕೆ ಹೋದ. ಅಲ್ಲಿ ಹೆಂಡತಿಯರಾದ ಕೆಂಚವ್ವೆ ಮತ್ತು ಕಾಮವ್ವರೊಂದಿಗೆ ವಾಸಿಸತೊಡಗಿದ. ಆ ಅರಣ್ಯದಲ್ಲಿ ಗಂಡುಹುಲಿ ಮತ್ತು ಹೆಣ್ಣುಹುಲಿ ವಾಸವಾಗಿದ್ದವು. ಅವುಗಳೊಂದಿಗೆ ಪಾಲಯ್ಯ ಒಪ್ಪಂದ ಮಾಡಿಕೊಂಡನುಅದೇನೆಂದರೆ ನಿನ್ನ ಸುದ್ದಿಗೆ ನಾನು ಬರಲ್ಲ, ನನ್ನ ಸುದ್ದಿಗೆ ನೀನು ಬರಬೇಡ ಜೊತೆಯಲ್ಲೇ ವಾಸಮಾಡೋಣ ಎಂಬ ಒಪ್ಪಂದ. ಅದರಂತೆ ಹುಲಿಮಕ್ಕಳು ಕರುಗಳು ಜೊತೆಯಲ್ಲಿಯೇ ಇರುತ್ತಿದ್ದವು ಹುಲಿಗಳು ತಮ್ಮ ಮಕ್ಕಳನ್ನು ಬಿಟ್ಟು ಕಾಡಿಗೆ ಹೋಗುತ್ತಿದ್ದವು. ಗಾದ್ರಿಪಾಲನಾಯಕ ಹಾಲುಕರೆದು ಹಸುಗಳನ್ನು ಕಾಡಿಗೆ ಹೊಡೆದುಕೊಂಡು ಹೊಗುತ್ತಿದ್ದ. ಕೆಂಚೆವ್ವ ಕಾಮವ್ವ ಕರೆದಹಾಲನ್ನು ಎಪ್ಪಾಕಿ ಮೊಸರು ಮಾಡಿ ಬೆಣ್ಣೆ ತೆಗೆದು ಗಂಜಿಗಟ್ಟೆ, ಮುತ್ತುಗದೂರು, ಮುಂತಾದ ಕಡೆಗೆ ಮಾರಲು ಹೋಗುತ್ತಿದ್ದರಂತೆ.

ಒಂದು ದಿನ ಗಾದ್ರಿಪಾಲಯ್ಯನ ಭಾವ ಮೈದುನರಾದ ಚಿತ್ತಯ್ಯ ಮತ್ತು ಕಾಟಯ್ಯ ಇವರನ್ನು ನೋಡಲು ಕರಿಮಲೆಯಿಂದ ಬಿಳಿಮಲೆ ಮಾರ್ಗವಾಗಿ ಮಿಂಚೇರಿಗೆ ಬಂದರು. ಬಂದು ಹುಲಿಮರಿಗಳು ಮತ್ತು ಕರುಗಳು ಜೊತೆಯಲ್ಲಿರುವುದನ್ನು ನೋಡಿ ಆಶ್ಚರ್ಯಗೊಂಡು ಮರಿಯಾಗಿದ್ದಾಗ ಕರುಗಳ ಜೊತೆ ಆಡುವುದುಂಟು. ಅವು ಬೆಳೆದ ಮೇಲೆ ಬಿಟ್ಟಾವೆ, ಎಂದು ಹುಲಿಮರಿಗಳನ್ನು ಕೊಂದರು. ಸಂಜೆ ದನಕರುಗಳನ್ನು ಹೊಡೆದುಕೊಂಡು ಗೂಡಿಗೆ ಬಂದ ಪಾಲಯ್ಯ ಸತ್ತ ಹುಲಿಮರಿಗಳನ್ನು ನೋಡಿ ದಿಗ್ಭ್ರಾಂತನಾದ. ಕೊಟ್ಟ ಮಾತು ತಪ್ಪಿಹೋಯಿತು ಇದಕ್ಕೆ ಕಾರಣರಾರೆಂದು ಹುಡುಕುವಾಗ ಕಾಟಣ್ಣ-ಚಿತ್ತಣ್ಣ ಬಂದರು. ನಡೆದಿದ್ದನ್ನು ಹೇಳಿದರು. ವಚನ ತಪ್ಪಿದಕ್ಕೆ ದುಃಖಪಟ್ಟ ಪಾಲಯ್ಯ ಮಾಂಸ, ಕೆಂಬಕ್ಕಿ ಅನ್ನ ಎಡೆಮಾಡಿಸಿಟ್ಟು ಸೂರ್ಯದೇವರಿಗೆ ಕೈಮುಗಿದು ತಪ್ಪುಕಾಸುಕಟ್ಟಿಕೊಂಡು ಆ ಅರಣ್ಯದಿಂದ ದೂರ ಹೋಗಲು ಹೊರಟ.

ಇತ್ತಕಡೆ ಸತ್ತಪ್ರಾಣಿ ಕಚ್ಚಿಕೊಂಡು ಬಂದ ಗಂಡುಹುಲಿ ಹೆಣ್ಣುಹುಲಿ ಹುಡುಕುತ್ತಾ ಬಂದಿತು. ಹೆಣ್ಣುಹುಲಿ ಕರು ಹಾಕಿದ ಆಕಳನ್ನು ಕಾಯ್ದುಕೊಂಡು ಕುಳಿತಿತ್ತು. ನೀನು ಮನೆಗೋಗಿ ಮರಿಗಳಿಗೆ ಊಟ ಕೊಟ್ಟು, ಪಾಲಯ್ಯನಿಗೆ ಹಸು ಕರು ಹಾಕಿದ ವಿಚಾರ ತಿಳಿಸಿ ಬರ ಹೇಳುವಂತೆ ಹೇಳಿತು. ಗೂಡಿಗೆಹೋದ ಗಂಡುಹುಲಿ ಮಕ್ಕಳು ಸತ್ತಿದ್ದನ್ನು ನೋಡಿತು. ಅಲ್ಲಿಯೂ ಅಳಿಯಂದಿರು ಆ ಹುಲಿಯನ್ನು ಸಾಯಿಸಲು ನೋಡಿದರು. ತಪ್ಪಿಸಿಕೊಂಡು ಬಂದು ಹೆಣ್ಣುಹುಲಿಯ ಹತ್ತಿರ ನಡೆದದ್ದನ್ನೆಲ್ಲಾ

ಹೇಳಿತು. ಪಾಪಿ ನರಮಾನವ ವಂಚಿಸಿದ ಎಂದು ಪಾಲಯ್ಯನನ್ನು ಹುಡುಕಿದವು. ಹುಲಿಗಳು ನನ್ನನ್ನು ಬಿಡಲಾರವೆಂದು ತಿಳಿದು ಜರಿಮಲೆ ಪ್ರದೇಶಕ್ಕೆ ಹೋಗಿ ಭಗವಂತನನ್ನು ಬೇಡಿಕೊಂಡು ಹುಲಿಮಕ್ಕಳನ್ನು ಬದುಕಿಸುವೆನೆಂದು ಹೊರಟನು. ಅವನನ್ನು ಹಿಂಬಾಲಿಸಿ ಬಂದ ಹುಲಿಗಳು ಪಾಲಯ್ಯನನ್ನು ತಡೆದವು. ಅವನು ಬೇಡಿಕೊಂಡರೂ ಬಿಡಲಿಲ್ಲ. ಸುಳ್ಳು ನುಡಿಯುವೆ ಎಂದವು. ನಿನ್ನನ್ನು ಕೊಲ್ಲುತ್ತೇವೆ ತಪ್ಪಿಸಿಕೊಂಡರೆ ಹೇಡಿ ಎಂದು ಮೂದಲಿಸಿದ್ದರಿಂದ ಪಾಲಯ್ಯ ಸಂಘರ್ಷಕ್ಕೆ ಸಿದ್ಧನಾದ. ಪಾಲಯ್ಯನಿಗೂ ಹುಲಿಗೂ ಸಂಘರ್ಷವೇರ್ಪಟ್ಟು ಸತತ ಮೂರು ದಿನಗಳ ಕಾಲ ಕಾದಾಟ ನಡೆಯಿತು. ಮೂರನೇ ದಿನ ಮುಸ್ಸಂಜೆಯಲ್ಲಿ ಮಿಂಚೇರಿ ಹಳ್ಳದ ದಡದಲ್ಲಿ ಬಿದ್ದು ಪ್ರಾಣ ಬಿಟ್ಟ, ಜೊತೆಗೆ ಹೋರಾಡಿದ ಹುಲಿಗಳು ರಕ್ತಕಾರಿ ಸತ್ತವು. ಕಾಟಯ್ಯ ,ಚಿತ್ತಯ್ಯ ಬಂದು ನೋಡಲು ಹುಲಿಗಳು ಮತ್ತು ಪಾಲಯ್ಯ ಸತ್ತು ಬಿದ್ದಿದ್ದವು.

ವಿಷಯ ತಿಳಿದ ಕೆಂಚವ್ವೆ ಮತ್ತು ಕಾಮವ್ವರಿಬ್ಬರು ಗಂಜಿಗಟ್ಟೆಯ ದೊಡ್ಡ ಹೊಂಡದಲ್ಲಿ ಐಕ್ಯರಾಗುವ ಮೂಲಕ ಸಹಗಮನವನ್ನು ಮಾಡಿದ್ದನ್ನು ಆಲೂರಿನಲ್ಲಿರುವ ವೀರಮಾಸ್ತಿಕಲ್ಲು ತಿಳಿಸುತ್ತದೆ. ಮಿಂಚೇರಿ ಹಳ್ಳದ ಎರಡೂ ಬದಿಗಳಲ್ಲಿ ಗಾದ್ರಿಪಾಲಯ್ಯ ಮತ್ತು ಹುಲಿಗಳ ಎರಡು ಸಮಾಧಿಗಳಿವೆ. ಗಂಜಿಗಟ್ಟೆಯಲ್ಲಿ ಗಾದ್ರಿಪಾಲಯ್ಯನ ಗುಡಿ ಇದೆ. ಆದರೆ ಮೂರ್ತಿ ಇಲ್ಲ. ವೀರಗಲ್ಲು ಮಾಸ್ತಿಗಲ್ಲು ಇವೆ. ಈ ವೀರಮಾಸ್ತಿಗಲ್ಲಿನ ಮೇಲ್ಭಾಗದಲ್ಲಿ ಹುಲಿಯೊಡನೆ ಹೋರಾಡುವ ಚಿತ್ರವಿದೆ. ಕೆಳಗೆ ಇಬ್ಬರು ಮಹಿಳೆಯರು ಸತಿಹೋಗುವ ಚಿತ್ರವಿದೆ. ಅಸ್ಪಷ್ಟ ಶಾಸನವಿದು. ನಾಯಕನಹಟ್ಟಿಯ ಬಖೈರು ಮಾತ್ರ ಈತನ ಬಗ್ಗೆ ಸ್ಪಷ್ಟ ಲಿಖಿತ ದಾಖಲೆ.

ಈಗಲೂ ಮೂರು ವರ್ಷಗಳಿಗೊಮ್ಮೆ ಎರಡು ವರ್ಷಗಳಿಗೊಮ್ಮೆ ಮಿಂಚೇರಿ ಜಾತ್ರೆ ಮಾಡುವ ಪದ್ಧತಿ ಮ್ಯಾಸಬೇಡರಲ್ಲಿದೆ. ಬಚ್ಚಬೋರನಹಟ್ಟಿಯಿಂದ ಆರಂಭವಾಗಿ ಸಿರಿಗೆರೆಯ ಮಾರ್ಗವಾಗಿ ಕಾಲ್ನಡಿಗೆಯಲ್ಲಿಯೇ ಮಿಂಚೇರಿ ಅಥವಾ ಗಾದ್ರಿ ಗುಡ್ಡಕ್ಕೆ ಹೋಗಿ ಹುಲಿ ಮತ್ತು ಪಾಲಯ್ಯನ ಸಮಾಧಿಗೆ ಪೂಜೆಮಾಡಿಕೊಂಡು ಹಿಂದಿರುಗುವುದನ್ನು ಗಾದ್ರಿಗುಡ್ಡಜಾತ್ರೆ ಎನ್ನುತ್ತಾರೆ.[೧೦]

**ಜಗಳೂರು ಪಾಪನಾಯಕ:**

ಕೊರಮಲ್ಲನಾಯಕಂಗೆ ಬಾಳೇರ ಪುಟ್ಟಮ್ಮ ಅಂಬ ಹೆಂಡ್ತಿ. ಪಚ್ಚಪದಿ ಪಾಲಮ್ಮ ತಂಗಿ. ದನ ಕಾಯೋದು ಪಾಲನೆ ಮಾಡೋದೆ ಇವರ ಕೆಲ್ಸ. ಹಿಂಗೆ ಇರಬೇಕಾದ್ರೆ ಈಕೆ ಯಾರು ಪಚ್ಚಪದಿ ಪಾಲಮ್ಮ ಪ್ರಬುದ್ಧಮಾನಕ್ಕೆ ಬಂದ್ಲು. ಬಂದಾಗ ಸೆಟ್ಟೂರಿನ ಕಾಮಗೇತ್ಲು ಕ್ಯಾಸಯ್ಯ ಅಂತ. ಕಾಡು ಕಾಡು ತಿರುಗೋದು ದರೋಡೆ ಮಾಡಿಕೊಂಡು ಹೋಗಾದು ಇವ್ನ ಕೆಲ್ಸ. ಒಂದಸಾರಿ ಈ ಕಡಿಗೆ ಬಂದು ನಮ್ಮ ಮ್ಯಾಸದವರು ಇರೋ ಗೂಡತ್ರ ಹೋಗ್ತಾನೆ. ನೀರು ಕೇಳ್ತಾನೆ. ಆಕೆ ಪಚ್ಚಪದಿ ಪಾಲಮ್ಮ ನೀರು ತಂದುಕೊಡ್ತಾಳೆ. ಬಾರಿ ಸುಂದರಿ ಅಂತೆ. ಆಕೆನಾ ನೋಡಿ ಇಷ್ಟಪಟ್ಟು ಹೊತ್ಕೊಂಡು ಹೋಗಿಬಿಡ್ತಾನೆ. ಬಾರಿ ರೌಡಿ ಅಂತೆ ಅವನು ಆವಾಗ. ಮತ್ತೆ ಇವರೆಲ್ಲಾ ಬಂದು ನೋಡ್ತಾರೆ ಹಿಂಗೆಲ್ಲಾ ಆಗಿದೆ ಅಂತ ಗೊತ್ತಾಗುತ್ತೆ. ಏನ್ ಮಾಡೋದು ಈಗ. ಅವನು ಮೊದಲೇ

ದುಷ್ಟ ಅವುಂತಾಗೇನು ಅಂತ ಸುಮ್ನಾಗಾಗಿಬಿಟ್ರು. ಆವಾಗ ಸ್ವಲ್ಪ ದಿನ ಕಳ್ದ ಮೇಲೆ ಬಾಳೇರ ಪುಟ್ಟಮ್ಮ ಗರ್ಭಿಣಿಯಾಗ್ತಾಳೆ. ಗರ್ಭಿಣಿಯಾದಾಗ ಒಳಗಿಂದ ಪಿಂಡ ಮಾತಾಡ್ತಂತೆ. ಏನಂತ ನಾನು ಹೊರಗೆ ಬರಬೇಕು ಅಂದ್ರೆ ನನ್ನ ಸೋದರತ್ತೆನಾ ನೀ ಕರೆಸ್‌ಬೇಕು ಅಂತ ಹೇಳ್ತಂತೆ. ಆಗ ಎಲ್ಲರಿಗೂ ಆಶ್ಚರ್ಯ. ಇದೇನಿದು ಪಿಂಡ ಮಾತಾಡ್ತಾತಲ್ಲಾ ಅಂತ ಅನ್ನಕೊಂಡ್ರು.

ಆಮೇಲೆ ಕೊರಮಲ್ಲನಾಯಕ ಒಬ್ಬ ಶೆಟ್ಟ ಗೋವಿಂದಶೆಟ್ಟಿ ಅಂತ ಅವನ ಹೆಸರು ಕರ್‍ಕೊಂಡು ಕಾಮಗೇತ್ಲು ಕಾಸಯ್ಯನತ್ರ ಹೋಗ್ತಾನೆ. ಆ ಶೆಟ್ಟಿ ಕಾಸಯ್ಯಗೆ ಹೇಳ್ತಾನೆ. ಸರಿ ನೀನು ಹೆಂಗೆ ಕರ್‍ಕೊಂಡು ಹೋಗತಿಯೋ ಹಂಗೆ ಕರ್‍ಕೊಂಡು ಬಂದು ಬಿಡಬೇಕು ನನ್ನ ಹೆಂಡ್ತಿನ ಹಂಗಾದ್ರೆ ಕಳುಸ್ತಿನಿ ಅಂದನು. ಆಯ್ತು ಅಂತ ಅವನು ಹಾಕಿದ ನಿರ್ಭಂದಕ್ಕೆ ಒಪ್ಕೊಂಡು ಕರ್ಕೊಂಡು ಬರ್‍ತಾನೆ. ಕರ್ಕಂಡು ಬಂದಾಗ ಹೆರಿಗೆ ಆಗುತ್ತೆ. ಹೆರಿಗೆ ಆಗಬೇಕಾದ್ರೆ ಅತ್ತೆ ನೀ ಮುಂದೆ ಕೂತ್ಕೋ ನಾ ಬರ್‍ತಾ ಇದಿನಿ ಅಂತು ಪಿಂಡ. ಹಂಗೆ ಆಕೆ ಮುಂದೆ ಕುಂತ್ಲು. ಕಾಲು ಮುಂದೆ ಮಾಡಿ ಹುಟ್ಟಿದ ದುರ್‌ಪಿಂಡ ಪಾಲಮ್ಮನ ಮೂತಿಗೆ ಹೊದೆಯುತ್ತೆ. ಮುಂದ್ಲು ಮೂರಲ್ಲು ಉದುರ್‍ತಾವೆ. ಕಾಲು ಮುಂದೆ ಮಾಡ್ಕೊಂದು ಬಂದಿದ್ದರಿಂದ ಈತ ಹುಟ್ಟಿದ ಸ್ಥಳಕ್ಕೆ ಕಾಡುಕುಂಟೆ ದಿಬ್ಬ ಅಥವಾ ಕಾಡುಲ್ಕುಂಟೆ ತಿಪ್ಪೆ ಅಂತ ಕರಿತಾರೆ. ಹಂಗೆ ಹೆರಿಗೆ ಆದಾಗ ಅದು ನೆಲದ ಮೇಲೆ ಬಿದ್ರೆ ಅದೊಂತರ ಕರ್‍ರಗೆ ಪಿಂಡ ಕಂಡಂಗಾಗುತ್ತೆ. ಹೊರಗಡೆ ಬರ್‍ತಾನೆ ಅತ್ತೆ ಹಲ್ಲು ಉದುರಿಸಿಬಿಟ್ನಲ್ಲಾ. ಅವನು ಮೊದ್ಲೇ ಕಂಡೀಶನ್ ಹಾಕಿ ಕಳ್ಸಿದಾನೆ. ಬಾಳ ಸಿಟ್ಟಿನೋನು. ಈಗ ಏನ್ ಮಾಡೋದು ಅಂತ ಕೋರಮಲ್ಲನಾಯಕನಿಗೆ ಭಯವಾಗುತ್ತೆ. ಇದು ಹೊಟ್ಟೇಲಿ ಇದ್ದಂಗೆ ಮಾತಾಡಿ ಬಿಡ್ತಲ್ಲ ಪೀಡೆನೋ, ಪಿಶಾಚಿನೊ, ಅಂತ ಹೆದುರ್‌ಕೊಂಡು ಒಂದು ಕಂಬ್ಳಿ ಕೋರಿನ್ಯಾಗೆ ಸುತ್ತಿಕೊಂಡು ಅಡವ್ಯಾಗೆ ಒಂದು ಕಾರೆಗಿಡದ ಕೆಳಗೆ ಇಟ್ಟು ಬರ್‍ತಾರೆ. ಇಟ್ಟು ಬಂದು ಇನ್ನು ಕಾಸಯ್ಯ ಬಂದು ಬಿಟ್ರೆ ನಮಗೆ ಉಳಿಗಾಲ ಇಲ್ಲ ಅಂತಂದು ಅಲ್ಲಿಂದ ದನಗಳನ್ನ ಹೊಡ್ಕೊಂಡು ಸಾಣೆಕೆರೆ ಕಾವಲಿಗೆ ಬರ್‍ತಾರೆ.

ಆ ಮಗ ಕಾರೆಗಿಡದ ಕೆಳಗೆ ಇತ್ತು. ಅಲ್ಲಿಗೆ ಶಿವ ಪಾರ್ವತಿಯರು ನಂದಿವಾಹನ ತಕ್ಕಂಡು ಶುಕ್ಲಗಿರಿ ಪರ್ವತದ ಮೇಲೆ ಇಳಿದ್ರು. ಶಿವಪಾರ್ವತಿ ನಂದಿ ಮೇಲೆ ಬಂದು ಇಲ್ಲಿ ಇಳಿದಿದ್ದರಿಂದ ನಂದಿವಾಳ, ನನ್ನಿವಾಳ ಅಂತ ಹೆಸರು ಬಂತು ಅಂತ ಹೇಳ್ತಾರೆ. ಅವರು ಬಂದು ಅಲ್ಲಿ ಇಳಿದಾಗ ಕೂಸಿನ ಅಳುವ ಧ್ವನಿ ಕೇಳಿಸುತ್ತೆ. ಆ ಅಳುನೇ ಹುಡ್ಕೊಂಡು ಬಂದು ನೋಡ್ತಾರೆ ಮಗು. ಪಾರ್ವತಿ ಆ ಮಗುನ ಎತ್ಕೊಂಡು ಈಶ್ವರನತ್ರ ತಗೊಂಡು ಹೋಗ್ತಾಳೆ. ಆಗ ಶಿವ ಹೇಳ್ತಾನೆ ಆಪತ್ಕಾಲದಲ್ಲಿ ನನ್ನ ಉರಿ ನೇತ್ರದ ಪ್ರಭಾವ ನಿನಿಗಾಗ್ಲಿ. ಇವನು ಬಹಳ ಕಾರಣೀ ಪುರುಷನಾಗ್ತಾನೆ ಅಂತ ಪಾರ್ವತಿಗೆ ಹೇಳ್ತಾನೆ. ಆಗ ಪಾರ್ವತಿ ಅಲ್ಲೆ ಒಂದು ಚಿಲುಮೆ ತೆಗ್ದು ನೀರು ಬರಿಸಿ ಅವನಿಗೆ ಸ್ನಾನ ಮಾಡಿಸ್ತಾಳೆ. ಪಾರ್ವತಿ ನಿನ್ನ ಕರದಿಂದ ಇವನು ಶುಭ್ರನಾಗಿದ್ದಾನೆ. ಸೂರ್ಯ ಒಳದಂಗೆ ಹೊಳಿತಿದಾನೆ. ಅದ್ಕೆ ಇವನು ಸೂರ್ಯದೇವರಪಾಪನಾಯಕ ಅಂತ ಹೆಸರಾಗಲಿ ಅಂತ

ಹರಿಸಿ ಅದೇ ಕಾರೆಗಿಡದ ಕೆಳಗೆ ಮಲಗಿಸಿ ಆ ಗಿಡದ ರಂಭೆಗೆ ಜೇನುತೊಟ್ಟನ್ನು ಕಟ್ಟಿ ಅದು ಒಂದೊಂದೆ ಹನಿ ಆ ಬಾಲಕನ ಬಾಯಲ್ಲಿ ಬೀಳುವಂತೆ ಮಾಡಿ ಓರಂಗಲ್ ಪಟ್ಟಣದ ಮಲ್ಲಜ್ಜಿಗೆ ಪಾಲನೆ ಮಾಡುವಂತೆ ಪ್ರೇರೆಪಿಸುವೆನು ಎಂದು ಹೇಳಿಕೊಂಡು ಹೋಗುತ್ತಾರೆ.

ಓರಂಗಲ್‌ನಿಂದ ಒಂದು ಅಜ್ಜಿ ಮಲ್ಲಜ್ಜಿ ಅಂತ ಕುಳ್ಳಿಗೆ ಅಂತ ಅಲ್ಲಿಗೆ ಬಂದ್ಲು. ಮಗು ಅಳೋದನ್ನ ನೋಡಿದ್ಲು. ಆ ಮಗುನ ಎತ್ಕೊಂಡು ಓರಂಗಲ್ ಪಟ್ಟಣಕ್ಕೆ ಕರ್ಕೊಂಡು ಬಂದು ಸಾಕಿದ್ಲು. ದೊಡ್ಡವನಾದ್ಮೇಲೆ ಆ ಊರಿನ ಗೌಡ್ರತ್ರ ಕರ್ಕೊಂಡೋಗಿ ಒಂದು ದುಗ್ಗಾಣಿಗೆ ದನ ಕಾಯೋಕೆ ಇಟ್ಲು. ಅವಜ್ಜಿ ಇವನಿಗೆ ಪಾಪಯ್ಯ, ಪಾಪಣ್ಣ ಅಂತ ಹೆಸರಿಟ್ಳು. ಚಡ್ಡಿ ತೊಟ್ಟು, ಕಾಸಿದಟ್ಟಿ ಕಟ್ಟಿ, ಕಂಬಳಿ ತುಂಡು ಹೆಗಲ ಮ್ಯಾಲೆ ಹಾಕೊಂಡು ಕೈಯಲ್ಲಿ ಕೋಲು ಹಿಡ್ಕೊಂಡು ತಲೆಗೊಂದು ಬಟ್ಟೆ ಕಟ್ಟಿ ಹಸುಗಳೊಂದಿಗೆ ಹೋಗುವನು.

ಅಲ್ಲಿ ದುರ್ಗಿಕೆರೆ ಅಂತ ಕರೀತಾರೆ ಅಲ್ಲಿಗೆ ಪ್ರತಿದಿನ ದನಗಳನ್ನ ಹೊಡ್ಕೊಂಡು ಬರ್ತಾನಂತೆ. ಬಂದವನು ದನಗಳನ್ನ ಬಿಟ್ಕೊಂಡು ಅಲ್ಲಿ ದೊಡ್ಡ ದೊಡ್ಡ ಮಂಗಾರಿ ಗಿಡಗಳು ಇರುತ್ವಂತೆ. ಆ ಗಿಡದ ನೆರಳಾಗೆ ಮಲಕ್ಕೊಂಡು ಬಿಡ್ತಿದ್ನಂತೆ. ಹಿಂಗೆ ದಿನಾ ಇದೇ ಕೆಲಸ ಮಾಡ್ಕಂಡು ಇದ್ನಂತೆ. ಇರಬೇಕಾದ್ರೆ ಒಂದು ಮಂಗಾರಿ ಗಿಡ ಕವಲು ಹೊಡೆದಿರುತ್ತೆ ಒಂದು ಹುತ್ತದ ಮೇಲೆ. ಅದು ದನ ಕಾಯೋಕೆ ಚೆನ್ನಾಗಿರುತ್ತೆ ಅಂತ ಆ ಗಿಡನ್ನಾ ಬೇರು ಸಮೇತ ಕಿತ್ತುಬಿಡ್ತಾನೆ. ಕೀಳ್‌ಬೇಕಾದ್ರೆ ಒಂದು ದೊಡ್ಡ ಶಬ್ದ ಬರುತ್ತೆ. ಆಗ ಆ ಹುತ್ತದಿಂದ ಒಂದು ದೊಡ್ಡ ಏಳೆಡೆ ಸರ್ಪ ಮೇಲೆ ಬಂತಂತೆ. ಮಂಗಾರಿ ಗಿಡದ ಬೇರು ಸರ್ಪದ ಕಿವಿಯಿಂದಾಸಿ ಅದನ್ನ ಸುತ್ತಿಕೊಂಡಿರುತ್ತೆ. ಯಾವುದೋ ಶಾಪದಿಂದ ಅಲ್ಲಿತ್ತು. ಈತ ಬೇರು ಸಮೇತ ಕಿತ್ತಾಗ ಆ ಸರ್ಪಕ್ಕೆ ಸ್ವಲ್ಪ ಅಳರಾಗಿ ಶಾಪ ವಿಮೋಚನೆ ಆಯಿತಂತೆ. ಅದ್ಕೆ ಆ ಸರ್ಪ ನೀನು ಮಹಿಮಾಪುರುಷ. ನಿನ್ನಿಂದ ನನಗೆ ಶಾಪ ವಿಮೋಚನೆಯಾಯ್ತು. ನೀನು ವೆಂಕಟೇಶನ ಭಕ್ತನಾಗ್ತಿಯಾ. ನಿನಗೆ ವೆಂಕಟೇಶನ ದರುಶನ ಲಭಿಸಲಿದೆ. ಸದಾ ನನ್ನ ಆರ್ಶಿವಾದ ನಿನ್ನ ಮೇಲಿರುತ್ತೆ ಎಂದು ನೀನು ಕಿತ್ತ ಈ ಮಂಗಾರಿ ಗಿಡದ ಕೋಲೇ ನಿನಗೆ ನಾಗಮುರಿಬೆತ್ತವಾಗಲಿ, ನಾನೇ ಅದರಲ್ಲಿರುತ್ತೇನೆ. ಅದರಿಂದ ನಿನ್ನ ಇಷ್ಟ ಸಿದ್ಧಿಸುವುದು. ಈ ಯೋಗ್ಯ ಸ್ಥಳ ನಿನ್ನ ಧ್ಯಾನ ಮಂದಿರ. ಪ್ರತಿ ಸೋಮವಾರ ಇಲ್ಲಿ ನಿನಗೆ ಪೂಜೆ ಆಗ್ಲಿ ಎಂದು ಹೇಳಿ ಸೋಮಲಬಂಡೆಗೆ ಹೋಗಿ ನೆಲಸಿತು ಸರ್ಪ.

ಅಲ್ಲಿ ಹೋಗಿ ನೆಲಸಿದ ಮೇಲೆ ನಾಗಭೈರವ ಅಂತ ಆತು. ಪ್ರತಿ ಭಾನುವಾರ ನನಗೆ ಪೂಜೆಯಾಗುತ್ತೆ. ಸೋಮವಾರ ನಿನಗೆ ಪೂಜೆ ಆಗ್ಲಿ ಅಂತ ಆಶಿರ್ವಾದ ಮಾಡಿ ಹೋತು. ಇಲ್ಲಿಂದ ತಿರುಪತಿ ವೆಂಕಟೇಶನ ಮೇಲೆ ಈತನಿಗೆ ಭಕ್ತಿ ಜಾಸ್ತಿಯಗುತ್ತೆ. ಕೈಯಲ್ಲಿ ನಾಗಮುರಿ ಬೆತ್ತ. ಪ್ರತಿದಿನ ದನ ಕಾಯೋದು ಹೋಗೋದು. ಆ ಹುತ್ತದ ಗಡ್ಡೆ ಹತ್ತಿ ಕಂಬಳಿ ಗದ್ಗೆ ಹಾಸಿ ವೆಂಕಟೇಶನ ಧ್ಯಾನ ಮಾಡ್ಕೊಂಡು ಕುತ್ಕಂಡು ಬಿಡಾದು. ಯಾವಾಗಲೂ ವೆಂಕಟೇಶನ ಧ್ಯಾನ. ತಿರುಪತಿಯ ದರ್ಶನದ ಬೇಡಿಕೆ. ವೆಂಕಟೇಶನ ಅಶರೀರವಾಣಿ ಇನ್ನು ಕೆಲವೇ ದಿನಗಳಲ್ಲಿ ನನ್ನ

ಭಕ್ತರಾದ ಗೊಂದಳ್ಳಿ ಗೊಲ್ಲರು ಕಾಸು ಮೀಸಲುನೊಂದಿಗೆ ಬರುವರು. ಅವರ ಸಂಗಡ ಬಾ ನಾನೇ ನಿನ್ನನ್ನು ಸ್ವಾಗತಿಸುತ್ತೇನೆ ಎನ್ನುವುದು.

ಈಗ ತಿರುಪತಿಗೆ ಹೊಗಬೇಕಲ್ಲ ಅದ್ಕೆ ದುಗ್ಗಾಣಿ ಕಾಸು ಬೇಕು ಅಂತೆಲ್ಲಾ ಮಾತಾಡ್ತಾರೆ. ಸರಿ ದನ ಕಾದಿದ್ದ ದುಗ್ಗಾಣಿ ಹಿಸ್ಕೊಂಡಿರಲ್ಲ. ಅಷ್ಟೊತ್ತಿಗೆ ಆ ಅಜ್ಜ ಸತ್ತಿರುತ್ತೆ. ಊರವರೆಲ್ಲರ ದನಗಳನ್ನ ಕಾಯ್ತಾ ಇದ್ದಿದ್ದರಿಂದ ಊರಿನವರೇ ಮುದ್ದೆ ಕೊಟ್ಟು ಸಾಕ್ತಾರೆ. ಯಾರತ್ರಾನೂ ದುಡ್ಡು ಇಸ್ಕೊಂಡಿರಲ್ಲ. ಸರಿ ತಿರುಪತಿಗೆ ಹೋಗಾಕೆ ದುಗ್ಗಾಣಿ ಕೇಳಬೇಕು ಅಂತ ಊರ ಗೌಡನತ್ರ ಬರ್ತಾನೆ. ನಾನು ತಿರುಪತಿಗೆ ಹೋಗ್ಬೇಕು, ದೇವರನ್ನ ನೋಡ್ಬೇಕು. ದುಗ್ಗಾಣಿ ಬೇಕು ಅಂದ. ನೀನು ತಿರುಪತಿ ನೋಡ್ತಿಯೆನಲೇ ಹುಚ್ಚ ಇದ್ದಂಗೆ ಇದಿಯಾ ಆ ತಿರುಪತಿ ಎಲ್ಲಿ ನೀನೆಲ್ಲಿ ಹೋಗ್ ಹೋಗ್ ಅಂತ ಗೌಡನ ಸಮೇತ ಎಲ್ಲರೂ ಬೈತಾರೆ. ಇವನಿಗೆ ಬೇಜಾರಾತು. ಮಾಡ್ತಿನಿ ನಿಮಗೆ ಅಂದ್ಕೊಂಡು ದನಗಳನ್ನ ಹೊಡ್ಕೊಂಡು ಹೋಗ್ತಾನೆ.

ಕೊಪಗೊಂಡ ಪಾಪಣ್ಣ ನನ್ನಿವಾಳದ ಹತ್ರ ಹೊಡ್ಕೊಂಡು ಹೋಗ್ಬಿಟ್ಟು ದನನೆಲ್ಲಾ ಒಂದು ಕಡೆ ಅಲ್ಲೇ ಕೂಡಿ ಹಾಕಿಬಿಡ್ತಾನೆ. ನಾಗಮುರಿ ಬೆತ್ತದಿಂದ ಮೂರುಗೆರೆ ಹಾಕಿ ಕೈ ಮುಗ್ದು ಗಡ್ಡೆ ಹತ್ತಿ ಧ್ಯಾನಮಗ್ನನಾಗಿ ಕುಂತ್ಕಂಡುಬಿಡ್ತಾನೆ. ಸಾಯಂಕಾಲ ಆದ್ರೂ ದನ ಮನೆಗೆ ಬರ್‌ಲಿಲ್ಲ ಅಂತ ಊರಜನ ಮತ್ತೆ ಗೌಡ ಎಲ್ಲರೂ ಪಾಪಣ್ಣ ಧ್ಯಾನಸ್ತನಾಗಿದ್ದ ಜಾಗಕ್ಕೆ ಬರ್ತಾರೆ. ಬಂದ್ರೆ ಒಂದು ದನ ಮಿಸುಗಲಿಲ್ಲ. ಎಲ್ಲಾ ಗೆರೆಯೊಳಗೆ ಇದ್ದಾವೆ. ಗೆರೆ ದಾಟೋಕೆ ಹೊದ್ರೆ ಬೆಂಕಿ ಹತ್ಕೊಳ್ಳತ್ತೆ. ಆಗ ಈತ ದೈವಾಂಶ ಸಂಭೂತ ಪವಾಡ ಪುರುಷ ಅನ್ಕೊಂಡು, ತಮ್ಮ ತಪ್ಪನ್ನು ಮನ್ನಿಸು, ತಿರುಪತಿಗೆ ಹೋಗಲು ಕೇಳಿದಷ್ಟು ಹಣ ಕೊಡ್ತಿವಿ ಅಂತಾರೆ. ಆವಾಗ ಗಡ್ಡೆ ಇಳ್ದು ಬಂದು ಗೆರೆ ಅಳುಸ್ತಾನೆ ಹಸುಗಳು ಹೋಗ್ತಾವೆ.

ಆಗ ಮಾರನೇ ದಿನ ಎಲ್ಲಾ ಸೇರಿ ಅವರವರ ಎಷ್ಟೆಷ್ಟು ದನ ಕಾಯುತ್ತಿದ್ದನೊ ಅಷ್ಟಷ್ಟು ದುಡ್ಡು ದುಗ್ಗಾಣಿ ತಂದುಕೊಟ್ಟರು. ಆ ದುಗ್ಗಾಣಿನೆಲ್ಲಾ ತಕ್ಕೊಂಡು ಸೋಮನಬಂಡೆ ಮೇಲೆ ಹೊಗ್ತಾನೆ. ಹೋಗಿಬಿಟ್ಟು ಗಟ್ಟಿಯಾವುದು ಟೊಳ್ಳಾವುದು ಅಂತ ತೂರ್ತಾನೆ. ಅಲ್ಲಿ ಇಳಿಜಾರು ಇದ್ದುದರಿಂದ ಎಲ್ಲಾ ಕೆಳಗೋಗಿ ಉಳಿದಿದ್ದು ಮೂರು ದುಗ್ಗಾಣಿ ಅಲ್ಲಿ ಬಿದ್ದಿರ್ತವೆ. ಅದನ್ನ ತಗೊಂಡು ಒಂದು ಅಳಿಲನ್ನು ಸಾಯಿಸಿ ಅದನ್ನೇ ತನ್ನ ಬುಡುಜೀಲವನ್ನಾಗಿ ಮಾಡ್ಕೊಂಡು ತಿರುಪತಿಗೆ ಹೊಂಟ. ತಿರುಪತಿಗೆ ಪ್ರಯಾಣ ಮಾಡಬೇಕಾದ್ರೆ ಗೊಂದಳ್ಳಿ ಗೊಲ್ಲರ ಗುಂಪನ್ನು ಸೇರಿಕೊಳ್ಳಲು ಕೇಳುವನು. ಅವರು ಒಪ್ಪಿ ಮೀಸಲು ಹಾಲು ಮೊಸರನ್ನು ಇವನಿಗೆ ಒಪ್ಪಿಸಿ ನೀರು ಕುಡಿದು ಬರಲು ಹೋದರು. ಅವರು ಬರೊಷ್ಟೊತ್ತಿಗೆ ಆ ಮೀಸಲು ಹಾಲು ಮೊಸರು ಕುಡಿದಿದ್ದ. ಇದನ್ನ ನೋಡಿದ ಗೊಲ್ಲರು ಚೆನ್ನಾಗಿ ಹೊಡೆದು ಒಂದು ಕಂದಕಕ್ಕೆ ತಳ್ಳಿ ಮೇಲೆ ಬಂಡೆ ಎಳೆದು ಸಾಯಲಿ ಎಂದು ಹೋದರು.

ಅವರು ಮುಂದಕ್ಕೆ ಹೋದರು. ನಾಗರಬೆತ್ತದ ಸಹಾಯ ಪಡ್ಕೊಂಡು ಕಲ್ಲು ಸಿಡಿಯೋ ರೀತಿ ಮಾಡಿದ. ಆ ಕಲ್ಲು ಸಿಡಿದ ಭಾಗಕ್ಕೆ ಕಲ್ಲಹಳ್ಳಿ ಅಂತ ಹೆಸರು ಬಂತು. ಆ ಕಲ್ಲಿಂದ ಹೊರಗಡೆ

ಬಂದು ಬಿಡ್ತಾನೆ. ಬಂದಾಗ ಅಲ್ಲೊಂದು ಕುಂಟುಕುದುರೆ ಇರುತ್ತೆ. ಅದನ್ನ ತನ್ನ ನಾಗರಬೆತ್ತದಿಂದ ತಾಗಿಸಿದ. ಅದು ಒಳ್ಳೆ ಕುದುರೆಯಾಯಿತು. ಆ ಕುದುರೆ ನಾಗಲೋಟದಲ್ಲಿ ಹೋಗೋದು. ಗೊಲ್ಲರು ಹೋಗ್ತಾ ಇರ್ತಾರಲ್ಲಾ ಆ ದಾರಿಗೆ ಅಡ್ಡ ಬಂದು ನಿತ್ಕೊಂಡ. ಗೊಲ್ಲರು ಹೋಗುತ್ತಿದ್ದ ದಾರಿಗೆ ಅವರಿಗಿಂತ ಮುಂದೆ ಬಂದು ನಿಲ್ಲುವನು. ಗೊಲ್ಲರೇ ಆಶ್ಚರ್ಯಪಟ್ಟು ಇವನು ದ್ಯಾವ್ರೇ ಇರಬೇಕು ಅಂತ ತಪ್ಪಾಯತಪ್ಪ ನೀನು ಬಹಳ ಪವಾಡ ಪುರುಷ ಐದಿಯ ನಮ್ಮದು ತಪ್ಪಾಯ್ತು ಅಂತ ಕೇಳಿಕೊಂಡ್ರು. ಆಗ ಪಾಪಣ್ಣ ಏನೋ ತಿಳಿದೇ ಮಾಡಿದಾರೆ ಅಂತ ಸುಮ್ನಾಗಿಬಿಡ್ತಾನೆ. ಮತ್ತೆ ಅವರ ಜೊತೇನೆ ತಿರುಪತಿಗೆ ಹೋಗ್ತಾನೆ. ಅಂಗು ಹಿಂಗು ಮಾಡಿ ತಿರುಪತಿ ತಲುಪಿದ್ರು. ಗೊಲ್ಲರೆಲ್ಲಾ ತಂದಿರ್ತರಲ್ಲಾ ಆ ಮೀಸಲನ್ನ ತಗಂಡು ತಿಮ್ಮಪ್ಪನ ದರ್ಶನಕ್ಕೆ ಹೋಗ್ಬಿಡ್ತಾರೆ. ಈತ ಮಾತ್ರ ಒಳಗಡೆ ಹೋಗೊದಿಲ್ಲ.

ಅವರೆಲ್ಲ ದರ್ಶನ ಮಾಡಿಕೊಂಡು ಬರ್ತಾರೆ ಆಗ಼್್ಲೂ ಇವನು ಹೋಗಿರಲ್ಲ. ಸಂಜೆಯಾದ್ರೂ ಹೋಗಿರಲ್ಲ. ಗೊಲ್ಲರು ಏನಪ ಬರಲ್ಲೇನು ಅಂತಾರೆ. ಅದಕೆ ಆತ್ನೆ ತಿಮ್ಮಪ್ಪನೇ ಬಂದು ಕರೀಬೇಕು ಆತನೇ ಹೇಳಿದಾನೆ ಬಂದು ಕರಿತಿನಿ ಅಂತ. ಅಯ್ಯೋ ನೀನೆಲ್ಲೋ ಹುಚ್ಚ ಕಾಣಯ್ಯ ದೇವ್ರು ಎಲ್ಲಾದ್ರೂ ಬಂದು ಕರೀತಾದ ಅಂದ್ರು. ಈತನಿಗೆ ಸಿಟ್ಟು ಬಂದು ಕರಿಲಿಲ್ಲ ಅಂತಂದು ಒಂದು ಗುಂಡುಕಲ್ಲನ್ನ ತಗಂಡು ಹಾಕ್ತಾನಂತೆ. ಆ ಗುಂಡು ಹಾಕ್ಬೇಕಾದ್ರೆ ಸ್ವಾಮಿ ಒಂದು ಕಡೀಕೆ ವಾಲಿದನಂತೆ. ಆ ಗುಂಡು ಬಿದ್ದ ಪ್ರದೇಶವೇ ಪಾಪನಾಶನ ಎಂದು ಹೆಸರಾಗಿದೆ. ತಿಮ್ಮಪ್ಪ ಇನ್ನು ಪ್ರತ್ಯಕ್ಷವಾಗ್ಲಿಲ್ಲಲ್ಲ ಅಂತ ಮತ್ತೆ ಇನ್ನೊಂದು ಕಲ್ಲು ತಗಂಡ ಅಷ್ಟೊತ್ತಿಗೆ ಇವನ ತಾಳ್ಮೆನಾ ಪರೀಕ್ಷೆ ಮಾಡಿದ ದೇವರು ತಿಮ್ಮಪ್ಪ ಪ್ರತ್ಯಕ್ಷವಾದ. ಸಂತೃಪ್ತನಾದ ಪಾಪಣ್ಣ ಮೋಕ್ಷವನ್ನು ಬೇಡುವನು. ಆಗ ತಿಮ್ಮಪ್ಪನ ಆಶರೀರವಾಣಿ ಹೇಳ್ತಾತೆ ಭಕ್ತ ನಿನ್ನಿಂದ ಇನ್ನು ಬಹಳ ಕೆಲಸ ಆಗಬೇಕು. ನೀನು ನನ್ನ ಮೇಲೆ ಬೀಸಿದ ಮಹತ್ತರವಾದ ಕಲ್ಲು ಹೋಗಿ ಬಿದ್ದ ಜಾಗವೇ ಪಾಪನಾಶನ ಅಂತ ಪ್ರಸಿದ್ಧಿಯಾಯಿತು. ನೀನು ಕಲಿಯುಗದ ಕಾರಣೀಕ ಪುರುಷ. ನಿನ್ನಿಂದ ಮಾನವ ಕಲ್ಯಾಣವಾಗಬೇಕಾಗಿದೆ. ಅಂಧಕಾರದಲ್ಲಿ ಮುಳುಗಿರುವ ಮಾನವರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಧರ್ಮ ಪ್ರಚಾರ ಮಾಡಿ ಭಕ್ತರಿಗೆ ಜ್ಞಾನೋದಯ ಮಾಡುವಂತಹ ಕಾರ್ಯ ನಿನ್ನದು. ನಾನು ನಿನಗೆ ಮೂರು ವರಗಳನ್ನ ದಯಾಪಾಲುಸ್ತಿನಿ ಅವು ನಿನ್ನ ಪಾಲಿಗೆ ಪಂಚಾಮೃತವಿದ್ದಂತೆ. ನೀನು ಮೂರು ಕಠಾರಿಗಳನ್ನ ಪ್ರತಿಷ್ಠಾಪನೆ ಮಾಡಿಸಬೇಕು

೧. 'ಶುಕ್ಲಮಲ್ಲನಾಯಕನಿಂದ ಪ್ರಾಪ್ತವಾದ ಸೂರ್ಯನಂದನ ಕಠಾರಿ: ಶುಕ್ಲಮಲ್ಲನಾಯಕ ಹುಟ್ಟುತ್ತಲೇ ತಂದಿರ್ತಾನೆ.

೨. ಮಂದಲ ಮೂರ್ತಿ ಮಹಾದೇವ ನಾಯ್ಕನು ಮುಕ್ಕಣ್ಣನಿಂದ ಪಡೆದ ಮುಕ್ಕಣ್ಣನ ಕಠಾರಿ.

೩. ವೀರ ವೆಂಕಟರಾಜುವಿನ ತಪಸ್ಸಿನಿಂದ ಪ್ರಾಪ್ತವಾದ ಸಿಡಿಲು ಮಿಂಚಿನ ಕಠಾರಿ.

ಈ ಮೂರು ಕಠಾರಿಗಳನ್ನ ನೀನು ವಶಪಡಿಸಿಕೊಂಡು ಬೇರೆ ಬೇರೆ ಸ್ಥಳಗಳಲ್ಲಿ ಪ್ರತಿಷ್ಠಾಪನೆ ಮಾಡಬೇಕು. ಇಷ್ಟೆಲ್ಲಾ ಕಾರ್ಯ ಪೂರೈಸಿದಾಗ ನಿಂಗೆ ಮೋಕ್ಷವಾಗುವುದು. ಇದ್ರಲ್ಲಿ ಎಲ್ಲಿನೂ ಕೂಡ ಲೋಪವಾಗಬಾರದು. ಈ ಪ್ರತಿಷ್ಠಾಪನೆ ಕೆಲಸ ನೀನು ಮಾಡ್ಲೇಬೇಕು ಅಂತ ಹೇಳ್ತು'.[೧೧]

ಆವಾಗ ಇಲ್ಲಿ ಒಂದು ಪವಾಡ ನಡೆಯುತ್ತೆ. ತಿಮ್ಮಪ್ಪಂಗೆ ಹೇಳ್ತಾನೆ ಇವತ್ತೊಂದು ದಿನ ದಾಸೋಗ ಮಾಡ್ತಿನಿ ಅಂತ. ತಿಮ್ಮಪ್ಪ ನನ್ನ ಭಕ್ತರು ಬಾಳ ಕಣಪ್ಪ ಅಂದಾಗ ಎಲ್ಲಾ ಭಕ್ತರಿಗೂ ಅನ್ನ ಆಗಿ ಮಿಕ್ಕಬೇಕು ಅಂಗೆ ಮಾಡ್ತಿನಿ ಅಂತಂದು ಪಾತ್ರೆ ತರ್ಸಿ ನೀರು ಹಾಕಿ ಬೇಳೆ ಕಾಳು ಅಕ್ಕಿ ಕಾಳನ್ನೆಲ್ಲಾ ಹಾಕಿಸ್‌ಬಿಟ್ಟು ಬೆಂಕಿ ಇಲ್ಲದೇನೆ ಅನ್ನ ಪಾಯಸ ಸಾರು ಮಾಡಿ ಇಡೀ ಬಂದ ಬಂದ ಭಕ್ತರಿಗೆಲ್ಲಾ ಬಡಿಸಿದ. ಎಷ್ಟು ಜನ ಭಕ್ತರು ಬಂದ್ರು ಅನ್ನ ಖಾಲಿಯಾಗಲೇ ಇಲ್ಲ. ಅಕ್ಷಯ ಪಾತ್ರೆ ತರ ಆತಂತೆ. ಅಂಗೆ ತಿರುಪತಿನಾಗೆ ಪವಾಡ ಮಾಡಿ ವಾಪಸ್ ಬರಬೇಕಲ್ಲ. ಬರಬೇಕಾದ್ರೆ ಗೊಲ್ಲರು ಪಾಪಣ್ಣ ಪಾಪಣ್ಣ ನಮ್ಮೂರ್‌ಗೆ ಬರ್ಬೇಕಣ್ಣ ಅಂದ್ರು, ಅದ್ಕೆ ಯಾವಾಗಾದ್ರು ಬರ್ತಿನಿ ಅಂತ ಹೇಳಿ ಊರು ಕಡೀಕೆ ಬರ್ತಾನೆ.

ಅಷ್ಟೊತ್ತಿಗೆ ಇಲ್ಲಿ ಓರಂಗಲ್ ಪಟ್ಟಣದಾಗೆ ದುರ್ಗಿದು ಬಾಳ ಹಟ್ಟಾಸ ನಡಿತಿತ್ತು. ಎಷ್ಟೊಂದು ಹಳ್ಳಿಗಳನ್ನ ನಾಶ ಮಾಡಿರುತ್ತೆ. ಹಳ್ಳಿಜನ ಜಾನುವಾರುಗಳನ್ನ ಭಕ್ಷಿಸಿರುತ್ತೆ. ಅದು ಪಾಪಣ್ಣನ ಧ್ಯಾನಪೀಠದ ಹತ್ರಾನೇ ಏಳು ನಾಲಿಗೆ ಚಾಚ್ಕೊಂಡು ಕುಂತಿರುತ್ತಂತೆ. ಪಾಪಣ್ಣ ಬಂದಾಗ ಬಾರಪ್ಪ ಪಾಪಣ್ಣ ಒಳ್ಳೆ ಟೈಂ ಗೆ ಬಂದುಬಿಟ್ಟೆ ಇಲ್ಲಿ ದುರ್ಗಿ ಎಲ್ಲ ಕಾಟ ಕೊಡ್ತಿದಾಳೆ. ನಮ್ಮನ್ನೆಲ್ಲಾ ಉಳಿಸ್ಬೇಕು ಅಂತ ಗೌಡ್ರು ಸಮೇತ ಊರು ಜನರೆಲ್ಲಾ ಕೇಳಿಕೊಳ್ತಾರೆ. ನಡೀರಿ ಅಲ್ಲಿಗೆ ಹೋಗಾಣ ಅಂತ ಅವರನ್ನೆಲ್ಲಾ ಕರ್ಕೊಂಡು ಧ್ಯಾನ ಮಂದಿರದತ್ರ ಬರ್ತಾನೆ. ಬಂದು ಅಲ್ಲಿ ಒಂದು ಬುಟ್ಟಿ ತಂದು ಇಡುವನು. ಧ್ಯಾನ ಪೀಠದ ಬಲಭಾಗದಲ್ಲಿ ಒಂದು ಕಂಬಳಿ ಹಾಸಿ ಇದು ಕಂಪಳರಂಗಸ್ವಾಮಿಯ ಪೀಠ. ಇಲ್ಲಿರುವ ದುರ್ಗಿಯ ಸಂಹಾರಕ್ಕೆ ನನ್ನ ತಂದೆ ಕೋರಮಲ್ಲನಾಯಕನ ಹತ್ರ ಸೂರ್ಯನಂದನ ಕಠಾರಿ ಇದೆ. ಅದನ್ನ ತರ್ತಿನಿ ಅಂದಾಗ ಗೌಡ ಮತ್ತು ಊರು ಜನವೆಲ್ಲಾ ಆಶ್ಚರ್ಯಪಡ್ತಾ ನಿನ್ನ ಹೆತ್ತವರ ಬಗ್ಗೆ ನಿಂಗೆ ಹೆಂಗೆ ಗೊತ್ತಾತು ಪಾಪಣ್ಣ ಅಂದ್ರು. ಅದು ನನಗೆ ದೈವ ಪ್ರೇರಣೆಯಿಂದ ತಿಳಿದಿದೆ. ಅವರೀಗ ನಮ್ಮ ಊರಿನ ದಕ್ಷಿಣ ದಿಕ್ಕಿನ ಸಾಣಿಕೆರೆಯ ಕಾವಲಿನಲ್ಲಿರುವರು. ಅವರಿದ್ದತ್ರ ಹೋಗಿ ದರ್ಶನ ನೀಡಿ ಆಶಿರ್ವಾದ ಪಡ್ಕೊಂಡು ಬರೊವರ್ಗ್ಗೂ ಈ ಪೀಠಗಳಿಗೆ ನೂರೊಂದು ಪೂಜೆಗಳನ್ನ ಸಲ್ಲಿಸಿರಿ ಎಂದು ಹೇಳಿ ನಾಗಮುರಿ ಬೆತ್ತ ಹಿಡಿದು ಕುದುರೆ ಹತ್ತಿ ಹೋದ.

ಸಾಣಿಕೆರೆಗೆ ಹೋದಾಗ ಅಲ್ಲಿ ತಂದೆ ತಾಯಿಗೆ ಗೊತ್ತಿಲ್ಲ, ಇವನೇ ಎಲ್ಲಾ ಹೇಳಿಕೊಳ್ತಾನೆ, ಬಾರಿ ಸಂತೋಷ ಪಡ್ತಾರೆ ತಂದೆತಾಯಿ. ಅತ್ತೇನೂ ಇಲ್ಲೆ ಇದಾಳೆ ನೋಡಪ್ಪಾ ಹಲ್ಲು ಕಳ್ಕೊಂಡು ಅಂತಾರೆ. ನಾನೆಲ್ಲಾ ಸಮಸ್ಯೆಗಳನ್ನ ಬಗೆಹರಿಸ್ತೀನಿ. ಈಗ ನನಗೊಂದು ಆಪತ್ತು ಬಂದಿದೆ ಅಂದು, ನಿಜಾಂಶ ಹೇಳಿ ಅವರತ್ರ ಇತ್ತಲ್ಲ ಸೂರ್ಯನಂದನ ಕಠಾರಿ ತಗಂಡು ಬರ್ತಾನೆ. ಆವಾಗ ಪಾಪನಾಯಕನಿಗೆ ಅಶರೀರವಾಣಿ ಹೇಳ್ತು ದುರ್ಗಿಯ ಎರಡು ಕಾಲುಗಳನ್ನಷ್ಟೆ ಕತ್ತರಿಸು. ಆಕೆಯನ್ನು ಕೊಲ್ಲಬೇಡ. ಸ್ತ್ರೀಹತ್ಯೆಪಾಪಕ್ಕೆ ಒಳಗಾಗಬೇಡ ಅಂತು. ಅಂಗೆ ಪಾಪನಾಯಕ ಕೆರೆ ಏರಿತಾವ ಬಂದ. ಬಂದು ದುರ್ಗಿನ ಕರ್ದ. ರಾಕ್ಷಸಿ ಬಂತು ನೀನು ಈ ಜಾಗನ ಬಿಟ್ಟು ಹೋಗು ನಾನು ನಿನ್ನ ಕ್ಷಮಿಸ್ತೀನಿ ಅಂತ ಹೇಳಿದ. ಆಕೆ ಭಾರಿ ಭಯಂಕರವಾಗಿ ಕಿರುಚಿ ನಾ ಹೋಗಲ್ಲ ಅಂತಾಳೆ. ಆಗ ಇಬ್ರು

ಮಧ್ಯೆ ಘೋರ ಯುದ್ಧ ನಡಿಯುತ್ತೆ. ನಾಗರಬೆತ್ತದಿಂದ ಎಷ್ಟು ತಿವಿದ್ರು ದುರ್ಗಿ ಮತ್ತೆ ಮತ್ತೆ ಬರೋದ್ರಿಂದ ಸೂರ್ಯನಂದನ ಕಠಾರಿ ತಗಂಡು ಅವಳ ಎರಡು ಕಾಲುಗಳನ್ನ ಕತ್ತರಿಸಿ ಕೆರೆಯ ತೂಬಿನೊಳಕ್ಕೆ ಬಿಸಾಡಿಬಿಡ್ತಾನೆ. (ಆ ತೂಬಿನತ್ರ ಈಗಲು ಪೂಜೆ ನಡಿಯುತ್ತೆ. ಅಲ್ಲಿ ಚಿಕ್ಕದಾಗಿ ಒಂದು ಗುಡಿ ಇದೆ. ಜಗಳೂರಜ್ಜನಿಗೆ ಪೂಜೆ ಮಾಡಿ ಆಕೆಗೆ ಕುರಿ ಕಡಿತಾರೆ) ಇದರಿಂದ ದುರ್ಗಿಗೆ ಬಾಳ ಕೋಪ ಬಂದು ಶಾಪ ಕೊಟ್ಟು ಬಿಡ್ತಾಳೆ. ಏನಂತ ನಿನ್ನ ಸಾವಿಗೂ ಮುನ್ನ ಸ್ತ್ರೀಯಿಂದಲೇ ನಿನ್ನ ಕಾಲುಗಳನ್ನ ಕಳ್ಕೊಂಡು ಅಲ್ಲಿಯೇ ಅವಸಾನ ಹೊಂದಿ ಅಲ್ಲಿಯೇ ಐಕ್ಯವಾಗಿ ಹೋಗು ನನ್ನಂತೆ ಅಂತ ಶಾಪ ಕೊಡ್ತಾಳೆ. ಆದರೂ ನಾನು ಒಳ್ಳೆದನ್ನೇ ಮಾಡ್ತಿನಿ ಅಂದು ನೀನು ಇಲ್ಲಿಯೇ ಐಕ್ಯವಾಗು ಈ ಕೆರೆಗೆ ನಿನ್ನದೇ ಹೆಸರಿನಿಂದ ದುರ್ಗಿ ಕೆರೆಯೆಂದು ಕರೆದು ಈ ತೂಬಿಗೆ ಪೂಜೆ ಸಲ್ಲಿಸಲಿ. ಈ ಕಠಾರಿ ಪಾಪಿಷ್ಟಳನ್ನ ಹತ್ಯೆ ಮಾಡಿದ ಆಯುಧ. ಇದನ್ನ ನನ್ನ ಧ್ಯಾನ ಮಂದಿರದಲ್ಲಿಯೇ ಇರಿಸುವೆನು ಎಂದು ಹುತ್ತದ ಗುಡ್ಡೆ ಹತ್ರ ಹುತ್ತದ ಕೋವಿಯಲ್ಲಿ ಕಠಾರಿಯನ್ನು ನೆಡುವನು. ನನ್ನ ಭಕ್ತರು ನನ್ನ ಹೆಸರಿನ ಗದ್ದುಗೆ ಎಂದು ಪೂಜಿಸಲಿ. ಅಲ್ಲಿಗೆ ಒಂದು ಕಠಾರಿದು ಮುಗಿತು.

ಇನ್ನು ಎರಡನೇ ಗುರಿ. ಈಗ ತಿರುಗಿ ತಂದೆ ಹತ್ರ ಹೋಗ್ತಾನೆ. ಹೋಗಿ ಅತ್ತೆ ಸಮಸ್ಯೆ ಬಗೆಹರಿಸಬೇಕಲ್ಲ. ಅತ್ತೇನ್ ಕರ್ಕೊಂಡು ಸೀದಾ ಶಿರುವಾಳದ ಕಾವಲಿಗೆ ಹೋಗ್ತಾನೆ. ಕಾಮಗೇತ್ಲು ಕ್ಯಾಸಯ್ಯನ ಜಂಭ ಇಳಿಸಿ ಅತ್ತೆಯನ್ನ ಅವರ ಮನೆಗೆ ಸೇರುಸ್ಬೇಕು. ಅಲ್ಲಿ ಕಾಮಗೇತ್ಲು ಕ್ಯಾಸಯ್ಯನಿಗೂ ಪಾಪಾನಾಯಕನಿಗೂ ಬಾಳ ವಾಗ್ವಾದಗಳು ನಡಿತಾವೆ. ಹೊಡಸಾಕೆ ನೋಡ್ತಾನೆ, ಕಟ್ಟಿಹಾಕುಸ್ತಾನೆ. ಈತ ನಾಗರಬೆತ್ತದಿಂದ ಎಲ್ಲಾ ವಿಮೋಚನೆ ಮಾಡ್ಕೋತಾ ಇರ್ತಾನೆ. ಕೊನೆಗೆ ಪಾಪಣ್ಣ ನಾಗರಬೆತ್ತದಿಂದ ಕ್ಯಾಸಯ್ಯನಿಗೆ ಪಾಠ ಕಲುಸ್ತಾನೆ. ಅದನ್ನ ನೋಡಿ ತಡಕಂಬಾಕೆ ಆಗ್ದೆ ಅತ್ತೇನೇ ಬಂದು ಅಳಿಯನ್ನ ಬಿಟ್ಟುಬಿಡಪ್ಪ ಅವನು ಗೊತ್ತಿಲ್ದೆ ತಪ್ಪು ಮಾಡೆನೆ ಅಂತಾಳೆ. ಆಗ ಕ್ಯಾಸಯ್ಯನಿಗೆ ಅರಿವು ಬಂದು ತಪ್ಪಾತು ಅಂತ ಒಪ್ಕೊತಾನೆ. ಆವಾಗ ಕ್ಯಾಸಯ್ಯ ಹೊಡ್ಕೊಂಡು ಹೋಗಿರ್ತಾನಲ್ಲ ಹಸುಗಳು ಅದ್ರಲ್ಲಿ ಒಂದೈದಾರು ಹಸುಗಳನ್ನ ಕೊಟ್ಟು ನೀನು ಕಾಮಗೇತ್ಲು ಅಂತ ಹೇಳಿ ಇವುಗಳನ್ನು ನೀನು ಪೂಜೆ ಮಾಡ್ಕೊಂಡಿರು. ಓರಂಗಲ್ ಪಟ್ಟಣದ ಪಶ್ಚಿಮ ದಿಕ್ಕಿನಲ್ಲಿ ವಾಸಿಸುತ್ತಾ ಅಲ್ಲಿಯ ಕಾಟಲಿಂಗೇಶನ ಪೂಜಾಕ್ರಮಾದಿಗಳನ್ನ ನಡೆಸಿ ಅಂದ. ಆಮೇಲೆ ಆ ದೇವರಿಗೆ ಆರು ಹಸುಗಳನ್ನ ಕೊಟ್ಟು ನಿನ್ನ ಮಕ್ಕಳು ನನ್ನ ಗದ್ದುಗೆ ಪೂಜೆ ಮಾಡ್ಲಿ ಅಂತಂದು ಹೇಳಿ ಬಂದ. ಅವರೇ ಕಾಮಗೇತ್ಲಾರು.

ಇನ್ನು ಮುಕ್ಕಣ್ಣನ ಕಠಾರಿ ಎಲ್ಲಿದೆ ಅಂತ ತಂದೆನ ಕೇಳಿರ್ತಾನೆ. ಮಂದಲಮೂರ್ತಿ ಮಹಾದೇವನಾಯಕನು ಮುಕ್ಕಣ್ಣನನ್ನು ಕುರಿತು ತಪಸ್ಸು ಮಾಡಿದಾಗ ಪಡೆದ ಕಠಾರಿ. ಅದು ನಿನ್ನ ದೊಡ್ಡಪ್ಪನಾದ ಸೂರ್ಯಯರಗಾಟನಾಯಕನ ಹತ್ರ ಇದೆ. ಗೋಣೂರಿಗೆ ಹೋಗಬೇಕು. ಸರಿ ಅಂದು ಅಲ್ಲಿಗೆ ಹೋಗ್ತಾನೆ. ಅಲ್ಲಿನ ದೊರೆ ಕೊಂಡಮುರಿರಾಜ. ಆ ದೊರೆ ಹತ್ರ ದಳಪತಿಯಾಗಿದ್ದ ಯರಗಾಟನಾಯಕ. ಅಲ್ಲಿಗೆ ಹೋಗಿ ಎಲ್ಲಾ ವೃತ್ತಾಂತ ಹೇಳ್ತಾನೆ. ಅದ್ಕೆ ಯರಗಟ್ಟನಾಯಕ ಸಂತೋಷ ಪಟ್ಟು ಇಲ್ಲೆ ಇದೆಯಪ್ಪ ಆ ಮುಕ್ಕಣ್ಣನ ಕಠಾರಿ ಅಂದ. ಪಾಪನಾಯಕ ಅಲ್ಲಿರಬೇಕಾದ್ರೆ ಒಂದು ಕನಸು ಬೀಳುತ್ತೆ. ಕಂಪಳದೇವರಟ್ಟೀಲಿ ದೇವರು ಕಳ್ಳತನ ಆಗಿರುತ್ತೆ. ಆಗ ದೊಡ್ಡಪ್ಪನಿಗೆ

ಮತ್ತೆ ಬರ್ತಿನಪ್ಪ ಹಿಂಗೆ ಅನಾಹುತ ಆಗ್ಬಿಟ್ಟೈತೆ ಅಲ್ಲಿ ಹೋಗಿ ಬಂದಬಸ್ತು ಮಾಡಿ ಬರ್ತಿನಿ ಅಂತಂದು ಸೀದಾ ನನ್ನಿವಾಳಕ್ಕೆ ಬರ್ತಾನೆ.

ನನ್ನಿವಾಳಕ್ಕೆ ಬಂದು ಅವರ ಚಿಕ್ಕಪ್ಪ ಚಿನ್ನಪಾಲನಾಯಕನ್ನ ಅವರ ತಂದೆ ಹತ್ರ ಕಳ್ಸಿ ಎಲ್ಲರನ್ನೂ ಕರೆಸ್ತಾರೆ. ಎಲ್ಲರನ್ನೂ ಕರೆಸಿ ಆ ದೇವಸ್ಥಾನಕ್ಕೆ ಬಿಗಿಬಂದೋಬಸ್ತು ಮಾಡಬೇಕು ಅಂತ ಎಲ್ಲಾ ಬೆಡಗಿನ ಒಬ್ಬೊಬ್ಬರನ್ನ ಕೋರಮಲ್ಲನಾಯಕ, ಚಿನ್ನಪಾಲಯ್ಯ, ಮಳೇಲ ಗಾದ್ರಿಪಾಲಯ್ಯ, ಕಾಮಗೇತಿ ಪರಮೇಶಿ, ಬೊಮ್ಮದೇವರ ಕಾಮನಾಡು, ಪಡಲಾರು ಬೋಡಿಕಾಟಯ್ಯ, ವೆಂಕಟರಾಜು, ಕುರುಬರ ಬೀರಣ್ಣ ಎಲ್ಲರನ್ನೂ ಕರ್ಕೊಂಡು ಕಂಪಳದೇವರಟ್ಟಿಗೆ ಹೋಗ್ತಾರೆ. ಅಲ್ಲಿ ಪೂಜಾರಿಗಳು ಹಿಂಗೆ ಕಳ್ಳತನ ಆಗಿಬಿಟ್ಟಿದೆ ದೇವರ ಒಡವೆಗಳು ಅಂತ ಹೇಳ್ತಾರೆ. ಆಗ ನಾಗಮುರಿಬೆತ್ತಕ್ಕೆ ಪೂಜೆ ಮಾಡಿ ಮುಕ್ಕೊಂಡಾಗ ಅದು ಹೋಗಿಬಿಟ್ಟು ಎಲ್ಲೋ ಇದ್ದ ಕಳ್ಳರನ್ನ ಒದ್ದು ಎಳಕಂಡು ಬರುತ್ತೆ. ಆಗ ಎಲ್ರಿಗೂ ಆಶ್ಚರ್ಯವಾಗುತ್ತೆ. ಪಾಪನಾಯಕನ್ನ ಎಲ್ಲರೂ ಕೊಂಡಾಡ್ತಾರೆ. ಆಗ ದೇವರಿಗೆ ಇಡ್ಸಿ ಪೂಜೆ ಮಾಡ್ಸಿ ಎಲ್ಲರಿಗೂ ಮುಂದೆ ಏನು ಮಾಡಬೇಕು ಅಂತ ಹೇಳ್ತಾನೆ.

ನನ್ನಿವಾಳ ಕಟ್ಟೆಮನೆ ಜವಾಬ್ದಾರಿಯನ್ನು ಗಟ್ಟಿಮುತ್ತಿನಾಯಕ

ಗೋನೂರು ಕಟ್ಟೆಮನೆ ಜವಾಬ್ದಾರಿಯನ್ನು ಬೋಸೆನಾಯಕ

ನಾಯ್ಕನಟ್ಟಿ ಕಟ್ಟೆಮನೆ ಜವಾಬ್ದಾರಿಯನ್ನು ಮೀಸೆಲ್‌ನಾಯಕ ವಹಿಸಿಕೊಳ್ಳಬೇಕು.

ಹಿರಿಯರು ಕಂಪಳದ ಜವಾಬ್ದಾರಿ ವಹಿಸಿಕೊಂಡು ವರ್ಷಕೊಂದು ಸಾರಿ ದೇವರು ಮಾಡಿ, ದೇವರನ್ನು ಜಲಧಿಗೆ ಹೊರಡಿಸಿ ಪೂಜಾದಿಕ್ರಮಗಳೊಂದಿಗೆ ಗುಡಿ ತುಂಬಿಸಿ ಹನ್ನೆರಡು ವರ್ಷಕ್ಕೊಂದು ಸಾರಿ ನಮ್ಮ ನಾಗೇಂದ್ರನ ದೆಸೆಯಿಂದ ದೇವರ ಒಡವೆಗಳು ದೊರೆತಿದ್ದರಿಂದ ಎಡೆಕಟ್ಟಿನ ಪೂಜೆ (ಪಡೆಗಟ್ಟ ಪಂಡುಗ) ಮಾಡಿ, ದೈವಾನುಗ್ರಹದಿಂದ ಪೂರ್ವಿಕರಿಗೆ ದೊರೆತ ಈ ಮುಕ್ಕಣ್ಣನ ಕಠಾರಿಯನ್ನು ಕಂಪಳದೇವರ ದೇವಾಯಲದ ಮುಂದೆ ನೆಡುವೆನು. ಇದನ್ನು ಸಕಾಲದಲ್ಲಿ ಪೂಜಿಸಬೇಕು. ಗೊಂದಳ್ಳಿ ಗೊಲ್ಲರು ನನಗೆ ನೀಡಿರುವ ಹಸುಗಳು ಕಂಪಳ ದೇವರ ಆಶ್ರಯದಲ್ಲಿರಲಿ. ಕಂಪಳರಂಗ ಸ್ವಾಮಿಯ ಜಾತ್ರೆ ದಿನದಲ್ಲಿ ಸ್ವಾಮಿಯ ಮುಂದೆ ಒಂದು ಗದ್ದುಗೆ ಹಾಕಿ ಶ್ರೀ ವೆಂಕಟೇಶನ ಸ್ಮರಣೆ ಮಾಡಿರಿ ಅಂತ ಹೇಳಿ ಹೋಗುವನು.

ಇಲ್ಲಿಗೆ ಎರಡಾತು ಇನ್ನು ಮೂರನೆ ಕಠಾರಿ ಸಿಡಿಲು ಮಿಂಚಿನ ಕಠಾರಿ. ಅದರ ವೃತ್ತಾಂತ ತಿಳ್ಕೋಳಕೆ ಮತ್ತೆ ಗೋಣೂರಿಗೆ ಬರ್ತಾನೆ. ಇಲ್ಲಿಗೆ ಬಂದಾಗ ಅವರ ದೊಡ್ಡಪ್ಪ ಯರಗಾಟನಾಯಕ ಕಂದಾಯ ವಸೂಲಿ ಮಾಡ್ಕೆಂತ ಮತ್ತದನ್ನ ಜಮಾ ಮಾಡ್ಕಂತ ಇದ್ದ. ಒಂದು ದಿನ ನಾನೇ ಹೋಗಿ ಎಲ್ಲಾ ಮಾಡ್ಕಂಡು ಬರ್ತಿನಿ ದೊಡ್ಡಪ್ಪ ಅಂತ ಹೋಗ್ತಾನೆ. ಇವನು ಹೋಗಿಬಿಟ್ಟು ಚಾವಡಿಲಿ ಸುಮ್ನೆ ಮಲಗಿಬಿಡ್ತಾನೆ. ಅವತ್ತಿನ ಕಂದಾಯ ಏನೂ ಬರಲಿಲ್ಲ. ಯಾಕೆ ಅಂತ ಕೇಳಿದ್ರೆ ನನ್ನ ಮಗನ್ನ ಕಳ್ಸಿದ್ದೆ ಅವನು ಹಿಂಗೆ ಮಾಡಿದಾನೆ ಅಂತ ಹೇಳ್ತಾನೆ. ಸೈನಿಕರು ಬಂದು ಕರೀತಾರೆ ಆತನ್ನ. ಬರಲ್ಲ ಹೋಗು ಅಂತಾನೆ. ನೀವು ಜನರಿಂದ ತಲೆಗಂದಾಯ ಮಾಡ್ತ ಇರೋದು

ಒಳ್ಳೆದಲ್ಲ. ಜನರಿಗೆ ತೊಂದ್ರೆ ಕೊಡ್ತಾ ಇದಿರಿ ಅಂತ ಹೇಳ್ತಾನೆ. ಕೊನೆಗೆ ಯಾರು ಬಂದ್ರು ಬರಲ್ಲ ಅಂತ ಹೇಳ್ತಾನೆ. ಕೊನೆಗೆ ದೊರೆನೆ ಬರ್ತಾನೆ. ಈತನಿಗೂ ದೊರೆಗೂ ಬಾಳ ವಾಗ್ವಾದ ನಡೆಯುತ್ತೆ. ಆಗ ಈತನ್ನ ಬಂದಿಸೋಕೆ ಹೋಗ್ತಾರೆ ಏನು ನಡೆಯೋದಿಲ್ಲ ಏಕೆಂದ್ರೆ ಕೈಯಲ್ಲಿ ನಾಗಮುರಿಬೆತ್ತ ಇರುತ್ತಲ್ಲ ಅದ್ರಿಂದ ಅಲ್ಲೂ ಪವಾಡ ತೋರುಸ್ತಾನೆ. ಇವನ ಪವಾಡಕ್ಕೆ ಕೊಂಡಮರಿರಾಜ ಹೆದರಿಕೊಂಡುಬಿಟ್ಟು ಈತ ಬಾಳ ಪವಾಡ ಪುರುಷ ಐದಾನೆ ಅಂದ್ಕೊಂಡು ನಾನು ನನ್ನ ತಪ್ಪನ್ನ ತಿದ್ದಿಕೊಳ್ಳುತಿನಪ್ಪ ಅಂತ ಹೇಳಿ ನೀನು ಬಾ ನಿನಗೆ ಪೂಜೆ ಮಾಡ್ತಿನಿ ಅಂತ ಕರ್ಕೊಂಡು ಹೋಗ್ತಾನೆ.

ಅಷ್ಟೊತ್ತಿಗೆ ಬಂದ ದೊಡ್ಡಪ್ಪ ಇದನ್ನೆಲ್ಲಾ ನೋಡಿ ಸಂತೋಷಪಡ್ತಾನೆ. ರಾಜಮರ್ಯಾದೆಯಿಂದ ಪಾದ ಪೂಜೆ ಮಾಡಿ ನಿಮಗೆ ಏನು ಬೇಕು ಕೇಳ್ರಿ ಅಂತಾನೆ ರಾಜ. ಅದಕೆ ಪಾಪಯ್ಯ ನಿನ್ನ ಕಂಚಿನ ನೆಲಮಾಳಿಗೆಯಲ್ಲಿ ಕುದುರೆಯಿದೆ. ಅದನ್ನ ತಗಂಡು ಬಂದು ಕೊಡು ಅಂತಾನೆ. ನೆಲಮಾಳಿಗೆ ಇರೊದೆ ರಾಜನಿಗೆ ಗೊತ್ತಿರೋದಿಲ್ಲ. ನೀವು ಇಲ್ಲಿ ಅಗಿರಿ ಅಲ್ಲಿದೆ ನಿಮ್ಮ ಪೂರ್ವಜರು ಇಲ್ಲಿ ಮಡ್ಗಿದಾರೆ ಅಂತ ಅಗುಸ್ತಾನೆ. ಅಲ್ಲಿ ಕುದುರೆ ಇರುತ್ತೆ. ಅದನ್ನ ತಗಂಡು ಆತನಿಗೆ ಕೊಡ್ತಾರೆ. ಆಮೇಲೆ ಸಿಡಿಲು ಮಿಂಚಿನ ಕಠಾರಿ ಎಲ್ಲಿದೆ ಅಂತಂದು ಕೇಳ್ತಾನೆ. ಬಗ್ಗುಲು ದೊರೆ ಅಂತ. ಅವನು ಬಗ್ಗುಲು ಬೆಡಗಿನವನು. ಆ ಬಗ್ಗುಲು ದೊರೆ ಹತ್ರ ಸಿಡಿಲು ಮಿಂಚಿನ ಕಠಾರಿ ಇರುತ್ತೆ. ಅದನ್ನ ಜಗಳೂರು ರಾಜ ಜಗಪತಿರಾಜ ಅಪಹರಿಸ್ಕೊಂಡು ಹೋಗಿರ್ತಾನೆ. ಅದರ ಜೊತೆಗೆ ಕೊಂಡಮರಿರಾಜನ ತಂಗಿನೂ ಅಪಹರಿಸ್ಕಂಡು ಹೋಗಿರ್ತಾನೆ. ಬಾಳ ದುಷ್ಟ ಅವನು. ಹಿಂಗೆಲ್ಲಾ ಆಗೈತೆ ಅಂದಾಗ ಅದನ್ನ ಪಡಿಯಲೇಬೇಕು ಅಂತ ಜಗಳೂರಿಗೆ ಹೋಗ್ತಾನೆ. ಇದಕ್ಕೆ ರಾಜನೂ ಸಹಕರಿಸ್ತಾನೆ. ಏಕೆಂದ್ರೆ ತನ್ನ ತಂಗಿನ ಹೊತ್ಕೊಂಡು ಹೋಗಿರ್ತಾನಲ್ಲ. ಅದಕೆ ಎಷ್ಟು ಸೈನ್ಯ ಬೇಕಾದ್ರೂ ಕಳಿಸ್ತಿನಿ ಒಟ್ಟಲ್ಲಿ ಅವನ ಸೊಕ್ಕು ಮುರಿಬೇಕು ಅಂತಾನೆ. ಅದಕೆ ಪಾಪನಾಯಕ ಸೈನ್ಯ ಏನ್ ಬ್ಯಾಡ ಒಂದ್ಯೆದಾರು ಜನ ಜಟ್ಟಿಗಳನ್ನ ಕೊಡು ಸಾಕು ನಾನು ಹೋಗ್ತಿನಿ ಅಂತಾನೆ. ಆತು ಅಂತ ರಾಜಮರ್ಯಾದೆಯಿಂದ ಕಳುಸ್ತಾರೆ.

ಇಲ್ಲಿ ಜಗಳೂರಿಗೆ ಬರ್ತಾರೆ. ಬಂದು ಊರು ಹೊರಗಡೆ ಒಂದು ಬಿಡಾರ ಹಾಕ್ಕೊಂಡು ಇರ್ತಾರೆ. ಹಿಂಗೆ ಇರಬೇಕಾದ್ರೆ ಅಲ್ಲು ಕೂಡ ಈತ ಪವಾಡಗಳನ್ನ ಮಾಡ್ತಾನೆ. ಆಗ ಜನರೆಲ್ಲಾ ಹೋ ಇವನ್ಯಾರೊ ನಮ್ಮ ಕಷ್ಟಗಳನ್ನೆಲ್ಲಾ ಪರಿಹರಿಸ್ತಾ ಇದಾನೆ ಅಂತಂದು ಎಲ್ಲರೂ ಅವನ ಹಿಂಬಾಲಕರಾಗ್ತಾರೆ. ಆಗ ಯಾರೋ ಯೋಗಿಗಳು ಬಂದಿದಾರೆ ಏನು ಬೇಕಾದ್ರೂ ಸಹಾಯ ಆಗುತ್ತಂತೆ ಅಂತ ಎಲ್ಲಾ ಕಡೆಗೂ ಪ್ರಚಾರ ಆಗುತ್ತೆ. ಅಲ್ಲಿ ರಾಜ ಬಾಳ ಕೆಟ್ಟವನು. ದುರ್‌ಮಾರ್ಗ. ಹೆಣ್ಣಿನ ವಿಚಾರದಲ್ಲೂ ಅಷ್ಟೇ ಲಂಪಟ. ಇದನ್ನೆಲ್ಲಾ ಜನ ಪಾಪಾನಾಯಕನಿಗೆ ಹೇಳ್ತಾರೆ. ಅದೇ ಟೈಮ್‌ಗೆ ಯಾರೋ ಯೋಗಿಗಳು ಬಂದಿದಾರೆ ಜನರೆಲ್ಲಾ ಅವನ ಕಡೆಗಿದಾರೆ ಅನ್ನೋ ವಿಚಾರ ರಾಜನ ಕಿವಿಗೆ ಬಿತ್ತು. ಅದಕೆ ರಾಜ ಎಲ್ಲಿ ಜನಗಳನ್ನೆಲ್ಲಾ ಎತ್ತಿ ಕಟ್ತಾನೊ ಅಂತ ಅವನ್ನ ಹಿಡ್ಕೊಂಡು ಬರ್ರಿ ಅಂತ ಹೇಳ್ತಾನೆ. ಇವ್ರೆಲ್ಲಾ ಅಲ್ಲಿಗೆ ಹೋಗ್ತಾರೆ. ಹೋಗಿ ಹೇ ಯಾರಯ್ಯ ನೀನು

ಜನಗಳಿಗೆ ಎಲ್ಲಾ ಮೋಸ ಮಾಡ್ತಿದಿಯಂತೆ ಅಂತಾರೆ. ಅದಕೆ ಪಾಪಯ್ಯ ನಾನಲ್ಲ ನೀವು ಮಾಡ್ತ ಇರೋದು ಅಂತ ಜನಗಳು ಹೇಳಿರ್ತಾರಲ್ಲಾ ಅದನ್ನೆಲ್ಲಾ ಹೇಳ್ತಾನೆ. ಆಗ ಅವರು ಈತನ್ನ ಬಂದಿಸ್ತಾರೆ. ಆದರೆ ಅದರಿಂದ ಅವನ್ನ ಏನೂ ಮಾಡೋಕಾಗಲ್ಲ ಯಾಕಂದ್ರೆ ನಾಗಮುರಿಬೆತ್ತ ಐತಲ್ಲ. ಅದಕೆ ಅದರಲ್ಲಿ ಒಬ್ಬ ಸ್ವಾಮಿ ಹೇಳ್ತಾನೆ ಇವನತ್ರ ವಿರೋಧ ಕಟ್ಕೊಳೊದು ಬ್ಯಾಡ ಉಪಾಯದಿಂದ ಇವನ್ನ ತಗದುಬಿಡಾಣ ಈಗ ಜನಗಳ ವಿರೋಧ ಕಟ್ಕೊಳೊದು ಬ್ಯಾಡ ಸುಮ್ನಿರ್ರಿ ಅಂದ.

ಆಗ ಅವರೆಲ್ಲಾ ನಾವು ಮಾಡಿದ್ದು ತಪ್ಪಾತು ಇನ್ಮೇಲೆ ನಾವು ನೀವು ರಾಜಿಯಾಗಿ ಇರಾನ ಅಂತ ಇರ್ತಾರೆ. ಆಮೇಲೆ ಏನ್ ಮಾಡ್ತಾರೆ ಒಂದು ಪ್ಲಾನ್ ಮಾಡ್ತಾರೆ. ಗೊಲ್ಲರು ದಿವ್ಸ ಅಲ್ಲಿಗೆ ಹಾಲು ತರ್ತಾ ಇರ್ತಾರೆ. ಆ ಹಾಲಿನಲ್ಲಿ ವಿಷ ಬೆರಿಸಿಬಿಟ್ಟು ಇದನ್ನ ಪಾಪಾನಾಯಕನಿಗೆ ಅವನ್ಜೊತೆ ಇರೊರಿಗೆ ಕುಡಿಸ್ ಬಿಡ್ರಿ ಅಂತ ಹೇಳ್ತಾನೆ. ಆಗ ಗೊಲ್ಲರು ನೀವು ರಾಜಿಯಾಗಿದ್ದಕ್ಕೆ ಸ್ನೇಹದ ಕಾಣಿಕೆಯಾಗಿ ದೊರೆಗಳು ಹಾಲು ಕಳಿಸಿದಾರೆ ಕುಡಿರಿ ಅಂತ ಹೇಳ್ತಾರೆ. ಇದ್ರಲ್ಲೆನೋ ಮೋಸ ಐತೆ ಅನ್ಕೊಂಡು ಅಷ್ಟು ಹಾಲ್ನ ಆತನೇ ಕುಡ್ದು ಬಿಡ್ತಾನೆ. ಆದರೂ ಏನು ಆಗಲ್ಲ.

ಇದು ರಾಜನಿಗೆ ಗೊತ್ತಾಗುತ್ತೆ ವಿಷ ಕೊಟ್ಟರೂ ಏನೂ ಆಗ್ಲಿಲ್ಲ. ಏನ್ ಮಾಡ್ಬೇಕು ಹಂಗಾದ್ರೆ ಹೆಂಗೆ ಸಾಯಿಸ್ಬೇಕು ಅಂತ ಯೋಚುಸ್ತಾರೆ. ಅದಕೆ ರಾತ್ರೋ ರಾತ್ರಿ ಹೋಗಿ ಅವರನ್ನ ಮುಗಿಸ್‌ಬಿಡ್ಬೇಕು ಅಂತಂದು ಹೋಗ್ತಾರೆ. ರಾತ್ರೋರಾತ್ರಿ ಮಲಗಿದ್ದವರ್ನೆಲ್ಲಾ ಬಂದಿಸ್ಕಂಡು ಎಳ್ಕಂಡು ಹೋಗ್ತಾ ಇರ್ತಾರೆ. ಆಗ ಘೋರ ಯುದ್ಧ ಆಗುತ್ತೆ. ಸೈನಿಕರಿಗೂ, ಪಾಪನಾಯಕನಿಗೂ, ಜಟ್ಟಿಗಳಿಗೂ ಯುದ್ಧ. ಮೊದ್ಲಿಗೆ ಚೆನ್ನಾಗಿ ಹೊಡೆದಾಡಿದ ಜಟ್ಟಿಗಳು ಆಮೇಲೆ ಒಬ್ಬೊಬ್ರೆ ಸತ್ತು ಹೋಗ್‌ಬಿಡ್ತಾರೆ. ಆಗ ಪಾಪನಾಯಕನ್ನ ಎಳ್ಕಂಡು ಹೊಗ್ತಾರೆ. ಎಳ್ಕಂಡು ಹೋಗ್ಬೇಕಾದ್ರೆ ಇವನಿಗೆ ಬಾರಿ ಸಿಟ್ಟು ಬಂದುಬಿಡುತ್ತೆ. ಮನುಷ್ಯತ್ವರ್ನೇ ಮರ್ತುಬಿಡ್ತಾನೆ. ಸಿಡಿಲು ಮಿಂಚಿನ ಕಠಾರಿನ ನೆನಸಿಕೊಳ್ತಾನೆ. ಆಗ ಆತನ ಕೈಯಲ್ಲಿ ಪ್ರಾಪ್ತವಾಗಿಬಿಡುತ್ತೆ. ಅದನ್ನ ತಕ್ಕಂಡು ಭಕ್ತರನ್ನಲ್ಲಾ ಶತ್ರುಗಳನ್ನು ಮೈಮರ್ತು ಎಲ್ಲರನ್ನ ಕೊಚ್ಚಿ ಕೊಚ್ಚಿ ಹಾಕ್‌ಬಿಡ್ತಾನೆ.

ಆಗ ಜನರೆಲ್ಲಾ ಭಯಗೊಂಡುಬಿಟ್ರು, ಕಂಪಳರಂಗಸ್ವಾಮಿನಾ ನೆನಸ್ಕೊತಾ ಇದ್ರು ಅವನು ಶಾಂತವಾಗ್ಲಿ ಅಂತ. ಅಷ್ಟೊತ್ತಿಗೆ ಶಾಪ ಇತ್ತಲ್ಲ ದುರ್ಗಿದು. ವೆಂಕಟೇಶ್ವರನೇ ಪ್ರತ್ಯಕ್ಷವಾಗಿ ಆತನೇ ಸ್ತ್ರೀ ರೂಪ ತಾಳಿದ. ಸ್ತ್ರೀ ರೂಪ ತಾಳಿ ಅವನು ಆ ಕಡಿಗೆ ಮುಂದಗಡೆ ಎಲ್ಲರನ್ನ ಕೊಚ್ಚಿಹಾಕ್ತಾ ಇದಾನೆ. ಸ್ವಾಮಿ ಹಿಂದುಗಡೆಯಿಂದ ಎರಡು ಕಾಲುಗಳಿಗೆ ಎರಡು ಬಾಣಗಳಿಂದ ಹೊಡಿತಾನೆ. ಕಾಲುಗಳು ತುಂಡಾಗ್ತಾವೆ. ಕುಸ್ದು ಬೀಳ್ತಾನೆ. ಹಿಂದಗಡೆ ತಿರುಗಿ ನೋಡ್ತಾನೆ ನೋಡಿದಾಗ ಹೆಣ್ಣು ಅಂತ ಬಿಟ್ಟಿದಿನಿ  ನೀನು ಹೆಣ್ಣು ಆಗಿದ್ದಿಯಾ ಅದಕೆ ನಿನ್ನ ಮೇಲೆ ನಾನು ಏನು ಪ್ರಯೋಗ ಮಾಡಲಾರೆ ಹೋಗು ಅಂತ ಹೇಳ್ತಾನೆ. ಆಗ ವೆಂಕಟೇಶ ಸ್ವಾಮಿ ತನ್ನ ನಿಜ ರೂಪ ತೋರುಸ್ತಾನೆ. ಸ್ವಾಮಿನಾ ನೋಡಿದ ತಕ್ಷಣ ನಾನು ಇನ್ನೊಂದು ಕರ್ತವ್ಯ ಮಾಡಿಲ್ಲ ಅನ್ನೊದು ನೆನಪಿಗೆ ಬರುತ್ತೆ.

ಆಗ ಈ ಸಿಡಿಲು ಮಿಂಚಿನ ಕಠಾರಿಯ ಪ್ರತಿಷ್ಠಾಪನೆಯಲ್ಲಿ ನಾನು ಸೋತು ಹೋಗ್‌ಬಿಟ್ಟದಿನಿ. ಸ್ವಾಮಿಯ ಕರ್ತವ್ಯ ಮರ್‍ತು ಬಿಟ್ಟದಿನಿ ಅನ್ನೊ ವೇದನೆ ಆತನಲ್ಲಿ ಉಂಟಾಗಿ ನನ್ನ ತಪ್ಪನ್ನ ಮನ್ನಿಸು ತಂದೆ ಅಂತ ಸ್ವಾಮಿಯಲ್ಲಿ ನಮಸ್ಕಾರ ಮಾಡಿ ಕ್ಷಮೆ ಕೇಳಿಕಂಡ. ಅದಕೆ ವೆಂಕಟೇಶ ಸ್ವಾಮಿ ನೀನು ಮಾಡಿರೋ ಅಪರಾದ ಅಂತ ದೊಡ್ಡದೇನೂ ಅಲ್ಲ. ನೀನು ಚಿಂತುಸ್ಬೇಡ ನಿನ್ನ ಕಾಲುಗಳನ್ನ ಕೊಡ್ತಿನಿ ಮತ್ತೆ ಈ ಲೋಕದಲ್ಲಿ ನಿನ್ನ ಭಕ್ತರಿಗೆ ಬೋಧನೆ ಮಾಡ್ತಾ ಇರು ಮೋಕ್ಷ ಕೊಡ್ತೇನೆ ಅಂತ ಹೇಳ್ತಾನೆ. ಅದಕೆ ಪಾಪನಾಯಕ ಇಲ್ಲ ಸ್ವಾಮಿ ನಾನು ಸಿಡಿಲು ಮಿಂಚಿನ ಕಠಾರಿ ಪ್ರತಿಷ್ಠಾಪನೆನಲ್ಲಿ ಸೋತು ಬಿಟ್ಟದಿನಿ. ಹಂಗಾಗಿ ನಂಗೆ ಈ ಜೀವನಾನೇ ಸಾಕು ನಂಗೆ ನೀನೇನಾದ್ರೂ ಒಳ್ಳೆದನ್ನ ಮಾಡೋ ಹಂಗಿದ್ರೆ ನಂಗೆ ಮೋಕ್ಷ ಕೊಟ್ಟುಬಿಡು. ನನ್ನ ಜನಾಂಗ ನಿನ್ನ ಆರಾಧನೆ ಮಾಡ್ಲಿಕ್ಕೆ ಒಳ್ಳೆಯ ಮಾರ್ಗರ್ಶನ ಕೊಟ್ಟದಿನಿ. ನಮ್ಮ ಜನರೆಲ್ಲಾ ಒಳ್ಳೆ ಕೆಲಸ ಮಾಡ್ತಾ ನಿನ್ನ ಆರಾದುಸ್ತಾ ಇರ್‍ತಾರೆ ಇದೊಂದು ನನ್ನ ಕೋರಿಕೆಯನ್ನ ಈಡೇರಿಸು ಅಂತ ಕೇಳಿಕೊಳ್ತಾನೆ. ಅದಕೆ ವೆಂಕಟೇಶ ನಕ್ಕು ನಿನಗೆ ಮೋಕ್ಷವನ್ನ ಕೊಡ್ತೇನೆ ಅಂತಂದು ಮಾಯವಾಗಿಬಿಡ್ತಾನೆ.

ಆವಾಗ ಪಾಪನಾಯಕ ತಾನು ಬಿದ್ದಂತ ಜಾಗದಲ್ಲೆ ಸಿಡಿಲು ಮಿಂಚಿನ ಕಠಾರಿ ಹಿಡ್ಕಂಡು ಭೂಮಾತೆಯನ್ನ ಅಮ್ಮಾ ನನ್ನ ನಿನ್ನಲ್ಲಿ ಐಕ್ಯ ಮಾಡ್ಕೊ ಅಂತ ಕೇಳಿಕೊಳ್ತಾನೆ. ಆಗ ಭೂಮಿ ಬಿರಿಯುತ್ತೆ ಸೂರ್ಯಮಿಂಚಿನ ಕಠಾರಿಯನ್ನ ಹಿಡ್ಕೊಂಡು ಭೂಮಿಯಲ್ಲಿ ಐಕ್ಯವಾಗ್ತಾನೆ. ಐಕ್ಯವಾಗೋಕು ಮುಂಚೆ ತನ್ನಲ್ಲಿದ್ದ ನಾಗಮುರಿ ಬೆತ್ತವನ್ನ ನನ್ನ ಧ್ಯಾನ ಮಂದಿರಕ್ಕೆ ಹೋಗಿ ನನ್ನ ಸಂಕೇತವಾಗಿ ಭಕ್ತರ ಇಷ್ಟಾರ್ಥಗಳನ್ನು ಈಡೇರಿಸು ಅಂತ ಹೇಳಿ ಅದಕ್ಕೆ ನಮಸ್ಕಾರ ಮಾಡಿ ಕಳಿಸ್ಕೊಡ್ತಾನೆ. ಆ ನಾಗಮುರಿಬೆತ್ತ ಬಂದು ಆತನ ಸನ್ನಿದಿಯಲ್ಲಿ ಸೇರಿಕೊಳ್ಳುತ್ತೆ. ಹಿಂಗೆ ಪಾಪನಾಯಕ ಸೂರ್ಯದೇವಪಾಪನಾಯಕ, ಸೂರ್ಯಪಾಪನಾಯಕ, ಜಗಳೂರಜ್ಜ, ಅಂತಾನೇ ಇಂದು ಪ್ರಸಿದ್ಧಿಯಾಗಿದೆ.

**ಯರಗಾಟನಾಯಕ:**

ಈತನು ಮ್ಯಾಸಬೇಡರ ಸಾಂಸ್ಕೃತಿಕ ವೀರನಾಗಿದ್ದು, ಯರಗುಂಟಯ್ಯ, ಯರಗಟ್ಟವಾಡು ಎಂಬೆಲ್ಲಾ ಹೆಸರುಗಳನ್ನು ಹೊಂದಿದ್ದಾನೆ. ಈತನ ಜನನದ ಕಾಲಮಾನ ತಿಳಿದುಬಂದಿಲ್ಲವಾದರೂ ಮಧ್ಯಕಾಲೀನ ಎಂದು ವಿದ್ವಾಂಸರು ಊಹಿಸುತ್ತಾರೆ. ಮ್ಯಾಸಬೇಡರ ಸಂಸ್ಕೃತಿಯ ನಿರ್ಮಾತೃವಾದ ಶುಕ್ಲಮಲ್ಲನಾಯಕನ ಹೆಂಡತಿ ದಾನಸಾಲಮ್ಮನ ಸಂತತಿಗೆ ಸೇರಿದ ತಂಗಡಲ ತಮ್ಮವ್ವನ ಮಗನೆಂದು ಹೇಳಲಾಗುತ್ತದೆ.

ತಮ್ಮ ವಂಶಪರಂಪರೆಯ ವೃತ್ತಿಯಾದ ಪಶುಪಾಲನೆಯನ್ನು ಕೈಗೊಂಡಿದ್ದು ವಯಸ್ಸಿಗೆ ಬಂದಾಗ ತಾಯಿ, ಪುವ್ವಲು ರಾಯವ್ವ ಎಂಬುವವಳೊಂದಿಗೆ ಅವನ ವಿವಾಹ ಮಾಡಿದಳು. ಹೀಗೆ ಕಾಲಸರಿಯುವಾಗ ತನ್ನ ಗೆಳೆಯನಾದ ವಡಪಲ ತಮ್ಮಯ್ಯನೊಂದಿಗೆ ದನಗಳನ್ನು ಕಾಯುವಾಗ ತಮಟಕಲ್ಲಿಗೆ ಹೋದಾಗ ಅಲ್ಲಿನ ಓಬವ್ವ ಎಂಬ ಸುಂದರ ಯುವತಿಗೆ ಮನಸೋತ ಯರಗಾಟನಾಯಕ ಆಕೆಯನ್ನು ಪಡೆಯಲು ನಿರ್ಧರಿಸಿದನು. ಆಕೆ ಅಪ್ರತಿಮ ಸುಂದರಿಯಾಗಿದ್ದು ಆಕೆಯನ್ನು

ಮದುವೆಯಾಗಲು ಬಯಸುತ್ತಿದ್ದ ಎಲ್ಲಾ ಪುರುಷರಿಗೂ ಒಂದು ಷರತ್ತನ್ನು ಹಾಕುತ್ತಿದ್ದಳು. ಅದೇನೆಂದರೆ ಬಾಗೇನಾಳು ಕಾಮನಾಯಕ ೨೪ ವರ್ಷ ಸಾಕಿರುವ ಗೊಡ್ಡು ಆಕಳಿನ ಹೊಟ್ಟೆಯೊಳಗಿನ ಮಾಂಸಖಂಡಗಳನ್ನು ಸುಟ್ಟು ಕರೆಗಳನ್ನಾಗಿ ಮಾಡಿಕೊಂಡು ಬಂದು ನನಗೆ ನೀಡಿದರೆ ತನ್ನ ಒಪ್ಪಿಗೆಯನ್ನು ತಿಳಿಸುವುದಾಗಿ ಬೇಡಿಕೆ ಇಟ್ಟಳು. ಈ ಷರತ್ತನ್ನು ಕೇಳಿದ ಪುರುಷರು ಗೋಹತ್ಯೆ ಪಾಪಕ್ಕೆ ಹೆದರಿ ಸುಮ್ಮನಾಗಿ ಬಿಡುತ್ತಿದ್ದರು. ಹೀಗಿರುವಾಗ ಬಾಗೇನಾಳಿನ ಕಾಮನಾಯಕನೂ ಓಬವ್ವಳ ಸೌಂದರ್ಯಕ್ಕೆ ಮಾರುಹೋಗಿ ಮದುವೆಯಾಗುವಂತೆ ಕೇಳಿದನು. ಓಬವ್ವ ತನ್ನ ಷರತ್ತನ್ನು ಮುಂದಿಟ್ಟಾಗ ಆಕೆಯ ಮೇಲಿನ ಆಸೆಗಾಗಿ ಸಾಕಿದ ಆಕಳನ್ನು ಕೊಲ್ಲಲಾರೆನೆಂದು ನಿಶ್ಚಯಿಸಿ ಸುಮ್ಮನಾದನು.

ಆದರೆ ಯರಗಾಟನಾಯಕ ಆಕೆಯ ಸೌಂದರ್ಯಕ್ಕೆ ಮನಸೋತು ಈ ಷರತ್ತಿಗೆ ಒಪ್ಪಿ ವಡಪಲು ತಮ್ಮಯ್ಯನೊಂದಿಗೆ ಹೊರಟು, ಮಡಿವಾಳರ ಮನೆಯ ಬಳಿ ಇದ್ದಂತಹ ಮೈಲಿಗೆ ಬಟ್ಟೆಗಳನ್ನು ಗಂಟುಹಾಕಿಕೊಂಡು ಗೊಡ್ಡು ಹಸು ಇರುವ ನೆಲಮಾಳಿಗೆಯ ಹತ್ತಿರ ಬಂದನು. ನೆಲಮಾಳಿಗೆಯ ಏಳು ಬಾಗಿಲುಗಳಿಗೆ ಬೀಗ ಹಾಕಲಾಗಿತ್ತು. ಯರಗಾಟ ನಾಯಕ ದೇವರ ಸ್ಮರಣೆಯಿಂದ ಎಲ್ಲಾ ಬೀಗಗಳ ಮೇಲೆ ಬಲ ಪ್ರಯೋಗ ಮಾಡಿದನು. ಎಲ್ಲಾ ಬೀಗಗಳು ಸಡಲಿ ಬಾಗಿಲುಗಳು ತೆರೆದವು.

ನೆಲಮಾಳಿಗೆಯಲ್ಲಿದ್ದ ಹಸುವಿನ ಕೊರಳಿನ ಗಂಟೆಗೆ ಬಟ್ಟೆಗಳನ್ನು ತುರುಕಿ ಗಂಟೆಯ ಶಬ್ದವಾಗದಂತೆ ಮಾಡಿ ಹಸುವನ್ನು ಹೊರಗೆ ಕರೆದುಕೊಂಡು ಬರುತ್ತಿದ್ದ. ಅದರ ಕಾಲಿನ ಗೊರಚು ಹೊಸ್ತಿಲಿಗೆ ತಾಕಿ ಅಗೋಚರವಾದ ಶಬ್ದ ಮಾಡಿತು. ಈ ಶಬ್ದ ಕಾಮನಾಯಕನಿಗೆ ಕೇಳಿಸಿ ಅಲ್ಲಿಂದ ಅವನು ಗಾಳಿ ವೇಗದಲ್ಲಿ ಓಡಿ ಬಂದನು. ಅವನು ಬರುವುದರೊಳಗೆ ಯರಗಾಟನಾಯಕ ಮತ್ತು ವಡಪಲು ತಮ್ಮಯ್ಯ ಸೇರಿ ಹಸುವನ್ನು ಕೊಯ್ದು ಅದರ ಮಾಂಸದ ಖಂಡಗಳನ್ನು ತೆಗೆದು ಸುಟ್ಟು ಕರೆಗಳನ್ನು ಮಾಡಿಕೊಂಡು ಸುಂದರಿ ಓಬವ್ವಳಿಗೆ ನೀಡಿದ್ದರು.

ಆಕೆ ಷರತ್ತನ್ನು ಪೂರೈಸಿದ್ದ ಯರಗಾಟನಾಯಕನ್ನು ಓಬವ್ವ ವಿವಾಹವಾದಳು. ತಾಯಿ ಮತ್ತು ಹೆಂಡತಿಗೆ ಪ್ರತಿನಿತ್ಯ ಹಸುಗಳ ಕಾವಲಿಗೆ ಹೋಗುತ್ತೇನೆ ಎಂದು ಸುಳ್ಳು ಹೇಳಿ ಓಬವ್ವಳ ಮನೆಗೆ ಹೋಗುತ್ತಿದ್ದನು. ಹೀಗೆ ಸುಮಾರು ದಿನಗಳು ಸಂದವು.

ಈ ಕಥೆಯನ್ನೆಲ್ಲಾ ಕೇಳಿದ ಭಗ್ನಪ್ರೇಮಿ ಗಜಗುತ್ತಲ ಕ್ಯಾತಯ್ಯ ಹೊಟ್ಟೆಕಿಚ್ಚಿನಿಂದ ಸಂಕಟಪಡುತ್ತಾ ಆಗಾಗ ಯರಗಾಟನಾಯಕನ ಮೇಲೆ ಕತ್ತಿ ಮಸೆಯುತ್ತಿದ್ದನು. ಒಂದು ದಿನ ಯರಗಾಟನಾಯಕ ಮತ್ತು ವಡಪಲು ತಮ್ಮಯ್ಯ ಬರುತ್ತಿರುವಾಗ ಕ್ಯಾತಯ್ಯ ತನ್ನ ಬಾಣದಿಂದ ಯರಗಾಟನಾಯಕನ ಹೊಟ್ಟೆಗೆ ಹೊಡೆದನು. ಬಾಣ ಹೊಟ್ಟೆಯಿಂದ ಹೊರಗೆ ಬಂದಿತ್ತು. ಬಾಣದ ಏಟಿನಿಂದ ತತ್ತರಿಸಿದ ಯರಗಾಟನಾಯಕ ಹೊಟ್ಟೆಯನ್ನು ಹಿಡಿದುಕೊಂಡು ಅನೇಕ ದಾರಿಗಳನ್ನು ಸಾಗಿಸಿ ಬೆಳಗಟ್ಟದವರೆಗೂ ಬಂದನು. ಹಿಂದಕ್ಕೂ ಮುಂದಕ್ಕೂ ಹೋಗಲಾರದೇ ಸಾಯುವ ಹಂತ ತಲುಪಿ ಅಲ್ಲೇ ಕುಸಿದು ಬಿದ್ದಿದ್ದನು.

ಆಗ ಪಡಪಲ ತಮ್ಮಯ್ಯ ಮೂಗು ಮಾಲಿಯಲ್ಲಿದ್ದ ಹೆಂಡತಿ ಮತ್ತು ತಾಯಿಗೆ ವಿಷಯ ತಿಳಿಸಿ ಕರೆದುಕೊಂಡು ಬಂದನು. ತಾಯಿ ಮತ್ತು ಹೆಂಡತಿ ಕಣ್ಣೀರು ಸುರಿಸುತ್ತಾ ಯರಗಾಟ ನಾಯಕ ಕುಸಿದು ಬಿದ್ದಿದ್ದ ಜಾಗಕ್ಕೆ ಓಡೋಡಿ ಬಂದರು. ಅಷ್ಟೊತ್ತಿಗೆ ಅವನ ಸ್ಥಿತಿ ಚಿಂತಾಜನಕವಾಗಿದ್ದಿತು. ಆಗ ತಾಯಿ ಏಳು ಹಚ್ಚಡಗಳನ್ನು ಕಟ್ಟಿ ಮಗನ ಬಾಯಿಗೆ ಹಾಲು ಬೀಳುವಂತೆ ದೇವರನ್ನು ನೆನೆಯುತ್ತಾ ಗುರುಹಿರಿಯರಿಗೆ ನಮಸ್ಕರಿಸಿ ಎದೆಹಾಲನ್ನು ಕರೆದಳು. ಆಗ ಎದೆಹಾಲು ಏಳು ಹಚ್ಚಡಗಳನ್ನು ತೂರಿಕೊಂಡು ಹೋಗಿ ಯರಗಾಟನಾಯಕನ ಬಾಯಿಯೊಳಗೆ ಬಿತ್ತು. ಆಗ ಅವನ ಆತ್ಮ ದೇಹವನ್ನು ಬಿಟ್ಟು ದೈವವನ್ನು ಸೇರಿಕೊಂಡಿತು.

ಅವನ ಆಸೆಯಂತೆ ಹೆಣ ವಾಸನೆ ಬಂದ ಜಾಗದಲ್ಲಿ ಸಂಸ್ಕಾರ ಮಾಡಬೇಕೆಂದು ಮುಸ್ಥಲಗುಮ್ಮಿ ಬಳಿ ಬಂದರು. ನಂತರ ಶವವನ್ನು ವಲಸೆ ಮೀಸಲಾರು ದೊಡ್ಡಿ ಎಂಬ ಸ್ಥಳಕ್ಕೆ ತಂದರು. ಯರಗಾಟನಾಯಕನ ಸಮಾಧಿಯ ಬಗ್ಗೆ ಊಹೆಗಳು ಇವೆ. ವಿರೂಪಾಕ್ಷಿ ಪೂಜಾರಿಹಳ್ಳಿಯವರು ಗುರುತಿಸುವಂತೆ, ಶವವನ್ನು ವಲಸೆ ಮೀಸಲಾರು ದೊಡ್ಡಿ ಎಂಬ ಸ್ಥಳಕ್ಕೆ ತಂದರು. ಆ ಸಮಯಕ್ಕೆ ಹೆಣ ಅಲ್ಲಿಗೆ ಹೊಲಸಾಗಿ ಹೋಗಿತ್ತು. ಆ ಹೆಣವನ್ನು ಚಳ್ಳಕೆರೆ ತಾಲ್ಲೂಕು ನೇರ್ಲಗುಂಟೆ ಹತ್ತಿರವಿರುವ ವಲಸೆಗೆ ತಂದು ಸಮಾಧಿ ಮಾಡಿದರೆಂದು ಹೇಳುತ್ತಾರೆ. ಆದರೆ ಇತ್ತೀಚೆಗೆ ಕೆಲವು ಶೋಧನೆಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಹುರುಳಿಹಾಳು ಸಮೀಪವಿರುವ 'ವಲಸೆ' ಎಂಬ ಗ್ರಾಮವೇ ಯರಗಾಟನಾಯಕನು ಸಮಾಧಿಯಾಗಿರುವ ಸ್ಥಳವೆಂದು ತಿಳಿದು ಬಂದಿದೆ. ಇದಕ್ಕೆ ಆಧಾರ ಅಲ್ಲಿರುವ ಪ್ರಾಚೀನವಾದ ಏಳುಸುತ್ತಿನ ಕಿರಿದಾದ ಭಗ್ನಗೊಂಡ ಕೋಟೆ ಮಹಾದ್ವಾರ ಹಾಗೂ ಯರಗಾಟನಾಯಕನು ಸಮಾಧಿಯಾದ ಬೃಹತ್ ದೇವಾಲಯವನ್ನು ತೋರಿಸುತ್ತಾರೆ. ಆದ್ದರಿಂದ ಯರಗಾಟನಾಯಕನ ಮೂಲಸ್ಥಳ ಇದೇ ಇರಬಹುದು.

ಚಿತ್ರದುರ್ಗ ಜಿಲ್ಲೆಯ ಬೆಳಗಟ್ಟ ಮತ್ತು ಸಾಸಲುಹಟ್ಟಿ ಸುತ್ತ-ಮುತ್ತ ಅನೇಕ ಭಕ್ತಾದಿಗಳಿದ್ದು ಯರಗಾಟನಾಯಕನ ದೇವಾಲಗಳೂ ಇವೆ. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನಲ್ಲಿರುವ ವಲಸೆಯಲ್ಲಿರುವ ಈತನ ದೇವಾಲಯ ಎಲ್ಲಾ ದೇವಾಲಯಗಳಿಗಿಂತ ಪುರಾತನವಾದುದು.

**ದಡ್ಡಿ ಸೂರನಾಯಕ:**

ಈತನು ರೆಪ್ಪಲುಸೂರಿಯ ಮಗ. ರೆಪ್ಪಲುಸೂರಿಗೆ ದಡ್ಡಿಸೂರನಾಯಕ, ದಡ್ಡಿಕಾಮನಾಯಕ ಮತ್ತು ದಡ್ಡಿ ಯರಬಳ್ಳಿನಾಯಕ ಎಂಬ ಮೂರು ಜನ ಪುತ್ರರು. ಹಿರಿಯವನಾದ ದಡ್ಡಿಸೂರನಾಯಕ ತಮ್ಮ ಕುಲದ ವೃತ್ತಿಯಾದ ಪಶುಪಾಲನೆಯನ್ನು ಮಾಡಿಕೊಂಡು ಜೀವನ ಸಾಗಿಸುತ್ತಿದ್ದನು.

ಈತ ಗಲಗಂಟಿ ನಾಯಕನ ಪತ್ನಿಯಾದ ಓಬವ್ವಳನ್ನು ಪ್ರೀತಿಸುತ್ತಾನೆ. ಈಕೆ ಪ್ರತಿರಾತ್ರಿ ಗಂಡನನ್ನು ಮಲಗಿಸಿ ದಡ್ಡಿಸೂರನಾಯಕ ಹತ್ತಿರ ಹೋಗಿ ಬರುತ್ತಿದ್ದಳು. ತುಂಬಾ ದಿನಗಳವರೆಗೆ ಇದು ಮುಂದುವರೆದು ಆಕೆ ಗರ್ಭಿಣಿಯಾದರೂ ದಡ್ಡಿಸೂರನಾಯಕನನ್ನು ಬಿಡಲಿಲ್ಲ. ಒಂದು

ದಿನ ಅಮಾವಾಸ್ಯೆಯ ಕತ್ತಲೆಯಲ್ಲಿ ಮಳೆ ಸುರಿಯುತ್ತಿತ್ತು. ಅಂಥ ಸಮಯದಲ್ಲಿ ಕಪ್ಪುಸೀರೆ ಧರಿಸಿ ಕಂಬಳಿ ಹೊದ್ದು ದಡ್ಡಿಸೂರನಾಯಕನ ದೊಡ್ಡಿಗೆ ಬರುತ್ತಾಳೆ.

ಮಲಗಿರುವ ದಡ್ಡಿಸೂರನಾಯಕ ಯಾವುದೋ ಕಾಡುಪ್ರಾಣಿ ರೊಪ್ಪಕ್ಕೆ ದಾಳಿ ಮಾಡುತ್ತೆಂದು ತಿಳಿದು ತನ್ನ ಬಾಣದಿಂದ ಹೊಡೆಯುತ್ತಾನೆ. ಆ ಬಾಣ ತಗುಲಿದ ಓಬವ್ವ ಕಿರುಚುತ್ತಾ ನೆಲಕ್ಕೆ ಬೀಳುತ್ತಾಳೆ. ದಡ್ಡಿಸೂರನಾಯಕ ಓಡಿಬಂದು ನೋಡುವಷ್ಟೊತ್ತಿಗೆ ಆಕೆ ಮರಣಶಯ್ಯೆಯಲ್ಲಿದ್ದಳು. ಆಕೆಯ ಸಾವಿನೊಂದಿಗೆ ನಾಯಕನು ದುರಂತಕ್ಕೆ ಸಿಕ್ಕು ಸಾಯುತ್ತಾನೆ ಎಂದು ಹೇಳುತ್ತಾರೆ.

ದಡ್ಡಿ ಎಂದರೆ ಹಟ್ಟಿ ಎಂದರ್ಥ. ಹಟ್ಟಿಯ ನಾಯಕ ದಡ್ಡಿ ಸೂರನಾಯಕ. ಈತ ಹೀರೆಹಳ್ಳಿ ಸುತ್ತ ಮುತ್ತಲಿನ ಪ್ರದೇಶವನ್ನು ಆಳುತ್ತಿದ್ದ ಕಾರಣ ಹೀರೆಹಳ್ಳಿಯಲ್ಲಿ ಸೂರಿನಂದನ ಅಲಗನ್ನು ಪ್ರತಿಷ್ಠಾಪಿಸಿ ಅದನ್ನು ದಡ್ಡಿಸೂರನಾಯಕ ದೇವರೆಂದು ಕರೆದು ಅಲ್ಲಿನ ಜನ ಪೂಜಿಸುತ್ತಾರೆ.

**ನಾಯಕನಹಟ್ಟಿ ತಿಪ್ಪೇಸ್ವಾಮಿ:**

ನಾಯಕನಹಟ್ಟಿ ತಿಪ್ಪೇಸ್ವಾಮಿ ಪವಾಡಪುರುಷ, ದಲಿತರ ಉದ್ಧಾರಕ್ಕಾಗಿ ಶ್ರಮಿಸಿದ ಮಹಾಚೈತನ್ಯಶಾಲಿ. ಈತನ ಜೀವನದ ಚರಿತ್ರೆ ಸ್ಪಷ್ಟವಾಗಿದ್ದು ಜನಪದರು ಹೇಳುವ ಮಾಹಿತಿಯಿಂದಷ್ಟೆ ಈತನನ್ನು ಮೇರುವ್ಯಕ್ತಿಯೆಂದು ಪವಾಡಪುರುಷನೆಂದು ಗುರುತಿಸಬಹುದು.

ತಿಪ್ಪಯ್ಯ ಕೂಡ್ಲಿಗಿ ತಾಲ್ಲೂಕಿನ ಕುಪ್ಪಿನಕೆರೆ ಗ್ರಾಮದಲ್ಲಿ ವಾಸವಾಗಿದ್ದನು. ತನ್ನ ಅನುಭವದ ಸಾರವನ್ನು ಜಗತ್ತಿಗೆ ಸಾರಲು ಅಲ್ಲಿಂದ ಸಂಚಾರ ಕೈಗೊಂಡನು. ಕುಪ್ಪಿನಕೆರೆಯಿಂದ ರಾಯದುರ್ಗಕ್ಕೆ ಬರುತ್ತಾನೆ. ಅಲ್ಲಿ ಹಟ್ಟಿಯ ವ್ಯಾಪಾರಿ ಫಣಿಯಪ್ಪನ ಪರಿಚಯವಾಗುತ್ತದೆ. ಫಣಿಯಪ್ಪನ ಗಾಢವಾದ ಸ್ನೇಹದೊಂದಿಗೆ ನಾಯಕನಹಟ್ಟಿಗೆ ಬಂದು ನೆಲೆಸಿದನು.

ತನ್ನಲ್ಲಿರುವ ದೈವಿಕ ಶಕ್ತಿಯಿಂದ ಅನೇಕ ಪವಾಡಗಳನ್ನು ಮೆರೆದ ತಿಪ್ಪೇಸ್ವಾಮಿ ಮಲ್ಲಪ್ಪನಾಯಕ ಹಟ್ಟಿಯ ಪಾಳೆಯ ಪಟ್ಟವನ್ನು ಕಟ್ಟಲು ಮಾರ್ಗದರ್ಶನ ನೀಡಿದರು. ಕೊಂಡ್ಲಹಳ್ಳಿಯ ಕೋನಸಾಗರದ ಸಮೀಪ ಬಿಳಿನೀರ ಚಿಲುಮೆಯಲ್ಲಿ ಗಂಗೆ ಉಕ್ಕಿ ಬಂದಿದ್ದು, ಬುತ್ತಿಯಲ್ಲಿ ಅಕ್ಷಯ ಪವಾಡ ತೋರಿಸಿದ್ದು, ತಾನು ನಾಯಕನಹಟ್ಟಿಗೆ ಬಂದಾಗ ಅಲ್ಲಿ ಇದ್ದಂತ ಒಡ್ನಳ್ಳಿ ಮಾರಮ್ಮ ನಿರ್ಗಮಿಸುವಂತೆ ಮಾಡಿದ್ದು, ಹಟ್ಟಿಮಲ್ಲಪ್ಪನಾಯಕನೊಡನೆ ಲೋಕಕಲ್ಯಾಣ ಕಾರ್ಯಗಳಲ್ಲಿ ತೊಡಗಿದ್ದು, ಹಿರೇಕೆರೆ ಮತ್ತು ಚಿಕ್ಕಕೆರೆ ನಿರ್ಮಾಣ, ಐದು ಗ್ರಾಮಗಳ ಸ್ಥಾಪನೆ, ಫಣಿಯಪ್ಪನ ಸಂಸಾರವನ್ನು ಆನಂದದಲ್ಲಿ ತೇಲಿಸಿದ್ದು, ಸತ್ತೆಮ್ಮೆ ಹಾಲು ಕರೆದಿದ್ದು, ಹರಿಜನರ ಗುಡಿಸಿಲಿನಲ್ಲಿ ಶಿವಪೂಜೆ ಹೀಗೆ ಅನೇಕ ಪವಾಡಗಳನ್ನು ಮಾಡಿ ಸುತ್ತೆಲ್ಲಾ ಜಗದ್ವಿಖ್ಯಾತಿ ಪಡೆದ ಒಬ್ಬ ಶರಣ ಎನ್ನಬಹುದು.

ಹೀಗೆ ಸಾಮಾಜಿಕ ಕಳಕಳಿಯ ವ್ಯಕ್ತಿತ್ವವಿರುವ ತಿಪ್ಪೇಸ್ವಾಮಿ ಸಮಾಜದ ಸ್ವಾಸ್ಥ್ಯಕ್ಕೆ, ಜನಕಲ್ಯಾಣಕ್ಕಾಗಿ ಅಪಾರ ಶ್ರಮಿಸಿ ಕೊನೆಗೆ ಮುಕ್ತಿಯನ್ನು ಕಾಣಲು ಶಿವಧ್ಯಾನ ಮಗ್ನನಾಗಿ ಮನಮೈಯ್ಯನಹಟ್ಟಿಯ ಹತ್ತಿರ ಗವಿಯಲ್ಲಿ ನೆಲಮಾಳಿಗೆಯಲ್ಲಿ ಧ್ಯಾನಕ್ಕೆ ಕುಳಿತರು. ಆ ಸ್ಥಳವನ್ನು ಏಕಾಂತೇಶ್ವರ ಮಠ ಎಂದು ಕರೆಯುತ್ತಾರೆ.

ನಾಯಕನಹಟ್ಟಿ ತಿಪ್ಪೇಸ್ವಾಮಿಗೆ ಸಂಬಂಧಿಸಿದಂತೆ ಪ್ರಧಾನವಾಗಿ ಎರಡು ದೇವಾಲಯಗಳಿವೆ. ಒಂದು ಹೊರಮಠ, ಮತ್ತೊಂದು ಒಳಮಠ. ನಾಯಕನಹಟ್ಟಿಯ ದಕ್ಷಿಣ ತುದಿಗೆ ಒಳಮಠವಿದ್ದರೆ, ಉತ್ತರ ತುದಿಗೆ ಹೊರಮಠವಿದೆ. ಒಳಮಠದಲ್ಲಿ ತಿಪ್ಪೇಸ್ವಾಮಿ ಬರುವ ಮುನ್ನ ಒಡ್ನಳ್ಳಿ ಮಾರಮ್ಮ ಇದ್ದಳು, ತಿಪ್ಪೇಸ್ವಾಮಿ ಬಂದ ನಂತರ ಆ ಸ್ಥಳ ಈತನದೇ ಆಯಿತು. ಈ ಒಳಮಠದಲ್ಲಿ ಪಂಚಲೋಹದಿಂದ ಮಾಡಿದ ತಿಪ್ಪೇಸ್ವಾಮಿ ವಿಗ್ರಹವಿದ್ದು, ಜನಕಲ್ಯಾಣಕ್ಕಾಗಿ ತಿಪ್ಪೇಸ್ವಾಮಿ ಮಾಡಿದ ಲೋಕಕಲ್ಯಾಣಗಳ ಚಿತ್ರಪಟಗಳನ್ನು ಬಿಡಿಸಿ ಗೋಡೆಗಳ ಮೇಲೆ ಹಾಕಲಾಗಿದೆ. ಇಲ್ಲಿರುವ ತೇರು ಬಹುದೊಡ್ಡದು. ಗರ್ಭಗುಡಿಯಲ್ಲಿ ಶಿವಲಿಂಗವಿದ್ದು, ದೇವಾಲಯ ವಿಶಾಲವಾಗಿದೆ. ಎಲ್ಲಾ ಜಾತಿ-ಧರ್ಮದವರಿಗೆ ಮುಕ್ತ ಪ್ರವೇಶವಿದೆ.

ಇನ್ನು ಹೊರಮಠವೆಂದರೆ ತಿಪ್ಪೇಸ್ವಾಮಿಯು ಜೀವೈಕ್ಯನಾದ ಸ್ಥಳ. ಈ ಸ್ಥಳದಲ್ಲಿ ಜಾತ್ರೆ ನಡೆದು, ರಥ ಎಳೆಯುವ, ಪರಿಷೆ, ಮರಿಪರಿಷೆ ಕಾರ್ಯಗಳು ನಡೆಯುತ್ತವೆ. ಹೊರಮಠದ ದೇವಾಲಯವು ಹಿಂದೂ, ಮುಸ್ಲಿಂ ಶೈಲಿಯನ್ನು ಹೊಂದಿದೆ. ಇದನ್ನು ಹೈದರಾಲಿ ಕಟ್ಟಿಸಿದ್ದು, ತಿಪ್ಪೇಸ್ವಾಮಿಯವರ ಕೃಪೆಯಿಂದ ಹುಟ್ಟಿದ ತನ್ನ ಮಗನಿಗೆ ಟಿಪ್ಪುಸುಲ್ತಾನ್ ಎಂದು ಹೆಸರಿಟ್ಟನಂತೆ. ಪ್ರತಿಸೋಮವಾರ ವಿಶೇಷ ಪೂಜೆ ನಡೆಯುತ್ತದೆ. ಪ್ರತಿವರ್ಷ ಚಿತ್ತಾ ನಕ್ಷತ್ರದಲ್ಲಿ ರಥೋತ್ಸವ ಜರುಗಲಿದ್ದು, ಭಕ್ತರ ಪೂಜೆ ಹರಕೆಗಳನ್ನು ತೀರಿಸುತ್ತಾರೆ. ಮ್ಯಾಸನಾಯಕರು ಹೊರಮಠದ ಪೂಜಾರಿಗಳು. ಮಾಂಸಹಾರವನ್ನು ದೇವಾಲಯ ಬಿಟ್ಟು ಬಹುದೂರದಲ್ಲಿ ಮಾಡುತ್ತಾರೆ. ಹೊಂಡ, ಸಣ್ಣ ಪುಟ್ಟ ಕೊಠಡಿಗಳು, ದಾಸೋಹದ ಮನೆ, ಕಲ್ಯಾಣ ಮಂಟಪ ಮುಂತಾದ ಸೌಲಭ್ಯಗಳನ್ನು ಇಲ್ಲಿ ಕಾಣಬಹುದು.

**ಕಾಡುಗೊಲ್ಲರ ಸಾಂಸ್ಕೃತಿಕ ನಾಯಕರು:**

ಕಾಡುಗೊಲ್ಲರಲ್ಲಿ ಬಹುಪ್ರಮುಖವಾಗಿರುವ ಮತ್ತು ಪ್ರಸಿದ್ಧವಾಗಿರುವ ಸಾಂಸ್ಕೃತಿಕ ನಾಯಕರೆಂದರೆ ಎತ್ತಪ್ಪ ಮತ್ತು ಜುಂಜಪ್ಪ.

**ಎತ್ತಪ್ಪ:**

ಎತ್ತಪ್ಪನ ಹುಟ್ಟಿನ ಬಗೆಗೆ ವಿದ್ವಾಂಸರಲ್ಲಿ ಅನೇಕ ಭಿನ್ನಾಭಿಪ್ರಾಯಗಳಿವೆ, ಕೆಲವರು ಅವನನ್ನು 'ಹೆತ್ತ ತುಪ್ಪದಲ್ಲಿ ಹುಟ್ಟಿದ್ದರಿಂದ ಎತ್ತಪ್ಪ' ಎಂಬ ಹೆಸರು ಬಂತು ಎಂದು ಹೇಳುತ್ತಾರೆ. ಮತ್ತೊಂದು ಕತೆಯ ಪ್ರಕಾರ ಮೂಗು ಹುತ್ತದ ಮೇಲೆ ಜಾರಿ ಬಿದ್ದಾಗ, ಶಿವಪಾರ್ವತಿ ಅವನನ್ನು ಎತ್ತಿರೋ ಅಪ್ಪನ್ನ ಎಂಬ ಮಾತು ಎತ್ರೋ ಅಪ್ಪನ್ನ ಎಂಬುದು ಸಾಮಾನ್ಯೀಕರಣಗೊಂಡು ಎತ್ರಪ್ಪ, ಎತ್ತಪ್ಪ ಎಂದಾಗಿದೆ. ಇನ್ನೊಂದು ಮೂಲದ ಪ್ರಕಾರ ತಂದೆ ತಾಯಿ ಇಲ್ಲದ ಅನಾಥನಿವನು. ಗೌರಸಂದ್ರದ ಮಾರಿ ಈ ಅನಾಥ ಬಾಲಕನನ್ನು ತಂದು ಅಂಬೆರಾಯ ತುಂಬೆರಾಯರಿಗೆ ಕೊಟ್ಟು ಅವರು ಇವನನ್ನು ಎತ್ತುಗಳನ್ನು ಕಾಯಲು ಇಟ್ಟಿರಬೇಕು ಹೀಗಾಗಿ ಎತ್ತುಕಾಯುವ ಅಪ್ಪ ಎತ್ತಪ್ಪ ಎಂದಾಗಿರಬಹುದು. ಒಟ್ಟಲ್ಲಿ ಹೀಗೆ ಅನೇಕ ಗೊಂದಲಗಳ ಮಧ್ಯೆ ಎತ್ತಪ್ಪನ ಕಥೆ ಹುಟ್ಟಿಕೊಂಡಿದೆ.

ಹಟ್ಟಿಗಳಲ್ಲಿ ವಾಸಿಸುವ ಗೊಲ್ಲರು ಎತ್ತಪ್ಪನ ಬಗೆಗೆ ಬಹು ದೊಡ್ಡ ಕಥೆಗಳನ್ನೇ ಹೇಳುತ್ತಾರೆ. ಅಂತಹ ಒಂದು ಕಥೆಯನ್ನು ಸಂಕ್ಷಿಪ್ತವಾಗಿ ತಿಳಿಯುವ ಮೂಲಕ ಎತ್ತಪ್ಪನ ಮೂಲವನ್ನು, ಅವನ ಮಹಿಮೆಯನ್ನು ಅಧ್ಯಯನ ಮಾಡಬಹುದು.

ಅರೇರಾಯ, ಬೋರೆರಾಯ ಎಂಬೋರು ದನ ಕಾದುಕೊಂಡು ಇದ್ದರು. ಇವರ ಮಕ್ಕಳು ಅಂಬೇರಾಯ ಮತ್ತು ತುಂಬೇರಾಯ. ಇವರ ಕೆಲ್ಸಾನೇ ತಮ್ಮ ಹಿರೇರು ಮಾಡಿಟ್ಟ ದನಗಳನ್ನು ಕಾದ್ಕೊಂಡು ಇರೋದು.ಇವರಿಬ್ಬರಿಗೂ ಮದುವೆ ಆಗದೇ ಅಂಗೆ ಮುದುಕ್ರಾಗಿಬಿಟ್ಟರು. ಈಗ ಅವರಿಗೆ ಚಿಂತೆ ಆತು. ನಾವು ಸತ್ತ ಮೇಲೆ ನಮ್ಮ ಏಳುಗೂಡಿನ ಎತ್ತುಗಳನ್ನು ನೋಡಿಕೊಳ್ಳೋರು ಯಾರು ಅಂತ. ಅಲ್ಲಿಗೆ ಗೌರಸಂದ್ರ ಮಾರಮ್ಮ ಬಂದಳು. ಆಕೆ ಹತ್ರ ತಮ್ಮ ಕಷ್ಟನೆಲ್ಲಾ ಹೇಳಿಕೊಂಡರು. ಅದಕ್ಕೆ ಆಕೆ ನಾನು ಎತ್ತಿಗೆ ತಕ್ಕನಾದ ಕಿಲಾರಿ ತಂದುಕೊಟ್ಟರೆ ಏನು ಕೊಡ್ತೀರಾ? ಅಂತ ಕೇಳಿದ್ಲು. ಅದ್ಕೆ ಇವರು ನಿನಗೆ ಕುರಿ ಕ್ವಾಣ ಕಡ್ದು, ಏಳು ದಿನ ಜಾತ್ರೆ ಮಾಡ್ತಿವಿ ಎಂದ್ರು, ಅದ್ಕೆ ಭಾಷೆ ತಕ್ಕೊಂಡಳು.

ಆಮೇಲೆ ನೆಟ್ಟಗೆ ಕೈಲಾಸಕ್ಕೋಗಿ ಶಿವಪ್ಪನನ್ನು ಕಂಡು 'ಅಪ್ಪಾ ಎತ್ತಿಗೆ ತಕ್ಕನಾದ ಕಿಲಾರಿ ತರ್ತಿನಿ ಅಂತ ಅಂಬೆರಾಯ–ತುಂಬೆರಾಯರಿಗೆ ಮಾತು ಕೊಟ್ಟು ಬಂದಿನಿ ನನಗೆ ವರ ಕೊಡು' ಎಂದಳು. ಶಿವ ಅಲ್ಲಿ ಗೊಂಬೆ ಮಾಡಿಟ್ಟಿವ್ನಿ ಅದರಲ್ಲಿ ಯಾವುದು ಬೇಕು ಆರಿಸಿಕೊಂಡು ಬಾ ಅದಕ್ಕೆ ಜೀವ ಕೊಡ್ತಿನಿ ಅಂತಾನೆ. ಅದಕ್ಕೆ ಮಾರಮ್ಮ ನಿನ್ನಲ್ಲಿ ಎತ್ತಯ್ಯ ಎಂಬ ವಿಶೇಷ ವ್ಯಕ್ತಿ ಇದ್ದು ಅವನನ್ನ ನೀನು ತಲೆ ಮ್ಯಾಲೆ ಹೊತ್ತಿದಿಯ ಅಂತ ಗೊತ್ತಾಯ್ತು. ಅವನ್ನ ಕಳುಸು ಅಂದಳು. ಅದಕ್ಕೆ ಶಿವ ಅವನು ಎಲ್ಲಿದಾನೆ ಹುಡುಕು ಎಂದಳು. ಹುಡುಕಾಡಿದಳು. ಎತ್ತಯ್ಯ ಕೆಲವು ಬಾರಿ ಹುತ್ತ ಹೊಕ್ಕರೆ ದಿನ ಕಳೆದರೂ ಹೊರಬರುತ್ತಿರಲಿಲ್ಲ. ಇದನ್ನು ತಿಳಿದ ಮಾರಮ್ಮ ಹುತ್ತದ ಹತ್ತಿರಕ್ಕೆ ಹೋಗಿ ದೂಪಹಾಕಿ, ಕಾಯಿ ಒಡೆದು, ಹುತ್ತದ ಕೋಮಿಗೆ ಹೂವು ಉದುರಿಸಿದಳು. ಒಳಗೆ ಮಲಗಿದ್ದ ಎತ್ತಯ್ಯನಿಗೆ ನಿದ್ರಾ ಭಂಗವಾಗಿ ಅಂಗೆ ಕೆಂಗಣ್ಣು ಬಿಟ್ಕೊಂಡು ಅಂಗೆ ಹುತ್ತ ದಗ್ಗನೆ ಹತ್ಕೊಂಡು ಬಿಡ್ತಂತೆ. ಆಗ ಶಿವ ಪಾರ್ವತಿ ಎಂಥಾ ಕೆಲಸ ಆತು ಅನ್ಕೊಂಡು ಓಡೋಡಿ ಬಂದ್ರಂತೆ. ಬಂದು ಅವರೆ ಹುತ್ತದ ಕೋಮಿಗೆ ಕೈ ತೂರಿಸಿ ಎತ್ತಯ್ಯನ್ನ ಹೊರಗೆಳೆದುಕೊಂಡ್ರಂತೆ. ಆಗ ಹೇಳಿದ್ರು ಎತ್ತಯ್ಯ ನಿಮ್ಮ ಅಕ್ಕ ಗೌರಸಂದ್ರ ಮಾರಕ್ಕ ಬಂದವಳೆ. ಭೂಲೋಕದಲ್ಲಿ ಅಂಬೆರಾಯ–ತುಂಬೇರಾಯರಿಗೆ ಕೈಲಾಸಕ್ಕೆ ಬರೋ ಆಸೆ ಆಗಿದೆಯಂತೆ. ಅಲ್ಲಿ ಅವರ ದನಗಳನ್ನು ಕಾಯೋರು ಯಾರು ಇಲ್ಲ. ನಿನೋಗಿ ಅವರ ದನ ಕಾದು ಅಲ್ಲಿನ ಜನರಿಗೆಲ್ಲ ಒಳ್ಳೆದು ಮಾಡಿ, ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ರಕ್ಷಿಸಿ ಬಾ ನಿನಗೆ ಬೇಕಾದ ಎಲ್ಲಾ ಸಹಾಯವನ್ನು ನಾನು ಮಾಡ್ತಿನಿ ಅಂದ ಶಿವ. ಶಿವನಿಗೆ ಎದುರು ಮಾತಾಡದ ಎತ್ತಯ್ಯ ಸಣ್ಣ ಹುರಿಕಂಬಳಿ ಹಾಕ್ಕೊಂಡು, ಸಣ್ಣ ಗಿಲೀಟಿನ ಮೆಟ್ಟು ಹಾಕ್ಕೊಂಡು, ಇಪ್ಪತ್ತು ಮಾರುದ್ದ ಮುಂಡಾಸು ಸುತ್ಕೊಂಡು, ಸಣ್ಣ ಚಿಪ್ಪುಗೊಡಲಿ ಹೆಗಲಿಗೆ ಹಾಕ್ಕೊಂಡು, ರನ್ನದ ಪಿಳ್ಳಂಗೋವಿ–ಚಿನ್ನದ ಪಿಳ್ಳಂಗೋವಿ ತಕ್ಕೊಂಡು ಗೌರಸಂದ್ರ ಮಾರಮ್ಮನ ಹಿಂದೆ ಹೊರಟ.

ಈ ಕಡೆ ಇವ್ರು ಕಾಯ್ತಿದ್ರು ಆಕೆನಾ. ಕಾದು ಕಾದು ಸುಸ್ತಾಗಿ ಮಾರಮ್ಮ ನಮಗೆ ಮೋಸಮಾಡಿಬಿಟ್ಟಳು ನಮ್ಮ ಅವಸಾನದ ಕಾಲ ಹತ್ತಿರಕ್ಕೆ ಬಂದುಬಿಡ್ತು ಅಂತ ಎಲ್ಲಾ ದನಗಳನ್ನು ಹುತ್ತದೊಳಕ್ಕೆ ಕಳುಸ್ತಾ ಇದ್ದರು. ಅಷ್ಟೊತ್ತಿಗೆ ಎತ್ತಯ್ಯನನ್ನು ಕರೆದುಕೊಂಡು ಗೌರಸಂದ್ರಮಾರಮ್ಮ ಬಂದಳು. 'ಜಾತ್ರೆ ಮಾಡ್ತಿನಿ ಅಂತ ಭಾಷೆ ಕೊಟ್ಟು ತಪ್ಪಿಸಿಕೊಂಡು ಹೋಗ್ತಿದಿರಲ್ಲಾ' ಎಂದು ನಿಷ್ಠುರವಾಗಿ ಹೇಳಿದಳು. ಆಗ ಅವರು ಸಮಾಧಿಗೋಗೊದನ್ನು ಮೂರು ತಿಂಗಳು ಮುಂದಕ್ಕಾಕಿ ಏಳು ದಿನ ಕುರಿ ಕೋಣ ಕಡಿಸಿ ಗೌರಸಂದ್ರ ಮಾರಮ್ಮನಿಗೆ ಜಾತ್ರೆ ಮಾಡಿದರು. ಜಾತ್ರೆ ಎಲ್ಲಾ ಮುಗಿದ ಮೇಲೆ ಎತ್ತಯ್ಯನಿಗೆ ದನಗಳನ್ನು ಒಪ್ಪಿಸಲು ಹೋದಾಗ ಗೌರಸಂದ್ರ ಮಾರಮ್ಮನ್ನ ಕರೆಸಿ 'ಈ ಗೋಕುಲದ ಕಳ್ಳೆತೊಟ್ಟು ಇರೋವರೆಗೆ ನೀನು ಎತ್ತಪ್ಪನಿಗೆ ಅಕ್ಕನಾಗಿ ನಡ್ಕೋಬೇಕು. ಎತ್ತಪ್ಪ ಮುಂದಿನ ಜನ್ಮದಲ್ಲಿ ಜುಂಜಪ್ಪನಾಗಿ ಹುಟ್ಟಿದಾಗ ತಂಗಿಯಾಗಿ ನಡ್ಕೋಬೇಕು ಇವರು ದೇವರಾದ ಮೇಲೆ ಎತ್ತಪ್ಪ, ಜುಂಜಪ್ಪ ತೀರ್ಥ ತಂದು ಹಾಕುತ್ತಿದ್ದ ಹಾಗೆ ಈ ಊರು ಬಿಟ್ಟು ಮುಂದಲ ಊರಿಗೆ ಹೋಗಬೇಕು' ಎಂದು ಭಾಷೆಯನ್ನು ತಕ್ಕೊಂಡು ಅವರು ಸಮಾದಿ ಆದ್ರು.

ಅಂಬೇರಾಯ–ತುಂಬೇರಾಯರಿಗೆ 'ಏಳುಗೂಡಿನ ದನ ಕಾಯೋದು, ಹಿಡಿಯೋದು ಕಷ್ಟ' ಎಂದಿದ್ದ ಅದಕೆ ಅವರು ಕೈಲಾಸಕ್ಕೆ ಹೋಗುತ್ತಿದ್ದಂತೆ ಶಿವ ಪಾರ್ವತಿ ಎತ್ತಯ್ಯನ ಒಬ್ನ ಕೈಲಿ ದನ ಕಾಯೋದಾಗಲ್ಲ ಅಂತ ಒಂದು ದೊಣ್ಣೆಗೆ ಕಂಬಳಿ ಕೋರಿ ಸುತ್ತಿ ಜೀವ ತುಂಬಿ ಮಾರಿ ಮುತ್ತಣ್ಣ ಅಂತ ಹೆಸರಿಟ್ಟು ಕೈಲಾಸದಿಂದ ಎಸೆದರು. ಅವನು ಕೋರಿ ಸುತ್ತಿಕೊಂಡು ಹುಟ್ಟಿದ್ದರಿಂದ ಕೋರಿಮುತ್ತಣ್ಣ ಅಂತಾನೆ ಹೆಸರಾದ.

ಎತ್ತಪ್ಪ–ಕೋರಿಮುತ್ತಣ್ಣ ಏಳುಗೂಡಿನ ದನಗಳನ್ನು ಕಾಯೋಕೆ ಶುರು ಮಾಡಿದರು. ಗೋವುಗಳನ್ನು ಕಾಯುವ ದೃಷ್ಟಿಯಿಂದ ಯಾವಾಗಲೂ ಊರಿನಿಂದ ಹೊರಗೆ ಇರತಾನೆ. ಇವನು ಹೋದ ಕಡೆಲೆಲ್ಲಾ 'ಆವಿನ ಗೊಲ್ಲ ಕಾಣೆ ಎತ್ತಯ್ಯ, ನಾಡಿಗೆ ಚೆಲುವ ಕಾಣೆ' ಎಂದು ಕೊಂಡಾಡುತ್ತಿದ್ದರು. ಇವನು ಹೋದ ಕಡೆಗೆಲ್ಲಾ ಇವ್ನ ಇವನ್ ಎತ್ತುಗಳನ್ನು ನೋಡಿ ನೋಡಿ

ಆವಿನ ಮುಂದೆ ಬರುವ ಗೀರುಬಣ್ಣದ ಚೆಲುವ
ಗುತ್ತಿಯ ಸೀಮೆಯ ತೆಲಗರೆಣ್ಣು ಮಕ್ಕಳು
ಎತ್ತಿಗೇ ಆರತಿಯ ಬೆಳಗ್ಯಾರು

ಎಂದು ಹಾಡುತ್ತಿದ್ರಂತೆ. ಎತ್ತಯ್ಯ ಮಾಡುತ್ತಿದ್ದ ಒಳ್ಳೆ ಕೆಲಸಗಳಿಗೆ ಕೆಲವು ವ್ಯಾಪಾರಸ್ಥರು ದೊಡ್ಡ ಮೈಗ, ಚಿಕ್ಕ ಮೈಗ ಎಂಬ ಎರಡು ಗ್ರಾಮಗಳನ್ನೇ ಕಟ್ಟಿಸಿ 'ಇನ್ನು ನಿನಗೆ ಊರು ಉದ್ದಮಾನ ಮೈಗವೇ'. ಅದ್ಕೆ ನೀನು 'ಮೈಗದ ಎತ್ತಯ್ಯ' ಅಂತ ಹೆಸರಾಗು ಎಂದು ಅವನಿಗೆ ಊರುಗಳ ಎತ್ತುಗಳನ್ನೆಲ್ಲಾ ಒಪ್ಪಿಸಿ 'ಮೈಗದ ದೊರೆ' ಮಾಡಿದರು.

ಯರಬಳ್ಳಿಯ ಹಟ್ಟಿ ನಾಗೇಗೌಡನ ಮಗಳು ಗೆಜ್ಜೆಕಾಲು ಮಲ್ಲಮ್ಮಳನ್ನು ತಂದು ಮದುವೆಯನ್ನು ಗೌರಸಂದ್ರ ಮಾರಮ್ಮಳೇ ಮಾಡುತ್ತಾಳೆ. ಹಿಂಗೆ ಗೆಜ್ಜೆಕಾಲು ಮಲ್ಲಮ್ಮಳನ್ನು ಮದುವೆಯಾಗಿದ್ದಷ್ಟೇ.

ಎತ್ತಯ್ಯನಿಗೆ ಸಂಸಾರದ ಮ್ಯಾಲೆ ಗ್ಯಾನಿಲ್ಲ. ಮಲ್ಲಮ್ಮಳನ್ನು ಎಂದು ಕಣ್ಣೆತ್ತಿ ನೋಡಿದವನೂ ಅಲ್ಲ. ಸದಾ ದನಗಳ ಹಂಬಲ. ಅವನು ಮಲ್ಲಮ್ಮಳನ್ನು ಮುಟ್ಟಲೇ ಇಲ್ಲ. ಮಲ್ಲಮ್ಮಳೂ ಎತ್ತಯ್ಯನ ಹಾದಿಯನ್ನೇ ಅನುಸರಿಸುತ್ತಾಳೆ. ನಿತ್ಯ ಗೋಸೇವೆ ಮಾಡಿಕೊಂಡು ಇರುತ್ತಾಳೆ.

'ಆವಿನ ಗೂಡಿನಾಗೋದಾಳೆ ಮಲ್ಲಮ್ಮ
ಆವಿನ ಕಸವ ಗೂಡಿಸಿ ಗುಡ್ಡೆ ಮಾಡಿ ಆವಿಗೆ
ಬಾಸೆ ಕೊಡುತಾಳೆ'.[೧೨]

ಹಿಂಗೆ ಆವಿನ ಹಟ್ಟಿಯನ್ನು ಗುಡಿಸಿ ಸಾರಿಸಿ ರಂಗೋಲಿಯನ್ನಿಟ್ಟು ಅವುಗಳನ್ನು ಬಹು ಪಸಂದಾಗಿ ನೋಡಿಕೊಳ್ಳತಾ ಇರುತ್ತಿದ್ದಳಂತೆ.

ಎತ್ತಯ್ಯನ ಏಳಿಗೆಯನ್ನು ಸಹಿಸದ ಅಜ್ಜೇರು ಬಾಲ, ಹುಲಿಕುಂಟೆರಂಗಣ್ಣ ಎಂಬ ಪಾಳೆಗಾರರೊಂದಿಗೆ ಲೆತ್ತ ಪಗಡೆಯಾಡಿ ಗೆದ್ದ. ಸೋತ ನಾಯಕ ಮಕ್ಕಳು ಗೊಲ್ಲರಿಗೆ ಹಳೆಮಕ್ಕಳಾಗಿ ನಡೆದುಕೊಳ್ಳುವ ವಾಗ್ದಾನ ಮಾಡುತ್ತಾರೆ.

ಹಿಂಗೆ ಎತ್ತಯ್ಯ ಧರ್ಮಮಾರ್ಗದಲ್ಲಿ ನಡೆಯುತ್ತಿರುವಾಗ ಆತನ ರೂಪಿಗೆ ಮನಸೋತ ಗುಡ್ಡದ ಬೋರಿ ಎಂಬ ಮ್ಯಾಸಬೇಡರ ಹೆಣ್ಣು ಗಂಟು ಬೀಳುತ್ತಾಳೆ. ಎತ್ತಯ್ಯ ಅವಳನ್ನು ತಿರುಗಿ ಕೂಡ ನೋಡದಂಗೆ ಬ್ಯಾಡ ಅಂತ ಹೇಳ್ತಾನೆ. ಅದರಿಂದ ಆಕೆ ಒಂದು ಸೇಡು ಇಟ್ಕೊಂಡಿರ್ತಾಳೆ.

ಈ ಕಡೆ ಗುಡ್ಡದ ಕಾವಲಿನಲ್ಲಿ ಮೇವಿಲ್ಲದೆ ಬರ ಬಂದ ಕಾರಣ ಸಂಡೂರು ಕಾವಲಿಗೆ ದನಗಳನ್ನು ಹೊಡೆದುಕೊಂಡು ಹೋಗುವುದು ಎಂದು ತೀರ್ಮಾನಿಸುತ್ತಾನೆ. ಆಗ ಮಾರಮುತ್ತಣ್ಣನು ದೊಡ್ಡಪ್ಪ ನಿನಗೆ ಅಲ್ಲಿ ಹೋದ್ರೆ ಮುನಿಗಳ ಶಾಪ ಐತೆ ಹೋಗೋದು ಬ್ಯಾಡ ಅಂತಾನೆ. ಆದರೆ ಅವನ ಮಾತನ್ನ ಕೇಳದೆ 'ಅಲ್ಲಿ ಏನೆ ಅಂತದ್ದು ಐತೆ ಕಂಡೆ ಬಿಡಾನ, ಹೋಗೋಣ್ ನಡೀರಾ' ಅಂತ ಹೊಂಟೇ ಬಿಟ್ಟ.

ಮಾರಮುತ್ತಣ್ಣ ಮಲ್ಲಮ್ಮನ ಹತ್ತಿರ ಹೋಗಿ ಸಂಡೂರಿಗೆ ಹೋದರೆ ಶಾಪ ಇರುವ ವಿಷಯವನ್ನು ಹೇಳಿದ. ಆಕೆ ಹೆದ್ರುಕೊಂಡು ಅತ್ಕೋತಾ ಮಕ್ಕಂಡಳು. ಆ ದಿನ ರಾತ್ರಿ ಕೆಟ್ಟ ಕನಸು ಕಂಡಳು. ಅದನ್ನು ಹೇಳಿದರೆ ಎತ್ತಯ್ಯ ಕೇಳದೆ 'ಹೆಂಗಸು ಆಡಿದ ಮಾತು ಏಳು ನಜಿಗೆ ವೊಯ್ದಂಗೆ ವಲಿಗಾನಿ, ವಡಿಯೋ ಹುಲಿದುರ್ಗ' ಎಂದು ಎತ್ತಯ್ಯ ವಲಿಗಾನಿ ಮತ್ತು ಮುತ್ತಣ್ಣನನ್ನು ಎಬ್ಬರಿಸಿ ಎತ್ತು ಹೊಡ್ಕೊಂಡು ನಡಿರೋ ಎಂದ. ನೀವು ನಡೀರಿ ಮುಂದೆ ನಾನು ಬೆಳಗ್ಗೆ ಬರ್ತಿನಿ ಅಂದ.

ಬೆಳಗ್ಗೆ ಎತ್ತಯ್ಯ ಹೊರಟು ನಿಂತಾಗ ಮಲ್ಲಮ್ಮ ಸೆರಗು ಹಾಕ್ಕೊಂಡು ಅಡ್ಡ ಬಂದಳು. ಸಂಡೂರಲ್ಲಿ ಮುನಿಶಾಪ ಐತೆ ಗೊತ್ತಿದ್ದು ಹೋಗ್ತಿಯಲ್ಲ ಗೌಡ

'ಮೂಗುತಿ ಮುರಿಯೋದು ಕಂಡೆ
ಮುಂದಲೆ ಸಿಡಿಯೋದು ಕಂಡೆ

ಮುಂದಲುಪ್ಪರಿಗೆ ಧಗ ಧಗನೆ ಉರಿಯೋದು ಕಂಡ
ಎನ್ನುತ್ತಾ,
ಮತ್ತೋಗದಿರು ಗೌಡ ಹುಲಿದುರಗ
ಸಂಡೂರ ಬ್ಯಾಡರಿಗೆ ತಲೆಯ ಕೋಡ್ತಿಯ
ಎಂದು ಹೇಳುತ್ತಾಳೆ.
ಯಾಕೆ ಬ್ಯಾಡಮಲ್ಲಿ ಹುಲಿದುರುಗ
ತಳಕೀನ ವತ್ತೀಲಿ ಗೂಡು ತಿರುವೇನು

ಎಂದು ಎತ್ತಯ್ಯ ಸಮಾಧಾನ ಮಾಡುತ್ತಾ, 'ಎತ್ತಿಗೆ ದೊಕ್ಕ ಬರ ಬಂದೈತೆ, ಸಾಯ್ತಾವ ಇರೋ ಗೋವು ನೋಡಿ ನಾನೆಂಗಿರಲಿ' ಎಂದು ಮಲ್ಲಮ್ಮನನ್ನು ಕೇಳುತ್ತಾನೆ.

ಎತ್ತಿಗೆ ದೊಕ್ಕೆ ಬರ ಬಂದಾರೆ
ಈಗೋಗಿ ತರಲೆ ವರೆ ವುಲ್ಲ
ಓಗಬ್ಯಾಡ ನೀನು ಹುಲಿದುರುಗ
ಗಾಜಿನ ಕಂಬ ಸಿಡಿಮಿಡಿಯಾದುದು ಕಂಡೆ
ಭಾಗ್ಯವಂತರ ಕೋಟೆ ಬೀಗ ಬೀಳದು ಕಂಡೆ
ಎತ್ತಿಗೋಗ ಬ್ಯಾಡ ಎತ್ತಯ್ಯ ದೊರೆಯೆ'
ಎಂದು ದುಕ್ಕಿ ದುಕ್ಕಿಸಿ ಅಳುತ್ತಾಳೆ.[೧೩]

ಅದ್ಕೆ ಎತ್ತಯ್ಯ 'ಯಾರು ಹೇಳಿದರೂ ನಿಲ್ಲೋಲ್ಲ' ಎಂದು ಹೇಳಿ ಹೊರೆಟೇ ಬಿಟ್ಟ. ಈ ವಿಚಾರ ತಿಳಿದ ಗುಡ್ಡದ ಬೋರಿ ಮತ್ತೆ ಎತ್ತಯ್ಯನ ಬೆನ್ನು ಬೀಳುತ್ತಾಳೆ. ಎತ್ತಯ್ಯ ಏನ್ ಅಂದರೂ ಅವಳನ್ನ ಒಪ್ಕಂಬದಿಲ್ಲ. ಅದ್ಕೆ ಸಿಟ್ಟು ಬಂದ ಬೋರಿ ಸಂಡೂರಿನ ಬೊಮ್ಮನನ್ನು ಎತ್ತಯ್ಯನ ವಿರುದ್ಧ ಎತ್ತಿ ಕಟ್ಟುತ್ತಾಳೆ. ಸಂಡೂರಿನ ಬೊಮ್ಮ ಎತ್ತಯ್ಯನನ್ನು ಮೋಸದಿಂದ ಸೆರೆ ಹಿಡಿದು ಜೈಲಿಗೆ ತಳ್ಳಿ ನಾನಾ ರೀತಿ ಚಿತ್ರಹಿಂಸೆ ಕೊಡ್ತಾನೆ. ಆದರೂ ಎತ್ತಯ್ಯನಿಗೆ ಏನೂ ಆಗುವುದಿಲ್ಲ. ಕೊನೆಗೆ ದಾಸಯ್ಯನ ವೇಷ ಧರಿಸಿ ಹೋಗಿ ಎತ್ತಯ್ಯನ ತಲೆ ಕತ್ತರಿಸಿಕೊಂಡು ಬಂದು ಗುಡ್ಡದ ಬೋರಿಗೆ ತಂದು ಕೊಡುತ್ತಾನೆ. ಅವಳು ಎತ್ತಯ್ಯನ ತಲೆಯನ್ನು ಪೀಠ ಮಾಡಿಕೊಂಡು ಇನ್ನೇನು ಸ್ನಾನ ಮಾಡಬೇಕು ಎನ್ನುವಷ್ಟರಲ್ಲಿ ಎತ್ತಯ್ಯನ ಬಾಮೈದ ವಲಿಗಾನಿ ಬಂದು ಸಂಡೂರು ಬೊಮ್ಮನ ತಲೆ ಕತ್ತರಿಸಿ ಎತ್ತಯ್ಯನ ತಲೆಯನ್ನು ತಂದು ರುಂಡ ಮುಂಡ ಜೋಡಿಸಿ ಮೂರು ಹೆಜ್ಜೆ ನಡೆಸುತ್ತಾನೆ. ಆದರೆ ಎತ್ತಯ್ಯ ಎಂಜಲು ಜನ್ಮ ಹೊರಲಾರೆ ಎಂದು ತಳುಕಿನ ಗುಡ್ಡದಾಗೆ ಪ್ರಾಣ ಬಿಡ್ತಾನೆ. ಅವನೊಂದಿಗೆ ಹೋದಂತ ವಲಿಗಾನಿ, ಆವಿನ ಗೂಡು, ಎಲ್ಲಾ ಹಸುಗಳು ಅಲ್ಲಿಯೇ ಸಾಯುತ್ತವೆ ಅಂತ ಹೇಳ್ತಾರೆ.

ಹೀಗೆ ಕಾಡುಗೊಲ್ಲರ ಸಾಂಸ್ಕೃತಿಕ ನಾಯಕನಾದ ಎತ್ತಪ್ಪ ಗೊಲ್ಲರಿಗೆ ಪಶುಪಾಲಕ ದೈವವಾಗಿದ್ದಾನೆ. ಈತನನ್ನು ಹಾಲಿನ ಸಮೃದ್ಧಿಯ ದೈವವೆಂದು ಅನೇಕ ಸಂಪ್ರದಾಯದ ಮೂಲಕ ಹಬ್ಬ ಹರಿದಿನ ಜಾತ್ರೆಗಳಂತಹ ಆಚರಣೆಗಳನ್ನು ಕಾಡುಗೊಲ್ಲರು ಬಲು ನಿಷ್ಠೆಯಿಂದ ಮಾಡುವುದನ್ನು ಕಾಣಬಹುದು

**ಗೂಡಿನ ಹಬ್ಬ:** ಇದು ಕಾಡುಗೊಲ್ಲರಿಗೆ ದೀಪಾವಳಿಗಿಂತಲೂ ವಿಶೇಷವಾದ ಮುಖ್ಯವಾದ ಹಬ್ಬ. ಎತ್ತಪ್ಪನನ್ನು ನೆನೆಯುವ ತಮ್ಮ ಗೋಸಂಸ್ಕೃತಿಯನ್ನು ಆರಾಧಿಸುವ, ತಮ್ಮ ಗೂಡಿನಲ್ಲಿರುವ ದನ, ಕರು, ಕುರಿಗಳ ಹಿಂಡು ಹೆಚ್ಚಲಿ ಎಂದು ನಡೆಸುವ ಫಲಸಮೃದ್ಧಿಯ ಹಬ್ಬ ಎಂದರೆ ತಪ್ಪಾಗಲಾರದು.

**ಹಾಲು ಮೀಸಲು:** ಎತ್ತಪ್ಪ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ತಳುಕಿನ ಗುಡ್ಡದಲ್ಲಿ ಮಡಿದಿದ್ದಾನೆ ಎಂದು ಆ ಗುಡ್ಡಕ್ಕೆ ಪ್ರತಿವರ್ಷ ಕಾಡುಗೊಲ್ಲರು ಹಾಲು ಮೀಸಲು ಹೊಯ್ಯುತ್ತಾರೆ. ಪ್ರತಿವರ್ಷ ಆಷಾಡಮಾಸದ ಕಾರುಹುಣ್ಣಿಮೆಯಿಂದ ಪ್ರಾರಂಭಿಸಿ ಶ್ರಾವಣದವರೆಗೂ ಹಾಲುಮೀಸಲು ಹೊತ್ತು ತರುತ್ತಾರೆ. ಅದಕ್ಕಾಗಿಯೇ ಆ ಗುಡ್ಡಕ್ಕೆ ಹಾಲುಗುಡ್ಡ ಎಂದೂ ಕರೆಯುವುದುಂಟು. ಇದು ವಿಶಿಷ್ಟಆಚರಣೆಗಳಿಂದ ಕೂಡಿದ ಹಬ್ಬವಾಗಿದೆ. ತಮ್ಮ ಜನಾಂಗದ ಮೊದಲ ಸಾಂಸ್ಕೃತಿಕ ವೀರನಾಗಿದ್ದ ಎತ್ತಪ್ಪನಿಗೆ ಗೌರವಪೂರ್ವಕವಾದ ಕೃತಜ್ಞತೆಯನ್ನು ಸೂಚಿಸುವ ಹಬ್ಬವಾಗಿದೆ.

**ಎತ್ತಪ್ಪನ ಹಬ್ಬ:** ತಳುಕಿನ ಗುಡ್ಡದಿಂದ ಅಂದರೆ ಎತ್ತಪ್ಪನ ಸಮಾಧಿಯಿಂದ ದೂರವಿರುವ ಹಳ್ಳಿಯವರು ಅಂದರೆ ಕೇವಲ ಎತ್ತಪ್ಪನ ಕೇಂದ್ರಗಳಿರುವ ಕೆಲವೇ ಕೆಲವು ಹಳ್ಳಿಯವರು ಕೂಡಿ ಮತ್ತೊಂದು ಬಗೆಯ ಆಚರಣೆಯ ಮೂಲಕ ಎತ್ತಪ್ಪನನ್ನು ಆರಾಧಿಸುವ ವಿಶೇಷ ಸಂಪ್ರದಾಯವಿದು. ಸುಮಾರು ಐದು-ಆರು ವರ್ಷಗಳಿಗೊಮ್ಮೆ ನಡೆಸುವ ಈ ಹಬ್ಬವನ್ನು 'ದೊಡ್ಡ ದೇವರು ಮಾಡುವುದು' ಎನ್ನುತ್ತಾರೆ. ಈ ಹಬ್ಬ ಮೂರು ದಿನ ನಡೆಯುತ್ತದೆ. ಈ ಮೂರು ದಿನ ಹಟ್ಟಿಯ ಜನ ಹೊರಗಡೆ ಹೋಗುವಂತಿಲ್ಲ. ಹಾಗೆ ಹೊರಗಿನ ಜನರೂ ಹಟ್ಟಿಗೆ ಬರುವಂತಿಲ್ಲ. ಹಾಗೇನದರೂ ಹಟ್ಟಿಯೊಳಗಡೆ ಬರಲೇಬೇಕಾದರೆ ಸ್ನಾನ ಮಾಡಿ ಬರಬೇಕು.

ಹಬ್ಬದ ಮೊದಲ ದಿನ ಹಟ್ಟಿಯಲ್ಲಿನ ಎಲ್ಲರೂ ಸೇರಿ ಹತ್ತಿರದಲ್ಲಿರುವ ಯಾವುದಾದರೂ ಹೊಳೆಗೆ ಹೋಗಿ ಸ್ನಾನ ಮಾಡಿ ಬರುತ್ತಾರೆ. ಇದನ್ನು ಹಟ್ಟಿ ಬೆಳಗಾಗುವುದು ಅಥವಾ ನೀರಾಕೆ ಬೀಳಾದು ಎನ್ನುತ್ತಾರೆ. ಈ ಸಮಯದಲ್ಲಿ ಎತ್ತಪ್ಪ ದೇವರನ್ನು ಜಲಧಿಗೆ ಕರೆದುಕೊಂಡು ಹೋಗುತ್ತಾರೆ.

ಮೂರನೆ ದಿನ ಹಾಲು ಕರೆದು ತಂದು ಗುಡಿಯ ಪೌಳಿಯಲ್ಲಿ ಇಡುತ್ತಾರೆ. ಆ ಪೌಳಿಯ ಒಳಗಡೆ ನೀರನ್ನು ಬೆರಸಿಕೊಂಡ ಕುರಿಪಿಚ್ಚಿಗೆಗಳಿಂದ ಒಂದುವರೆ ಅಡಿ ಅಗಲ ಎತ್ತರದ ಕಟ್ಟೆಯನ್ನು ಕಟ್ಟಿ ಅದರೊಳಗೆ ಬೆನವನನ್ನು ಇಡುತ್ತಾರೆ. ಈ ಬೆನವ ಎತ್ತಪ್ಪನನ್ನು ಸಂಕೇತಿಸುತ್ತದೆ. ಈ ಕಟ್ಟೆಯೊಳಕ್ಕೆ ಪೂಜಾರಿಯನ್ನೊಳಗೊಂಡಂತೆ ಎತ್ತಪ್ಪನ ಬೆಡಗಿಗೆ ಸೇರಿದ ಮಾರನೋರು ಗೊಲ್ಲರೆಲ್ಲರೂ ಹಾಲು ಬಿಡುತ್ತಾರೆ. ಕುರಿಹಟ್ಟಿಯಲ್ಲಿರುವವರು ಕುರಿಹಟ್ಟಿಗಳಲ್ಲಿಯೇ ಈ ರೀತಿ ಕಟ್ಟೆ ಕಟ್ಟಿ ಅಲ್ಲಿಯೇ

ಹಾಲು ಬಿಡುತ್ತಾರೆ. ಈ ಹಾಲು ಬಿಡುವ ಕ್ರಿಯೆ ಮುಗಿದ ನಂತರ ಅಗಲವಾದ ಪುಟ್ಟಿ ಅಥವಾ ಕಂಬಳಿಯಿಂದ ಹಾಲು ಕಟ್ಟೆಯನ್ನು ಮುಚ್ಚುತ್ತಾರೆ. ಈ ಪ್ರಕ್ರಿಯೇ ಮುಗಿದ ನಂತರ ಹೊರಗಿನ ಜನ ಹಟ್ಟಿಯನ್ನು ಪ್ರವೇಶಿಸಬಹುದು.

ಹಾಲುಕಟ್ಟೆಯ ಈ ವಿಶಿಷ್ಟ ಆಚರಣೆಯಿಂದ ಎತ್ತಪ್ಪನನ್ನು ಹಾಲಿನ ಫಲ ಸಮೃದ್ಧಿಯ ದೇವರೆಂದು ಕಾಡುಗೊಲ್ಲರು ಪರಿಗಣಿಸಿದ್ದಾರೆ. ಅವನು ಹಾಲುಪ್ರಿಯನೆಂದು ಹಾಲಡಿಗೆ ಬಿಟ್ಟರೆ ಬೇರೆ ಉಂಡವನಲ್ಲ ಎಂದು ಹೇಳುತ್ತಾರೆ. ಹಾಗಾಗಿಯೇ ಈತನನ್ನು ಹಾಲಿನ ದೇವರೆಂದೇ ಕರೆಯುವ ರೀತಿಯಲ್ಲಿ ಈ ಸಂಪ್ರದಾಯ ಸಮರ್ಥಿಸುತ್ತದೆ.

'ಎತ್ತಪ್ಪನ ಈ ಸಂಪ್ರದಾಯ ಚಿತ್ರದುರ್ಗ ಜಿಲ್ಲೆಯ ಪೂರ್ವಭಾಗ ಮತ್ತು ಆಂಧ್ರಪ್ರದೇಶದ ಮಡಕಶಿರ ಭಾಗದಲ್ಲಿ ದಟ್ಟವಾಗಿದೆ. ಚಿತ್ರದುರ್ಗ ಜಿಲ್ಲೆಯ ವೇಣುಕಲ್ಲುಗುಡ್ಡದಲ್ಲಿ ಎತ್ತಪ್ಪ ಬಳಸುತ್ತಿದ್ದನೆಂದು ಹೇಳುವ ಮಂಚವನ್ನೇ ಪೂಜಿಸುತ್ತಿದ್ದಾರೆ. ತುಮಕೂರು ಜಿಲ್ಲೆಯ ಜಂಗಮರಹಳ್ಳಿಯಲ್ಲಿ ಎತ್ತಪ್ಪನ ಮದುವೆಯ ಸಂದರ್ಭದಲ್ಲಿ ಬಳಸಿದ ಕಳಶವನ್ನೇ ಪೂಜಿಸುವುದಾಗಿ ಹೇಳುತ್ತಾರೆ. ಆಂಧ್ರಪ್ರದೇಶದ ಗುಂತಕಲ್ ಹಟ್ಟಿಯಲ್ಲಿ ಎತ್ತಪ್ಪ ಬಳಸುತ್ತಿದ್ದ ಪಟ್ಟೆ ದಟ್ಟಿಯನ್ನೇ ಪೂಜಿಸುವುದಾಗಿ ಹೇಳುತ್ತಾರೆ'.[೧೪]

**ಜುಂಜಪ್ಪ:**

ಜುಂಜಪ್ಪನ ಕತೆ ವೈವಿಧ್ಯಮಯ ಪ್ರಕಾರಗಳಲ್ಲಿ ದೊರೆಯುತ್ತದೆ. ಅದು ಕತೆ, ಗದ್ಯಕತೆ, ಹಾಡ್ಗತೆ, ಕೋಲಾಟಪದಗಳು, ಕಗ್ಗದ ಪದಗಳಲ್ಲಿ ದೊರೆಯುತ್ತದೆ. ಈತನ ಕತೆ ಎರಡು ದಿಕ್ಕುಗಳಲ್ಲಿ ಬೆಳೆದು ಉತ್ತರ ಮತ್ತು ದಕ್ಷಿಣ ಎಂಬ ಎರಡು ಸಂಪ್ರದಾಯಗಳನ್ನೇ ಹುಟ್ಟುಹಾಕಿದೆ. ಈ ಎರಡು ಸಂಪ್ರದಾಯಗಳಲ್ಲಿಯೂ ಅಧ್ಯಯನ ನಡೆದಿದ್ದು ಜೀ.ಶಂ. ಪ, ತೀ.ನಂ.ಶಂಕರನಾರಾಯಣ, ಕಾಳೇಗೌಡ ನಾಗಾವಾರ, ಅಂಬಳಿಕೆ ಹಿರಿಯಣ್ಣ, ಕೃಷ್ಣಮೂರ್ತಿ ಹನೂರು, ಮೀರಾಸಾಬಿಹಳ್ಳಿ ಶಿವಣ್ಣ ಮುಂತಾದವರು ಅಧ್ಯಯನ ಮಾಡಿದ್ದಾರೆ.

ಜುಂಜಪ್ಪನ ಕತೆಯನ್ನು ಸಂಕ್ಷಿಪ್ತವಾಗಿ ನೋಡುವುದಾದರೆ,

ಮಲೆಗೊಂಡನ ಹೆಂಡತಿ ಚಿನ್ನಮ್ಮನ ಹೊಟ್ಟೆಯಲ್ಲಿ ಗೌರಸಂದ್ರ ಮಾರಮ್ಮನ ಮಧ್ಯಸ್ಥಿಕೆಯಲ್ಲಿ ಶಿವ ಪಾರ್ವತಿಯರ ಹತ್ತಿರದಲ್ಲಿದ್ದ ವೀರಭದ್ರ ಭೂಲೋಕದಲ್ಲಿ ಜುಂಜಪ್ಪನಾಗಿ ೧೬ ವರ್ಷಗಳ ನಂತರ ಹುಟ್ಟುತ್ತಾನೆ. ಚಿನ್ನಮ್ಮನಿಗೆ ಒಂಬತ್ತು ತಿಂಗಳಿದ್ದಾಗ ಗರ್ಭದಲ್ಲಿಯೇ ಕೂಸು ಮಾತನಾಡಿ 'ನಾನು ನಿನ್ನ ಬೆನ್ನಲ್ಲಿ ಒಡಮೂಡ್ತಿನಿ' ಎಂದು ಹೇಳಿದ. ಹೀಗೆ ಆಗಾಗ ಹೊಟ್ಟೆಯಲ್ಲಿಯೇ ಮಾತನಾಡುವ ಕೂಸನ್ನು ಕಂಡ ಚಿನ್ನಮ್ಮ ಇದೇನು ಪೀಡೆನೋ, ಪಿಶಾಚಿನೋ, ದೆವ್ವನೋ ಎಂದು ಭಾವಿಸಿ ಭಯ ಭೀತಳಾಗುತ್ತಿದ್ದಳು.

ಒಂಬತ್ತು ತಿಂಗಳು ತುಂಬಿ ಹೆರಿಗೆ ನೋವು ಬಂದು ಹೆರಿಗೆ ಮಾಡಿಸಲು ಸೂಲಗಿತ್ತಿ ಸಂಗವ್ವ ಬಂದಾಗ 'ಸಂಗವ್ವ ಎಲ್ಲಿ ತನ್ನನ್ನ ಮೈಲಿಗೆ ಮಾಡುತ್ತಾಳೋ' ಎಂದು ಆಕೆಯನ್ನು ಜೀಳಿಸುತ್ತಾನೆ.

ಅಷ್ಟೇ ಅಲ್ಲದೆ ಅನೇಕ ರೀತಿಯ ಕಾಟಗಳನ್ನು ಕೊಡುತ್ತಾನೆ. ತಾನೇ ತನ್ನ ತಾಯಿಯ ಬೆನ್ನಿಂದ ಹುಟ್ಟಿದ. ಹುಟ್ಟಿದವನೆ ಮೂಗುಹುತ್ತದ ಮೇಲೆ ಹೋಗಿ ಕುಳಿತುಕೊಂಡ. ಐದು ದಿನದ ನಂತರ ಚಿನ್ನಮ್ಮ ಕರೆದು ಹಾಲು ಕುಡಿಸಿದಳು.

ಸೂತಕದ ಕಾಲ ಕಳೆದ ಮೇಲೆ ಹಟ್ಟಿಗೆ ಹೋಗುವ ಮುಂಚೆ ಮಗುವಿಗೆ ಜೆನಿಗೆ ಹಾಕಿಸಿ ನಾಮಕರಣ ಮಾಡಲು ಕಳುವಾರಳ್ಳಿಗೆ ಸಮೀಪದಲ್ಲಿರುವ ಮನೆದೇವರು ಕಲ್ಲನಕುಂಟೆಗೆ ಹೋಗಬೇಕೆಂದು ಕೊಂಡಳು. ಆದರೆ ಮಗು 'ನಮ್ಮ ಮುತ್ತಿಗಳು ಇರೋ ಕೊಂಕಿ ಜರಿಮಲೆ ಸೀಮೆಯ ಹಿರಿಯಟ್ಟಿಗೆ ಜೆನಿಗಿಗೆ ನಡಿ ಎಂದಿತು. ಅಲ್ಲಿಗೆ ತಿಂಗಳ ಪಯಣ. ನಾನು ಒಂಟಿ ಹೆಂಗಸು, ಕಾಣದ ದೇಶ ಹೇಗೋ ಎತ್ತೋ ಏನು ಮಾಡಲಿ ಎಂದು ಯೋಚಿಸುತ್ತಿರಲು ನಾ ದಾರಿ ತೋರಿ ಕೊಡುವೇ 'ಊರ ವಲೆಮಾರೆ ದಾಟೋವರೆಗೂ ತೊಟ್ಟಿಲು ತಗೊಂಡು ಬಾ. ಆಮೇಲೆ ಆಕಾಶ ಮಾರ್ಗದಾಗೆ ಕರೆದುಕೊಂಡು ಹೋಗ್ತಿನಿಎಂದು ಹೇಳಿತು.

ಹೀಗೆ ತನ್ನ ತಾಯಿಗೆ ಅನೇಕ ಪರೀಕ್ಷೆಗಳನ್ನು ಕೊಡುತ್ತಾನೆ.

- ಹದಿನಾಲ್ಕು ಕಮರದ ಒನಕೆಗಳ ಒಳನಾರನ್ನು ತೆಗೆಯುವುದು.
- ಮೂಗುಹುತ್ತಕ್ಕೆ ಕೈಯಿಟ್ಟು ಅದರೊಳಗಿರುವ ನಾಗರಹಾವನ್ನು ಎಳೆದು ಅದರ ಕಟವಾಯನ್ನು ಸಿಗಿದು, ಆ ಹಾವನ್ನು ಸಿಂಬೆ ಮಾಡಿ ತಲೆಯ ಮೇಲಿಟ್ಟುಕೊಂಡು ಅದರ ಮೇಲೆ ಸಣ್ಣ ಕಣ್ಣಿನ ಜರಡಿಯಲ್ಲಿ ನೀರು ತುಂಬಿಕೊಂಡು ಆ ಸಿಂಬೆಯ ಮೇಲಿಟ್ಟುಕೊಂಡು ಒಂದು ಹನಿ ನೀರು ನೆಲಕ್ಕೆ ಚೆಲ್ಲದಂತೆ ಸಭೆಯನ್ನು ಒಂಬತ್ತು ಸುತ್ತು ಸುತ್ತುವುದು.
- ಸತ್ತಿರುವ ಕೆಂಗುರಿ ಮಲ್ಲೇಗೌಡನನ್ನು ಸಮಾಧಿಯಿಂದ ಎಬ್ಬಿಸಿ 'ಚಿನ್ನಮ್ಮ ಪಾಪಿಯಲ್ಲ, ಅವಳು ಪತಿವ್ರತೆ. ನನಗೆ ಹಾಸಿದ ಸೆರಗನ್ನು ಅವಳು ಬೇರೆ ಯಾರಿಗೂ ಹಾಸಿಲ್ಲ' ಎಂದು ಅವನಿಂದ ಹೇಳಿಸುವುದು.
- ದೊಡ್ಡ ಕಣ್ಣಿನ ಜರಡಿಯಲ್ಲಿ ನೀರು ತುಂಬಿಕೊಂಡು ಒಣಗಿದ ಅರಳಿಮರದ ಗಿಡಕ್ಕೆಹಾಕಿ ಆ ಮರವನ್ನು ಚಿಗುರಿಸುವುದು.
- ಹದಿನಾಲ್ಕು ಕೆರೆ ಕಟ್ಟಿಸಬೇಕು. ಚಿನ್ನಮ್ಮ ಒಂದು ಕಡೆ ನಿಂತು ತನ್ನ ಎದೆಯಿಂದ ಹಾಲನ್ನು ಕರೆಯಬೇಕು. ಆ ಎದೆಹಾಲು ಒಂದೇ ದಾರದಂತೆ ಹದಿಮೂರು ತೆರೆಗಳ ಮೂಲಕ ಹಾಯ್ದು ಬಂದು ಹದಿನಾಲ್ಕು ಕೆರೆಗೆ ಬಂದಾಗ ನಾಲ್ಕು ಭಾಗವಾಗಿ ಜುಂಜಪ್ಪ, ಮಾರಣ್ಣ, ಮೈಲಣ್ಣ, ಮಾರಕ್ಕ ಈ ನಾಲ್ಕು ಜನ ಮಕ್ಕಳ ಬೊಗಸೆಗೂ ಬಿದ್ದು ತುಂಬಿ ಹರಿಯಬೇಕು.

ಜುಂಜಪ್ಪನ ಈ ಎಲ್ಲಾ ಪರೀಕ್ಷೆಗಳಲ್ಲಿ ಚಿನ್ನಮ್ಮ ಯಶಸ್ವಿಯಾದಳು. ತಾಯಿ ನಿನ್ನನ್ನು ಪರೀಕ್ಷಿಸಿದೆ. ನೀನು ಎಲ್ಲದರಲ್ಲೂ ಗೆದ್ದೆ. ಸಾಕು ಬಿಡಮ್ಮ ನೀನು ಪತಿವ್ರತೆ. ನಿನ್ನ ಸತ್ಯ ನನಗೆ ಗೊತ್ತಾಯಿತು ಎಂದು ಹೇಳಿದನು. ನಂತರ ಚಿನ್ನಮ್ಮನಿಗೆ ಮಾರಕ್ಕ ಎನ್ನುವ ಹೆಣ್ಣು ಮಗು

ಜನಿಸಿತು. ಅದನ್ನು ಸೋದರ ಮಾವನಿಗೆ ಕೊಟ್ಟು ಮದುವೆ ಮಾಡಿದರು. ಮಾರಮ್ಮನನ್ನು ಗಂಡನ ಮನೆಗೆ ಕಳುಹಿಸಿದ ಮೇಲೆ ಚಿನ್ನಮ್ಮನಿಗೆ ಮೊದಲಿದ್ದ ಸಿರಿ ಮತ್ತೆ ಮರಳಿ ಬಂತು. ಏಕೆಂದರೆ ಮನೆಯಲ್ಲಿದ್ದ ಮಾರಿ ಹೊರಟು ಹೋಗಿದ್ದಕ್ಕೆ. ಚಿನ್ನಮ್ಮ ಹಂಚಿಹುಲ್ಲಿನ ಅರಮನೆಯಲ್ಲಿ ಸುಖವಾಗಿ ಜೀವನ ಮಾಡುತ್ತಿದ್ದಳು. ಜುಂಜಪ್ಪ ತನ್ನ ಸೋದರ ಮಾವಂದಿರು ಕೊಟ್ಟಿದ್ದ ಏಳು ಕರುಗಳನ್ನು ಮೇಯಿಸಿಕೊಂಡು ಅವುಗಳಿಂದ ಏಳು ಗೂಡುಗಳನ್ನು ಮಾಡಿಕೊಂಡು ಅವುಗಳನ್ನು ಮಾರಣ್ಣ, ಮೈಲಣ್ಣ, ಗೋಲಿ ಗಜ್ಜುಗರೊಂದಿಗೆ ಮೇಯಿಸಿಕೊಂಡಿದ್ದನು.

**ಹೀಗೆ ದನಗಳನ್ನು ಕಾಯ್ದುಕೊಂಡಿರುವಾಗ ಅನೇಕ ಸಾಹಸಗಳನ್ನು ಮೆರೆಯುತ್ತಾನೆ.**

- ಬಡಮೈಲನನ್ನು ಸಂಪಾದಿಸಿದ ಪ್ರಸಂಗ
- ಹುಲಿಕುಂಟೆ ತಮ್ಮಣ್ಣನಿಂದ ಕೆರೆಗೆ ಮದ್ದಿಡಿಸುವ ಪ್ರಸಂಗ
- ಮರಡಿ ರಂಗಣ್ಣನಿಗೆ ಬುದ್ದಿ ಕಲಿಸಿದ ಪ್ರಸಂಗ
- ಸಾಣಿಕೆರೆ ಪುಟ್ಟಣ್ಣನಿಂದ ಪಂಪು ಹೊಡಿಸುವ ಪ್ರಸಂಗ
- ತಾಳೆದುರ್ಗಿಯನ್ನು ಕೊಂದ ಪ್ರಸಂಗ
- ಜಾನಕಲ್ ದೊಡ್ಡಕ್ಕನಿಗೆ ಬುದ್ಧಿ ಕಲಿಸಿದ ಪ್ರಸಂಗ

ಇಲ್ಲೆಲ್ಲಾ ಜುಂಜಪ್ಪ ತನ್ನ ಶಕ್ತಿ ಸಾಮರ್ಥ್ಯ ಸಾಹಸ ಪವಾಡಗಳನ್ನು ಮೆರೆಯುವ ಮೂಲಕ ತಾನು ದೈವಿ ಸಂಭೂತ ಎನ್ನುವುದನ್ನು ತೋರಿಸುತ್ತಾ ಹೋಗುತ್ತಾನೆ. ಅವನ ಈ ಪರಾಕ್ರಮವನ್ನು ಕಂಡು ಅವನನ್ನು ಅಡಗಿಸಬೇಕೆಂದು ಅವನ ಸೋದರ ಮಾವಂದಿರು ಅವನನ್ನು ಕೊಲ್ಲಲು ಹೊಂಚು ಹಾಕುತ್ತಿದ್ದರು. ಸಿದ್ಧರನ್ನು ಕಂಡು ಜುಂಜಪ್ಪನನ್ನು ಸಾಯಿಸಬೇಕೆಂದು ಕೇಳಿಕೊಂಡರು. ಸಿದ್ಧರಿಂದಲೇ ಕಾಗದ ಬರೆಸಿ ಜುಂಜಪ್ಪನನ್ನು ರೊಚ್ಚಿಗೆಬ್ಬಿಸಿ ಅವನನ್ನು ಸಿದ್ಧರಕಾವಲಿಗೆ ದನಗಳನ್ನು ಮೇಯಿಸಲು ಹೋಗುವಂತೆ ಮಾಡಿದರು. ಅಲ್ಲಿ ಸಿದ್ಧರು ಜುಂಜಪ್ಪನನ್ನು ಸೆರೆಹಿಡಿದು ಹುಲಿಬೋನಿಗೆ ಕೂಡಿಹಾಕಿದರು. ಅವರ ಎಣಿಕೆಯಂತೆ ಹುಲಿ ಜುಂಜಪ್ಪನನ್ನು ಕೊಲ್ಲದೆ ಅವನೊಡನೆ ಮಾತನಾಡುತ್ತಾ ಕುಳಿತಿತ್ತು. ಇದನ್ನು ಕಂಡ ಸಿದ್ಧರಿಗೆ ಆಶ್ಚರ್ಯವಾಗಿ ಜುಂಜಪ್ಪ ಒಬ್ಬ ಮಹಾಪುರುಷನೆಂಬುದನ್ನು ತಿಳಿದು ಅವನಿಗೆ ಶರಣಾಗತರಾದರು.

ಸೋದರಮಾವಂದಿರಿಗೆ ತಮ್ಮೆಲ್ಲಾ ಆಲೋಚನೆಗಳು ವಿಫಲವಾಗುತ್ತಿದ್ದರಿಂದ ಸಂಕಟವಾಗಿ ಕೊನೆಗೆ ಇವನನ್ನು ಕೊಲ್ಲದಿದ್ದರೆ ನಾವು ಬದುಕುವುದೇ ಅಸಾಧ್ಯವೆಂದು ಭಾವಿಸಿದರು. ಅವನಿಗೆ ವಿಷ ಹಾಕುವುದೆ ಸರಿಯಾದ ಮಾರ್ಗವೆಂದು ನಿರ್ಧರಿಸಿದರು. ಕುಂಬಾರ ಗುಂಡಣ್ಣನಿಗೆ ಏಳು ಕರಗದ ಹೊನ್ನು ಕೊಟ್ಟು ಒಂದು ಮಡಿಕೆಯನ್ನು ತಯಾರಿಸಿದರು. ಈ ಸೋದರಮಾವರಲ್ಲಿ ಕಡೆಯವನಿಗೆ ಜುಂಜಪ್ಪನ ತಂಗಿಯಾದ ಮಾರಕ್ಕನನ್ನು ಕೊಟ್ಟು ವಿವಾಹ ಮಾಡಿದ್ದರು. ಆಕೆಗೆ ಬಲವಂತದಿಂದ ಜುಂಜಪ್ಪನಿಗೆ ವಿಷ ಉಣಿಸುವ ಕಾರ್ಯವನ್ನು ಒಪ್ಪಿಸಿದರು. ತನ್ನ ಅಣ್ಣನನ್ನು ನಾನೇ

ವಿಷವಿಕ್ಕಿ ಕೊಲ್ಲಬೇಕಲ್ಲ ಎಂಬ ದುಃಖದಿಂದಲೇ ದತ್ತೂರಿ ಮದ್ದನ್ನು ಸೇರಿಸಿ ಅಡುಗೆ ಮಾಡಿದಳು. ಸೋದರ ಮಾವಂದಿರು ನಾವು ಜಿಲ್ಲು ಹಬ್ಬದ ಅಡುಗೆ ಮಾಡಿಸಿರುವುದಾಗಿ ಹಬ್ಬದೂಟಕ್ಕೆ ಜುಂಜಪ್ಪ, ಮಾರಣ್ಣ, ಮೈಲಣ್ಣರನ್ನು ಕಳುಹಿಸಿಕೊಡಬೇಕಾಗಿ ಚಿನ್ನಮ್ಮಳಲ್ಲಿ ಕೇಳಿದರು. ತನ್ನ ಸೋದರ ಮಾವಂದಿರು ಈ ನೆಪದಲ್ಲಿ ತನಗೆ ಮತ್ತು ತನ್ನ ತಮ್ಮಂದಿರಿಗೆ ವಿಷ ಹಾಕಬೇಕೆಂದಿದ್ದಾರೆ ಎಂಬ ವಿಷಯ ಜುಂಜಪ್ಪನಿಗೆ ತಿಳಿದಿತ್ತು. ಆದ್ದರಿಂದ ತಾವು ಹಬ್ಬಕ್ಕೆ ಹೋಗುವುದಿಲ್ಲವೆಂದು ಹಟ ಮಾಡಿದ. ಆದರೆ ತಾಯಿಯ ಬಲವಂತಕ್ಕೆ ಮಣಿದು ತನ್ನ ತಮ್ಮಂದಿರೊಂದಿಗೆ ಸೋದರಮಾವರು ವಾಸವಾಗಿದ್ದ ಕಂಬೇರಹಟ್ಟಿಗೆ ಹೋದ.

ಜುಂಜಪ್ಪನಿಗೆ ಹದಿನಾರು ವರ್ಷ ತುಂಬಿತ್ತು. ಅವನ ಆಯುಷ್ಯ ಮುಗಿದಿತ್ತು. ಹಾಗಾಗಿ ವಿಷ ಹಾಕಿದ್ದು ತಿಳಿದಿದ್ದರೂ ಊಟ ಮಾಡಲು ಸಿದ್ದನಾದನು. ಮಾರಕ್ಕ ಊಟ ಬಡಿಸಲು ಒಪ್ಪದೆ ಒಂದೇ ಸಮನೆ ಅಳುತ್ತಿದ್ದಳು. ಕೊನೆಗೆ ಜುಂಜಪ್ಪನೇ ಅವಳನ್ನು ಸಮಾಧಾನ ಪಡಿಸಿ ಇದರಲ್ಲಿ ನಿನ್ನ ತಪ್ಪೇನಿಲ್ಲ ಎಂಬುದನ್ನು ಸ್ಪಷ್ಟವಾಗಿ ತಿಳಿಸಿದ ಮೇಲೆ ಆಕೆ ದುಃಖಿತಳಾಗಿಯೇ ಊಟ ಬಡಿಸಿದಳು. ಮಾರಣ್ಣ ಮತ್ತು ಮೈಲಣ್ಣರ ಮಧ್ಯದಲ್ಲಿ ಕುಳಿತು ತಾನು ತಿಂದು ಅವರಿಗು ತಿನ್ನಿಸಿದ ಜುಂಜಪ್ಪ ಅವರನ್ನು ಕರೆದುಕೊಂಡು ಹೊನ್ನಹಟ್ಟಿ ಆಲೇಗೌಡನ ಹುಲ್ಲಿನ ಬಣವೆಯನ್ನು ಹೊಕ್ಕನು. ಅಲ್ಲಿ ತನ್ನ ಉರಿಗಣ್ಣು ಬಿಟ್ಟ. ಆ ಬಣವೆಯೊಡನೆ ಆ ಮೂವರು ಸುಟ್ಟು ಬೂದಿಯಾದರು. ಜುಂಜಪ್ಪನು ಸತ್ತನೆಂದು ಈ ಸೋದರ ಮಾವಂದಿರು ಸಂತೋಷದಿಂದ ಗೆಜ್ಜೆಕೋಲಾಟವಾಡುತ್ತಿದ್ದರು. ಜುಂಜಪ್ಪ ಸತ್ತು ಏಳು ದಿನಗಳಾದ ಮೇಲೆ ಮತ್ತೆ ಭೂಲೋಕದಲ್ಲಿ ಕಾಣಿಸಿಕೊಂಡ. ಇವರ ಸಂತೋಷವನ್ನು ನೋಡಿ ಕೋಪಗೊಂಡು ತನ್ನ ತಂಗಿಯನ್ನಷ್ಟೇ ಉಳಿಸಿ ಉಳಿದವರನ್ನೆಲ್ಲಾ ತನ್ನ ಉರಿಗಣ್ಣಿನಿಂದಲೇ ಸುಟ್ಟುಬಿಟ್ಟ. ಆ ಸಮಯದಲ್ಲಿ ಬಸುರಿಯಾಗಿದ್ದ ಮಾರಕ್ಕನ ಮಕ್ಕಳಿಂದ ಕಂಬಿಯ ಗೊಲ್ಲರ ವಂಶ ಮುಂದುವರೆಯಿತು. ಜುಂಜಪ್ಪ ಕಂಬೇರಹಟ್ಟಿಯ ದಕ್ಷಿಣದಿಕ್ಕಿನಲ್ಲಿ ಕಳುವೋರಹಳ್ಳಿಯಲ್ಲಿ ಸಮಾಧಿಯಾದ. ಅಳುವಿನವರ ಒಕ್ಕಲಿನವರು ಜುಂಜಪ್ಪನನ್ನು ತಮ್ಮ ದೇವರೆಂದು ಪೂಜಿಸ ತೊಡಗಿದರು. ಹಾಗಾಗಿ ಜುಂಜಪ್ಪನನ್ನು ಪೂಜಿಸುವ ಹಕ್ಕು ಬಹಳ ವರ್ಷಗಳ ಕಾಲ ಅಳುವಿನವರ ಒಕ್ಕಲಿಗರಿಗೇ ಸೇರಿತ್ತು. ಈ ಹಕ್ಕನ್ನು ಪಡೆಯಲು ಕಾಡುಗೊಲ್ಲರು ಅನೇಕ ವರ್ಷ ಶ್ರಮ ಪಡಬೇಕಾಯಿತು. ಕೊನೆಗೂ ಆ ಹಕ್ಕು ಕಾಡುಗೊಲ್ಲರಿಗೆ ಸಿಕ್ಕಿತು.

ಜುಂಜಪ್ಪ ತನ್ನ ಮರಣ ನಂತರವೂ ಬಡಚಿತ್ತಮ್ಮ ದೇವರು ಮಾಡಿದ ಪ್ರಸಂಗ, ಗಿಡ್ಡೀರೇಗೌಡನಿಗೆ ಬುದ್ಧಿ ಕಲಿಸಿದ ಪ್ರಸಂಗ, ಪೂಜಾರಿ ಜುಂಜಪ್ಪ ದೇವರನ್ನು ಕಟ್ಟಿಟ್ಟ ಪ್ರಸಂಗ ಮುಂತಾದ ಅನೇಕ ಸಾಹಸ ಕಾರ್ಯಗಳನ್ನು ಮಾಡುತ್ತಾನೆ.

'ಕಾಡುಗೊಲ್ಲರ ಕತೆಗಳಲ್ಲಿಯೇ ಜುಂಜಪ್ಪನ ಕತೆಗೆ ವಿಶಿಷ್ಟ ಸ್ಥಾನವಿದೆ. ಒಂದು ಜನಾಂಗದ ದಟ್ಟ ಧಾರ್ಮಿಕ ಹಿನ್ನಲೆಯನ್ನು ಒದಗಿಸುತ್ತಾ, ಮೂರು ತಲೆಮಾರುಗಳ ಏಳು-ಬೀಳಿನ ಚಿತ್ರಣ ಕೊಡುವುದರೊಂದಿಗೆ ಒಂದು ಜನಾಂಗದ ಇತಿಹಾಸವೂ ಆಗಿಬಿಡುವ ಪರಿ ಅದ್ಭುತವಾಗಿದೆ'. ಎನ್ನುವ ಮೀರಾಸಾಬಿಹಳ್ಳಿ ಶಿವಣ್ಣರವರ ಮಾತು ಸಮರ್ಪಕವಾಗಿದೆ.

ಎತ್ತಪ್ಪನೇ ಕಾಡುಗೊಲ್ಲರ ಪ್ರಥಮ ಸಾಂಸ್ಕೃತಿಕ ವೀರ. ಆತನೇ ಜನಾಂಗದ ರೀತಿ ನೀತಿ, ನಿಯಮ, ಆಚರಣೆಗಳನ್ನು ರೂಪಿಸಿದವನು. ಮೂರು ದುಡ್ಡಿನಿಂದ ಇಪ್ಪತ್ತು ದುಡ್ಡಿನವರೆಗೂ ತಪ್ಪುಗಳನ್ನು ವಿಧಿಸಿದವನು. ಆದರೆ ಕಾಡುಗೊಲ್ಲ ಜನಾಂಗದ ಅತ್ಯಂತ ಜನಪ್ರಿಯ ಸಾಂಸ್ಕೃತಿಕ ವೀರನಾಗಿ ವಿಜೃಂಭಿಸಿದವನು ಜುಂಜಪ್ಪ. ಗೋವುಗಳ ರಕ್ಷಣೆಗಾಗಿ ಜೀವದ ಹಂಗು ತೊರೆದು ಹೋರಾಡಿದವನು. ತನ್ನ ಗೋವುಗಳ ರಕ್ಷಣೆಗಾಗಿ ಜನಾಂಗದ ಒಳಿತಿಗಾಗಿ ಶ್ರಮಿಸುವಾಗ ತನ್ನ ಅಭಿಮಾನಕ್ಕೆ ಚ್ಯುತಿ ಬಂದಾಗ ಕೆರಳಿ ಕೆಂಡವಾಗಿ ಅನೇಕ ಸಾಹಸ ಪವಾಡಗಳನ್ನು ಮೆರೆದವನು. ಈತನ ಹುಟ್ಟಿಗಿಂತ ಮುಂಚೆಯೇ ಕಾಡುಗೊಲ್ಲರಲ್ಲಿ ಗಣೆಕಾವ್ಯಗಳು ಇದ್ದವು. ಆದರೆ ಈತನ ಜೀವನವನ್ನೊಳಗೊಂಡ ಜುಂಜಪ್ಪನ ಕಾವ್ಯದಿಂದ ಗಣೆಕಾವ್ಯ ಎಂಬುದಕ್ಕೆ ಬದಲಾಗಿ ಜುಂಜಪ್ಪನ ಗಣೆ ಎಂಬಂತಹ ಹೊಸ ಸಂಪ್ರದಾಯವನ್ನೇ ಸೃಷ್ಟಿಸಿದವನು.

ಜುಂಜಪ್ಪ-ಎತ್ತಪ್ಪರನ್ನು ಕರಡಿಗೊಲ್ಲರ ಒಳಪಂಗಡವಾದ ಮಾರನೋರು ಬೆಡಗಿಗೆ ಸೇರಿದವರು ಮತ್ತು ಬೇರೆ ಬೆಡಗಿಗೆ ಸೇರಿದ ಕಾಡುಗೊಲ್ಲರು ಕೂಡ ಇವರನ್ನು ಪೂಜಿಸುತ್ತಾರೆ. ಆದರೆ ಮಾರನೋರು ಗೊಲ್ಲರಿಗೆ ಮಾತ್ರ ಇವರು ಮನೆದೇವರು. ಕಾಡುಗೊಲ್ಲರಲ್ಲದೆ ಬೇರೆ ಜನಾಂಗದವರು ಕೂಡ ಜುಂಜಪ್ಪನನ್ನು ಆರಾಧಿಸುತ್ತಾರೆ. ತುಮಕೂರಿನಲ್ಲಿ ಜುಂಜಪ್ಪನ ಆರಾಧನೆ ಹೆಚ್ಚು. ಬೇವಿನಹಳ್ಳಿ, ಹಾಗಲವಾಡಿ ಮತ್ತು ಜುಂಜಪ್ಪ ಸಮಾಧಿಯಾಗಿರುವ ಕಳುವೋರಹಳ್ಳಿ ಸಾಂಸ್ಕೃತಿಕ ಕೇಂದ್ರಗಳು. ಜುಂಜಪ್ಪ ನಡೆದಾಡಿದ ಪವಾಡ ಮೆರೆದ ಸ್ಥಳಗಳಲ್ಲೆಲ್ಲಾ ಜುಂಜಪ್ಪನ ಭಕ್ತಾದಿಗಳಿದ್ದಾರೆ.

ಚಿತ್ರದುರ್ಗ ಜಿಲ್ಲೆಯ ಸುತ್ತ ಮುತ್ತಲಿನ ಕಾಡುಗೊಲ್ಲರಲ್ಲಿ ಎತ್ತಪ್ಪನ ಆರಾಧನೆ ಹೆಚ್ಚು. ಈ ಭಾಗದ ಮಾರನೋರು ಗೊಲ್ಲರು ಜುಂಜಪ್ಪನಿಗಿಂತ ಹೆಚ್ಚಾಗಿ ಎತ್ತಪ್ಪನನ್ನೇ ಆರಾಧಿಸುತ್ತಾರೆ. ಎತ್ತಪ್ಪ ಬಾಳಿ ಬದುಕಿದ ಸ್ಥಳಗಳು, ಓಡಾಡಿದ ಸ್ಥಳಗಳು, ವೇಣುಕಲ್ಲುಗುಡ್ಡ ಮುಂತಾದ ಸಾಂಸ್ಕೃತಿಕ ಕೇಂದ್ರಗಳು ಎತ್ತಪ್ಪ ಮಡಿದು ಸಮಾಧಿಯಾದ ತಳುಕು ಮುಂತಾದ ಕಡೆಗಳಲ್ಲಿ ಈತನ ಭಕ್ತರಿದ್ದಾರೆ. ತುಮಕೂರು ಜಿಲ್ಲೆಯಲ್ಲಿನ ಜುಂಜಪ್ಪನ ಆರಾಧಕರಲ್ಲಿ ದೀಪ ಏರಿಸುವ ಹಬ್ಬ ಬಹಳ ಮುಖ್ಯವಾದರೆ, ಚಿತ್ರದುರ್ಗ ಜಿಲ್ಲೆಯಲ್ಲಿ ಎತ್ತಪ್ಪನ ಗೂಡಿನ ಹಬ್ಬ ಮುಖ್ಯವಾದುದು.

'ಮಧ್ಯಕರ್ನಾಟಕದ ಕಾಡುಗೊಲ್ಲರ ಸಾಂಸ್ಕೃತಿಕ ವೀರರೂ, ಜನಪದ ಮಹಾಕಾವ್ಯಗಳ ನಾಯಕರೂ ಆದ ಎತ್ತಪ್ಪ ಮತ್ತು ಜುಂಜಪ್ಪನವರ ವ್ಯಕ್ತಿತ್ವ ದಕ್ಷಿಣ ಕರ್ನಾಟಕದ ದಲಿತ ಸಿದ್ಧಪುರುಷರ ವ್ಯಕ್ತಿತ್ವಕ್ಕಿಂತ ಸಂಪೂರ್ಣ ಭಿನ್ನವಾಗಿದೆ. ಆಧ್ಯಾತ್ಮ ನೆಲೆಯಲ್ಲಿ ವಿಹಂಗಮ ವಿಹಾರ ಮಾಡುವ ವ್ಯಕ್ತಿತ್ವಗಳು ಅವರದಾದರೆ. ಯಾವ ಆಧ್ಯಾತ್ಮವೂ ಗೊತ್ತಿಲ್ಲದ ಬದುಕಿನ ವೇದಾಂತದ ಪಶುಪಾಲಕ ವೃತ್ತಿಯಲ್ಲಿ ಪರಮಾರ್ಥ ಕಂಡ ಮಣ್ಣಿನ ಜೀವಿಗಳ ಕತೆ ಇವಾಗಿವೆ. 'ಎನ್ನುವ ಮೀರಾಸಾಬಿಹಳ್ಳಿ ಶಿವಣ್ಣನವರ ಮಾತು ಒಪ್ಪುವಂತದ್ದು.

ಹೀಗೆ ಕಾಡುಗೊಲ್ಲರಲ್ಲಿ ಎತ್ತಪ್ಪ-ಜುಂಜಪ್ಪ ತಮ್ಮ ವಿಶೇಷ ಶಕ್ತಿ ಸಾಮರ್ಥ್ಯ ಸಾಹಸ ಪವಾಡಗಳಿಂದ ತಮ್ಮ ಜನಾಂಗಕ್ಕೆ ಒಂದು ಭದ್ರವಾದ ಸಾಂಸ್ಕೃತಿಕ ಬುನಾದಿಯನ್ನು ಹಾಕಿದ

ಮಹಾವೀರರು. ಮಾದೇಶ್ವರ, ಮಂಟೇಸ್ವಾಮಿಗಳಂತೆ ಅವರು ಶೈವೀಕರಣಗೊಳ್ಳದೆ ತಮ್ಮ ಪಶುಪಾಲಕ ವೃತ್ತಿಯನ್ನು ನಂಬಿ ನೆಚ್ಚಿ ಅದನ್ನೇ ಮುಂದುವರೆಸುತ್ತಾ ಅನ್ಯ ಸಂಸ್ಕೃತಿಯ ದಾಳಿಗೆ ತುತ್ತಾಗದಂತೆ ಬದುಕಿ ಬಾಳಿದವರು.

ಹಟ್ಟಿ ಜನಾಂಗದ ಮೂಲ ಪುರುಷರು: ಚಿತ್ರದುರ್ಗ ಜಿಲ್ಲೆಯಲ್ಲಿ ಬಹು ಪ್ರಕಾರದ ಹಟ್ಟಿ ಸಮುದಾಯಗಳು ನೆಲೆಯೂರಿರುವುದು ನೋಡಬಹುದು. ಅದರಲ್ಲಿ ಪ್ರಮುಖವಾಗಿ ಗೊಲ್ಲರ ಮತ್ತು ಮ್ಯಾಸಬೇಡರ ಸಮುದಾಯಗಳು ತನ್ನ ಮೂಲ ಪುರುಷರ ಮೂಲಕ ಹಟ್ಟಿ ಸಂಸ್ಕೃತಿ ಬೆಳೆದಿರುವುದು ಎಂದು ನಂಬಿದ್ದಾರೆ.

ಹಟ್ಟಿ ಜನಾಂಗದ ಮೂಲ ಪುರುಷರು ಹಲವರಿದ್ದಾರೆ ಎನ್ನುವುದಕ್ಕೆ ಇದು ಸಾಕ್ಷಿ. ಗೊಲ್ಲ ಜನಾಂಗದವರು ಹಟ್ಟಿ ಜನಾಂಗದ ಹಲವಾರು ಮೂಲಪುರುಷರನ್ನು ನೋಡಿದ್ದರು. ಅದರಲ್ಲಿ ಎಲ್ಲರೂ ಮೂಲಪುರುಷರೆಂದು ಒಪ್ಪಿಕೊಂಡಿರುವುದು ಕಂಡುಬಂದಿದೆ. ಒಪ್ಪಿಕೊಂಡಿರುವ ಮೂಲ ಪುರುಷರಲ್ಲಿ ಜುಂಜಪ್ಪನೇ ಪ್ರಮುಖ ಮತ್ತು ಪ್ರಖ್ಯಾತನೆಂಬುದಕ್ಕೆ ಪ್ರಸ್ತುತ ಅಧ್ಯಯನ ಸಾಕ್ಷಿಕರಿಸುತ್ತದೆ. ಮ್ಯಾಸಬೇಡರಲ್ಲಿ ಮೂಲ ಪುರುಷರನ್ನು ನೋಡುವುದಾದರೆ ಗಾದರಿಪಾಲನಾಯಕ ಮುಖ್ಯವಾಗುತ್ತಾನೆ. ಅದರಲ್ಲಿಯೂ ಹಲವು ಪ್ರಮುಖರು ಇದ್ದರೂ ಅವರನ್ನೆಲ್ಲಾ ಮೂಲ ಪುರುಷರೆಂದು ಒಪ್ಪಿಕೊಂಡಿದ್ದರೂ ಅದರಲ್ಲಿ ಗಾದರಿಪಾಲನಾಯಕನೇ ಪ್ರಮುಖನೆಂದು ಒಪ್ಪಿಕೊಂಡಿರುವುದನ್ನು ಅಧ್ಯಯನ ಗುರುತಿಸಿದೆ.

### ೪.೨.೨ ಮೌಖಿಕ ಸಾಹಿತ್ಯ:

ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಕಥೆ, ಹಾಡುಗಳು, ಒಗಟುಗಳು, ಗಾದೆ ತಮ್ಮ ಜೀವನದಲ್ಲಿ ಪರಂಪರಾನುಗತವಾಗಿ ಬಾಯಿಂದ ಬಾಯಿಗೆ ಹರಿದು ಬರುತ್ತಿವೆ, ಅವರ ಕುಲದೈವದ ಬಗೆಗೆ ಹಲವಾರು ಮೌಖಿಕ ಸಾಹಿತ್ಯವನ್ನು ಅಧ್ಯಯನ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ.

#### ಅ) ಸೋಬಾನೆ ಪದ:

ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಜಾನಪದ ಹಾಡುಗಳು ಬಹುಶ್ರೀಮಂತವಾಗಿವೆ ಎನ್ನುವುದನ್ನು ಅಧ್ಯಯನಗಳು ಗುರುತಿಸಿವೆ. ಪ್ರಸ್ತುತ ಅಧ್ಯಯನದ ಸಂಧರ್ಭದಲ್ಲಿ ಚಿತ್ರದುರ್ಗವನ್ನು ಅವಲೋಕಿಸಿದರೆ ಸೋಬಾನೆ ಹಾಡುಗಳು ಮೂರು ನಾಲ್ಕು ಜನಸೇರಿ ಹಾಡುತ್ತಾರೆ. ಅಪ್ಪಟ ಜನಪದ ಹಾಡುಗಳೆಂದರೆ ಸೋಬಾನೆ ಪದಗಳು ಇವುಗಳನ್ನು ಲಿಖಿತ ರೂಪದಲ್ಲಿ ಎಲ್ಲಿಯೂ ದಾಖಲಿಸಿಲ್ಲ. ದೇವರನ್ನು ಮಧುಮಗನನ್ನು ಮಾಡುವಾಗ, ಹೊಳೆಗೆ ಕರೆದೊಯ್ಯುವಾಗ, ಮೈನೆರೆತಾಗ, ಮದುವೆ ಸಂದರ್ಭಗಳಲ್ಲಿ ಒಸಗೆ ಮಾಡುವಾಗ, ಜಾತ್ರೆಯಲ್ಲಿ, ಹಬ್ಬಗಳಲ್ಲಿ ಸೋಬಾನೆ ಪದಗಳನ್ನು ಹಾಡುತ್ತಾರೆ. ಕಂಪಳ ದೇವರಹಟ್ಟಿಯ ಜಾತ್ರೆಯಲ್ಲಿ ರಾತ್ರಿಯೆಲ್ಲಾ ಗುಗ್ಗುರಿ ಬೇಸುತ್ತಾ ಇಡೀ ರಾತ್ರಿ ಮ್ಯಾಸಬೇಡರ ಹೆಣ್ಣು ಮಕ್ಕಳು ಕಂಪಳರಂಗನ ಮೇಲೆ ಸೋಬಾನೆ ಪದಗಳನ್ನು ಹಾಡುತ್ತಾರೆ. ಮ್ಯಾಸಬೇಡರ ಹೆಣ್ಣು ಮಕ್ಕಳಾದ ಪಾಲಮ್ಮ, ಗಂಗಮ್ಮ, ಸೂರಮ್ಮ ಸೋಬಾನೆ ಪದ

ಹೇಳುವ ಹೆಂಗಸರು. ಕಾಡುಗೊಲ್ಲ ಬುಡಕಟ್ಟಿನ ಲಲಿತಮ್ಮ, ಈಶ್ವರಮ್ಮ, ಕ್ಯಾತೇಲಿಂಗನ ಸೋಬಾನೆ ಪದ ಹಾಡುವರು. ಸೋಬಾನೆ ಪದಗಳು ಅಕ್ಷರ ಸಂಸ್ಕೃತಿಯಲ್ಲಿ ದಾಖಲಾಗಿಲ್ಲವಾದರೂ ಅಕ್ಷರ ಜಗತ್ತಿಗಿಂತ ಅತ್ಯಂತ ವ್ಯವಸ್ಥಿತವಾಗಿ ಜನಪದರು ತಮ್ಮ ಮನಸ್ಸಿನಲ್ಲಿ ದಾಖಲಿಸಿಕೊಂಡಿದ್ದಾರೆ. ಅವರು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾಯಿಸಿಕೊಂಡು ಬರುತ್ತಿದ್ದಾರೆ. ಚಳ್ಳಕೆರೆ ತಾಲ್ಲೂಕಿನ ಯಲಗಟ್ಟೆ ಗೊಲ್ಲರಹಟ್ಟಿಯ ಸಿರಿಯಜ್ಜಿಯಂತವರು ತಮ್ಮ ಸ್ಮೃತಿ ಕೋಶದಲ್ಲಿ ಸಾವಿರಾರು ಸೋಬಾನೆ ಪದಗಳನ್ನಿಟ್ಟುಕೊಂಡವರು. ನಡೆದಾಡುವ ಜಾನಪದ ಎಂಬ ಬಿರುದಿಗೆ ಪಾತ್ರಳಾದವಳು. ಎಲ್ಲಿ ಮದುವೆಯಾಗುತ್ತದೆ, ಎಲ್ಲಿ ಜಾತ್ರೆಯಾಗುತ್ತದೋ, ಅಲ್ಲಿ ಸೋಬಾನೆ ಪದ ಹೇಳಲು ಹಾಜರಿರುವ ಸಿರಿಯಜ್ಜಿ ಜಾನಪದದ ಗಣಿ ಎನ್ನಬಹುದು. ಮ್ಯಾಸಬೇಡರೂ ಸಹ ಗಾದರಿಪಾಲನಾಯಕ, ಜಗಳೂರು ಪಾಪನಾಯಕ, ಹೀಗೆ ಈ ದೇವರುಗಳ ಜಾತ್ರೆಯಲ್ಲಿ ಸೋಬಾನೆ ಪದಗಳನ್ನು ಈಗಲೂ ಹಟ್ಟಿಗಳಲ್ಲಿ ಹಾಡುವುದು ಕಂಡುಬರುತ್ತದೆ.

**ಆ) ಕಥೆಗಳು:**

ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಹಟ್ಟಿಗೊಬ್ಬರಂತೆಯಾದರೂ ಕಥೆಗಾರ ಇಲ್ಲವೆ ಕಥೆಗಾರ್ತಿಯರು ಸಿಗುತ್ತಾರೆ. ಸಾವಿರಾರು ಪುಟಗಳಷ್ಟಾಗುವ ಕಥೆಗಳನ್ನು ಹೇಳುತ್ತಾರೆ. ಈ ಎರಡು ಸಮುದಾಯಗಳಲ್ಲೂ ಕುಲದ ಹುಟ್ಟಿನ ಬಗ್ಗೆ, ಸಾಂಸ್ಕೃತಿಕ ವೀರರಬಗ್ಗೆ, ಬೆಡಗುಗಳು ಹುಟ್ಟಿಕೊಂಡುದರ ಬಗ್ಗೆ, ಪ್ರಾಣಿಗಳಬಗ್ಗೆ, ಹಾಸ್ಯಕಥೆಗಳಬಗ್ಗೆ, ಸಂಪ್ರದಾಯಗಳಬಗ್ಗೆ. ಆಚರಿಸುವ ಆಚರಣೆಗಳ ಬಗ್ಗೆ, ನೀತಿಕಥೆಗಳು ಹೀಗೆ ಕಾಡುಗೊಲ್ಲರ ಮತ್ತು ಮ್ಯಾಸಬೇಡರ ಒಂದೊಂದು ಹಟ್ಟಿಯು ಕಥೆಗಳ ಗಣಿಯಾಗಿದೆ. ಎರಡು ಸಮುದಾಯದ ಹಟ್ಟಿಗಳಲ್ಲಿಯೂ ಕಥೆಗಳು ಸಮೃದ್ಧವಾಗಿ ಕೇಳಲಿಕ್ಕೆ ಸಿಗುತ್ತವೆ. ಈ ಕಥೆಗಳ ಮೂಲಕವೇ ಅವರ ಜೀವನ ವಿಧಾನವನ್ನು ಸ್ಪಷ್ಟಪಡಿಸಿಕೊಳ್ಳಬಹುದು.

ಜನಪದ ಸಾಹಿತ್ಯದಲ್ಲಿ ಮೌಖಿಕ ಪರಂಪರೆಯನ್ನು ಹೆಚ್ಚಾಗಿ ಹೊಂದಿದ್ದು ತುಂಬಾ ಸರಳವಾಗಿ ಬಾಯಿಂದ ಬಾಯಿಗೆ ಬರುವ ಕಥೆಗಳು, ಹಾಡುಗಳನ್ನು ಹೇಳುತ್ತಾರೆ. ಕಥೆ ಹೇಳುವುದು ಒಂದು ಕಲೆ, ಕಥೆಗಳು ಎಲ್ಲಾಕಾಲಗಳಲ್ಲಿಯೂ ಪ್ರಚಲಿತದಲ್ಲಿವೆ. ಕಥೆಗಳು ಪ್ರಾಚೀನ ಕಾಲದ ಜ್ಞಾನಸಂಗ್ರಹಾಲಯವೂಹೌದು, ಸಾಂಸ್ಕೃತಿಕ ಸಂಗ್ರಹಾಲಯವೂ ಹೌದು, ಕಥೆಗಳು ಮನುಷ್ಯನಿಗೆ ಮನರಂಜನೆ, ಸಾಹಸದಗುಣಗಳನ್ನು, ಜ್ಞಾನವನ್ನು ಕೊಡುತ್ತವೆ. ಜನಪದ ಕಥೆಗಳೆಂದರೆ ತಲೆಮಾರಿನಿಂದ ತಲೆಮಾರಿಗೆ ಮೌಖಿವಾಗಿ ಸಾಗಿಬರುವ ಕಥೆಯನ್ನು ಜನಪದಕಥೆ ಎನ್ನುತ್ತೇವೆ. ಸ್ಟಿತ್‌ಥಾಂಸನ್ ಎಂಬ ಪ್ರಸಿದ್ಧ ಜನಪದ ಕಥಾವಿದ್ವಾಂಸರು ಹೇಳುವುದೆಂದರೆ The story witch has been handed down from generation to generation by word of mouth.ಕನ್ನಡದಲ್ಲಿ ಅಜ್ಜಿಕಥೆ, ಕಟ್ಟುಕಥೆ, ಕಾಗಕ್ಕ-ಗುಬ್ಬಕ್ಕನಕಥೆ ಇತ್ಯಾದಿ ಪದಗಳನ್ನು ಜನಪದ ಕಥೆಗಳಿಗೆ ಸಂವಾದಿಯಾಗಿ ಬಳಸುವುದು ರೂಡಿ, ಇದೆ.[೧೫]

ಕಾಡುಗೊಲ್ಲರಲ್ಲಿ ಕಥೆಗಳು ಹೇರಳವಾಗಿ ಸಿಗುತ್ತವೆ. ಮ್ಯಾಸಬೇಡರಲ್ಲಿ ಹಾಡುಗಳು ವಿಪುಲವಾಗಿವೆ. ಕಾಡುಗೊಲ್ಲರಿಗೆ ಸಂಬಂಧಿಸಿದ ಕಥೆಗಳಲ್ಲಿ ಎತ್ತಪ್ಪನಕಥೆ, ಜುಂಜಪ್ಪನಕಥೆ ಮತ್ತು ಕಾವ್ಯಬೆಡಗುಗಳಲ್ಲಿ ಶೀಲವಾಡಿ ಗೊಲ್ಲರು ಬೆಡಗು ಪಡೆದ ಕಥೆ, ಹಾಲುಗುಡದಪ್ಪ ಸ್ವಾಮಿಕಥೆ, ಪಂಚಲಿಂಗಗಳಿಗೆ ಸಂಬಂಧಿಸಿದ ಕಥೆ, ಸಾಂಸ್ಕೃತಿಕ ಈರಗಾರರಕಥೆ, ಅವರ ಆಚರಣೆಗೆ ಸಂಬಂಧಿಸಿದಕಥೆ, ಹುರುಳಿಬತ, ನವಣೆಬತಕ್ಕೆ ಸಂಬಂಧಿಸಿದ ಕಥೆ ಹೀಗೆ ಕಾಡುಗೊಲ್ಲರ ಜೀವನ ವಿಧಾನ ಮತ್ತು ಆಚರಣೆಗಳಿಗೆ ಸಂಬಂಧಿಸಿದ ಸಾವಿರಾರು ಕಥೆಗಳನ್ನು ಹೇಳುವುದು ಕಂಡುಬರುತ್ತದೆ.

ಹಾಲುಗುಡದಪ್ಪ ಸ್ವಾಮಿಯು ಹುಟ್ಟಿಕೊಂಡ ಕಥೆಯನ್ನು ಎರಬಳ್ಳಿ ದೊಡ್ಡಗೊಲ್ಲರ ಹಟ್ಟಿಯ ಪಿಳ್ಳೆಣ್ಣ ಹೇಳಿದ ಕಥೆ. ಅದು ಈಗಿದೆ ಯರಬಳ್ಳಿ ದೊಡ್ಡಗೊಲ್ಲರ ಹಟ್ಟಿಯನ್ನು ಕ್ಯಾತರ ದ್ವಾಪಾರದ ಹಟ್ಟಿ ಎಂದು ಕರೆಯುತ್ತಿದ್ದು. ಅಡಿವೆಣ್ಣ ಮತ್ತು ಗಿಡಿವೆಣ್ಣ ಎಂಬ ಇಬ್ಬರು ಶರಣರು ಕಾಡಿನಲ್ಲಿ ದನದ ಗೂಡನ್ನು ಇಟ್ಟುಕೊಂಡು ವಾಸವಾಗಿದ್ದರು. ಅಡಿವೆಣ್ಣನಂತೂ ತುಂಬಾ ಶಿವಶರಣನಾಗಿ ಹಟ್ಟಿಯೊಳಗೆ ಬರುತ್ತಲೇ ಇರಲಿಲ್ಲ. ಹೀಗಿರುವಾಗ ಒಂದು ದಿನ ಗೋಸಿಗೆರೆಯಿಂದ ಕಾವಿಧರಿಸಿದ ಒಬ್ಬ ಸ್ವಾಮಿಯು ಈ ಕಾಡಿನ ದಾರಿಯಲ್ಲಿ ಬಂದರು ಅಡಿವೆಣ್ಣನು ಯಾರೋ ಮಹಾಸ್ವಾಮಿ ಬಂದರು ಎಂದು ಆತನಿಗೆ ನಮಸ್ಕರಿಸಿದನು. ನಂತರ ನನಗೆ ಪೂಜಿಸಲು ಒಂದು ಸ್ವಾಮಿಯನ್ನು ಕೊಡು ಎಂದು ಕೇಳಿಕೊಂಡನು. ಆಗ ಕಾವಿ ಧರಿಸಿದ ಸ್ವಾಮಿಯು ನಾನು ಸಹ ದೇವರನ್ನು ಕಾಣಲು ಹೋಗುತ್ತಿದ್ದೇನೆ ಬರುವಾಗ ಆ ಸ್ವಾಮಿ  ಮೂರು ಏನು ಕರಣಿಸುತ್ತಾನೋ ಅದನ್ನು ನಿನಗೆ ಕೊಡುತ್ತೇನೆಂದು ಮಾತು ಕೊಟ್ಟು ಹೋದನು. ಹೋಗುವಾಗ ಒಂದು ಮಾತನ್ನು ಅಡಿವೆಣ್ಣನಿಗೆ ಹೇಳಿದನು ಏನೆಂದರೆ ನಾನು ಬರುವವರೆಗೂ ಇಲ್ಲಿಯೇ ಕಾಯಬೇಕು ನಿನ್ನನ್ನು ನಾನು ಹುಡುಕುವುದಿಲ್ಲ. ಎಂದು ಹೇಳಿದನು ಅದಕ್ಕೆ ಒಪ್ಪಿಕೊಂಡ ಅಡಿವೆಣ್ಣ ದಿನಾಲೂ ಅಲ್ಲಿಯೇ ದನಗಳನ್ನು ಮೇಯಿಸುತ್ತಾ. ದನದ ಗೂಡನ್ನು ದಾರಿಯಲ್ಲೇ ಇಟ್ಟು ಅಲ್ಲಿಯೇ ಮಲಗುತಿದ್ದ. ಸ್ವಾಮಿ ಮೂರು ತಿಂಗಳ ನಂತರ ಅದೇ ದಾರಿಯಲ್ಲಿ ವಾಪಸ್ಸು ಬಂದರು ಅಡಿವೆಣ್ಣನನ್ನು ನೋಡಿ ಅಯ್ಯೋ ಅಡಿವೆಣ್ಣ ಹೇಳಿದ್ದು ಮರೆತೆ ಬಿಟ್ಟೆ ಎಂದು ತಕ್ಷಣ ಕೆಂಪು ವಸ್ತ್ರವನ್ನು ಗಂಟು ಹಾಕಿ ಅಡವೆಣ್ಣನಿಗೆ ಕೊಟ್ಟು ಇದನ್ನು ತಿಪ್ಪೇಗುಂಡಿಯಲ್ಲಿ ಗುಂಡಿತೋಡಿ ನಲವತ್ತೊಂದು ದಿನ ಹೂಳಿಟ್ಟು ಕರೆದ ಅಂಚಿ ಹಾಲನ್ನು(ಬಿಂದಿಗೆ) ಹಾಗೆಯೇ ಒಯ್ಯಬೇಕು ಎಂದು ಹೇಳಿದನು ಅದರ ಪ್ರಕಾರವೇ ಇಬ್ಬರು ಅಣ್ಣ ತಮ್ಮಂದಿರು ದಿನಾಲು ತಿಪ್ಪೆಯ ಗುಂಡಿಯಲ್ಲಿ ಹಾಲನ್ನು ಹಾಕುತ್ತಿದ್ದರು. ಮನೆಯಲ್ಲಿ ಮಕ್ಕಳಿಗೆ ಹಾಲಿಲ್ಲ. ಅಡಿವೆಣ್ಣನನ್ನು ಕೇಳಿದರೆ ಹಸುಗಳಿಗೆ ಕಾಲು ಜ್ವರ, ಬಾಯಿ ಜ್ವರ, ಎಂದು ಸುಳ್ಳು ಹೇಳಿದನು. ಒಂದು ದಿನ ನೋಡಲಿಕ್ಕೆ ತಂದೆ ಬಂದಾಗ ಇಬ್ಬರೂ ಅಣ್ಣ ತಮ್ಮಂದಿರು ಹಾಲು ಕರೆದು ತಿಪ್ಪೆಯಲ್ಲಿ ಒಯ್ಯುತ್ತಿದ್ದರು. ಆಗ ತಂದೆಯು ಮಗನನ್ನು ಬಯ್ದು ತಿಪ್ಪೆಯನ್ನು ಬಗೆದರು. ಸರ್ಪ ಒಂದು ಮೇಲೆ ಬಂದು ಕೈಗೆ ಸಿಗದೆ ಹೋಡಿಹೋಯಿತು. ಅಡಿವೆಣ್ಣನು ತಂದೆಯನ್ನು ನಲವತ್ತು ದಿನವೇ ನನ್ನ ತಪ್ಪನ್ನು ಮನ್ನಿಸಿದ್ದಿ ಇನ್ನೊಂದುದಿನ ಮುಗಿದರೆ ನನ್ನ ವ್ರತವೇ ಮುಗಿಯುತ್ತದೆ. ಎಂದು ಅಡಿವೆಣ್ಣ ಹೇಳಿದರು ಕೇಳದೆ ತಿಪ್ಪೆಯನ್ನು ಬಗೆದರು. ಸರ್ಪದ

ಹಿಂದೆಯೇ ಅಡಿವೆಣ್ಣನೂ ಸಹ ಅದನ್ನು ಅನುಸರಿಸಿಯೇ ಓಡಿದನು. ಹಾವು ಸಮುದ್ರಕ್ಕೆ ಹೋಗಿಬಿಟ್ಟಿತು. ಅಡಿವೆಣ್ಣನು ಸಮುದ್ರದ ದಡದಲ್ಲಿ ನನ್ನ ಸ್ವಾಮಿಯೇ ಹೋದ ಮೇಲೆ ಇನ್ನೇನು ಎಂದು ಉಪವಾಸದಿಂದ ಜಪ ತಪ ಮಾಡುತ್ತ ಕುಳಿತನು. ಆಗ ಲಿಂಗಕೈಯಲ್ಲಿ ಬಂದು ಬಿದ್ದಿತು. ಕಣ್ಣು ತೆರೆದು ನೋಡಿದಾಗ ಹೊಳಪಿನಿಂದ ಕೂಡಿದ ಲಿಂಗ ಬಿದ್ದಾಗ ನನ್ನ ಸ್ವಾಮಿ ಸಿಕ್ಕ ಎಂದು ಅದನ್ನು ಬರಣಿಯಲ್ಲಿಟ್ಟುಕೊಂಡು ದನದ ಗೂಡಿನ ಬಳಿ ಬಂದು ಕಳ್ಳೆಯನ್ನಿಟ್ಟು ನದಿಯ ಬಳಿ ಹೋಗಿ ಚಲುಮೆ ತೆಗೆದು ಸ್ನಾನ ಮಾಡಿ ಬಂದು ಲಿಂಗವನ್ನು ಪೂಜೆ ಮಾಡಿ ತನ್ನ ಎದೆಯ ಮೇಲೆ ಕಟ್ಟಿಕೊಂಡು ಹಸುಗಳಿಗೆಲ್ಲ ತೀರ್ಥ ಹಾಕುತ್ತಾನೆ. ಹೀಗಿರುವಾಗ ಮತ್ತೆ ಮೂರು ತಿಂಗಳು ಕಳೆಯಿತು ಮತ್ತೊಂದು ದಿನ ಅದೇ ಸ್ವಾಮಿಯು ಅದೇ ದಾರಿಯಲ್ಲಿ ಬಂದನು. ಆಗ ಸ್ವಾಮಿಗೆ ಅಡ್ಡ ಬಿದ್ದು ನನಗೆ ಬಚ್ಚಿಟ್ಟುಕೊಂಡು ಪೂಜೆ ಮಾಡುವ ಸ್ವಾಮಿಯನ್ನು ಕೊಟ್ಟಿರುವೆ ಹೊತ್ತುಕೊಂಡು ಕುಣಿಯುವ ಸ್ವಾಮಿಯನ್ನು ಕೊಡು ಎಂದು ಮತ್ತೆ ಕೇಳಿದನು. ಆಗ ಸ್ವಾಮಿಯು ನೀನು ನನ್ನಂತೆಯೆ ಶರಣನಾಗಿರುವೆ ಕಸ ಕೊಟ್ಟರೆ ರಸ ಮಾಡುವೆ ಎಂದು ಹೇಳಿ ನಿನ್ನ ದನದ ಗೂಡಿನ ಹತ್ತಿರವೇ ಒಂದು ಹುತ್ತವಿದೆ. ಅಲ್ಲಿ ಕಂಬಳಿ ಹಾಕಿ ಪೂಜೆ ಮಾಡಿ ವ್ರತ ಮಾಡು ಎಂದು ಹೇಳಿದನು. ಆಗ ಸ್ವಾಮಿ ಹೇಳಿದಂತೆ ಜಪ-ತಪ ಮಾಡುತ್ತಾ ಕುಳಿತಾಗ ಕರಿಯ ನಾಗರ ಹಾವು ನೆಟ್ಟಗೆ ನಿಂತು ಬಿಟ್ಟಿತು. ಆಗ ಅದಕ್ಕೆ ಕಂಬಳಿಯನ್ನು ಸುತ್ತಿ ಹೊತ್ತುಕೊಂಡು ನಾಗಮರಿ ಬೆತ್ತ ಹಿಡಿದುಕೊಂಡು ಹಟ್ಟಿ ಉದಿಗೆ ಬಂದು ನಿಂತುಕೊಂಡ ಆಗ ಹಟ್ಟಿಯಲ್ಲಿ ಮನೆಯಲ್ಲೆಲ್ಲಾ ಹಾಲು ತುಪ್ಪ ಬೇಕಾದಷ್ಟು ಇದ್ದ ಕಾಲವದು ಮನೆಗಳಲ್ಲಿಯ ಎಲ್ಲಾ ಹಾಲು ತುಪ್ಪ ಅಡಿವೆಣ್ಣನ ಬಳಿ ಬಂದು ಬಿದ್ದವು. ಮನೆಯಲ್ಲಿನ ನವಣೆ ಮತ್ತು ಹುರುಳಿ ಮಾತ್ರ ಹಟ್ಟಿ ಹೊರಗೆ ಹೋಗಿ ಬಿದ್ದವು. ಆಶ್ಚರ್ಯ ನವಣೆ ಹುರುಳಿ ಏಕೆ ಹೀಗೆ ಹೋಗಿ ಬಿದ್ದವು ಅವುಗಳು ಈ ದೇವರಿಗೆ ಆಗುವುದಿಲ್ಲ ಎಂಬ ಕಾರಣಕ್ಕಾಗಿ ಬತವನ್ನು ಆಚರಿಸುತ್ತಾರೆ. ನಂತರದ ದಿನದಲ್ಲಿ ದನದ ಗೂಡು ಇರುವೆಡೆಯಲ್ಲಿ ಗುಡಿಸಲಿನಲ್ಲಿ ಒಬ್ಬ ಮುದುಕನ ವೇಷದಲ್ಲಿ ಬಂದು ಕುಳಿತಿದ್ದ. ಸ್ವಾಮಿಯನ್ನು ನೋಡಿ ಅಡವೆಣ್ಣನಿಗೆ ಗಾಬರಿಯಾಯಿತು. ನನ್ನ ವ್ರತ ನನ್ನ ಆಚಾರ ವಿಚಾರ ಕೆಡಿಸಿದನೆಂದು ಅಶಕ್ತ ಮುದುಕನನ್ನು ಯಾರು ನೀನು ಎಂದು ಕೇಳಲು ನನಗೆ ಕುಡಿಯಲು ಹಾಲು ಕೊಡು ಎಂದು ಅಶಕ್ತ ಮುದುಕನು ಕೇಳಿದನು. ಕರೆಯಲು ತಂಬಿಗೆಯಿಲ್ಲ ಎಂದು ಹೇಳಿದಾಗ. ತಂಬಿಗೆಯನ್ನು ಕೊಟ್ಟನು. ಕರೆದ ಹಾಲನ್ನು ಕೊಪ್ಪರಿಗೆಗೆ ಹಾಕು ಎಂದು ಹೇಳಿದನು. ಕೊಪ್ಪರಿಗೆ ತುಂಬಿದಾಗ ಅಡಿವೆಣ್ಣನು ಸ್ವಾಮಿಗೆ ಕೊಪ್ಪರಿಗೆ ತುಂಬಿದೆ ಎಂದು ಹೇಳಿದನು. ಸ್ವಾಮಿಯು ನಿಧಾನವಾಗಿ ಎದ್ದು ಅಂಬೆಗಾಲಿಕ್ಕಿ ಕೊಪ್ಪರಿಗೆಯ ಎಲ್ಲಾ ಹಾಲನ್ನು ಕುಡಿದು ಬಿಟ್ಟನು. ಅಡಿವೆಣ್ಣನು ಇದೇನು ನಿನ್ನದು ಹೊಟ್ಟೆಯೋ ಒಡ್ಡರ ಗುಡ್ಲೋ ಎಂದನು. ಸ್ವಾಮಿಯು ಹಾಗೆನ್ನಬೇಡಪ್ಪ ನನ್ನನ್ನು ಹಾಲುಕುಡಿದ ಸ್ವಾಮಿ ಎನ್ನು ಎಂದು ಹೇಳಿ ಹೋದನು. ಅಂದಿನಿಂದ ಹಾಲುಗುಡದಪ್ಪ ಸ್ವಾಮಿ ಎಂಬ ಹೆಸರು ಪ್ರಚಲಿತವಾಗಿ ಕಟ್ಟುನಿಟ್ಟಾಗಿ ಈ ಜನಾಂಗ ಆ ದೇವರಿಗೆ ನಡೆದುಕೊಳ್ಳುತ್ತಾರೆ. ಈ ದೇವರನ್ನು ಒಂದು ಸಂವತ್ಸರದಲ್ಲಿ ಮಹಾಲಿಂಗ, ಚಿನ್ನದಕೊಂಬೆ, ರನ್ನದಕೊಂಬೆ, ಹಾಲುಗುಡದಪ್ಪ ಎಂಬ ಹೆಸರುಗಳಿಂದ ಕರೆಯಲಾಗಿದೆ.

ಮ್ಯಾಸಬೇಡರಲ್ಲೂ ಜನಾಂಗದ ಮೂಲ ಪುರುಷರು, ಸಾಂಸ್ಕೃತಿಕ ವೀರರು, ಕುಲ, ಬೆಡಗುಗಳು ಹುಟ್ಟಿದ ರೀತಿ, ಕಟ್ಟೆಮನೆಗಳ ಸ್ಥಾಪನೆ, ಚಂಚುಲಕ್ಷ್ಮೀ ನರಸಿಂಹನನ್ನು ಮದುವೆಯಾಗಿದ್ದು, ಆದಿಕವಿ ವಾಲ್ಮೀಕಿ, ಬೇಡರಕಣ್ಣಪ್ಪ, ನಾಯಕನಹಟ್ಟಿ ತಿಪ್ಪೇಸ್ವಾಮಿಯ ಪವಾಡಗಳು, ಗಾದ್ರಿಪಾಲನಾಯಕನ ಕಥೆ, ಪಾಪನಾಯಕನ ಕಥೆ, ಮೂಲತಃ ಮ್ಯಾಸಬೇಡರು ಮತ್ತು ಕಾಡುಗೊಲ್ಲರು ಅಣ್ಣ ತಮ್ಮಂದಿರಾಗಿದ್ದೂ ಈ ಎರಡು ಸಮುದಾಯಗಳು ಬೇರೆ ಬೇರೆಯಾಗಿದ್ದು, ಹೀಗೆ ಮ್ಯಾಸಬೇಡರ ಬಗ್ಗೆ ಹಲವರು ಕಥೆಗಳನ್ನು ಹೇಳುತ್ತಾರೆ. ನನ್ನಿವಾಳದ ಪಾಲಮ್ಮ ಎಂಬುವರು ಮ್ಯಾಸನಾಯಕರಗಾದ್ರಿಪಾಲಯ್ಯನ ಕಥೆಯನ್ನು ಬಹಳ ಸ್ವಾರಸ್ಯಕರವಾಗಿ ಹೇಳುತ್ತಾರೆ. ಗಾದ್ರಿಪಾಲನಾಯಕನ ಹಾಡನ್ನು ಸಹ ಹೇಳುತ್ತಾರೆ.

ಒಟ್ಟಾರೆ ಕಾಡುಗೊಲ್ಲ ಮತ್ತು ಮ್ಯಾಸಬೇಡರು ತಮ್ಮ ಸಾಮಾಜಿಕ ಜೀವನವನ್ನು ಜೀವನ ವಿಧಾನವನ್ನು ಸಾಂಸ್ಕೃತಿಕ ಪರಂಪರೆಯನ್ನು ಭೂತದ ಪರಂಪರೆಯಲ್ಲಿರುವ ರೂಢಿ, ಪದ್ಧತಿ, ಆಚರಣೆ, ಸಂಪ್ರದಾಯಗಳನ್ನು ಆಚರಣೆಗಳನ್ನು ರೂಢಿಸಿಕೊಂಡಿದ್ದಾರೆಂಬುದಕ್ಕೆ ಅವರು ಹೇಳುವ ಕಥೆಗಳೇ ಸಾಕ್ಷೀಕರಿಸುತ್ತವೆ.

**ಇ) ಒಗಟುಗಳು:**

ಒಗಟು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿರುವ ಸಾಹಿತ್ಯ ಪ್ರಕಾರವಾಗಿದೆ. ಇದು ವಿಶ್ವವ್ಯಾಪಕವೂ ಹೌದು. ಜನಪದ ಸಾಹಿತ್ಯ ಹಾಗೂ ಶಿಷ್ಟಸಾಹಿತ್ಯ ಎರಡಲ್ಲೂ ಒಗಟು ಬಳಕೆಯಲ್ಲಿದೆ. ಒಗಟು ಬುದ್ಧಿವಂತಿಕೆಯ ರಚನೆ. ಮನುಷ್ಯ ಸುತ್ತುಬಳಸಿ ರಹಸ್ಯಾರ್ಥವಿಟ್ಟು ಮಾತನಾಡುವುದು ಇದರಲ್ಲಿ ಸಾಮಾನ್ಯ ಒಗಟುಗಳು ಮುಖ್ಯವಾಗಿ ಮನುಷ್ಯನ ಸುತ್ತಮುತ್ತಲಿನ ಭೌತಿಕ ಜಗತ್ತಿನ ವಿಷಯಕ್ಕೆ ಸಂಬಂಧಿಸಿರುತ್ತವೆ. ಪ್ರಾಕೃತಿಕ ಪರಿಸರ, ನದಿ, ನೀರು, ಬೆಟ್ಟ, ಗುಡ್ಡ, ಪ್ರಾಣಿ, ಸಸ್ಯ ಮೊದಲಾದವು ಅಧಿಕ ಪ್ರಮಾಣದಲ್ಲಿ ಇರುತ್ತವೆ. ಸಾಂಸ್ಕೃತಿಕ ಬದಲಾವಣೆಯಾದಂತೆ ಒಗಟುಗಳ ವಸ್ತು ರಚನೆಯೂ ಬದಲಾಗುತ್ತದೆ.

ಒಗಟುಗಳು ಸಾಂಸ್ಕೃತಿಕ ಅಧ್ಯಯನಕ್ಕೆ ಸಾಮಾಗ್ರಿಯನ್ನು ಒದಗಿಸುತ್ತವೆ. ಒಗಟುಗಳು ಮನೋರಂಜನೆಯನ್ನು ನೀಡುತ್ತವೆ. ಜನರ ಬೌದ್ಧಿಕಪರೀಕ್ಷೆ, ಗ್ರಹಣಶಕ್ತಿ, ಕಾಲ್ಪನಿಕ ಶಕ್ತಿಯನ್ನು ಬೆಳೆಸುತ್ತವೆ. ಒಂದೊಂದು ಒಗಟಿನಲ್ಲೂ ಜನಪದರ ಸಾಂಸ್ಕೃತಿಕ ಸಂದರ್ಭವನ್ನು ಗುರುತಿಸಬಹುದು.

ಒಗಟುಗಳು ಬೌದ್ಧಿಕ ಕಸರತ್ತು, ಚಮತ್ಕಾರ, ಮುಕ್ತ ಲೈಂಗಿಕತೆಯ ಅನಾವರಣ, ಸಾಮಾಜಿಕನೀತಿ ಮೊದಲಾದ ಗುಣಗಳನ್ನುಳ್ಳವು, ಅವು ಎಲ್ಲ ವರ್ಗದ, ಎಲ್ಲ ಮನೋಧರ್ಮದ ಜನಪದರಲ್ಲೂ ತುಂಬಿಕೊಂಡಿವೆ. ಆದರೆ ಜನಪದ ಒಗಟುಗಳು ಕಟ್ಟಿಕೊಡುವ ಸಾಂಸ್ಕೃತಿಕ ವೈಭವವನ್ನು ಆಧುನಿಕ ಒಗಟುಗಳು ಕಟ್ಟಿಕೊಡುತ್ತವೆ ಎಂದು ಹೇಳುವುದಕ್ಕೆ ಆಗುವುದಿಲ್ಲ. ಆದರೂ ಪ್ರಾಚೀನ ಒಗಟುಗಳು ಅವಿನಾಶಿಯಾಗಿ ಮುಂದುವರಿಯುತ್ತಿರುವುದು ನಿಜ. ಹಲವಾರು ಒಗಟುಗಳನ್ನು ಕಾಡುಗೊಲ್ಲ ಮತ್ತು ಮ್ಯಾಸಬೇಡ ಹೆಣ್ಣುಮಕ್ಕಳು ಮತ್ತು ಗಂಡುಮಕ್ಕಳು ಹಾಕುತ್ತಾರೆ. ನಾಟಿಮಾಡುವಾಗ, ಕಳೆಕೀಳುವಾಗ. ಹೊಲಗದ್ದೆಗಳಲ್ಲಿ ಕೆಲಸ ಮಾಡುವಾಗ ಒಗಟು ಹಾಕುತ್ತಾರೆ. ಕೆಲವೊಂದು ಒಗಟುಗಳು ಬಿಡಿಸಲಾರದ ಕಗ್ಗಂಟಾಗಿರುತ್ತವೆ.

೧) ಚಿಕ್ಕಮನೆಗೆ ಚಿನ್ನದ ಬೀಗ– (ಮೂಗುತಿ).

೨) ಟಾಕುಟೀಕಿನ ಮನೆ

ಟಗರು ಗಂಟಿನ ಮನೆ

ಹೆಂಚು ಹಾಕದ ಮನೆ

ಕೆಂಪು ಬಣ್ಣದ ಮನೆ

ಬಾಳ್ಜಿ ಮುಟ್ಟದ ಮನೆ

ಬಡಗಿ ಕಟ್ಟದ ಮನೆ – (ಹುತ್ತ)

೩) ಚಿನ್ನದ ಕರಡಿಗೆಯಲ್ಲಿ

ಬೆಳ್ಳಿಯ ಲಿಂಗ – (ಹಲಸಿನ ತೊಳೆ, ಬೀಜ)

೪) ವ್ಯಾಪಾರ ಪಾಪಾರ ಯಾವಾಗ

ಎದುರುಬದುರು ಕುಂತಾಗ

ಅಳದು ಪಳದು ಯಾವಾಗ

ಅರ್ದಬರ್ದ ಹೋದಾಗ

ನಗೋದ್ ಪಗೋದ್ ಯಾವಾಗ

ಮೂರ್ತಿ ಒಳಗೆ ಹೋದಾಗ –(ಬಳೆ ಇಟ್ಟುಕೊಳ್ಳುವುದು)

ಹರತಿಕೋಟೆಯ ರಾಜನ ಮಕ್ಕಳಲ್ಲಿ ಒಬ್ಬಳಾದ ಕರಿಯೋಬಿಯನ್ನು ಬಸವಿಗೆ ಬಿಟ್ಟಿದ್ದರು. ಆಕೆ ಪ್ರತ್ಯೇಕವಾದ ಅರಮನೆ ಕಟ್ಟಿಸಿಕೊಂಡು ಅರಮನೆಯಮುಂದೆ 'ಕಪ್ಪೆ ಕಲಕದ ನೀರು ಬಿಸಿಲಿಗೆ ಬಾಡದ ಹೂವು, ನಾಲ್ಕುಏಣಿನ ಹಸಿರು ಕಲ್ಲುಕಂಬ, ತಲೆಗೆ ಮೆತ್ತನೆ ಕಲ್ಲು, ಕಾಯಿಸದೆ ಆಗಿರೋ ತುಪ್ಪ, ಒಂಟಿ ಕೊಂಬಿನ ಮೇಕೆ ಹೋತ, ತಂದು ಕೊಟ್ಟವರಿಗೆ ಭೋಗ ಕೊಡ್ತೀನಿ ಇವನ್ನು ತರದೆ ಸೋತವನು ಸಾವಿರ ವರಹ ದಂಡ ಕೊಡಬೇಕು ಎಂದು ಶಾಸನ ಹಾಕಿಸಿದ್ದಳು. ಹೀಗೆ ಸೋತವರಿಂದ ಏಳುಕೊಪ್ಪರಿಗೆ ವರಹ ಸಂಪಾದಿಸಿದ್ದಳು. ಈ ಸುದ್ದಿ ಕೇಳಿದ ಹಟ್ಟಿಮಲ್ಲಪ್ಪನಾಯಕ ಬಂದು ಆಕೆಯ ಒಗಟನ್ನು ಬಿಡಿಸಲಾರದೆ ಹುಚ್ಚಾಗಿ ಕಾಡಿನಲ್ಲಿ ತಿರುಗುತ್ತಿದ್ದಾಗ ಕಲ್ದಿಬುಳ್ಳಣ್ಣ ಎಂಬ ಗೊಲ್ಲ ಸಿಕ್ಕ ಅವನು ಇದೇನು ಮಹಾ ಒಗಟು ನಾನು ಬಿಡಿಸ್ತೀನಿ ಎಂದನು. ಇಂಥ ಸಾವಿರ ಒಗಟು ನನ್ನ ಜೇಬಿನಾಗೆ ಇದಾವೆ ಎಂದು ಅದನ್ನು ಬಿಡಿಸಿದ. ಹಟ್ಟಿಮಲ್ಲಪ್ಪನಾಯಕ ತಕ್ಷಣವೇ ಹೋಗಿ ಕರಿಯೋಬಿಗೆ ಹೇಳಿದ.

'ಎಳನೀರು–ಕಪ್ಪೆಕಲಕದ ನೀರು, ನವಿಲುಗರಿಯೇ ಬಿಸಿಲಿಗೆ ಬಾಡದ ಹೂವು, ಮುಂಗರಬಳ್ಳಿಯೇ– ನಾಲ್ಕುಏಣಿನ ಹಸಿರುಕಲ್ಲು ಕಂಬ, ಕೈಯ ತೋಳು– ತಲೆಗೆ ಮೆತ್ತನೆಯ ಕಲ್ಲು, ಜೇನು ತುಪ್ಪವೇ– ಕಾಯಿಸದೇ ಆಗಿರೋ ತುಪ್ಪ, ಕೋಳಿಯೇ–ಒಂಟಿಕೊಂಬಿನ ಮೇಕೆ ಹೋತ' ಎಂದು ಒಗಟನ್ನು

ಜಿಡಿಸಿದ. ಕರಿಯೋಬಿ ಇದನ್ನು ನಂಬದೆ ಮೂಲ ಶೋಧಿಸಿದಾಗ ಕಲ್ಡಿಬುಳ್ಳಣ್ಣ ಎಂದು ಗೊತ್ತಾಗುತ್ತದೆ. ಕರಿಯೋಬಿ ಕಲ್ಡಿಬುಳ್ಳಣ್ಣನನ್ನು ಮದುವೆಯಾಗಲು ಬೇಡಿಕೊಳ್ಳುತ್ತಾಳೆ. ಹೀಗೆ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಸಾವಿರಾರು ಒಗಟುಗಳು ಅವರ ಬುದ್ಧಿವಂತಿಕೆಯನ್ನು, ಸಂಸ್ಕೃತಿಯನ್ನು ಬಿಂಬಿಸುತ್ತವೆ.

**ಈ) ಗಾದೆಗಳು:**

ಪ್ರತಿಯೊಬ್ಬ ಮನುಷ್ಯನು ತನ್ನ ಜೀವನದಲ್ಲಿ ಒಮ್ಮೆಯಾದರೂ ಗಾದೆಯನ್ನು ಬಳಸಿರುತ್ತಾನೆ. ಗಾದೆ ಹೆಚ್ಚು ವ್ಯಾಪಕವಾದದ್ದು, ಜನಸಮ್ಮುಖವಾದದ್ದು, ಜನಪ್ರಿಯವಾದದ್ದು, ಗಾದೆಯಲ್ಲಿ ಅನುಭವ, ಸಂಸ್ಕೃತಿ, ಸಂಪನ್ನತೆ, ವಿಚಾರ, ಬದುಕಿನ ವಿಶ್ಲೇಷಣೆ ಇರುತ್ತದೆ. ಜನಪದರ ಬದುಕು ಬವಣೆಯಲ್ಲಿ, ಮಾತುಕೃತಿಯಲ್ಲಿ ಗಾದೆ ಹಾಸುಹೊಕ್ಕಾಗಿದೆ. ಗಾದೆ ಜನಸಾಮಾನ್ಯರ ಸಂಗಾತಿ ಲೋಕಾನುಭವದ ಸ್ಮೃತಿ. ಗಾದೆಗಳ ಹಿಂದಿರುವ ಸತ್ಯ ಸಾರ್ವತ್ರಿಕ ಹಾಗೂ ಸರ್ವಕಾಲಿಕ, ಗಾದೆಗಳಿಂದ ಜನರ ಮನಸ್ಸಿನ ಮೌಲ್ಯಗಳನ್ನು ಕಾಣಬಹುದು. ಸಂಸ್ಕೃತದ 'ಗಾಥಾ'ಶಬ್ಧವೇ 'ಗಾದೆ'ಯಾಗಿದೆ. 'ನಾಣ್ಣುಡಿ' ಎಂಬ ಅಚ್ಚ ಕನ್ನಡ ಶಬ್ಧ ಗಾದೆಯ ಅರ್ಥವನ್ನು ಧ್ವನಿಸುತ್ತದೆ. ಗಾದೆಗೆ ಬಳಕೆಯಲ್ಲಿರುವ ಸಂವಾದಿ ಶಬ್ಧಗಳೆಂದರೆ ಲೋಕೋಕ್ತಿ, ಸೂಕ್ತಿ, ಪ್ರಮಾಣ, ಸುಭಾಷಿತ, ನಾಣ್ಣುಡಿ ಇತ್ಯಾದಿ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲೂ ಗಾದೆ ಮಾತುಗಳಿವೆ. ಗಾದೆಗಳಿಲ್ಲದ ದೇಶ, ಜನಾಂಗವೇ ಇಲ್ಲ 'ಕೊಕ್ಕರೆಗೆ ಒಂದು ಕೆರೆಯಲ್ಲ ಗೊಲ್ಲರಿಗೆ ಒಂದು ಊರಲ್ಲ' ಈ ಗಾದೆ ಅವರ ಅಲೆಮಾರಿ ಬದುಕಿನ ಚಿತ್ರಣವನ್ನು ಸ್ಪಷ್ಟಪಡಿಸುತ್ತದೆ. ಬ್ಯಾಡರಿಗೆ ಬಾಳೆ ಮಾಡಕ ಬರಲಿಲ್ಲ ಬೆಳವಗೆ ಗೂಡು ಕಟ್ಟಕೆ ಬರಲಿಲ್ಲ, 'ಜಾಲಿಸಾಕಿದರೆ ಕಾಲಿಗೆ ಮೂಲ ಬೇಡನನ್ನು ಸಾಕಿದರೆ ಜೀವಕ್ಕೆಮೂಲ', ಕೆಲಸಕ್ಕೆ ಕರಿಬ್ಯಾಡ್ರಿ ಊಟಕ್ಕೆ ಮರಿಬ್ಯಾಡ್ರಿ'. 'ಕೂತು ಉಣ್ಣುವವನಿಗೆ ಕುಡಿಕೆ ಹೊನ್ನುಸಾಲದು', 'ಮಿಂಚಿಹೋದ ಕಾಲಕ್ಕೆ ಚಿಂತಿಸಿ ಫಲವೇನು', ರಾಮರಾಜ್ಯ ಬಂದರೂ ರಾಗಿ ಬೀಸೋದು ತಪ್ಪಲ್ಲ', 'ಕಾರ್ಯವಾಸಿ ಕತ್ತೆಕಾಲು ಹಿಡಿ', 'ಅತ್ತೆಗೊಂದು ಕಾಲ ಸೊಸೆಗೊಂದು ಕಾಲ', 'ಗಂಡ ಸತ್ತ ಮೇಲೆ ಹೆಂಡ್ತಿ ಬುದ್ಧಿವಂತಿ', 'ಜಾತಿಬಿಟ್ಟರೂ ನೀತಿ ಬಿಡಬಾರ್ದು', 'ಅಗಸನಸಿಟ್ಟು ಅನ್ಯರ ಬಟ್ಟೆ ಮೇಲೆ', 'ನೇಕಾರನ ಹೆಂಡತಿ ಬೆತ್ತಲೆ', 'ಕುಲಕ್ಕೆ ಕುಲ ಮೂಲ ಕುಂಟೆತ್ತಿಗೆ ಹೊಲಮೂಲ', 'ಹಸಿದು ಹಲಸಿನಹಣ್ಣುತಿನ್ನು ಉಂಡು ಮಾವುತಿನ್ನು', 'ಉಬ್ಬೆಮಳೆಗೆ ಗುಬ್ಬಿಮುಕ್ಕ ನೆನೀದು', 'ಅಸಲೆ ಮಳೆ ಬಿಸಲಗೋಯ್ತು', ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲ, 'ಸೊಸೆ ಸತ್ತರೆ ಸೋಬಾನೆ ಮಗ ಸತ್ತರೆ ಮನೆಹಾಳು', 'ಹೊಟ್ಟೆ ತುಂಬಿದಮೇಲೆ ಉಗ್ಗಿ ಮುಳ್ಳುಮುಳ್ಳು', 'ಹನಿ ಹನಿ ಕೂಡಿದರೆ ಹಳ್ಳ ತೆನೆ ತೆನೆ ಕೂಡಿದರೆ ಬಳ್ಳ', 'ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ',

ಇತಂಹ ಗಾದೆ ಮಾತುಗಳು ಸಹಜವಾಗಿ ದಿನನಿತ್ಯ ಜೀವನದಲ್ಲಿ ಗೊತ್ತಿದ್ದೊ ಗೊತ್ತಿಲ್ಲದೆಯೋ ಮಾತುಗಳಲ್ಲಿ ಬಂದು ಬಿಡುತ್ತವೆ. ಜಾತಿಗೆ ಸಂಬಂಧಿಸಿದ, ನೀತಿಗೆ ಸಂಬಂಧಿಸಿದ, ಜೀವನಕ್ಕೆ ಸಂಬಂಧಿಸಿದ ಗಾದೆಗಳು ನಿತ್ಯ ಜೀವನದಲ್ಲಿ ಬಳಸುತ್ತಿರುತ್ತೇವೆ. ಹಾಗೆಯೇ ಕಾಡುಗೊಲ್ಲ ಮತ್ತು ಮ್ಯಾಸಬೇಡ ಬುಡಕಟ್ಟುಗಳಲ್ಲಿ ಗಾದೆಗಳು ಜನಪದ ಸಾಹಿತ್ಯದಲ್ಲಿ ಪ್ರಾಮುಖ್ಯತೆ ಪಡೆದುಕೊಂಡಿದೆ.

ಗಾದೆಗಳು ಸಮಯ ಸಂದರ್ಭಕ್ಕನುಸಾರವಾಗಿ ಬಳಸಲ್ಪಡುತ್ತವೆ. ಹಾಗಾಗಿ 'ವೇದ ಸುಳ್ಳಾದರೂ ಗಾದೆ ಸುಳ್ಳಾಗದು', ಗಾದೆ ವೇದಕ್ಕೆ ಸಮಾನ ಎಂಬ ಅಂಶಗಳು ಗಾದೆಯ ಮಹತ್ವವನ್ನು ತಿಳಿಸುತ್ತವೆ.

**ಉ) ಸಂಪ್ರದಾಯಿಕ ಹಾಡುಗಳು:**

ಚಿತ್ರದುರ್ಗ ಜಿಲ್ಲೆಯ ಅಧ್ಯಯನ ಕ್ಷೇತ್ರದಲ್ಲಿ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಜನಪದಹಾಡುಗಳು, ಸೋಬಾನೆಹಾಡುಗಳು, ಲಾವಣಿಹಾಡುಗಳು, ದೇವರಮೇಲಿನ ಪದಗಳು, ಭಜನೆ ಹಾಡುಗಳು ಹೇರಳವಾಗಿ ದೊರೆಯುತ್ತವೆ. ಮದುವೆ ಮತ್ತು ಋತುಮತಿಯಾದ ಸಂದಂರ್ಭದಲ್ಲಿ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಹಾಡುತ್ತಾರೆ. ಕಾಡುಗೊಲ್ಲರಲ್ಲಿ ಪುರುಷರು ದೇವರ ಮೇಲಿನ ಹಾಡುಗಳನ್ನು ಹಾಡುತ್ತಾರೆ

ಕಾಡುಗೊಲ್ಲರಲ್ಲಿ ಸಿತ್ತರುಲಿಂಗ, ಕಾಟಮಲಿಂಗ, ಕ್ಯಾತೆಲಿಂಗನ ಮೇಲಿನ ಹಾಡುಗಳನ್ನು ಹಾಡುತ್ತಾರೆ. ಮ್ಯಾಸಬೇಡರಲ್ಲಿ ಕುಲದ ಹುಟ್ಟಿನಬಗ್ಗೆ, ಗಾದ್ರಿಪಾಲನಾಯಕನ ಹಾಡು, ಪಾಪನಾಯಕನ ಮೇಲಿನ ಹಾಡು, ನಾಯಕನಹಟ್ಟಿ ತಿಪ್ಪೇಸ್ವಾಮಿಯ ಮೇಲಿನ ಹಾಡು ಹೀಗೆ ಸಾಂಸ್ಕೃತಿಕ ನಾಯಕರ ವೀರತ್ವ, ಶೂರತ್ವ, ಪರಾಕ್ರಮ, ಸಾಹಸ, ಪವಾಡಗಳನ್ನು ಕುರಿತು ಹಾಡುತ್ತಾರೆ. ಕಾಡುಗೊಲ್ಲರು ಜುಂಜಪ್ಪ ಮತ್ತು ಎತ್ತಪ್ಪನ ಹಾಡುಗಳನ್ನು ತ್ರಿಪದಿ ರೂಪದಲ್ಲಿ ಹಾಡುತ್ತಾರೆ. ಗೌರಸಂದ್ರಮಾರಕ್ಕ, ಯರಬಳ್ಳಿಮಾರಕ್ಕ, ಹಾಲುಗುಡದಪ್ಪ, ಕರಿಯೋಬೇನಹಳ್ಳಿ ಮಾರಮ್ಮ, ಈ ದೇವರುಗಳ ಪೂಜೆ, ಜಾತ್ರೆ, ಉತ್ಸವ, ಹಬ್ಬಗಳಲ್ಲಿ ಹಾಡುತ್ತಾರೆ. ಕಾಡುಗೊಲ್ಲರ ಹಟ್ಟಿಗಳಲ್ಲಿ ಗುಗ್ಗರಿ ಹಬ್ಬ(ಕಾಳಿನ ಹಬ್ಬ)ದ ಸಂದರ್ಭದಲ್ಲಿ ಹೆಂಗಸರು ದೇವರ ಮೇಲೆ ಹಾಡು ಹೇಳುತ್ತಾರೆ. ಕಂಪಳದೇವರ ಜಾತ್ರೆಯಲ್ಲಿ ಮ್ಯಾಸಬೇಡರ ಹೆಂಗಸರು ರಾತ್ರಿ ಇಡೀ ಕಂಪಳರಂಗ ಸ್ವಾಮಿಯ ಹಾಡುಗಳನ್ನು ಹಾಡುತ್ತಾರೆ.

ಕಾಡುಗೊಲ್ಲರಲ್ಲಿ 'ಜುಂಜಪ್ಪ'ನ ಕಾವ್ಯವನ್ನು ನೋಡಬಹುದಾಗಿದೆ. ಮಹಾಕಾವ್ಯಗಳ ಸಾಲಿಗೆ ಸೇರಬಹುದಾದ ಈ ಕಾವ್ಯದಲ್ಲಿ ಹಾಡುಗಳನ್ನು ಸರಳವಾಗಿ ತಮ್ಮದೇ ದಾಟಿಯಲ್ಲಿ ಹಾಡುತ್ತಾರೆ. ಜುಂಜಪ್ಪನ ಹುಟ್ಟಿನ ಸಂದು, ಜುಂಜಪ್ಪನ ಪವಾಡ, ಜುಂಜಪ್ಪ ಸಾವಿನ ಕುರಿತಾದ ಹಾಡು, ಹೀಗೆ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಜನಪದದ ಗಣಿಯೇ ಹುದುಗಿರುವುದು ಕಂಡುಬರುತ್ತದೆ. ಹೀಗೆ ಬುಡಕಟ್ಟು ಸಮುದಾಯಗಳಾದ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೊಂದಿದ್ದು, ಪರಂಪರಾನುಗತವಾಗಿ ಉಳಿಸಿಕೊಂಡು ಬಂದಿದ್ದಾರೆ, ಇಂದಿಗೂ ಹಟ್ಟಿಗಳಲ್ಲಿ ಕಲೆ, ಸಾಹಿತ್ಯ ಕೇಳಲಿಕ್ಕೆ ಸಮೃದ್ಧವಾಗಿ ದೊರೆಯುತ್ತವೆ. ಅಂತಹ ಮೌಖಿಕ ಪರಂಪರೆಯನ್ನು ಆಧುನಿಕವಾಗಿ ಸಾಹಿತ್ಯದ ರೂಪದಲ್ಲಿ ಸಂಗ್ರಹಿಸುವ, ದಾಖಲಿಸುವ ಕೆಲಸ ಆಗಬೇಕಿದೆ. ಈ ನಿಟ್ಟಿನಲ್ಲಿ ಹಂಪಿ ವಿಶ್ವವಿದ್ಯಾಲಯದ ಡಾ.ಚಲುವರಾಜುರವರು ತಮ್ಮ ಸಂಪಾದಕತ್ವದಲ್ಲಿ ಜುಂಜಪ್ಪನಹಾಡುಗಳ ಮಹಾಕಾವ್ಯಮಾಲೆಯನ್ನು ಹೊರತಂದಿದ್ದಾರೆ. ಕೃಷ್ಣಮೂರ್ತಿಹನೂರುರವರು ಕೂಡ ಮ್ಯಾಸಬೇಡರಲ್ಲಿನ ಸಾಂಸ್ಕೃತಿಕ ನಾಯಕರ ಕಥೆಗಳು ಮತ್ತು ಹಾಡುಗಳು, ಸೋಬಾನೆ

ಪದಗಳನ್ನು 'ಮ್ಯಾಸಬೇಡರು' ಕೃತಿಯಲ್ಲಿ ಸಂಗ್ರಹಿಸಿದ್ದಾರೆ. ಒಟ್ಟಾರೆಯಾಗಿ ಈ ಎರಡೂ ಸಮುದಾಯಗಳ ಹಟ್ಟಿಗಳಲ್ಲಿ ಕಥೆಗಾರರು, ಹಾಡುಗಾರರು ಕನಿಷ್ಠ ಒಬ್ಬರಾದರೂ ಸಿಗುತ್ತಾರೆ. ಚಿತ್ರದುರ್ಗ ಜಿಲ್ಲೆಯ ಅಧ್ಯಯನ ಕ್ಷೇತ್ರದಲ್ಲಿ ಕಾಡುಗೊಲ್ಲ ಮತ್ತು ಮ್ಯಾಸಬೇಡರು ತಮ್ಮ ಜೀವನ ಪ್ರವೃತ್ತಿಯಲ್ಲಿ ಬಿಡುವಿನ ವೇಳೆಯಲ್ಲಿ ತೊಡಗಿಸಿಕೊಂಡಿರುವ ಹವ್ಯಾಸಗಳು ಮತ್ತು ಅಭ್ಯಾಸಗಳನ್ನು ಕೇಂದ್ರೀಕರಿಸಲಾಗಿದೆ.

ಚಿತ್ರದುರ್ಗ ಜಿಲ್ಲೆಯ ಅಧ್ಯಯನ ಕ್ಷೇತ್ರದಲ್ಲಿ ಬಿಡುವಿನ ವೇಳೆಯ ಮನರಂಜನೆಯನ್ನು ಅಧ್ಯಯನ ಉದ್ದೇಶಗಳಿಗನುಗುಣವಾಗಿ ವಿಶ್ಲೇಷಿಸಿದರೆ ಬಿಡುವಿನ ವೇಳೆಯಲ್ಲಿ ಮನರಂಜನೆಯನ್ನು ಕೆಲವು ಹವ್ಯಾಸಗಳ ಮೂಲಕ ಕಾಲ ಕಳೆಯುವುದು ವಾಡಿಕೆಯಾಗಿರುತ್ತದೆ. ಕಾಡುಗೊಲ್ಲರಲ್ಲಿ ಹಾಡುವುದರ ಮೂಲಕ ಮನರಂಜಿಸುವುದು ಕಂಡುಬರುತ್ತದೆ. ಮ್ಯಾಸಬೇಡರಲ್ಲಿ ಕಥೆ ಹೇಳುವುದರ ಮೂಲಕ ಮನರಂಜಿಸುವುದು  ಕಂಡುಬರುವುದು. ಒಟ್ಟಾರೆ ಎರಡು ಹಟ್ಟಿಗಳಲ್ಲಿ ಹಾಡುವುದು ಮತ್ತು ಕಥೆ ಹೇಳುವುದನ್ನು ಪ್ರಸ್ತುತ ಅಧ್ಯಯನಲ್ಲಿ ಗುರುತಿಸಿಸಲಾಗಿದೆ.

**ಅಡಿಟಿಪ್ಪಣಿಗಳು**

1. Nanjundaiah H.V. The Ethnographic survey of mysore, 1908, P-1.
2. Luiz,AAD. The tribes of mysore, 1963,P-84.
3. ಮೀರಾಸಾಬಿಹಳ್ಳಿ ಶಿವಣ್ಣ ಗೊಲ್ಲ ಕಡಗ. ೧೯೯೯,ಪುಟ : ೬೯.
4. ಬೋರಲಿಂಗಯ್ಯ ಹಿ.ಚಿ ಒಂದು ಬುಡಕಟ್ಟಿನ ಲೋಕದೃಷ್ಟಿ, ೨೦೦೦, ಪುಟ :೪೬ ,೪೭.
5. ಶಂಕರನಾರಾಯಣ ತೀ.ನಂ. ಕಾಡುಗೊಲ್ಲರ ನಂಬಿಕೆಗಳು ಮತ್ತು ಆಚರಣೆಗಳು, ೧೯೮೨, ಪುಟ : ೫೩.
6. ಅದೇ ಪುಟ : ೧೦೨.
7. ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ, ಹುಟ್ಟು – ಸಾವಿನ ನಡುವೆ, ೨೦೦೦, ಪುಟ : ೧೪.
8. Herskovits, Melville .J. Cultural Anthropology,1974, P-229
9. ಶೇಷಶಾಸ್ತ್ರಿ, ಕರ್ನಾಟಕದ ವೀರಗಲ್ಲುಗಳು, ೧೯೮೨, ಪುಟ:೧೦.
10. ಪಾಲಮ್ಮ ಹೇಳಿದ ಕತೆ, ನನ್ನಿವಾಳ.
11. ಪ್ರಭಾಕರ. ಎ.ಎಸ್. ಮ್ಯಾಸಬೇಡರ ಕಥನಗಳು, ೧೯೯೯, ಪುಟ:೪೬.
12. ಮೀರಾಸಾಬಿಹಳ್ಳಿ ಶಿವಣ್ಣ. ಕಾಡುಗೊಲ್ಲ ಬುಡಕಟ್ಟು ವೀರರು, ೨೦೦೫, ಪುಟ : ೨೨೯.
13. ಅದೇ–ಪುಟ:೨೪೬.
14. ಮೀರಾಸಾಬಿಹಳ್ಳಿ ಶಿವಣ್ಣ. ಗೊಲ್ಲಕಡಗ, ೧೯೯೯, ಪುಟ:೨೮.
15. ಲಿಂಗಯ್ಯ.ಡಿ. ಮತ್ತು ಸಂಧ್ಯಾರೆಡ್ಡಿ. ಕೆ.ಆರ್. ಜಾನಪದ : ಸ್ವರೂಪ ಮತು ಸಾಹಿತ್ಯ, ೧೯೯೭, ಪುಟ:೭೭.

# ಅಧ್ಯಾಯ : ಐದು

# ಹಟ್ಟಿ ಸಂಸ್ಕೃತಿ ಮತ್ತು ಪರಂಪರೆಯ ಸ್ಥಿತ್ಯಂತರಗಳು

೫.೧ ಸಾಮಾಜಿಕ ಸ್ಥಿತ್ಯಂತರಗಳು.

೫.೨ ಸಾಂಸ್ಕೃತಿಕ ಸ್ಥಿತ್ಯಂತರಗಳು.

೫.೩ ಆರ್ಥಿಕ ಸ್ಥಿತ್ಯಂತರಗಳು.

೫.೪ ರಾಜಕೀಯ ಸ್ಥಿತ್ಯಂತರಗಳು

# ಅಧ್ಯಾಯ: ಐದು

# ಹಟ್ಟಿ ಸಂಸ್ಕೃತಿ ಮತ್ತು ಪರಂಪರೆಯ ಸ್ಥಿತ್ಯಂತರಗಳು

**ಪ್ರಸ್ತಾವನೆ:**

ಹಟ್ಟಿ ಸಂಸ್ಕೃತಿ ಮತ್ತು ಪರಂಪರೆಯ ಸ್ಥಿತ್ಯಂತರಗಳನ್ನು ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಅಭಿವೃದ್ಧಿ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಗಮನಿಸಲಾಗಿದೆ. ಯಾವುದೆ ಬದಲಾವಣೆ ಮತ್ತು ವಿಕಾಸದ ವೇಗ ಆಯಾ ಸಮಾಜದ ಸ್ಥಿತಿಗತಿಗಳ ಮೇಲೆ ಅವಲಂಬಿಸಿರುತ್ತದೆ.ಸಮುದಾಯಗಳಲ್ಲಿ ಸ್ಥಿತ್ಯಂತರಗಳ ಪರಂಪರೆಯು ಇಂದು ನಿನ್ನೆಯದಲ್ಲ. ಅದಕ್ಕೆ ತನ್ನದೇ ಆದಂತ ಇತಿಹಾಸವು ಇದೆ ಎನ್ನುವುದನ್ನು ಅನೇಕ ಅಧ್ಯಯನಗಳ ತೀರ್ಮಾನವೂ ಆಗಿರುವುದು. ಶಿಕ್ಷಣ, ತಂತ್ರಜ್ಞಾನ, ಪ್ರಜಾಪ್ರಭುತ್ವ, ಅಧಿಕಾರದ ವಿಕೇಂದ್ರೀಕರಣ, ನಗರೀಕರಣ, ಆಧುನೀಕರಣ, ಔದ್ಯೋಗೀಕರಣ ಮತ್ತು ಜಾಗತೀಕರಣದ ಪ್ರಭಾವದಿಂದ ಅಭಿವೃದ್ಧಿ ಯೋಜನೆಗಳು ತಳಮಟ್ಟದವರೆಗೂ ಅನುಷ್ಠಾನ ಮಾಡುವುದು. ಇದರಿಂದ ಜನರ ಮನಸ್ಸು ಭಾವನೆಗಳ ಬದಲಾವಣೆಗಳು ಆದರೆ ಅಭಿವೃದ್ಧಿ ಆಗಬಹುದು ಅಥವಾ ಹಿಂದುಳಿದಿರಬಹುದು ಈ ಎರಡು ಆಯಾಮಗಳು ಅನೇಕ ಸಮುದಾಯಗಳಲ್ಲಿ ಸ್ಥಿತ್ಯಂತರಗಳಾಗಿರುವುದು ಕಂಡುಬರುವವು. ಹಾಗೆಯೇ ಚಿತ್ರದುರ್ಗ ಜಿಲ್ಲೆಯಲ್ಲಿ ಕಾಡುಗೊಲ್ಲರ ಮತ್ತು ಮ್ಯಾಸಬೇಡರ ಸ್ಥಿತ್ಯಂತರಗಳಾಗಿರುವುದು ಪ್ರಸ್ತುತ ಅಧ್ಯಯನವು ಕೇಂದ್ರೀಕರಿಸಿದೆ. ಯೋಜನೆಗಳ ಮಾಹಿತಿ ಮತ್ತು ಅನುಷ್ಠಾನ, ಸಮುದಾಯ ಮತ ಮಾನ್ಯಗಳಿಂದ ಸಾಮಾಜಿಕ ಸ್ಥಿತ್ಯಂತರಗಳು, ಸಮುದಾಯದ ಕುಲ ಚಿಹ್ನೆ, ಮಹಿಳೆಯರ ದುಡಿಮೆಯ ವಿಧಾನಗಳಿಂದ ಆರ್ಥಿಕ ಸ್ಥಿತ್ಯಂತರಗಳು ನಡೆದಿರುವುದು ಅಧ್ಯಯನ ಇದರ ಸತ್ಯಾಸತ್ಯತೆಗಳನ್ನು ಗುರುತಿಸಿ ಸ್ಥಿತ್ಯಂತರಗಳ ಚಲನೆಯ ವೇಗವನ್ನು ಗುಣಾತ್ಮಕ ಮತ್ತು ಪ್ರಮಾಣಾತ್ಮಕವಾಗಿ ವಿಶ್ಲೇಷಿಸಿದೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡ ಈ ಬುಡಕಟ್ಟುಗಳ ಮೂಲವನ್ನು ಅಧ್ಯಯನ ಮಾಡಿದಾಗ ಸ್ವಲ್ಪಮಟ್ಟಿನ ಬದಲಾವಣೆ ಮಾತ್ರ ಕಂಡುಬರುತ್ತದೆ. ಆಧುನಿಕತೆಯ ಪ್ರಭಾವ ಸ್ವಲ್ಪಮಟ್ಟಿಗೆ ಅವರ ಮೇಲಾಗಿರುವುದು ಕಂಡುಬರುತ್ತದೆ. ಅಂತಹ ಪ್ರಭಾವಗಳಲ್ಲಿ ಕೆಲವು ಸಕಾರತ್ಮವಾದವುಗಳೆನಿಸಿದರೆ, ಕೆಲವು ನಕಾರಾತ್ಮಕವಾದವುಗಳಾಗಿವೆ. ಇಂತಹ ಎಲ್ಲ ಸಂಗತಿಗಳನ್ನು ಗುರುತಿಸಿ ವಿಶ್ಲೇಷಿಸಿಕೊಳ್ಳುವ ಪ್ರಯತ್ನಗಳನ್ನು ನಡೆಸುವುದು ಇಂದು ಅನಿವಾರ್ಯವಾಗಿದೆ. 'ಹಟ್ಟಿಸಂಸ್ಕೃತಿಯ ಪರಂಪರೆ' ಎಂದರೆ

ಹಟ್ಟಿ ಸಮುದಾಯಗಳ ಭೂತದ ಮುಂದುವರಿಕೆ ಇದೊಂದು ಸ್ಮೃತಿ. ಆದಿಯಿಂದ ನಿರಂತರವಾಗಿ ಮುಂದುವರಿಸಿಕೊಂಡು ಬಂದ ಹಾಗು ಸಮುದಾಯಕ್ಕೆ ಬದ್ಧವಾಗಿರಬೇಕಾದ ಮೌಲ್ಯಗಳು ಮತ್ತು ಆಚರಣೆಗಳನ್ನು ಸೂಚಿಸುತ್ತದೆ. ಒಂದು ಸಮುದಾಯದ ಪರಂಪರೆ ರೂಪುಗೊಳ್ಳುವುದೇ ಭೂತದಿಂದ ವರ್ತಮಾನಕ್ಕೆ ಹರಿದು ಬಂದ ನಂಬಿಕೆಗಳು, ಸಂಕೇತಗಳು, ಆಚರಣೆಗಳು, ನೆನಪು ಹಾಗು ಸಂಸ್ಥೆಗಳ ಮೂಲಕವಾಗಿದೆ. ಇಂತಹ ಪರಂಪರೆ ಪ್ರತಿಯೊಂದು ಸಮುದಾಯಕ್ಕೂ ಅತ್ಯಂತ ಅಗತ್ಯವಾಗಿರುತ್ತದೆ.

ಪಾರಂಪರಿಕವಾಗಿ ಬಂದ ಬುಡಕಟ್ಟು ಸಮುದಾಯಗಳು ತಮ್ಮ ಜೀವನ ಕ್ರಮ, ವರ್ತನೆಗಳು, ನಂಬಿಕೆ, ಆಚರಣೆಗಳು ಮೌಲ್ಯಗಳನ್ನು ಭದ್ರವಾಗಿ ಅಪ್ಪಿಕೊಂಡಿದ್ದ ಈ ಎರಡು ಸಮುದಾಯಗಳು ಎದುರಾಳಿಗೆ ತೋರಿದ ಪ್ರತಿರೋಧ, ಅರಗಿಸಿಕೊಂಡ ಮೌಲ್ಯಗಳ ವ್ಯಾಪ್ತಿ ಬಹುದೊಡ್ಡದು. ಆಧುನಿಕವಾಗಿ ವಿಜ್ಞಾನ, ತಂತ್ರಜ್ಞಾನ, ಜಾಗತೀಕರಣ ಬಂದರೂ ಸಹ ಕಾಡುಗೊಲ್ಲ ಮತ್ತು ಮ್ಯಾಸಬೇಡ ಬುಡಕಟ್ಟುಗಳಲ್ಲಿ ಪಾವಿತ್ರ್ಯತೆ ಅತೀ ಮಹತ್ವದ ಮೌಲ್ಯ. ಈ ಬುಡಕಟ್ಟುಗಳು ಊರು, ಗ್ರಾಮಗಳಿಂದ ದೂರದ ಹಟ್ಟಿಗಳನ್ನು ಕಟ್ಟಿಕೊಂಡಿದ್ದೆ ತಮ್ಮ ಪಾವಿತ್ರ್ಯತೆ ಮತ್ತು ಶ್ರೇಷ್ಠತೆಯನ್ನು ಉಳಿಸಿಕೊಳ್ಳುವ ಸಲುವಾಗಿಯೇ ಎಂಬುದು ಸ್ಪಷ್ಟವಾದ ಸಂಗತಿ. ಏನೆ ಬದಲಾವಣೆ, ಅಭಿವೃದ್ಧಿಯ ಮಾತುಗಳನ್ನಾಡಿದರೂ ಶೂನ್ಯವೆನಿಸುತ್ತದೆ, ಏಕೆಂದರೆ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಇಂದಿಗೂ ಮಡಿವಂತಿಕೆಯ ಹೆಸರಿನಲ್ಲಿ ಬಾಣಂತಿ ಮತ್ತು ಮಗುವನ್ನು ಹೆರಿಗೆಯಾದ ನಂತರದಲ್ಲಿ ಇಪ್ಪತ್ತೊಂದು ದಿನಗಳ ಕಾಲ ಹಟ್ಟಿಯ ಹೊರಗಿಡುವುದು ಕಂಡುಬರುತ್ತದೆ. ಮ್ಯಾಸಬೇಡರು ಹಟ್ಟಿಯೊಳಗಡೆ ಕೋಳಿ ನಿಷೇಧ, ಸಂಪ್ರದಾಯಗಳು ಇಂದಿಗೂ ಬದಲಾಗದೆ ಮುಂದುವರಿಸುತ್ತಿರುವುದನ್ನು ಕಾಣಬಹುದು. ಇಂದಿಗೂ ಪಾರಂಪರಿಕವಾದ ವೈದ್ಯಪದ್ಧತಿ, ದೇವರಿಗೆ ಹರಕೆ, ಮುಡಿಪು ಬೇವಿನುಡಿಗೆ, ಉರುಳುಸೇವೆ, ಶಾಸ್ತ್ರ ಕೇಳುವುದು ದೇವರನ್ನು ಹೂವು ಕೇಳುವುದು ಇಂದಿಗೂ ಚಾಲ್ತಿಯಲ್ಲಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಬುಡಕಟ್ಟುಗಳು ತಮ್ಮದೇ ಆದ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಬದುಕನ್ನು ಸಾಗಿಸುತ್ತಾ ಬಂದಿವೆ. ಪ್ರಪಂಚದ ಲೌಕಿಕ ಸವಲತ್ತುಗಳಿಂದ ವಂಚಿಸಲ್ಪಟ್ಟಿದ್ದರೂ ಸಹ ತಮ್ಮ ಜಾಣತನದಿಂದ ಸಂಪ್ರದಾಯಗಳನ್ನು ಕಾಪಾಡಿಕೊಂಡು ಬರುವಲ್ಲಿ ಯಶಸ್ವಿಯಾಗಿವೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರು ನಾಡಿನ ಸಂಪರ್ಕವಿಲ್ಲದೆ ವಿದ್ಯುತ್, ಸಾರಿಗೆ, ಶಾಲೆ, ರಸ್ತೆ, ಅಂಗನವಾಡಿ ಸೌಲಭ್ಯಗಳನ್ನು ಪಡೆಯದೆ ಅವರದ್ದೇ ಆದ ಸಂಪ್ರದಾಯದ ಹಿನ್ನೆಲೆಯಲ್ಲಿ ಬದುಕನ್ನು ಸಾಗಿಸುತ್ತಿದ್ದಾರೆ. ಸರ್ಕಾರವು ಕೊಡುವ ಸೌಲಭ್ಯಗಳು ಮತ್ತು ಸರ್ಕಾರದ ಯೋಜನೆಗಳ ತಿಳುವಳಿಕೆ ಇಲ್ಲದಿರುವುದು ಮತ್ತು ಸರ್ಕಾರದ ಯೋಜನೆಗಳು ನೇರವಾಗಿ ತಲುಪದಿರುವುದು ಹಟ್ಟಿಗಳ ಭೌತಿಕ ಸ್ವರೂಪದಿಂದಲೆ ತಿಳಿದುಕೊಳ್ಳಬಹುದಾಗಿದೆ. ಹಟ್ಟಿ ಸಮುದಾಯಗಳಿಗೆ ಅವರ ಕಲ್ಯಾಣ ಅಭಿವೃದ್ಧಿಗಳಿಗೆ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಮತ್ತು ಸ್ಥಳೀಯ ಸರ್ಕಾರಗಳು ಅನೇಕ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನ ಮಾಡಿಕೊಂಡು ಬಂದಿರುವುದು ಅಧ್ಯಯನಗಳ ಮತ್ತು ಸರ್ಕಾರದ ವರದಿಗಳಿಂದ ತಿಳಿದುಬರುತ್ತದೆ. ಆದರೆ ಈ ಯೋಜನೆಗಳು ಜನರಿಗೆ ಯಾವ ಪ್ರಮಾಣದಲ್ಲಿ

ತಲುಪಿದೆ? ಯಾರಿಗೆ ತಲುಪಿದೆ? ಅದಕ್ಕಿಂತಲೂ ಈ ಯೋಜನೆಗಳ ಮಾಹಿತಿ ಜನರಿಗೆ ಯಾವ ಪ್ರಮಾಣದಲ್ಲಿ ತಿಳಿದಿದೆ ಎನ್ನುವ ಅಂಶಗಳನ್ನು ಈ ಕೆಳಕಂಡ ಕೋಷ್ಟಕ–೩೦ ರಲ್ಲಿ ಸಂಖ್ಯಾಶಾಸ್ತ್ರೀಯ ವಿಧಾನದ ಮೂಲಕ ತಿಳಿಸುತ್ತದೆ.

**ಕೋಷ್ಟಕ–೩೦**

**ಯೋಜನೆ ಬಗ್ಗೆ ಮಾಹಿತಿ**

| ಯೋಜನೆಯ ಬಗ್ಗೆ ತಿಳಿದಿದ್ದರೆ | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| - | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಉದ್ಯೋಗ ಖಾತರಿ ಯೋಜನೆ | ೧೬ | ೧೦.೫೩ | ೧ | ೪.೫೫ | ೧೭ | ೯.೭೭ |
| ಅನ್ನಭಾಗ್ಯಯೋಜನೆ | ೩೭ | ೨೪.೩೪ | ೩ | ೧೩.೬೪ | ೪೦ | ೨೨.೯೯ |
| ಭಾಗ್ಯಲಕ್ಷ್ಮೀಯೋಜನೆ | ೯ | ೫.೯೨ | ೦ | ೦.೦೦ | ೯ | ೫.೧೭ |
| ವಸತಿಯೋಜನೆ | ೬ | ೩.೯೫ | ೬ | ೨೭.೨೭ | ೧೨ | ೬.೯೦ |
| ಗ್ರಾಮ ಸಡಕ್‌ಯೋಜನೆ | ೧ | ೦.೬೬ | ೦ | ೦.೦೦ | ೧ | ೦.೫೭ |
| ನಿರ್ಮಲ ಭಾರತ್ ಅಭಿಯಾನ | ೯ | ೫.೯೨ | ೦ | ೦.೦೦ | ೯ | ೫.೧೭ |
| ಯೋಜನೆ ಬಗ್ಗೆ ತಿಳಿದಿಲ್ಲ | ೭೪ | ೪೮.೬೮ | ೧೨ | ೫೪.೫೫ | ೮೬ | ೪೯.೪೩ |
| **ಒಟ್ಟು** | ೧೫೨ | ೧೦೦.೦೦ | ೨೨ | ೧೦೦.೦೦ | ೧೭೪ | ೧೦೦.೦೦ |

ಚಿತ್ರದುರ್ಗ ಜಿಲ್ಲೆಯ ಅಧ್ಯಯನ ಕ್ಷೇತ್ರದಲ್ಲಿ ಗೊಲ್ಲರಹಟ್ಟಿ ಮತ್ತು ಮ್ಯಾಸಬೇಡರಹಟ್ಟಿಗಳಲ್ಲಿ ಸಮುದಾಯಗಳ ಅಭಿವೃದ್ಧಿ ಹಿನ್ನೆಲೆಯಲ್ಲಿ ಸರ್ಕಾರಗಳು ಅನೇಕ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನ ಮಾಡಿದೆ. ಆ ಯೋಜನೆಗಳ ಮಾಹಿತಿ ಈ ಎರಡು ಸಮುದಾಯಗಳಿಗೆ ಯಾವ ಪ್ರಮಾಣದಲ್ಲಿ ತಲುಪಿದೆಎನ್ನುವುದರ ಬಗ್ಗೆ ಪರಾಮರ್ಶಿಸಲಾಗಿದೆಅನ್ನ ಭಾಗ್ಯಯೋಜನೆ ಜನರಿಗೆ ಶೇಕಡ ೨೪.೩೪ ರಷ್ಟು ಮಾತ್ರ ಮಾಹಿತಿ ಇರುವುದು ಕಂಡುಬಂದರೆ ಯೋಜನೆಯ ಬಗ್ಗೆ ಮಾಹಿತಿಯೆ ಇಲ್ಲದಿರುವುದರ ಪ್ರಮಾಣ ಶೇಕಡ ೪೮.೬೮ ರಷ್ಟು ಕಂಡುಬರುವುದು. ಮ್ಯಾಸಬೇಡರಹಟ್ಟಿಯ ಸಮುದಾಯದಲ್ಲಿ ವಸತಿಯೋಜನೆಯ ಬಗ್ಗೆ ಮಾಹಿತಿ ಇರುವ ಪ್ರಮಾಣ ಶೇಕಡ ೨೭.೨೭ ರಷ್ಟು ಕಂಡುಬಂದರೆ ಮಾಹಿತಿ ಇಲ್ಲದವರು ಶೇಕಡ ೫೪.೫೫ರಷ್ಟು ಅಧ್ಯಯನದಲ್ಲಿ ಕಂಡುಬಂದಿದೆ.

ಬುಡಕಟ್ಟು ಸಮುದಾಯಗಳು ಇಂದು ಸಂಕ್ರಮಣದ ಸಂದರ್ಭದಲ್ಲಿ ನಿಂತಿವೆ. ಅನೇಕ ಸಮುದಾಯಗಳು ಆಧುನಿಕತೆಯ ಹೆಸರಿನಲ್ಲಿ ಒಕ್ಕಲೇಳುತ್ತಲೂ ಇವೆ. ಬೇಡ ಸಮುದಾಯದ ಮೀಸಲಾತಿ ಪಡೆದುಕೊಂಡು ನಿರಂತರತೆ ಇದೆ ಆದರೆ ಕಡುಗೊಲ್ಲ ಬುಡಕಟ್ಟಾಗಿಯೂ ಬುಡಕಟ್ಟಾಗದ

ರೀತಿಯಲ್ಲಿ ಸರ್ಕಾರದ ಸೌಲಭ್ಯಗಳಿಗೆ ಸೆಣಸಾಡಬೇಕಾಗಿದೆ. ಪ್ರಸ್ತುತ ರಾಜ್ಯ ಸರ್ಕಾರ ಹಿಂದುಳಿದ ವರ್ಗಗಳಿಗೆ ಕೃಷಿಕಾರ್ಮಿಕರಿಗೆ ಅನೇಕ ಯೋಜನೆಗಳನ್ನು ಹಾಕಿಕೊಂಡಿದೆ. ಈ ನಿಟ್ಟಿನಲ್ಲಿ ಕಾಡುಗೊಲ್ಲ ಮತ್ತು ಮ್ಯಾಸಬೇಡ ಸಮುದಾಯಗಳು ಆಧುನಿಕ ಜಗತ್ತಿಗೆ ತನ್ನನ್ನು ತಾನು ಸಜ್ಜುಗೊಳಿಸಿಕೊಳ್ಳಬೇಕಾದುದು ಹಾಗೂ ಸಜ್ಜುಗೊಳ್ಳಬೇಕಾದ ಅನಿವಾರ್ಯತೆ, ಅವಶ್ಯಕತೆ ಇದೆ.

**೫.೧ ಸಾಮಾಜಿಕ ಸ್ಥಿತ್ಯಂತರಗಳು:**

ಸಾಮಾಜಿಕವಾಗಿ ಹಟ್ಟಿಗಳಲ್ಲಿ ಅನೇಕ ಸವಾಲುಗಳು ಕಣ್ಣಮುಂದಿವೆ. ಜಾಗತೀಕರಣ ಮತ್ತು ಆಧುನೀಕರಣದ ಈ ಸಂದರ್ಭದಲ್ಲಿ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಆಧುನಿಕ ಜೀವನ ವಿಧಾನಕ್ಕೆ ಒಗ್ಗಿಕೊಳ್ಳುವುದು ಅತ್ಯವಶ್ಯ. ಸಂಸ್ಕೃತಿಯ ಮೂಲಬೇರುಗಳನ್ನು ಬಿಡದೆ ಆಧುನೀಕರಣಕ್ಕೂ ಸಂಪೂರ್ಣವಾಗಿ ಒಗ್ಗಿಕೊಳ್ಳದೆ ಅತಂತ್ರಸ್ಥಿತಿಯಲ್ಲಿರುವುದು ಸಹ ಕಂಡುಬರುತ್ತದೆ."ಕಾಡುಗೊಲ್ಲರಿಗೆ ಗುಡ್ಡ, ಬೆಟ್ಟಗಳ ಹುಲ್ಲುಗಾವಲುಗಳೇ ಪ್ರಧಾನವಾದ ಪ್ರದೇಶಗಳು ಅವರ ವೃತ್ತಿಗೆ ಪೂರಕವಾದುದ್ದು ಊರುಗಳ ಸಂಸ್ಕೃತಿಗೆ ಪರ್ಯಾಯವಾಗಿ ತಮ್ಮದೇ ಹಟ್ಟಿಗಳ ಸಂಸ್ಕೃತಿಯನ್ನು ಪೋಷಿಸುತ್ತಾರೆ. ಯಾವ ಕಾರಣಕ್ಕೂ ಊರಿನಕಲಾಪಗಳ ಜೊತೆ ಒಂದಾಗದ ಅವರು ಊರಿನವರನ್ನು ಮೈಲಿಗೆಯವರೆಂದೇ ಕರೆಯುತ್ತಾರೆ"[೧]. ಅಲೆಮಾರಿಗಳಾಗಿದ್ದ ಅವರು ಹಟ್ಟಿಗಳನ್ನು ಕಟ್ಟಿಕೊಂಡಂತೆ ಕಾಣುತ್ತದೆಂದು ಜುಂಜಪ್ಪನ- ಬುಡಕಟ್ಟು ಮಹಾಕಾವ್ಯ ಮಾಲೆಯಲ್ಲಿ ಹೀ.ಚಿ.ಬೋರಲಿಂಗಯ್ಯರವರು ವ್ಯಕ್ತ ಪಡಿಸುತ್ತಾರೆ. ಇದನ್ನು ನೋಡಿದರೆಪ್ರತ್ಯೇಕವಾಗಿ ವಾಸಿಸುವುದು ಅನ್ಯ ಜಾತಿಸಮೂಹಗಳೊಟ್ಟಿಗೆ ಮಿಳಿತಗೊಳ್ಳದಿರುವುದು ಸ್ಥಿತ್ಯಂತರಕ್ಕೆ ಹಿನ್ನಡೆಯಾಗಲು ಕಾರಣವಾದ ಅಂಶವಾಗಿದೆ. ಸಾಮಾಜಿಕ ಬದುಕಿನಲ್ಲಿ ಇನ್ನು ಹಲವಾರು ಮೌಢ್ಯತೆಗಳಿರುವುದು ಕಂಡುಬರುತ್ತದೆ. ಕಾಲಕ್ಕನುಗುಣವಾಗಿ ಜೀವನವೂ ಬದಲಾಗಬೇಕು. ಋತುಮತಿ, ಹೆರಿಗೆ, ಇಂತಹ ಸಂದರ್ಭಗಳಲ್ಲಿ ಹಟ್ಟಿಯಹೊರಗೆ ಹೆಣ್ಣುಮಕ್ಕಳನ್ನು ಒಂಟಿಯಾಗಿಯೇ ಇರಿಸುವ ಈ ಸಮುದಾಯ ಮೊದಲು ಮೂರು ತಿಂಗಳ ಕಾಲ ಹಟ್ಟಿಯ ಹೊರಗೆ ಇರಬೇಕಾಗಿತ್ತು. ಈಗೀಗ ಇಪ್ಪತ್ತೊಂದು ದಿನಗಳಿಗೆ ಇಳಿಸಿದ್ದಾರೆ. ಇದೊಂದು ಅಮಾನವೀಯ ಆಚರಣೆಯಾಗಿದ್ದು ಅವರಲ್ಲಿ ಪುರುಷ ಪ್ರಾಧಾನ್ಯತೆಯ ಪ್ರಾಬಲ್ಯ ಎದ್ದು ಕಾಣುತ್ತದೆ ಮಾನವ ವಾಸಿಸಲು ಯೋಗ್ಯವಲ್ಲದ ಗುಡಿಸಲು ಇಲ್ಲವೆ ತಾತ್ಕಾಲಿಕ ಬಿಡಾರ, ಸುತ್ತಮುತ್ತಲು ಕಳ್ಳಿ ಇಂತಹ ಪರಿಸರದಲ್ಲಿ ಒಂಬತ್ತು ದಿನ, ಇಪ್ಪತ್ತೊಂದುದಿನ ಕಳೆಯ ಬೇಕಾಗುತ್ತದೆ. ಹಾವು ಚೇಳುಗಳ ಕಾಟ ಮತ್ತು ಬಾಣಂತಿ ಮಗು ಹೆಂಗಸರು ಇರಬೇಕಾದ ವಿಷಮ ಪರಿಸ್ಥಿತಿಯಿಂದ ಕೂಡಿದೆ ಕಾಡುಗೊಲ್ಲರಲ್ಲಿ ವಿಧವೆಯರು ಪುನರ್ವಿವಾಹಕ್ಕೆ ಅವಕಾಶವಿಲ್ಲದಿರುವುದು, ನಮ್ಮ ಗಂಡಂದಿರಿಗೆ ಸಾವಿಲ್ಲ, ಶ್ರೀಕೃಷ್ಣನೇ ನಮ್ಮ ಗಂಡ, ನಮ್ಮ ದೇವರು ಅವನಿಗೆ ಸಾವಿಲ್ಲ ಎಂಬುದಾಗಿ ಹೇಳುತ್ತಾರೆ. ಹೆಂಡತಿ ತೀರಿದ ಬಳಿಕ ಕಾಡುಗೊಲ್ಲ ಪುರುಷ ಮರುವಿವಾಹವಾಗುವುದು ಸತ್ಯಕ್ಕೆ ಸಮೀಪವಾದ ಸಂಗತಿ. ಇಲ್ಲಿಪ್ರಶ್ನೆಯೆಂದರೆ ಬದುಕನ್ನು ರೂಪಿಸಿಕೊಳ್ಳಲು ಕಟ್ಟೆಮನೆಗಳು, ದೇವರ ಮೇಲಿನ ನಂಬಿಕೆ ಪರಿಹಾರವಾಗಲಾರವು. ಬಹುಶಃ ಭಾರತೀಯ ಸಮಾಜದ ಹಲವಾರು ಸಮುದಾಯಗಳಲ್ಲಿ ಈ ರೀತಿ ನಡೆಸಿಕೊಳ್ಳುವುದಿದೆ ಪ್ರಶ್ನೆಯೆಂದರೆ ಪುರುಷ ಪ್ರಾಧಾನ್ಯತೆಯ ಪ್ರಬಲವಾದ ವ್ಯವಸ್ಥೆ

ಕಾರಣವಿರಬಹುದು. ಕುಟುಂಬ ವ್ಯವಸ್ಥೆಯಲ್ಲೂ ಪಿತೃಪ್ರಾಧಾನ್ಯತೆ ಇರುವುದು ಕಂಡುಬರುತ್ತದೆ. ಇನ್ನೊಂದು ಅಂಶವೆಂದರೆ ಕಾಡುಗೊಲ್ಲರ ದೈವಗಳೂ ಸಹ ಪುರುಷ ಪ್ರಧಾನವಾದವು ಎತ್ತಪ್ಪ, ಜುಂಜಪ್ಪನವರೂ ಸಹ ನೀತಿ ನಿಯಮಗಳನ್ನು ಪುರುಷಪರವಾಗಿ ರೂಪಿಸಿದಂತೆ ಕಂಡುಬರುತ್ತದೆ.

ಕಾಡುಗೊಲ್ಲರಲ್ಲಿ ವಿವಾಹ ವ್ಯವಸ್ಥೆಯು ಸರಳವಾಗಿದ್ದರು, ಸಂಪ್ರದಾಯಗಳು ತುಂಬಾ ಹೆಚ್ಚಿವೆ. ಮೊದಲು ಹಟ್ಟಿಯ ಹೊರಗಡೆ ವಿವಾಹ ಮಾಡಬೇಕಿತ್ತು. ಈಗೀಗ ಹಟ್ಟಿಯೊಳಗೆ ಮತ್ತು ಛತ್ರಗಳಲ್ಲಿ ವಿವಾಹ ಮಾಡುವುದು ಕಂಡುಬರುತ್ತದೆ. ಸಾಮಾಜಿಕ ನಿರ್ಬಂಧಗಳು ಅತಿ ಹೆಚ್ಚಿರುವ ಈ ಸಮುದಾಯದಲ್ಲಿ ಬಹಿಷ್ಕಾರ, ದಂಡದ ರೂಪದ ಶಿಕ್ಷೆಗಳಿರುವುದರಿಂದ ಅಪಾರವಾದ ದೇವರ ಮೇಲಿನ ಭಕ್ತಿ, ಭಯ ಇರುವುದರಿಂದ ಪ್ರಖರವಾಗಿ ಬದಲಾವಣೆಗೆ ಸಂಪೂರ್ಣವಾಗಿ ಒಗ್ಗಿಕೊಳ್ಳದಿರುವುದು ಕಂಡುಬರುತ್ತದೆ.

ಕಾಡುಗೊಲ್ಲರು ಇನ್ನೂ ದೇವರು, ಧರ್ಮ, ಸಾಹಿತ್ಯ, ಕಲೆಗಳಲ್ಲಿ ತನ್ನದೇ ಆದ ಅನನ್ಯತೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಒಟ್ಟಾರೆ ಬುಡಕಟ್ಟು ಸಂಸ್ಕೃತಿಯನ್ನು ಹೊಂದಿರುವ ಈ ಜನಾಂಗವು ಇತ್ತೀಚಿನ ದಿನಗಳಲ್ಲಿ ಅಂಚೀಕೃತ ಗುಂಪಾಗಿ ಮಾರ್ಪಟ್ಟಿದೆ. ಇತ್ತ ತನ್ನ ಆಧುನಿಕ ಜಗತ್ತಿನ ಮೌಲ್ಯಗಳನ್ನು ಸಂಪೂರ್ಣ ಒಪ್ಪಿಕೊಳ್ಳದೆ, ಅತ್ತ ಸಂಪ್ರದಾಯಬದ್ದ ಮೌಲ್ಯಗಳನ್ನು ಸಂಪೂರ್ಣ ಬಿಡಲಾಗದೆ ತೊಳಲಾಡುತ್ತಿದ್ದಾರೆ. ಕಾಡುಗೊಲ್ಲರಲ್ಲಿ ಯಾದವ ಸಂಘಟನೆ ಹೆಚ್ಚಾಗುತ್ತಿದ್ದು ಗೊಲ್ಲರಲ್ಲಿ ಜಾಗೃತಿ ಸಾಮಾಜಿಕ ಸ್ಥಾನಮಾನಗಳು ಮತ್ತು ಸರ್ಕಾರದ ಸೌಲಭ್ಯಗಳನ್ನು ಹೊಂದಲು ಸೆಣಸಾಡುತ್ತಿರುವುದು ಕಂಡುಬರುತ್ತದೆ. ಚಿತ್ರದುರ್ಗದ ಶ್ರೀಕೃಷ್ಣಯಾದವಾನಂದ ಮಠವನ್ನು ಸ್ಥಾಪಿಸಿಕೊಂಡು ಈ ನಿಟ್ಟಿನಲ್ಲಿ ಶಿಕ್ಷಣಸಂಸ್ಥೆಗಳು, ಹಾಸ್ಟೆಲ್ ಸೌಲಭ್ಯಗಳು, ಸಂಘಟನೆಗಳನ್ನು ಕಟ್ಟಿ ಕೊಳ್ಳುವುದು. ಹೀಗೆ ಸಾಮಾಜಿಕ ಚಲನೆಯನ್ನುಂಟು ಮಾಡಲು ಜಾಗೃತಿ ಮೂಡಿಸಲು ಕಾಡುಗೊಲ್ಲರ ಹಿರಿಯ ಮುಖಂಡರು, ಸಂಘಟನೆಗಳು, ಶ್ರಮಿಸುತ್ತಿವೆ. ಈ ಅಂಶದಿಂದ ವ್ಯಕ್ತವಾಗುವ ಆಂಶವೆಂದರೆ ಜಾತಿಗಳು ಪುರ್ನಸಂಘಟನೆಗೊಳ್ಳುವ ಅಂಶ ಕಂಡುಬರುತ್ತದೆ. ಕಾಡುಗೊಲ್ಲ ಮತ್ತು ಮಾಸಬೇಡರ ಸಮುದಾಯಗಳಲ್ಲಿ ಸಮುದಾಯದ ಮಠ ಮಾನ್ಯಗಳು ಪ್ರಮುಖ ಪಾತ್ರವಹಿಸಿವೆ ಎನ್ನುವುದನ್ನು ಪ್ರಸ್ತುತ ಅಧ್ಯಯನ ಕಂಡುಕೊಂಡಿದೆ.

ಕಾಡುಗೊಲ್ಲ ಮತ್ತು ಮಾಸಬೇಡರ ಸಮುದಾಯಗಳಲ್ಲಿ ಸಮುದಾಯ ಮಠ ಮಾನ್ಯಗಳು ಪ್ರಮುಖ ಪಾತ್ರವಹಿಸಿವೆ ಎನ್ನುವುದನ್ನು ಅದರಲ್ಲಿ ಯಾವ ಯಾವ ಮಠಮಾನ್ಯಗಳು ಯಾವ ಪ್ರಮಾಣದಲ್ಲಿ ಪಾತ್ರವಹಿಸಿವೆ ಎನ್ನುವುದಕ್ಕೆ ಕಾಡುಗೊಲ್ಲರಲ್ಲಿ ಶ್ರೀಕೃಷ್ಣ ಯಾದವಾನಂದ ಸ್ವಾಮಿ ಮಠ ಪ್ರಮುಖಪಾತ್ರ ವಹಿಸಿದೆ, ಮ್ಯಾಸಬೇಡರಲ್ಲಿ ವಾಲ್ಮೀಕಿ ಮಠ ಪ್ರಮುಖ ಪಾತ್ರವಹಿಸಿದೆ ಎನ್ನುವುದು ಅಧ್ಯಯನದಲ್ಲಿ ಕಂಡುಬಂದಿದೆ.

ಕಾಡುಗೊಲ್ಲರ ಬಗ್ಗೆ ಮಾನವಶಾಸ್ತ್ರಜ್ಞರು ಫ್ರಾನ್ಸಿಸ್ ಬುಕನಾನ್, ಫಾಸೆಟ್, ಎ.ಎ. ಡಿ.ಲೂಯಿಜ್ ಎಡ್ಗರ್‌ಥರ್ಸ್ಟನ್ ಒಳಗೊಂಡಂತೆ, ಸಮಾಜಶಾಸ್ತ್ರಜ್ಞರು, ಸಂಶೋಧಕರು ಕಾಡುಗೊಲ್ಲರು ಬುಡಕಟ್ಟು

ಸಂಪ್ರದಾಯದವರೆಂದು ದೃಢೀಕರಿಸಿದ್ದಾರೆ. ಆದರೂ ಸರ್ಕಾರ ಪ್ರವರ್ಗ-೧ ರಲ್ಲಿ ಸೇರಿಸಿದೆ. ೧೯೭೬ ರ ಹಾವನೂರು ಆಯೋಗವು ಗೊಲ್ಲ ಜನಾಂಗವನ್ನು ಹಿಂದುಳಿದ ಬುಡಕಟ್ಟು(ಬಿ.ಟಿ) ಎಂದು ಶಿಪಾರಸ್ಸು ಮಾಡಿತ್ತು. ಹಾಗೂ ಶೇಕಡ ೫ ರಷ್ಟು ಮೀಸಲಾತಿ ನಿಗದಿಪಡಿಸಿತ್ತು. ಪರಿಶಿಷ್ಟ ಪಂಗಡಕ್ಕೆ ಸೇರಬೇಕಾದ ಎಲ್ಲಾ ಅರ್ಹತೆಗಳಿದ್ದರೂ ಸಹ ರಾಜಕೀಯ ಇಚ್ಛಾಶಕ್ತಿಯ ಕೊರತೆ, ಜನಾಂಗದ ಸಂಘಟಿತ ಹೋರಾಟಗಳಿಲ್ಲದ ಪರಿಣಾಮ ಕಾಡುಗೊಲ್ಲ ಜನಾಂಗವು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿಯೇ ಉಳಿಯಿತು.

ಮ್ಯಾಸಬೇಡರು ಸರ್ಕಾರದ ನಿಟ್ಟಿನಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ್ದು ಸಾಮಾಜಿಕ ಸ್ಥಿತ್ಯಂತರಗಳಿಗೆ ಸ್ಪಂದಿಸಿದ್ದಾರೆ. ಹಿಂದಿನಿಂದಲೂ ಅವರು ಸ್ವಾಭಾವಿಕವಾದ ಆಯ್ಕೆ ಮತ್ತು ಜಾತಿಯ ಮುಖಂಡರು, ವಾಲ್ಮೀಕಿಸಂಘಟನೆಗಳಿದ್ದು. ಹಿಂದಿನಿಂದಲೂ ವಿಕಾಸದಹಂತದಲ್ಲಿ ಕಾಡುಗೊಲ್ಲರಿಗೆ ಹೋಲಿಸಿದರೆ ಸ್ವಲ್ಪ ಸುಧಾರಿಸಿದ್ದಾರೆ. ಪ್ರಾರಂಭಿಕ ಹಂತದಿಂದಲೇ ಬೇಟೆ, ಪಶುಪಾಲನೆ, ಸೈನಿಕರಾಗಿ, ತಳವಾರರಾಗಿ, ಪಾಳೇಗಾರರಾಗಿ ವಿಕಾಸದ ಪ್ರಕ್ರಿಯೆಯಲ್ಲಿ ಮುನ್ನಡೆ ಸಾಧಿಸಿದ್ದರಿಂದಾಗಿ ಅವರು ಬಹು ಬೇಗ ಸ್ಥಿತ್ಯಂರಕ್ಕೆ ಒಳಗಾಗಿದ್ದರು. ಹಾಗಂತ ಎಲ್ಲಾ ಮ್ಯಾಸಬೇಡರು ಅಭಿವೃದ್ಧಿ ಹೊಂದಿದರು ಅಂತ ಅಲ್ಲ, ಸಾಮಾಜಿಕ ಚಲನೆಯಲ್ಲಿ ಉತ್ತಮ ಸ್ಥಾನಮಾನ ಪಡೆದರು ಅಂತ ಅಲ್ಲ, ಅವರಲ್ಲಿಯೂ ಚಿಕ್ಕಕುಟುಂಬಗಳಿದ್ದು, ಪಿತೃಪ್ರಧಾನತೆಯನ್ನು ಗುರುತಿಸಬಹುದು. ಮ್ಯಾಸಬೇಡರಲ್ಲಿಯೂ ಸಹ ತಮ್ಮ ಮೂಲ ಸಂಸ್ಕೃತಿ ಆಚಾರ-ವಿಚಾರ, ನಂಬಿಕೆ, ರೂಢಿ-ಸಂಪ್ರದಾಯಗಳನ್ನು ಕಾಣಬಹುದು. ಕರ್ನಾಟಕದ ಬುಡಕಟ್ಟು ಜನಾಂಗಗಳಲ್ಲೊಂದಾದ ಮ್ಯಾಸಬೇಡರು ಆರಂಭದ ಸಾಮಾಜಿಕ ಸ್ಥಿತಿಯನ್ನು ಪ್ರಸ್ತುತ ದಿನಗಳಲ್ಲಿ ಯಥಾಸ್ಥಿತಿಯಲ್ಲಿ ಕಾಣಲಾಗದು. ಅನೇಕ ಸ್ಥಿತ್ಯಂತರಗಳಿಗೆ ಒಳಗಾಗುತ್ತಲೆ ಬಂದಿದ್ದಾರೆ. ಅನಾದಿಕಾಲದಿಂದಲೂ ಮಾನವನ ಸಮಾಜವು ಪರಿವರ್ತನೆಗೊಳಗಾಗಿದೆ. ಆದರೆ ಬದಲಾವಣೆ ಕೊಂಚ ನಿಧಾನಗತಿಯದು. ರಾಜಕೀಯ ಬದಲಾವಣೆಗಳಿಂದಾಗಿ ಮಾನವನು ಅನೇಕ ರಂಗಗಳಲ್ಲಿ ಬದಲಾವಣೆ ಕಾಣಬಹುದು. ಕಾಡುಗೊಲ್ಲ ಮತ್ತು ಮ್ಯಾಸಬೇಡರ ಬದಲಾವಣೆಗೆ ಭೌಗೋಳಿಕ ಅಂಶಗಳೂ ಕಾರಣವಾದವು. ಒಂದು ಕಾಲಕ್ಕೆ ಅಲೆಮಾರಿಗಳಾಗಿದ್ದವರು ಸಮಾಜದ ಬದಲಾವಣೆಯಲ್ಲಿ ಆರ್ಥಿಕ ಅಂಶಗಳೂ ಕಾರಣವಾಗಬೇಕು. ಇಂತಹ ನಾಗರಿಕ ಬದುಕಿಗೆ ಹೊಂದಿಕೊಂಡವರಲ್ಲಿ ಪ್ರಗತಿಯ ಹಾದಿಯನ್ನು ತುಳಿದವರಲ್ಲಿ ಬೇಡ ಜನಾಂಗವೂ ಒಂದು.

ಕಾಡುಸಂಸ್ಕೃತಿಯಲ್ಲಿ ಗುರುತಿಸಲ್ಪಟ್ಟ ಮ್ಯಾಸಬೇಡರನ್ನು ನಾಡಸಂಸ್ಕೃತಿಗೆ ತಂದವರು ಆಳರಸರು. ಬೇಡರನ್ನು ಸೈನಿಕರಾಗಿ ಸಾಮಂತರಾಗಿ ಆಳರಸರು ಮಾಡಿಕೊಂಡರು. ಹೀಗೆ ಹಂತ ಹಂತವಾಗಿ ಮೇಲೇರುತ್ತಾ ಬಂದ ಬೇಡರು ಉನ್ನತ ಸ್ಥಾನಮಾನವನ್ನು ಗಳಿಸಿದರು. ವಿಜಯನಗರ ಸಾಮ್ರಾಜ್ಯದ ಕಾಲಕ್ಕೆ ಬೇಡರು ಸೈನಿಕರಾಗಿ ಅಧಿಕಾರಿಗಳಾಗಿ, ಅಮರನಾಯಕರಾಗಿ ಗುರುತಿಸಿಕೊಂಡರೂ ನಂತರ ಕೆಲವು ನಾಯಕರು ಸಮಾಜದಲ್ಲಿ ಉನ್ನತ ಸ್ಥಾನ ಮಾನಗಳನ್ನು ಉಳಿಸಿಕೊಂಡರು. ಅವರಲ್ಲಿ ಅಧಿಕಾರಸ್ಥ ಬೇಡರಿಗೂ ಸಾಮಾನ್ಯ ಬೇಡರಿಗೂ ಅಂತರ ಉಂಟಾಯಿತು. ಮ್ಯಾಸಬೇಡರಲ್ಲಿ ಪಿತೃಪ್ರಧಾನವಾದ ಕುಟುಂಬವಿದ್ದಿತು. ಮಾತೃವಿಗೂ ಕುಟುಂಬದಲ್ಲಿ ಉನ್ನತ ಸ್ಥಾನಮಾನಗಳಿದ್ದವು.

ಕುಟುಂಬದ ಎಲ್ಲಾ ಸದಸ್ಯರು ಅನ್ಯೋನ್ಯವಾಗಿ ಜೀವನ ನಡೆಸುತ್ತಿದ್ದರು ವಿವಾಹದಲ್ಲಿ ಸ್ವಜಾತಿಯವರನ್ನೇ ನೋಡಿದಾಗ ಗೊತ್ತಾಗುತ್ತದೆ. "ಸಾಮಾನ್ಯ ಬೇಡಕುಟುಂಬಗಳಲ್ಲಿ ವಿಧವಾವಿವಾಹ ಪದ್ಧತಿ ಇತ್ತು ಈ ವಿವಾಹವನ್ನು 'ಕೂಡಿಕೆ ಲಗ್ನ', ಸೀರುಡಿಕೆ ಲಗ್ನ ಎಂದು ಕರೆಯುತ್ತಿದ್ದರು. ವಿಧವೆಯರಿಂದ ಕನ್ನಯ್ಯನ ಕಾಣಿಕೆ ಪಡೆದು ಕಟ್ಟೆಮನೆ ಯಜಮಾನ ಈ ಲಗ್ನಕ್ಕೆ ಅನುಮತಿಕೊಡುತ್ತಿದ್ದನು. ಮ್ಯಾಸಬೇಡರಲ್ಲಿ ಅಂತರ್ ಜಾತಿವಿವಾಹವಿರಲಿಲ್ಲ. ಮ್ಯಾಸಬೇಡರಲ್ಲಿ ದೇವಸಾಸಿ ಪದ್ದತಿ ಕಾಣಬಹುದು. ಕ್ರಿ.ಶ.೧೫೬೫ ರಕ್ಕಸತಂಗಡಿ ಯುದ್ಧದಲ್ಲಿ ಮರಣಹೊಂದಿದ ಸೈನಿಕರ ಕುಟುಂಬಗಳು ಜೀವನ ನಿರ್ವಹಣೆಗಾಗಿ ದೇವದಾಸಿಗಳಾದರು.[೨]

ಮ್ಯಾಸಬೇಡರಲ್ಲಿ ಸಹಗಮನ ಪದ್ಧತಿ ಇತ್ತು. ಗಾದ್ರಿಪಾಲನಾಯಕನ ಹೆಂಡಂದಿರಾದ ಕೆಂಚವ್ವ, ಕಾಮವ್ವ ಗಂಜಿಗಟ್ಟೆಯಲ್ಲಿ ಸಹಗಮನ ಮಾಡಿದ್ದು ನಿದರ್ಶನವಾಗಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಲಘು ಉತ್ಪಾದನಾ ವ್ಯವಸ್ಥೆಯಲ್ಲಿ ಬೇಟೆ, ಪಶುಪಾಲನೆ, ಕೃಷಿ ಹೀಗೆ ಇಂದಿಗೂ ಸಹ ಸುಧಾರಿತ ಬುಡಕಟ್ಟಾದರೂ ಸಹ ಒಂದರೊಳಗೊಂದು ಸಂಕರಗೊಂಡು ಸಾಮಾಜಿಕ ಜೀವನವನ್ನು ನಡೆಸುತ್ತಿರುವುದು ಕಂಡು ಬರುತ್ತದೆ. ಮ್ಯಾಸಬೇಡರು ಕಾಡುಗೊಲ್ಲರಿಗೆ ಹೋಲಿಸಿದರೆ ಗಮನಾರ್ಹ ಬದಲಾವಣೆ ಹೊಂದಿರುವುದು ಕಂಡುಬರುತ್ತದೆ. ವೃತ್ತಿ, ಶಿಕ್ಷಣ, ಆರ್ಥಿಕವಾಗಿ, ನಾಗರಿಕ ಬದುಕಿಗೆ ಕೊಂಚ ತಡವಾದರೂ ಹೊಂದಿಕೊಳ್ಳಲು ಪ್ರಯತ್ನಿಸುತ್ತಿರುವುದು ಕಂಡುಬರುತ್ತದೆ.

**೫.೨ ಸಾಂಸ್ಕೃತಿಕ ಸ್ಥಿತ್ಯಂತರಗಳು:**

ಸಂಸ್ಕೃತಿ ಸಮಾಜದ ಅವಿಭಾಜ್ಯ ಅಂಗ, 'ಸಂಸ್ಕೃತಿ ಮಾನವ ಜನಾಂಗದ ಸಾಧನೆ.ಮನುಷ್ಯನ ಶ್ರಮ ಎಷ್ಟು ಬಳಕೆಯಾಗುತ್ತದೆಯೋ ಅಷ್ಟಷ್ಟು ಸಂಸ್ಕೃತಿ ವಿಕಾಸವಾಗುತ್ತದೆ. ಮನುಷ್ಯನ ದೈಹಿಕ ಶ್ರಮ ಹಾಗೂ ಬೌದ್ಧಿಕ ಶ್ರಮ ಬಳಕೆಯಾದಂತೆಲ್ಲಾ ಬದಲಾವಣೆಗಳು ಆಗುತ್ತವೆ ಹೊಸ ಹೊಸ ವಿನ್ಯಾಸಗಳು ರೂಪುಗೊಳ್ಳುತ್ತವೆ.[೩] ಸಂಸ್ಕೃತಿಗೆ ಮೇಲು ಕೀಳು, ತರತಮ, ಶ್ರೇಷ್ಠ-ಕನಿಷ್ಠ ಎಂಬುದಿರುವುದಿಲ್ಲ. ಅದೊಂದು ಜನರ ಜೀವನ ವಿಧಾನವಾಗಿದೆ. ಸಂಸ್ಕೃತಿಯು ವಿಶಾಲ ಅರ್ಥವನ್ನು ಹೊಂದಿದೆ, ಅನೇಕ ಅಂಶಗಳನ್ನೊಳಗೊಂಡ ಅದರ ವ್ಯಾಪ್ತಿ ದೊಡ್ಡದು.

'ಒಂದು ನಿರ್ಧಿಷ್ಟ ಸಮಾಜದ ಜನರು ಹಂಚಿಕೊಳ್ಳುವ ಹಾಗು ಪ್ರಸಾರ ಮಾಡುವ ಜ್ಞಾನ, ದೃಷ್ಟಿಕೋನ ಮತ್ತು ಸ್ವಾಭಾವಿಕ ನಡವಳಿಕೆಗಳ ನಮೂನೆಯ ಒಟ್ಟು ಮೊತ್ತವೇ ಸಂಸ್ಕೃತಿ"[೪] ಎಂದು ಲಿಂಟನ್ ವ್ಯಾಖ್ಯಾನಿಸುತ್ತಾರೆ. ಸಂಸ್ಕೃತಿಯು ಒಬ್ಬ ವ್ಯಕ್ತಿಗೆ ಸಂಬಂಧ ಪಟ್ಟಂತಹುದಲ್ಲ ಅದೊಂದು ಸಾಮೂಹಿಕ ಪ್ರಕ್ರಿಯೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರು ಸಾಂಸ್ಕೃತಿಕ ದೃಷ್ಟಿಯಿಂದ ತುಂಬಾನೆ ಶ್ರೀಮಂತ ಸಂಸ್ಕೃತಿಯನ್ನು ಹೊಂದಿದವರು. ಅವರ ಭಾಷೆ, ಕಲೆ, ಉಡುಪು, ಹಬ್ಬಗಳು, ಜಾತ್ರೆ ಆಚಾರ-ವಿಚಾರಗಳು, ನಂಬಿಕೆ, ಮೌಲ್ಯಗಳಿಗೆ ಯಾವುದೇ ಭಂಗ ಬಾರದಂತೆ ನಡೆದುಕೊಳ್ಳುತ್ತಾರೆ.

ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಈ ಸಮುದಾಯದ ಜಾನಪದ ಕಲೆ, ಹಾಡು, ಹಸೆ ಬರೆಯುವುದು, ಕೋಲಾಟ, ಭಜನೆ, ದೇವರ ಮೇಲಿನ ಹಾಡುಗಳು, ವಾದ್ಯಗಳಾದ ಗಣೆ, ಕೊಳಲು, ದಗಮು ಇಂದಿಗೂ ಇವೆ. ಹಾಗಾಗಿ ಬಯಲು ಸೀಮೆಯ ಪ್ರಧಾನ ಬುಡಕಟ್ಟುಗಳಲ್ಲಿ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಸಾಂಸ್ಕೃತಿಕ ದೃಷ್ಟಿಯಿಂದ ಶ್ರೀಮಂತವೆನಿಸಿವೆ.ಕಾಡುಗೊಲ್ಲರ ಸಾಂಸ್ಕೃತಿಕ ಆಚರಣೆಗಳಲ್ಲಿ ಮೂಲ ಸಂಸ್ಕೃತಿಯನ್ನು ಯಥಾವತ್ತಾಗಿ ಉಳಿಸಿಕೊಂಡು ಬಂದಿದ್ದಾರೆ. ಹಬ್ಬಗಳಲ್ಲಿ ಗುಗ್ಗರಿಹಬ್ಬ ಪ್ರಧಾನವಾಗಿದ್ದು ಮಾಮೂಲಿಯಾಗಿ ಎಲ್ಲ ಹಬ್ಬಗಳನ್ನು ಆಚರಿಸುತ್ತಾರೆ. ದೀವಳಿಯಲ್ಲಿ (ದೀಪಾವಳಿಯ) ಸಂದರ್ಭದಲ್ಲಿ ಎತ್ತುಗಳನ್ನು ಸಿಂಗರಿಸಿ ಕಿಚ್ಚು ಹಾಯಿಸುತ್ತಾರೆ. ಜಾತ್ರೆಗಳಲ್ಲಿ ಕ್ಯಾತಪ್ಪನ ಜಾತ್ರೆ, ದುಮ್ಮಿ ಗೊಲ್ಲರ ಹಟ್ಟಿಯ ಜುಂಜಪ್ಪನ ಜಾತ್ರೆ, ಚಿತ್ರಹಳ್ಳಿಯ ಚಿತ್ರದೇವರ ಜಾತ್ರೆ, ಪುರ್ಲಹಳ್ಳಿ ಭೂತಪ್ಪ, ಬಂಜಗೆರೆ ಈರಣ್ಣ ಹೀಗೆ ತಮ್ಮ ಒಕ್ಕಲುಗಳಿಗೆ ಸಂಬಂಧಿಸಿದ ದೇವರನ್ನು ಆರಾಧಿಸುವ ಮೂಲಕ ಜಾತ್ರೆ ಮತ್ತು ಹಬ್ಬಗಳನ್ನು ಆಚರಿಸುತ್ತಾರೆ. ಜಾತ್ರೆಗಳು ಮತ್ತು ಹಬ್ಬಗಳು ಸಾಮಾಜಿಕ ಸಂಬಂಧಗಳನ್ನು ಗಟ್ಟಿಗೊಳಿಸುವುದರ ಮೂಲಕ ಅವರಲ್ಲಿನ ಬಂಧವನ್ನು ಹೆಚ್ಚು ಮಾಡುತ್ತವೆ. ಆಚರಣೆಗಳು ಕಾಲಕಾಲಕ್ಕೆ ಸಾಂಸ್ಕೃತಿಕ ವೀರರ ಮೆರುಗನ್ನು ಇಮ್ಮಡಿಗೊಳಿಸುತ್ತವೆ. ಆಚರಣೆಗಳಿಲ್ಲದೆ ಯಾವ ದೈವದ ಅಸ್ತಿತ್ವವೂ ಸಾಧ್ಯವಿಲ್ಲ. ಸಾಂಸ್ಕೃತಿಕ ನಾಯಕರಿಗೂ ಸಮಾಜಕ್ಕೂ ಇರುವ ಸಂಬಂಧ ಅಭಿನವಗೊಳ್ಳುವ ಕ್ರಮದ ವಿವರಗಳೇ ಆಚರಣೆಗಳು.

ಕಾಡುಗೊಲ್ಲ ಜನಾಂಗದ ಜನಜೀವನಕ್ಕೆ ಅಸ್ತಿಭಾರದಂತಿರುವ ಎತ್ತಪ್ಪ ಮತ್ತು ಜುಂಜಪ್ಪ ಈ ಸಮುದಾಯದ ಕಣ್ಮಣಿಗಳು. ಅವರು ಹಾಕಿ ಕೊಟ್ಟ ಪಥದಲ್ಲಿಯೇ ಕಾಡುಗೊಲ್ಲರ ಸಾಂಸ್ಕೃತಿಕ ಜೀವನ ಮುಂದುವರೆಯುವುದು ವಾಡಿಕೆಯಾಗಿದೆ. ಕಾಡುಗೊಲ್ಲರು ಅವರನ್ನು ಆರಾಧಿಸುವ ದೈವತ್ವಕ್ಕೇರಿಸಿ ಪೂಜಿಸುವ ಪದ್ಧತಿ ಕಾಡುಗೊಲ್ಲರಲ್ಲಿದೆ. ಒಂದು ಕಾಲದಲ್ಲಿ ಶಿಷ್ಟಪರಂಪರೆಯು ಮಾಡುವ ಆಚಾರ, ವಿಚಾರ, ಹಬ್ಬಹರಿದಿನ, ಜಾತ್ರೆ ಮುಂತಾದವು ಮಾತ್ರ ಸಂಸ್ಕೃತಿಯೆಂದು ಕರೆಸಿಕೊಂಡಿದ್ದವು. ಆದರೆ ಈಗ ಪರಿಶಿಷ್ಟರ ಒಂದು ಸಂಸ್ಕೃತಿ ಇದೆ ಎಂಬುದನ್ನು ಹಲವಾರು ಅಧ್ಯಯನಕಾರರು ಗುರುತಿಸಿದ್ದಾರೆ. ಅಂತಹವರಲ್ಲಿ ಬರಗೂರು ರಾಮಚಂದ್ರಪ್ಪ, ರಹಮತ್ ತರಿಕೆರೆ, ಚಲುವರಾಜು, ಮೀರಾಸಾಬಿಹಳ್ಳಿ ಶಿವಣ್ಣರವರು ಹೀಗೆ ಹಲವಾರು ವಿದ್ವಾಂಸರು ಬಹುಜನರ ಬದುಕನ್ನು ಅವರ ಸಂಸ್ಕೃತಿಯನ್ನು ಹೊರಜಗತ್ತಿಗೆ ತೋರಿಸುವ ಪ್ರಯತ್ನ ಮಾಡಿದ್ದಾರೆ.

ಕಾಡುಗೊಲ್ಲರ ಸಾಂಸ್ಕೃತಿಕ ಪರಂಪರೆಯಲ್ಲಿ ಪಿಳ್ಳಂಗೋವಿ, ಕೊಳಲು, ಗಣೆ, ದಗಮು, ಶಂಖ, ಜಾಗಟೆ, ಬವನಾಸಿ, ಇವುಗಳನ್ನು ಇಂದಿಗೂ ತಮ್ಮ ಆಚರಣೆಗಳಲ್ಲಿ ಬಳಸುವುದು ಕಂಡುಬರುತ್ತದೆ. ಇವುಗಳನ್ನು ಕುಲಚಿಹ್ನೆಗಳಾಗಿಯೂ ಹೊಂದಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಕ್ತೃಗಳು ಹೇಳುತ್ತಾರೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರ ಸಮುದಾಯಗಳಲ್ಲಿ ಸಮುದಾಯದ ಕುಲ ಚಿಹ್ನೆಗಳು ಮೊದಲಿನಿಂದಲೂ ರೂಢಿಸಿಕೊಂಡು ಬಂದಿರುವುದನ್ನು ಅನೇಕ ಅಧ್ಯಯನಗಳು ಗುರುತಿಸಿವೆ.

ಅದರಲ್ಲಿಯೂ ಚಿತ್ರದುರ್ಗ ಜಿಲ್ಲೆಯ ಈ ಎರಡು ಹಟ್ಟಿಗಳಲ್ಲಿ ಕುಲದ ಚಿಹ್ನೆಗಳು ಯಾವುವು? ಇದ್ದರೆ ಅವು ಯಾವುವೆಂದರೆ ಕಾಡುಗೊಲ್ಲರಲ್ಲಿ ಕತ್ತಿ, ಬವನಾಸಿ, ಕಂಬಳಿ, ಗೊಲ್ಲ ಕಡಗ, ಕಂಡುಬಂದರೆ ಮ್ಯಾಸಬೇಡರಲ್ಲಿ ಲಿಂಗ, ಶಂಖ, ಜಾಗಟೆ ಕಂಡುಬರುತ್ತವೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರ ಸಮುದಾಯಗಳಲ್ಲಿ ಸಮುದಾಯದ ಕುಲ ಚಿಹ್ನೆಗಳು ರೂಢಿಸಿಕೊಂಡು ಬಂದಿರುವುದನ್ನು ಅಧ್ಯಯನ ಗುರುತಿಸಿದೆ.

ಹಿರಿಯ ತಲೆಮಾರಿನವರು ಕಲೆಗೆ ಹೆಚ್ಚು ಪ್ರಾಧಾನ್ಯತೆ ಕೊಟ್ಟು ಸಂಪೋಷಿಸಿಕೊಂಡು ಬಂದಿದ್ದಾರೆ. ಭಜನೆ, ನಾಟಕ, ಹಾಡುಗಳು, ಲಾವಣಿ ಹಾಡುಗಳು, ಒಗಟುಗಳು, ಗಾದೆಗಳು ಇವುಗಳನ್ನು ತಮ್ಮ ಜೀವನದ ಅವಿಭಾಜ್ಯ ಅಂಗವಾಗಿ ಹೊಂದಿರುವುದು ಅಧ್ಯಯನದಿಂದ ಕಂಡುಬಂದಿದೆ, ಆದರೆ ಯುವ ಪೀಳಿಗೆಯವರು ಅವುಗಳಲ್ಲಿ ಆಸಕ್ತಿ ತೋರದೆ ದೂರದರ್ಶನ, ಸಿನಿಮಾ, ಇತ್ಯಾದಿಗಳ ಕಡೆ ಒಲವು ತೋರುವುದು ಕಂಡುಬರುತ್ತದೆ. ಯುವಕರನ್ನು ಸಂದರ್ಶಿಸಿದಾಗ ಅವರು ಹಿರಿಯ ತಲೆಮಾರಿನವರನ್ನೇ ಬೆರಳು ಮಾಡಿ ತೋರಿಸುತ್ತಾರೆ. ಕಾಡುಗೊಲ್ಲರ ಉಡುಪು, ಶಿಕ್ಷಣ, ನಂಬಿಕೆಗಳು, ಸಂಪ್ರದಾಯಗಳು ಸ್ವಲ್ಪ ಮಟ್ಟಿಗೆ ಮೂಲ ಪರಂಪರೆಯಿಂದ ಬದಲಾವಣೆ ಹೊಂದಿರಬಹುದಾದರೂ ಸಂಪೂರ್ಣವಾಗಿ ಬದಲಾವಣೆಯಾಗಿಲ್ಲದಿರುವುದು ಕಂಡುಬರುತ್ತದೆ. ಸಮುದಾಯದ ಆಚಾರ ವಿಚಾರಗಳು ಬದಲಾಗಬೇಕೆಂಬುದಾಗಿ ಇಚ್ಛಿಸುವವರು ಎರಡು ಸಮುದಾಯಗಳಲ್ಲಿ ಕಂಡುಬರುತ್ತಾರೆ.

ಮ್ಯಾಸಬೇಡರೂ ಸಹ ಕಾಡುಗೊಲ್ಲರಿಗೆ ಹೊರತಾಗಿಲ್ಲ ಅವರಲ್ಲಿಯೂ ಸಾಂಸ್ಕೃತಿಕ ಶ್ರೀಮಂತಿಕೆಗೆ ಕೊರತೆ ಇಲ್ಲ. ಖಾಸಬುಡಕಟ್ಟು ಸಮುದಾಯವಾದ ಇದು ತನ್ನ ಸಾಂಸ್ಕೃತಿಕ ಪರಂಪರೆಯೊಳಗೆ ಬೇಟೆಯಿಂದ ಬಂದ ಬೇಡರಲ್ಲಿ ಕಲೆ, ಹಾಡುಗಳು, ಸೋಬಾನೆ ಪದಗಳು, ಲಾವಣಿಗಳು, ಕಥೆಗಳು, ಪುರಾಣಗಳು, ಭಜನೆ, ಪಾರಂಪರಿಕವಾಗಿ ಉಳಿದು ಕೊಂಡು ಬಂದಿವೆ. ಚಿತ್ರದುರ್ಗ ಎಂದರೆ ನೆನಪಿಗೆ ಬರುವುದು ಕೋಟೆಕೊತ್ತಲಗಳ ನಾಡು. ಮ್ಯಾಸಬೇಡರು ಅವರು ಕಟ್ಟಿಸಿದ ದೇವಸ್ಥಾನಗಳು, ಹೊಂಡ, ಪುಷ್ಕರಣಿ, ಇವೆಲ್ಲವನ್ನು ನೋಡಿದರೆ ಸಾಂಸ್ಕೃತಿಕವಾಗಿ ಶ್ರೀಮಂತಿಕೆಯಿಂದಿರುವುದು ಕಂಡುಬರುತ್ತದೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರು ತಮ್ಮ ವಾಸದ ನೆಲೆಗಳಲ್ಲಿ ರಚಿಸಿಕೊಂಡಿರುವ ಗುಡಿಸಲುಗಳನ್ನು ನೋಡಿದರೆ ಅವರ ಸಂಸ್ಕೃತಿ ಕಂಡುಬರುತ್ತದೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರು ತಮ್ಮ ವಾಸದ ನೆಲೆಗಳಲ್ಲಿ ರಚಿಸಿಕೊಂಡಿರುವ ಗುಡಿಸಲುಗಳನ್ನು ನೋಡಿದರೆ ಅವರ ಸಂಸ್ಕೃತಿ ಗೋಚರಿಸುತ್ತದೆ. ತದನಂತರದಲ್ಲಿ ಬದಲಾವಣೆಯಾದ ಹಂತದಲ್ಲಿ ಹೆಂಚಿನ ಮನೆ, ಮಾಳಿಗೆಮನೆ, ನಿರ್ಮಿಸಿಕೊಂಡಿರುವುದು ಕಂಡುಬರುತ್ತದೆ.

ಬೇಡಜನಾಂಗದವರು ಮೂಲತಃ ಪ್ರಕೃತಿ ಆರಾಧಕರು ಸೂರ್ಯ, ಚಂದ್ರ, ಗಿಡ, ಮರ, ಪ್ರಾಣಿ ಪಕ್ಷಿಗಳನ್ನು ಪೂಜಿಸಿಕೊಂಡು ಬಂದವರು. ಕ್ರಮೇಣ ಮೂರ್ತಿ ಪೂಜೆಯು ಪ್ರಕೃತಿ ಆರಾಧನೆಯಲ್ಲಿ ಜೊತೆಗೂಡಿತು. ಬೇಡರಲ್ಲಿ ಶೈವ ಸಂಪ್ರದಾಯ ಆರಂಭದಲ್ಲಿ ಕಂಡು ಬಂದಿತ್ತಾದರೂ

ನಂತರದಲ್ಲಿ ವೈಷ್ಣವ ಪರಂಪರೆ ಕಂಡು ಬಂದಿತು. ಬೇಡ ಜನಾಂಗದಲ್ಲಿ ತಮ್ಮ ಜನಾಂಗದ ಸಾಂಸ್ಕೃತಿಕ ವೀರರನ್ನು ಆರಾಧಿಸುವ ಪರಂಪರೆ ಇದೆ. ತಮ್ಮ ಸಂಸ್ಕೃತಿಯ ನಿರ್ಮಾಪಕರಾದ ಗಾದ್ರಿಪಾಲನಾಯಕ, ಪಾಪನಾಯಕ, ಕುಮಾರರಾಮ, ಯರಮಂಚನಾಯಕ, ಕೋರಿಪಾಪನಾಯಕ, ದಾನಸಾಲಮ್ಮ, ಚುಂಚುಲಕ್ಷ್ಮಿ ಅವರನ್ನು ಪೂಜಿಸುವುದು ಕಂಡುಬರುತ್ತದೆ.

ಮ್ಯಾಸಬೇಡರು ಇಂದಿಗೂ ಸಹ ಗುಗ್ಗರಿಹಬ್ಬ ಮಣೇವು ಕುಣಿತ, ಗಾವು ಸಿಗಿಯುವುದು, ದೇವರೆತ್ತುಗಳನ್ನು ಓಡಿಸುವುದು, ಪಂಜುನುಂಗುವುದು ಇತ್ಯಾದಿ ಕಾರ್ಯಕ್ರಮಗಳನ್ನು ಆಚರಿಸುತ್ತಾರೆ. ಈ ಹಿನ್ನೆಲೆಯಲ್ಲಿ ತಮ್ಮ ಮೂಲ ಸಂಸ್ಕೃತಿಯನ್ನು ಉಳಿಸಿಕೊಂಡಿರುವುದು ಅವರಲ್ಲಿ ಕಂಡು ಬರುತ್ತದೆ. ಚಿತ್ರದುರ್ಗದ ಬೇಡರು ಚೌಡಮ್ಮ, ಚಳ್ಳಕೇರಮ್ಮ, ಗೌರಸಂದ್ರಮಾರಮ್ಮ ದೇವತೆಗಳನ್ನು ಆರಾಧಿಸುವುದು ಕಂಡು ಬರುತ್ತದೆ. ಅವರಲ್ಲಿಯೂ ಹಬ್ಬ, ಜಾತ್ರೆಗಳು, ತಮ್ಮ ಮೂಲ ಪರಂಪರೆಯನ್ನು ತಿಳಿಸುತ್ತವೆ.

ಬೇಡರ ನೆಲೆ ಅರಣ್ಯವಾದುದರಿಂದ ನಾಗರಿಕ ಸಮಾಜದಿಂದ ದೂರವಿದ್ದರು, ನಾಗರಿಕ ಸಂಪರ್ಕ ಹೊಂದಿದ ನಂತರ ಅವರಲ್ಲಾದ ಪಲ್ಲಟಗಳು ಗಮನಾರ್ಹ. ಒಟ್ಟಾರೆಯಾಗಿ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಸಾಂಸ್ಕೃತಿಕ ಸ್ಥಿತ್ಯಂತರಗಳಲ್ಲಿ ತಮ್ಮ ಮೂಲ ಪರಂಪರೆಗಳೊಂದಿಗೆ ತಳುಕುಹಾಕಿಕೊಂಡು, ಹೊಸಜೀವನ ವಿಧಾನಗಳೊಂದಿಗೆ ಜೀವನ ಸಾಗಿಸುತ್ತಿರುವುದು ಕಂಡು ಬರುತ್ತದೆ. ಆಧುನಿಕ ತಲೆಮಾರಿನ ಯುವಕರಲ್ಲಿ ಕೆಲವೊಂದು ಆಚರಣೆಗಳು, ಕಲೆ ಕ್ಷೀಣಿಸುತ್ತಿದ್ದು ಕೇವಲ ಪಳೆಯುಳಿಕೆಗಳಂತಿವೆ.

**೫.೩ ಆರ್ಥಿಕ ಸ್ಥಿತ್ಯಂತರಗಳು:**

ಹಟ್ಟಿ ಸಂಸ್ಕೃತಿಯ ಕಾಡುಗೊಲ್ಲ ಮತ್ತು ಬೇಡರು ಮೂಲತಃ ಕಾಡಾಡಿಗಳಾಗಿ ಬದುಕಿರುವುದು ಕಂಡುಬರುತ್ತದೆ. ಕಾಡುಗೊಲ್ಲ ಆರ್ಥಿಕ ಸ್ಥಿತ್ಯಂತರಗಳಲ್ಲಿ ಉತ್ಪಾದನಾ ಸಾಧನಗಳನ್ನು ಬದಲಾಯಿಸಿಕೊಂಡಿದ್ದಾರೆ. ಪಶುಪಾಲನೆಯಿಂದ ಅಲೆಮಾರಿಗಳಾಗಿದ್ದ ಅವರು ಅತ್ಯಂತ ಸರಳ ಜೀವನವನ್ನು ಹೊಂದಿದ್ದು ಕೃಷಿಗೆ ಬಂದು ನೆಲೆನಿಂತವರಾಗಿದ್ದಾರೆ. ಅಂದರೂ ಅವರಲ್ಲಿ ತುಂಬಾ ಸ್ಥಿತಿವಂತರೇನಿಲ್ಲ ಸಣ್ಣ ಹಿಡುವಳಿದಾರರು, ಮಧ್ಯಮ ಹಿಡುವಳಿದಾರರೇ ಹೆಚ್ಚಿದ್ದಾರೆ. ಪರ್ಯಾಯವಾಗಿ ಕುರಿಸಾಕಣೆಯನ್ನು ಹೊಂದಿದ್ದು ಕುರಿಸಾಕಣಿಕೆಗೆ ಹಲವಾರು ತೊಡಕುಗಳಿರುವುದು ಕಂಡು ಬರುತ್ತದೆ. ಸಮಸ್ಯೆಯೆಂದರೆ ಹುಲುಗಾವಲುಗಳಿಲ್ಲದಿರುವುದು, ಕಾಡುಕಡಿದು ಗೋಮಾಳಗಳನ್ನು ಕೃಷಿ ಭೂಮಿಯನ್ನಾಗಿ ಮಾಡಿಕೊಂಡಿರುವುದು ಮತ್ತು ಕೃಷಿ ಭೂಮಿ ಕೈಗಾರಿಕಾ ವಲಯಗಳಿಗೆ ಪರಿವರ್ತಿತವಾಗಿರುವುದು ಕಂಡು ಬರುತ್ತದೆ. 'ಕೊಕ್ಕರೆಗೆ ಒಂದು ಕೆರೆಯಲ್ಲ ಕಾಡುಗೊಲ್ಲರಿಗೆ ಒಂದು ಊರಲ್ಲ' ಎಂಬಂತೆ ಎಲ್ಲಿ ಹುಲ್ಲು ನೀರು ಇದೆಯೋ ಅದೇ ಅವರ ಮನೆಮಾರು. ಕಾಲಸಂದಂತೆ ಸ್ಥಿರವಾಗಿ ನಿಂತು ವ್ಯವಸಾಯವನ್ನು ವೃತ್ತಿಯನ್ನಾಗಿಸಿಕೊಂಡಿದ್ದಾರೆ. ಕೂಲಿಕಾರ್ಮಿಕರು, ಕೃಷಿ ಕಾರ್ಮಿಕರು ಹೆಚ್ಚಾಗಿ ಕಂಡು ಬರುತ್ತಿದ್ದಾರೆ. ಇತ್ತೀಚೆಗೆ ಶಿಕ್ಷಣ ಪಡೆದ ವಿದ್ಯಾವಂತರು

ಅಲ್ಪಸ್ವಲ್ಪ ಸರ್ಕಾರಿ ನೌಕರಿಯನ್ನು ಹೊಂದುತ್ತಿದ್ದಾರೆ. ಸ್ತ್ರೀಯರಲ್ಲಿ ಶಿಕ್ಷಣ ಮಟ್ಟ ಕಡಿಮೆ ಇದ್ದು ಮನೆಕೆಲಸ, ಕುರಿಕಾಯುವುದು, ದನಗಳನ್ನು ಆಡಿಸುವುದು, ಹೊಲಗೆಲಸ ಮಾಡುವುದು ಕಂಡು ಬರುತ್ತದೆ. ಮ್ಯಾಸಬೇಡರು ಹಾಗೂ ಕಾಡುಗೊಲ್ಲರಲ್ಲಿ ಮಹಿಳೆಯರ ದುಡಿಮೆಯ ವಿಧಾನಗಳು ಯಾವುವು ಅದರಲ್ಲಿ ಯಾವ ದುಡಿಮೆಯಿಂದ ತನ್ನ ಜೀವನ ಸಾಗಿಸುವರು ಎನ್ನುವುದಕ್ಕೆ ಕೋಷ್ಟಕ ೩೧ ರಲ್ಲಿ ವ್ಯಕ್ತವಾಗುವುದು.

**ಕೋಷ್ಟಕ-೩೧**

**ಮಹಿಳೆಯರ ದುಡಿಮೆಯ ವಿಧಾನಗಳು**

| – | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| – | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಮನೆ ಕೆಲಸ | ೪೨ | ೨೭.೬೩ | ೮ | ೩೬.೩೬ | ೫೦ | ೨೮.೭೪ |
| ಕೃಷಿ ಕೆಲಸ | ೩೨ | ೨೧.೦೫ | ೧ | ೪.೫೫ | ೩೩ | ೧೮.೯೭ |
| ಕೃಷಿ ಕೂಲಿ | ೫೬ | ೩೬.೮೪ | ೧೧ | ೫೦.೦೦ | ೬೭ | ೩೮.೫೧ |
| ವ್ಯಾಪಾರ | ೩ | ೧.೯೭ | ೦ | ೦.೦೦ | ೩ | ೧.೭೨ |
| ಕೃಷಿಯೇತರ | ೧೯ | ೧೨.೫೦ | ೨ | ೯.೦೯ | ೨೧ | ೧೨.೦೭ |
| **ಒಟ್ಟು** | ೧೫೨ | ೧೦೦.೦೦ | ೨೨ | ೧೦೦.೦೦ | ೧೭೪ | ೧೦೦.೦೦ |

**ರೇಖಾನಕ್ಷೆ-೭ ಮಹಿಳೆಯರ ದುಡಿಮೆಯ ವಿಧಾನಗಳು**




ಮ್ಯಾಸಬೇಡರು ಹಾಗೂ ಕಾಡುಗೊಲ್ಲರಲ್ಲಿ ಮಹಿಳೆಯರ ದುಡಿಮೆಯ ವಿಧಾನಗಳು ಯಾವುವು ಅದರಲ್ಲಿ ಯಾವ ದುಡಿಮೆಯಿಂದ ತಮ್ಮ ಜೀವನೋಪಾಯ ಕೃಷಿಕೂಲಿಯಿಂದಲೇ ನಡೆಸುವರು ಎನ್ನುವುದಕ್ಕೆ, ಶೇಕಡ ೩೬.೮೪ ರಷ್ಟು ಕಂಡುಬಂದರೆ. ಮ್ಯಾಸಬೇಡರಲ್ಲೂ ಜೀವನ ನೆಡೆಸುವುದು ಕೃಷಿಕೂಲಿಯಿಂದಲೇ ಎನ್ನುವುದಕ್ಕೆ ಶೇಕಡ ೫೦.೦೦ ರಷ್ಟು ಕಂಡುಬಂದಿರುವುದು ಪ್ರಸ್ತುತ ಅಧ್ಯಯನ ತಿಳಿಸುತ್ತದೆ.

**ಜಮೀನು ಹೊರತು ಪಡಿಸಿದ ಜೀವನ ಮಾರ್ಗಗಳು:**

ಕಾಡುಗೊಲ್ಲರಲ್ಲಿ ತನ್ನ ಜೀವನೋಪಾಯಕ್ಕಾಗಿ ಜಮೀನು ಹೊರತು ಪಡಿಸಿದ ಜೀವನ ಮಾರ್ಗಗಳಾದ ಕೃಷಿ ಕೂಲಿ, ಪಶುಸಂಗೋಪನೆ ಮತ್ತು ಕೃಷಿಯೇತರ ಕೆಲಸಗಳನ್ನು ಮಾಡುತ್ತಾರೆ.

ಮ್ಯಾಸಬೇಡರಲ್ಲೂ ಸಹ ಈ ಸ್ಥಿತಿಗೇನು ಹೊರತಾಗಿಲ್ಲ, ಆರ್ಥಿಕ ಅಂಶಗಳು ಮಾನವನ ಅಭಿವೃದ್ಧಿಗೆ ಸಹಾಯಕವಾಗುತ್ತವೆ. ಬೇಡರ ಆರಂಭಿಕ ಉತ್ಪಾದನ ಹಂತ ಬೇಟೆಯಾಗಿದ್ದು ಜೀವನಾವಶ್ಯಕ ಆಸರೆಯಾಗಿದ್ದು ಇಂದು ಹವ್ಯಾಸವಾಗಿದೆ. ಕಾಡು ಸಂಸ್ಕೃತಿಯ ಬೇಡರು ವಿಕಾಸದ ಹಂತದಲ್ಲಿ ಜೀವನ ವಿಧಾನ, ಉಡುಗೆ ತೊಡುಗೆ, ವಸತಿ, ಆಹಾರ ಮುಂತಾದವುಗಳಲ್ಲಿ ಅಮೂಲಾಗ್ರ ಬದಲಾವಣೆಗಳು ಕಂಡು ಬಂದವು. ಅಹಿಂಸೆ ಬಗ್ಗೆ ತಿಳಿದುಕೊಂಡು ಬೇಡರು, ಮತ್ತು ಕೆಲವರು ಸಸ್ಯಹಾರಿಗಳಾಗಿದ್ದು, ಬೇಟೆ ನಿಷೇದ ಕಾಯ್ದೆ ಹೇರಿದ್ದು ಬೇಟೆ ಬೇಡರಿಗೆ ಹವ್ಯಾಸವಾಗಲು ಕಾರಣವಾದವು. ಬೇಡರು ಬೇಟೆಯ ನಂತರದಲ್ಲಿ ಪಶುಪಾಲನೆ, ಕೃಷಿ, ಕುರಿಸಾಕಣಿಕೆ ಹೀಗೆ ಹಲವು ಉದ್ಯೋಗಗಳನ್ನು ಆಯ್ಕೆಮಾಡಿಕೊಂಡು ಕಾಡುತೀರದಲ್ಲಿ ಕೃಷಿಯನ್ನು ಆರಂಭಿಸಿದರು. ಬೇಡನಾಯಕ ಅರಸರು ಕೆರೆ, ಕಾಲುವೆ, ಅಣೆಕಟ್ಟುಗಳನ್ನು ಕಟ್ಟಿಸುವ ಮೂಲಕ ಹೆಚ್ಚಿನ ಆದ್ಯತೆ ನೀಡಿದರು ಎಂಬುದು ಚರಿತ್ರೆಯಿಂದ ತಿಳಿದುಬರುತ್ತದೆ. ಆಳರಸರು ಕೃಷಿಗೆ ಹೆಚ್ಚು ಒಲವು ತೋರಿದರೂ ಸಹ ಬೇಡರು ಬೇಟೆ, ಪಶುಪಾಲನೆ, ಕುರಿಸಾಕಣಿಕೆಗೆ ನೀಡಿದ ಪ್ರಾಮುಖ್ಯ ಕೃಷಿಗೆ ನೀಡಲಿಲ್ಲವೆಂದು ಕಾಣುತ್ತದೆ. ಇಂದೂ ಸಹ ಬೇಡರು ಕೃಷಿಯನ್ನು ಹೊರತುಪಡಿಸಿ ಇದೇ ವೃತ್ತಿಗಳನ್ನು ಕೈಗೊಂಡಿರುವುದು ಅಧ್ಯಯನದಲ್ಲಿ ಕಂಡುಬರುತ್ತದೆ. ಇತ್ತೀಚೆಗೆ ಬೇಡ ಜನಾಂಗದಲ್ಲಿ ಮೀಸಲಾತಿ ಪಡೆದುಕೊಂಡು ಶಿಕ್ಷಣ ಪಡೆದು ಉದ್ಯೋಗಗಳಿಗೆ ಕಳುಹಿಸುವ ಪ್ರಯತ್ನ ಮಾಡುತ್ತಿದ್ದಾರೆ.

**೫.೪ ರಾಜಕೀಯ ಸ್ಥಿತ್ಯಂತರಗಳು:**

ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಪಾರಂಪರಿಕವಾದ ರಾಜಕೀಯ ವ್ಯವಸ್ಥೆಯಿದ್ದು ಸಮುದಾಯವನ್ನು ನಿಯಂತ್ರಣ ಮಾಡಲು ತಮ್ಮದೇ ಆದ ಆಡಳಿತ ವ್ಯವಸ್ಥೆಯನ್ನು ಹೊಂದಿದ್ದರು. ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಸಮುದಾಯವನ್ನು ನಿಯಂತ್ರಿಸಲು ಕಟ್ಟೆಮನೆಗಳು ಬಹುಮುಖ್ಯ ಪಾತ್ರ ವಹಿಸುತ್ತವೆ. ಈ ಸಮುದಾಯಗಳಲ್ಲಿ ಜಗಳ, ವ್ಯಾಜ್ಯ, ಅನ್ಯಜಾತಿಯಲ್ಲಿ ಮದುವೆಯಾದರೆ, ಮೆಟ್ಟಿನಿಂದ ಹೊಡೆದಾಡಿದರೆ ನ್ಯಾಯ ತೀರ್ಮಾನ ಕೊಡುವಲ್ಲಿ ಕಟ್ಟೆಮನೆಗಳದ್ದೆ ಪ್ರಮುಖ ಪಾತ್ರ, ಕಟ್ಟೆಮನೆಗಳೆಂದರೆ ಜನಾಂಗದ ನ್ಯಾಯ ತೀರ್ಮಾನ ಮಾಡುವ ಪಂಚಾಯಿತಿ ಕಟ್ಟೆಗಳು. ಕಾಡುಗೊಲ್ಲರಲ್ಲಿ ಪೂಜಾರಿ, ಯಜಮಾನ, ಗೌಡ, ತಳವಾರ ಹೀಗೆ ಶ್ರೇಣಿ ವ್ಯವಸ್ಥೆಯಿರುತ್ತದೆ. ಮ್ಯಾಸಬೇಡರಲ್ಲಿಯು ದೊರೆಗಳು, ಯಜಮಾನ, ದಾಸಯ್ಯ, ಕಿಲಾರಿಗಳು ಎಂಬ ಶ್ರೇಣಿ ವ್ಯವಸ್ಥೆ ಇದ್ದು ಸಮುದಾಯದ ನಿರ್ಣಯಗಳಲ್ಲಿ ಪ್ರಮುಖ ಪಾತ್ರವಹಿಸುತ್ತಾರೆ.

ಕಾಡುಗೊಲ್ಲರ ಸಮುದಾಯವು ಆಧುನಿಕ ದಿನಗಳಲ್ಲಿ ರಾಜಕೀಯವಾಗಿ ಅತ್ಯಂತ ಹಿಂದುಳಿದಿರುವುದು ಸಂವಿಧಾನಗಳ ಆಶಯಗಳಿಗೆ ತಾಳೆ ನೋಡುವುದಾದರೆ ಅದಕ್ಕೆ ತಕ್ಕಂತೆ

ಪ್ರಾತಿನಿಧ್ಯತೆ ಸಿಕ್ಕಿರುವುದು ಅತ್ಯಂತ ಕಡಿಮೆಯೆ ಅನಿಸುವುದು. ರಾಜಕೀಯವಾಗಿ ಹಿಂದುಳಿದಿರುವ ಸಮುದಾಯಗಳು ಸಾಮಾನ್ಯವಾಗಿ ಅಭಿವೃದ್ಧಿಯಲ್ಲೂ ಹಿಂದುಳಿಯುವುದು ಒಂದು ತಾತ್ವಿಕಕ ವಿಚಾರವೂ ಆಗಿರುವುದು. ಈ ಹಿನ್ನೆಲೆಯಲ್ಲಿ ಆ ಸಮುದಾಯಗಳಲ್ಲಿ ಬಡತನದ ಸ್ವರೂಪಗಳು ತಾನಾಗಿಯೇ ಹೆಚ್ಚುತ್ತವೆ. ಈ ಬುಡಕಟ್ಟುಗಳಲ್ಲಿ ರಾಜ್ಯ ಮತ್ತು ರಾಷ್ಟ್ರ ಮಟ್ಟದ ಪ್ರತಿನಿಧಿಗಳನ್ನು ಹೊಂದಿರಲಿಲ್ಲ. ರಾಜಕೀಯ ಮೀಸಾಲಾತಿಯ ಅವಕಾಶ ಇಲ್ಲದಿರುವಿಕೆಯು ಕಾರಣ. ೧೯೯೨ ರಲ್ಲಿ ಸಂವಿಧಾನಕ್ಕೆ ೭೩ನೇ ತಿದ್ದುಪಡಿತಂದು ಪಂಚಾಯತ್ ರಾಜ್ಯ ವ್ಯವಸ್ಥೆಯಲ್ಲಿ ಗಮನಾರ್ಹ ಬದಲಾವಣೆಯನ್ನು ಮಾಡಲಾಯಿತು. ೧೯೯೪ ರಲ್ಲಿ ರಾಜ್ಯಸರ್ಕಾರ ರಾಜ್ಯದ ಎಲ್ಲಾ ಹಿಂದುಳಿದ ಜಾತಿಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಿತು. ಹಿಂದುಳಿದ ಜಾತಿಗಳನ್ನು ಎ ಗುಂಪಿಗೆ ಸೇರಿಸಲಾಯಿತು. ಸಹಜವಾಗಿಯೇ ಹಿಂದುಳಿದ ಗೊಲ್ಲ ಸಮುದಾಯವು ಮೀಸಾಲಾತಿ ಪಡೆಯಲು ಪ್ರಾರಂಭಿಸಿತು. ಸ್ಥಳೀಯ ಸರ್ಕಾರಗಳಾದ ಜಿಲ್ಲಾಪಂಚಾಯತ್, ತಾಲ್ಲೂಕ್‌ಪಂಚಾಯತ್, ಗ್ರಾಮಪಂಚಾಯತ್, ನಗರಸಭೆ, ಪುರಸಭೆ, ನಗರಪಾಲಿಕೆಗಳಲ್ಲಿ ಗೊಲ್ಲ ಸಮುದಾಯವು ಸ್ಪರ್ಧಿಸುವಂತೆ ಮಾಡಿತು. ಈ ಬೆಳವಣಿಗೆಗಳು ಸ್ಥಿತ್ಯಂತರದ ಚಲನೆಯ ವೇಗಗಳನ್ನು ಹೆಚ್ಚಿಸಿಕೊಳ್ಳುವುದು ಮತ್ತು ಸಾಂಪ್ರದಾಯಿಕ ಪದ್ಧತಿಗಳನ್ನು ಹಿಂಬೀಳುವಿಕೆಯ ಅಂಚಿನಲ್ಲಿರುವುದನ್ನು ಅಧ್ಯಯನದಲ್ಲಿ ಮಾಹಿತಿಯನ್ನು ಕಲೆಹಾಕಿರುವುದು.

ಈ ಹಿನ್ನೆಲೆಯಲ್ಲಿ ಈ ಜನಾಂಗದಲ್ಲಿ ರಾಜಕೀಯ ನಾಯಕರಾಗಿ ಕೃಷ್ಣಪ್ಪನವರು, ಉಮಾಪತಿಯವರು, ಕೋದಂಡರಾಮಯ್ಯನವರು, ರಾಜಕೀಯ ಕ್ಷೇತ್ರದಲ್ಲಿ ಆಳ್ವಿಕೆ ನೆಡೆಸಿ ಜನಾಂಗದ ಅಭಿವೃದ್ಧಿಗೆ ಶ್ರಮಿಸಿರುವುದು ಕಂಡು ಬರುತ್ತದೆ. ಇತ್ತೀಚೆಗೆ ರಾಜ್ಯದ ಗೊಲ್ಲ ಸಮುದಾಯದಲ್ಲಿ ರಾಜಕೀಯ ಪ್ರಜ್ಞೆ ಹೆಚ್ಚುತ್ತಿದ್ದು ಸಮುದಾಯದ ಜನಸಂಖ್ಯೆಗೆ ಅನುಗುಣವಾಗಿ ರಾಜಕೀಯ ಪ್ರಾತಿನಿಧ್ಯವಿಲ್ಲದಿರುವುದು ಕಂಡು ಬರುತ್ತದೆ. ಮ್ಯಾಸಬೇಡರೂ ಹಾಗೂ ಕಾಡುಗೊಲ್ಲರಲ್ಲಿ ಸಂವಿಧಾನಾತ್ಮಕವಾಗಿ ಹಕ್ಕಿನ ಪ್ರಶ್ನೆ ಬಂದಾಗ ಸಮುದಾಯಕ್ಕೆ ರಾಜಕೀಯ ಮೀಸಲಾತಿ ಯಾವ ಪ್ರಮಾಣದಲ್ಲಿ ದೊರಕಿರುವುದು ಎನ್ನುವುದನ್ನು ಕೋಷ್ಟಕ ೩೨ ರಲ್ಲಿ ವ್ಯಕ್ತವಾಗುವುದು.

**ಕೋಷ್ಟಕ-೩೨**

**ಸಮುದಾಯಕ್ಕೆ ರಾಜಕೀಯ ಮೀಸಲಾತಿ ದೊರಕಿರುವುದು**

| – | ಗೊಲ್ಲರಹಟ್ಟಿ | | ಮ್ಯಾಸಬೇಡರಹಟ್ಟಿ | | ಒಟ್ಟು | |
|---|---|---|---|---|---|---|
| – | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ | ಆವೃತ್ತಿ | ಶೇಕಡ |
| ಹೌದು | ೩೧ | ೨೦.೩೯ | ೨೧ | ೯೫.೪೫ | ೫೨ | ೨೯.೮೯ |
| ಇಲ್ಲ | ೧೧೦ | ೭೨.೩೭ | ೧ | ೪.೫೫ | ೧೧೧ | ೬೩.೭೯ |
| ಗೊತ್ತಿಲ್ಲ | ೧೧ | ೭.೨೪ | ೦ | ೦.೦೦ | ೧೧ | ೬.೩೨ |
| ಒಟ್ಟು | ೧೫೨ | ೧೦೦.೦೦ | ೨೨ | ೧೦೦.೦೦ | ೧೭೪ | ೧೦೦.೦೦ |

ಮ್ಯಾಸಬೇಡರು ಹಾಗೂ ಕಾಡುಗೊಲ್ಲರಲ್ಲಿ ಸಂವಿಧಾನಾತ್ಮಕವಾಗಿ ಹಕ್ಕಿನ ಪ್ರಶ್ನೆ ಬಂದಾಗ ಸಮುದಾಯಕ್ಕೆ ರಾಜಕೀಯ ಮೀಸಲಾತಿ ಯಾವ ಪ್ರಮಾಣದಲ್ಲಿ ದೊರಕಿರುವುದು ಎನ್ನುವುದನ್ನು ಕಾಡುಗೊಲ್ಲರಲ್ಲಿ ಶೇಕಡ ೨೦.೩೯ ರಷ್ಟು ಮಿಸಲಾತಿ ದೊರೆಕಿದೆ ಎನ್ನುವುದು ತಿಳಿಯುತ್ತದೆ. ಮ್ಯಾಸಬೇಡರಲ್ಲಿ ಸಮುದಾಯಕ್ಕೆ ರಾಜಕೀಯ ಮೀಸಲಾತಿ ದೊರಕಿರುವುದು ಶೇಕಡ ೯೫.೪೫ ರಷ್ಟು ಕಂಡುಬರುತ್ತದೆ. ಮೀಸಲಾತಿ ಮಾಹಿತಿ ಗೊತ್ತಿಲ್ಲದವರ ಪ್ರಮಾಣ ಶೇಕಡ ೦.೦೦ ರಷ್ಟು ಕಂಡುಬರುವುದು.

ಮ್ಯಾಸಬೇಡರು ಸಹ ವಿಕಾಸದ ಹಂತದಲ್ಲಿ ಬೇಟೆ, ಪಶುಪಾಲನೆ ಮತ್ತು ಕೃಷಿಯ ಹಂತಕ್ಕೆ ಬಂದವರು. ಪ್ರಾಚೀನ ಕಾಲದಿಂದಲೂ ಬೇಡರು ಶೂರರು, ಪರಾಕ್ರಮಿಗಳು ಧೈರ್ಯಶಾಲಿಗಳು ಆಗಿದ್ದ ಅವರು ಬೇಟೆಯಲ್ಲಿ ನಿಪುಣರಾಗಿದ್ದರು. ಪಶುಪಾಲನ ಹಂತದಲ್ಲಿಯೇ ಆಂಧ್ರದ ಶ್ರೀಶೈಲದಿಂದ ಬಂದ ಅವರು ವಿಜಯನಗರ ಸಾಮ್ರಾಜ್ಯ ತಲೆಯೆತ್ತಲು ಮತ್ತು ಪೋಷಿಸಲು ಮಹತ್ತರ ಪಾತ್ರ ವಹಿಸಿದರು. ಸೈನಿಕರಾಗಿ ಸಾಮಂತರಾಗಿ ಕೆಲಸ ನಿರ್ವಹಿಸಿದರು. "ಹಲವಾರು ಹುದ್ದೆಗಳನ್ನು ಹೊಂದಿದ್ದ ಅವರು ೧೫೬೫ ರ ರಕ್ಕಸ ತಂಗಡಿ ಯುದ್ದದ ನಂತರದಲ್ಲಿ ಪಾಳೆಗಾರರಾಗಿ ಚಿತ್ರದುರ್ಗ, ಹರಪನಹಳ್ಳಿ, ನಾಯಕನ ಹಟ್ಟಿ, ಮತ್ತೋಡು ಬಳ್ಳಾರಿ, ಗುಡೇಕೋಟೆ, ಹೀಗೆ ಪಾಳೆಪಟ್ಟುಗಳನ್ನು ಕಟ್ಟಿಕೊಂಡು ಕೋಟೆ ಕೊತ್ತಲಗಳನ್ನು ನಿರ್ಮಿಸಿಕೊಂಡು ಅರಸರಾಗಿ ಆಳ್ವಿಕೆ ನಿರ್ವಹಿಸಿದರು. ಸ್ಮಿತ್ ಹೇಳುವಂತೆ ಬೇಡರಿಗಿಂತ ಶೂರರಿರಬಹುದು ಅದರೆ ಬೇಡರಷ್ಟು ಶೂರರಿಲ್ಲ ಎಂಬುದು ಸತ್ಯಕ್ಕೆ ಸಮೀಪವಾದ ಸಂಗತಿ".[೫] ಪ್ರಾಚೀನ ಪರಂಪರೆಯಿಂದಲೂ ವ್ಯವಸ್ಥಿತ ರಾಜಕೀಯ ಹಿನ್ನಲೆ ಈ ಸಮುದಾಯಕ್ಕಿದೆ. ಬೇಡ ಬುಡಕಟ್ಟು ಸಮುದಾಯದ ಅಂದಿನ ರಾಜಕೀಯ ವ್ಯವಸ್ಥೆಗೂ ಇಂದಿನ ರಾಜಕೀಯ ವ್ಯವಸ್ಥೆಗೂ ಸಾಕಷ್ಟು ಸ್ಥಿತ್ಯಂತರಗಳಾಗಿವೆ. ಚಿತ್ರದುರ್ಗವನ್ನು ಆಳಿದ ಬೇಡರು ಪಾಳೆಗಾರರೆಂದು ಹೆಸರಾಗಿದ್ದಾರೆ. ಮತ್ತಿ ತಿಮ್ಮಣ್ಣನಾಯಕ ಚಿತ್ರದುರ್ಗದ ಪಾಳೆಗಾರರ ಮೊದಲ ದೊರೆ.

ಇತ್ತೀಚಿನ ಅಧುನಿಕ ರಾಜಕೀಯ ವ್ಯವಸ್ಥೆಯಲ್ಲಿ ಸಂವಿಧಾನದ ಅವಕಾಶಗಳು ಸರ್ಕಾರದ ಅನುಷ್ಠಾನದ ಪ್ರಕ್ರಿಯೆಗಳು ಮ್ಯಾಸಬೇಡರ ಜೀವನದಲ್ಲಿ ತನ್ನ ಬದುಕಿನ ಕ್ರಮಗಳನ್ನು ಬದಲಾಯಿಸಿರುವುದು ಚರ್ಚೆಗೆ ಗ್ರಾಸವಾಗುವುದು. ಇದರಿಂದ ಆ ಸಮುದಾಯಗಳು ಪ್ರಬಲವಾಗಿ ಬೆಳೆಯ ತೊಡಗಿದರು. ಪ್ರಸ್ತುತ ರಾಜಕೀಯ ಕ್ಷೇತ್ರದಲ್ಲಿ ಹೆಸರು ಮಾಡಿರುವ ಬೇಡ ಬುಡಕಟ್ಟು ಸಮುದಾಯದ ಕೆಲವು ಪ್ರಮುಖ ರಾಜಕೀಯ ಗಣ್ಯರನ್ನು ಕಾಣಬಹುದು. ಎನ್.ವೈ.ಹನುಮಂತಪ್ಪ (ಮೊಳಕಾಲ್ಮೂರು ಕ್ಷೇತ್ರ) ಎನ್.ವೈ.ಗೋಪಾಲಕೃಷ್ಣ (ಮೊಳಕಾಲ್ಮೂರು ಕ್ಷೇತ್ರ) ಪೂರ್ಣಮುತ್ತಪ್ಪ (ಮೊಳಕಾಲ್ಮೂರು ಶಾಸಕರು) ಪಟೇಲ್ ಪಾಪನಾಯಕ (ಮೊಳಕಾಲ್ಮೂರು ಶಾಸಕರು) ಎನ್.ಟಿ ಬೊಮ್ಮಣ್ಣ (ಕೂಡ್ಲಿಗಿ ಕ್ಷೇತ್ರ) ಹೀಗೆ ಕರ್ನಾಟಕ ರಾಜ್ಯದಲ್ಲಿ ಮ್ಯಾಸಬೇಡರ ರಾಜಕೀಯ ಪ್ರಾತಿನಿಧ್ಯತೆಯನ್ನು

ಕಾಣಬಹುದು.

೨೦೦೩ರ ವಿಧಾನಸಭೆ ಚುನಾವಣೆಯಲ್ಲಿ ಕರ್ನಾಟಕ ರಾಜ್ಯದಲ್ಲಿ ಈ ಸಮುದಾಯದಲ್ಲಿ ಒಟ್ಟು ಹನ್ನೆರಡು ಶಾಸಕರು ಆಯ್ಕೆಯಾಗಿದ್ದಾರೆ. ಅದರಲ್ಲಿ ಮುಖ್ಯವಾಗಿ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಕ್ಷೇತ್ರದಿಂದ ಟಿ.ರಘುಮುರ್ತಿಯವರು, ಮೊಳಕಾಲ್ಮೂರು ಕ್ಷೇತ್ರದಿಂದ ಎಸ್.ತಿಪ್ಪೆಸ್ವಾಮಿಯವರು ಆಯ್ಕೆಯಾಗಿದ್ದಾರೆ. ಈ ಎರಡು ಕ್ಷೇತ್ರಗಳು ಪರಿಶಿಷ್ಟ ಪಂಗಡದ ಮೀಸಲು ಕ್ಷೇತ್ರಗಳಾಗಿವೆ. ಹೀಗೆ ಕಾಡುಗೊಲ್ಲ ಮತ್ತು ಮ್ಯಾಸಬೇಡರು ರಾಜಕೀಯವಾಗಿ ಅಸ್ತಿತ್ವವನ್ನು ಈ ಭಾಗದಲ್ಲಿ ಹೊಂದುವುದರ ಮೂಲಕ ಸ್ಥಿತ್ಯಂತರಗೊಂಡಿರುವುದನ್ನು ಕಾಣಬಹುದಾಗಿದೆ.

ಕಾಡುಗೊಲ್ಲ ಮತ್ತು ಮ್ಯಾಸಬೇಡರು ಚಿತ್ರದುರ್ಗ ಜಿಲ್ಲೆಯಲ್ಲಿ ತಮ್ಮ ಅನನ್ಯತೆಯನ್ನು ಗುರುತಿಸಿಕೊಳ್ಳುವುದರೊಂದಿಗೆ ಮೂಲ ಪರಂಪರೆಯನ್ನು ಉಳಿಸಿಕೊಂಡು ಸ್ಥಿತ್ಯಂತರಗಳಿಗೆ ಅಣಿಯಾಗುತ್ತಿರುವುದನ್ನು ಪ್ರಸ್ತುತ ಅಧ್ಯಯನವು ಸ್ಪಷ್ಟ ಪಡಿಸುತ್ತದೆ.

**ಅಡಿಟಿಪ್ಪಣಿಗಳು**

೧. ಚಲುವರಾಜು. ಜುಂಜಪ್ಪನ- ಬುಡಕಟ್ಟು ಮಹಾಕಾವ್ಯ ಮಾಲೆ. ೧೯೯೭, ಪ್ರಸ್ತಾವನೆ.

೨. ಅಯ್ಯರ್. ಎಲ್.ಕೆ, ದಿ ಮೈಸೂರು ಟ್ರೈಬ್ಸ್ ಅಂಡ್‌ಕ್ಯಾಸ್ಟ್ ಸಂಪುಟ-೩ ಪುಟ : ೨೧೧.

೩. ಕೃಷ್ಣಮೂರ್ತಿ ಹನೂರು. ಮ್ಯಾಸಬೇಡರ ಸಂಸ್ಕೃತಿ, ೧೯೯೩. ಪುಟ: ೧೨.

೪. ಅದೇ - ಪುಟ: ೧೮.

೫. ದುರುಗಪ್ಪ ಎಮ್.ಕೆ. ವಿಜಯನಗರೋತ್ತರ ಕಾಲೀನ ಬೇಡ ಜನಾಂಗ ಚಾರಿತ್ರಿಕ ಅಧ್ಯಯನ, ೨೦೧೦, ಪುಟ : ೧೨೬

# ಅಧ್ಯಾಯ: ಆರು

# ಸಮಾರೋಪ

ಕರ್ನಾಟಕದ ಐತಿಹಾಸಿಕ ಪರಂಪರೆಗೆ ಹೆಸರಾದ ಜಿಲ್ಲೆ ಚಿತ್ರದುರ್ಗ, " ದುರ್ಗ" ಯಾರಿಗೆ ಗೊತ್ತಿಲ್ಲ? ಇತಿಹಾಸದ ಕನಿಷ್ಠ ಜ್ಞಾನ ಇರುವವರಿಗೆಲ್ಲ ಕೋಟೆ ಎಂಬ ಹೆಸರಿನ ಮೂಲಕ ಎಲ್ಲಾರಿಗೂ ಚಿರಪರಿಚಿತವಾಗಿರುವುದು. ಈ ಪ್ರದೇಶದಲ್ಲಿ ನಿರಂತರವಾಗಿ ಮಳೆಯ ಅಭಾವ ಇರುವುದರಿಂದ ಕುರುಚಲ ಅರಣ್ಯ, ಮಳೆಯಾಶ್ರಿತ ಬೇಸಾಯ ಇವುಗಳು ಬರ ಮತ್ತು ಬಡತನಕ್ಕೆ ಸಾಕ್ಷೀಕರಿಸಿವೆ. ಈ ಬಗೆಯ ಪ್ರದೇಶಕ್ಕೆ ಬಯಲು ಸೀಮೆ ಎಂಬ ಹೆಸರು ಕರ್ನಾಟಕದ ಜನರ ಬಾಯಿಯಲ್ಲಿ ಹರಿದಾಡುತ್ತಿರುವುದು. ಎಲ್ಲರಿಗೂ ತಿಳಿದ ವಿಷಯವೇ ಆಗಿದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಮೂಲ ನಿವಾಸಿಗಳು ಯಾರು ಎನ್ನುವಂತಹ ಪ್ರಶ್ನೆಗಳನ್ನೆತ್ತಿದರೆ ಹಟ್ಟಿಗಳ ಪರಂಪರೆ ನೆಲೆಗಳು ಅರ್ಥವಾಗುವುದು.ಈ ಪ್ರದೇಶದಲ್ಲಿ ಬಹುಬಗೆಯ ಹಟ್ಟಿಗಳು ನೆಲೆಯೂರಿರುವುದು ವ್ಯಾಪಕವಾಗಿ ಕಂಡುಬರುವುದು. ಈ ಹಟ್ಟಿಗಳ ಬಗ್ಗೆ ಸರ್ಕಾರವು ದಾಖಲಿಸಿದೆ.

ಈ ಹಟ್ಟಿಗಳ ಕುರಿತಂತೆ ಜನಪದ ಸಾಹಿತ್ಯದ ಮೇಲೆ ಈಗಾಗಲೇ ಅನೇಕ ಅಧ್ಯಯನಗಳು ನಡೆದು ಹೋಗಿವೆ. ಆದರೆ ಹಟ್ಟಿ ಸಂಸ್ಕೃತಿ ಮತ್ತು ಪರಂಪರೆ ಆಯಾಮದ ಮೇಲೆ ಇದುವರೆಗೆ ಯಾವ ಅಧ್ಯಯನವೂ ನಡೆದಿರುವುದಿಲ್ಲವೆಂದರೆ ತಪ್ಪಾಗಲಾರದು. ಹಟ್ಟಿಗಳಲ್ಲೇ ಬಹು ಸಂಖ್ಯಾತ ಪ್ರಮಾಣದಲ್ಲಿರುವ ಕಾಡುಗೊಲ್ಲ ಮತ್ತು ಮ್ಯಾಸಬೇಡ ಹಟ್ಟಿಗಳ ಪರಂಪರೆಯನ್ನು ಹಲವು ಆಯಾಮಗಳಲ್ಲಿ ಸೂಕ್ಷ್ಮವಾಗಿ ಅವಲೋಕಿಸುವ ದೃಷ್ಠಿಯಿಂದ ಪ್ರಸ್ತುತ ಅಧ್ಯಯನವನ್ನು ಚಿತ್ರದುರ್ಗ ಜಿಲ್ಲೆಯಲ್ಲಿ **ಹಟ್ಟಿಸಂಸ್ಕೃತಿ ಮತ್ತು ಪರಂಪರೆ – ಸಾಮಾಜಿಕ ಅಧ್ಯಯನ ( ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸಿ)** ಎಂಬಶೀರ್ಷಿಕೆಯ ಮೇಲೆ ಅಧ್ಯಯನಮಾಡಲಾಗಿದೆ.

ಪ್ರಸ್ತುತ ಅಧ್ಯಯನವನ್ನು ಚಿತ್ರದುರ್ಗ ಜಿಲ್ಲೆಯಲ್ಲಿ ಕೈಗೊಳ್ಳಲಾಗಿದೆ. ಹಟ್ಟಿಗಳ ಮೂಲ ನೆಲೆಗಳು, ಅವುಗಳ ಸಾಮಾಜಿಕ, ಸಾಂಸ್ಕೃತಿಕ ವೈಭವ, ಚಾರಿತ್ರಿಕ ಬೆಳವಣಿಗೆ, ಪ್ರಜಾಪ್ರಭುತ್ವ ನಗರೀಕರಣ, ಕೈಗಾರಿಕರಣ, ಶಿಕ್ಷಣ, ಅಧಿಕಾರದ ವಿಕೇಂದ್ರೀಕರಣ ಮತ್ತು ಜಾಗತೀಕರಣದ ಸಂದರ್ಭಗಳು, ಹಟ್ಟಿಗಳಲ್ಲಿ ಬದಲಾವಣೆ ಮತ್ತು ಸ್ಥಿತ್ಯಂರಗಳಲ್ಲಿ ಹೇಗೆ ಆಗಿದೆ? ಯಾವ ಪ್ರಾಂದಲ್ಲಿ ಆಗಿದೆ? ಇಂದು ಅವರ ಜೀವನೋಪಾಯದ ಮಾರ್ಗಗಳು ಏನಾಗಿವೆ? ಎನ್ನುವಂತಹ ಅಂಶಗಳನ್ನು

ಅರಿಯಲು ಅತ್ಯಂತ ಸೂಕ್ಷ್ಮ ಮತ್ತು ಎಚ್ಚರಿಕೆಯಿಂದ ಸಂಶೋಧನಾ ವಿಧಾನಗಳಾದ ಅವಲೋಕನ, ಸಂದರ್ಶನ ಪ್ರಕರಣ ಅಧ್ಯಯನ, ಮಾದರಿ ವಿದಾನ ಸಂದರ್ಶನ ಅನುಸೂಚಿಯಂತಹ ತಂತ್ರಗಳನ್ನು ಬಳಸಿಕೊಂಡು ಮಾಹಿತಿಯನ್ನಯ ಸಂಗ್ರಹಿಸಿ, ಸಂಗ್ರಹಿಸಿದಂತಹ ಮಾಹಿತಿಯನ್ನು ಪಡೆದು ದತ್ತಾಂಶ, ರೇಖಾಚಿತ್ರ, ಕೋಷ್ಟಕಗಳ ಮೂಲಕ ವಿಶ್ಲೇಷಣೆ ಮಾಡಿ ತೀರ್ಮಾನಗಳನ್ನು ಕೈಗೊಳ್ಳಲಾಗಿದೆ.

**ಅಧ್ಯಾಯ ಒಂದು**: ಪ್ರಸ್ತಾವನೆ, ಹಟ್ಟಿಗಳ ಸ್ವರೂಪ ಮತ್ತು ಲಕ್ಷಣಗಳು, ಸಂಶೋದನ ಪ್ರಶ್ನೆಗಳು ಹಾಗೂ ಸಮಸ್ಯೀಕರಣ, ಅಧ್ಯಯನಕ್ಕೆ ಸಂಬಂದಿಸಿದ ಉದ್ದೇಶಗಳು ಹಾಗೂ ಮಹತ್ವ ಅಧ್ಯಯನ ವಿಧಾನ, ಅಧ್ಯಯನ ಕ್ಷೇತ್ರದ ವ್ಯಾಪ್ತಿ, ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ, ಕುರಿತು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಅಧ್ಯಾಯ ಎರಡು:** ಹಟ್ಟಿ ಸಂಸ್ಕೃತಿಯ ಐತಿಹಾಸಿಕ ಹಿನ್ನೆಲೆಯಾಗಿ, ಹಟ್ಟಿ ಪರಿಕಲ್ಪನೆ, ಹಟ್ಟಿ ಪದದ ನಿಷ್ಪತ್ತಿ, ಹಟ್ಟಿ ಸಂಸ್ಕೃತಿಯ ಮೂಲ, ಹಟ್ಟಿ ಬೆಳವಣಿಗೆ ಮತ್ತು ವಿಕಾಸ, ಹಟ್ಟಿ ಮತ್ತು ಸಮುದಾಯಗಳು, ಹಟ್ಟ ಸಮುದಾಯದವರ ನೆಲೆ ಮತ್ತು ಜನಸಂಖ್ಯೆಯ ಪ್ರಸಾರದ ಬಗ್ಗೆ ಅಧ್ಯಯನವನ್ನೊಳಗೊಂಡಿದೆ. ಹಟ್ಟಿಗಳು ಇದ್ದ ಪ್ರಾಚೀನ ಕಾಲ ವೇದಗಳ ಕಾಲ ಕ್ರಿಪೂ ದಿಂದಲೂ ಹಟ್ಟಿಗಳು ಹುಟ್ಟಿಕೊಂಡ ಬಗೆ, ಹಟ್ಟಿಗಳು ಹೇಗೆ ಬೆಳವಣಿಗೆ ಹೊಂದಿದವು, ಸಮುದಾಯಗಳು ಹಟ್ಟಿಗಳನ್ನು ಕಟ್ಟಿಕೊಳ್ಳಲು ಕಾರಣಗಳೇನು, ಚಿತ್ರದುರ್ಗದಲ್ಲಿಯ ಹಟ್ಟಿಗಳ ಸಂಖ್ಯೆ ಮತ್ತು ಜಿಲ್ಲೆಯಾದ್ಯಂತ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಹಟ್ಟಿಗಳ ಕುರಿತಾದ ಮಾಹಿತಿ ಇದೆ.

**ಅಧ್ಯಾಯ ಮೂರು:** ಸಂಪ್ರದಾಯಗಳು ಮತು ಆಚರಣೆಗಳು ಈ ಅಧ್ಯಾಯದಲ್ಲಿ ಹಟ್ಟಿಗಳ ಜೀವನಾವರ್ತನ ಆಚರಣೆಗಳು, ಹಟ್ಟಿ ಸಮುದಾಯಗಳಾದ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಆಚರಣೆಗಳಲ್ಲಿ ಜನನ, ನಾಮಕರಣ, ಋತುಮತಿ, ವಿವಾಹ, ಸೀಮಂತ, ಮರಣ, ಇವುಗಳ ಆಚರಣೆಗಳ ಕುರಿತಾದ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ. ನಂಬಿಕೆಗಳು ಹಾಗೂ ನಿಷೇಧಗಳು, ಹಟ್ಟಿ ಸಮುದಾಯದ ಹಬ್ಬ ಹಾಗು ಜಾತ್ರೆಗಳು, ಹಟ್ಟಿಗಳ ಸಾಮಾಜಿಕತೆ ಮತ್ತು ಆರ್ಥಿಕತೆ. ಎಂಬ ಸಾಮಾಜಿಕ ಸಂಘಟನೆ ಶಿಕ್ಷಣ ವಸತಿ, ಕುಟುಂಬ, ಆಹಾರ ಪದ್ಧತಿ, ಉಡುಗೆ ತೊಡಿಗೆಗಳು, ಆರ್ಥಿಕತೆಗೆ ಸಂಬಂಧಿಸಿದಂತೆ ಪಶುಪಾಲನೆ, ಕೃಷಿ, ಕೃಷಿಯೇತರ ವೃತ್ತಿ, ಬೇಟೆ, ಹಟ್ಟಿಗಳಲ್ಲಿಯ ವೈದ್ಯ ಪದ್ದತಿ, ಆಡಳಿತ ವ್ಯವಸ್ಥೆಯ ಬಗ್ಗೆ ಚರ್ಚಿಸಲಾಗಿದೆ.

**ಅಧ್ಯಾಯ ನಾಲ್ಕು:** ಹಟ್ಟಿಗಳ ಭಾಷೆ, ಕಲೆ ಹಾಗೂ ಸಾಹಿತ್ಯ. ಈ ಅಧ್ಯಾಯದಲ್ಲಿ ಭಾಷೆ, ಕಲೆಗೆ ಸಂಬಂದಿಸಿದ ಜನಪದ ಪ್ರದರ್ಶನ ಕಲೆಗಳು, ಜನಪದ ರಂಗ ಭೂಮಿ ಕಲೆಯ ಬಗೆಗೆ ವಿಶ್ಲೇಷಿಸಲಾಗಿದೆ. ಸಾಹಿತ್ಯಕ್ಕೆ ಸಂಬಂದಿಸಿದಂತೆ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಸೃಷ್ಠಿ ಪುರಾಣಗಳು, ಸಾಂಸ್ಕೃತಿಕ ನಾಯಕರು ಅಥವಾ ದೈವಾಚರಣೆಗಳು ಮತ್ತು ಮೌಖಿಕ ಸಾಹಿತ್ಯದ ಬಗ್ಗೆ ಚರ್ಚಿಸಲಾಗಿದೆ.

**ಅಧ್ಯಾಯ ಐದು:** ಹಟ್ಟಿ ಸಂಸ್ಕೃತಿ ಮತ್ತು ಪರಂಪರೆಯ ಸ್ಥಿತ್ಯಂತರಗಳು. ಹಟ್ಟಿಗಳು ಕಾಲ ಸಂದಂತೆ ಆಧುನೀಕರಣ ಮತ್ತು ನಗರೀಕರಣ ಹಟ್ಟಿಗಳ ಮೇಲೆ ಪ್ರಭಾವಬೀರಿದೆಯಾ ಮತ್ತು

ಹಟ್ಟಿಗಳು ಆಧುನಿಕವಾಗಿ ಹೇಗೆ ಮುಖಾಮುಖಿಯಾಗಿವೆ ಎಂಬುದನ್ನು ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ಸ್ಥಿತ್ಯಂತರಗಳ ಬಗ್ಗೆ ಚರ್ಚಿಸಲಾಗಿದೆ.

**ಅಧ್ಯಾಯ ಆರು:** ಈ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ಫಲಿತಗಳು ಮತ್ತು ಸಲಹೆಗಳನ್ನು ಕಂಡುಕೊಳ್ಳಲಾಗಿದೆ.

ಅಧ್ಯಾಯಗಳ ಕೊನೆಯ ಭಾಗದಲ್ಲಿ ಪರಾಮರ್ಶನ ಗ್ರಂಥಗಳು, ಅನುಬಂಧಗಳು ವಕ್ತೃಗಳ ವಿವರ, ಛಾಯಾ ಚಿತ್ರಗಳು, ಸಂದರ್ಶನ ಅನುಸೂಚಿಯನ್ನು ಕೊಡಲಾಗಿದೆ.

ಪ್ರಸ್ತುತ ಅಧ್ಯಯನ ಹಟ್ಟಿ ಸಂಸ್ಕೃತಿ ಮತ್ತು ಪರಂಪರೆ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಹಟ್ಟಿಗಳ ಜನರ ಜೀವನವಾಗಿರುವುದು. ಇಂದು ತಳಮಟ್ಟದಿಂದ ರಾಷ್ಟ್ರ, ಅಂತರಾಷ್ಟ್ರೀಯ ಮಟ್ಟದಲ್ಲಿ ಸಮಾಜ ಪರಿವರ್ತನೆ ಮತ್ತು ಅಭಿವೃದ್ದಿಯ ಪರಿಕಲ್ಪನೆ ಬಗ್ಗೆ ವಾದ ವಿವಾದಗಳು ನಡೆದಿರುವುದು. ಅಭಿವೃದ್ದಿಯ ಸೂಚ್ಯಂಕದಲ್ಲಿ ಭಾರತದ ಸ್ಥಾನ ಏರು ಮುಖ ಚಲನೆಯಲ್ಲಿದೆ ಎನ್ನುವುದಕ್ಕೆ ಅನೇಕ ಅಧ್ಯಯನಗಳು ಸಾಕ್ಷೀಕರಿಸುತ್ತವೆ. ಅದರ ಹಟ್ಟಿ ಸಂಸ್ಕೃತಿ ಮತ್ತು ಅವರ ಬದುಕನ್ನು ಹಲವು ಆಯಾಮಗಳಲ್ಲಿ ವಿಶ್ಲೇಷಣೆ ಮಾಡಿದೆ. ಹಿಂದಿನ ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಉಳಿಯುವುದಕ್ಕೆ ತಲೆಮಾರುಗಳು ಉರುಳಿಹೋಗಿ ಸ್ಥಳಾವಕಾಶ ಇಲ್ಲದೆ ಹಟ್ಟಿ ಪರಂಪರೆ ವಿನಾಶದ ಅಂಚಿನಲ್ಲಿದೆ. ಜಗತ್ತಿನ ಪರಿವರ್ತನೆಯ ದಾರಿಯಲ್ಲಿ ಆ ಎತ್ತರಕ್ಕೇ ಏರುವ ಸಾಮರ್ಥ್ಯವು ಇಲ್ಲದೆ ಹಟ್ಟಿ ಸಮುದಾಯಗಳಿಗೆ ಸಮಸ್ಯೆ ಮತ್ತು ಸವಾಲುಗಳ ಮದ್ಯೆ ತನ್ನ ಬದುಕನ್ನು ಕಟ್ಟಿಕೊಂಡಿದೆ.

## ೬.೧ ಅಧ್ಯಯನದ ಫಲಿತಗಳು:

೧. ಕಾಡುಗೊಲ್ಲರಿಗೂ ಮತ್ತು ಮ್ಯಾಸಬೇಡರಿಗು ನಂಬಿಕೆ ಮತ್ತು ಆಚರಣಾ ಪದ್ದತಿಗಳಲ್ಲಿ ತುಂಬಾ ಸಾಮ್ಯತೆ ಇರುವುದು ಕಂಡುಬರುವುದು,ಆದರೆ ಭಿನ್ನತೆಗಳಿಗೆ ಹೋಲಿಸಿದರೆ ಕಡಿಮೆ, ಅದು ಅವರ ಆಚರಣಾ ವಿಧಾನಗಳಿಂದ ತಿಳಿದುಬರುತ್ತದೆ. ಈ ಬುಡಕಟ್ಟು ಸಮುದಾಯಗಳು ಪಶುಪಾಲಕ ಸಂಸ್ಕೃತಿಯಿಂದ ಎರಡು ಸಮುದಾಯಗಳ ಸಂಪ್ರದಾಯಗಳು, ನಂಬಿಕೆಗಳು, ಆಚರಣೆಗಳಲ್ಲಿ ಸಾಮ್ಯತೆಯನ್ನು ಹೊಂದಿದೆ ಎನ್ನುವುದಕ್ಕೆ ಪ್ರಸ್ತುತ ಅಧ್ಯಯನ ಸಾಕ್ಷೀಕರಿಸುತ್ತದೆ, ಏಕೆ ಎನ್ನುವಂತಹ ಪ್ರಶ್ನೆಗಳನ್ನು ಎತ್ತಿದರೆ ಎರಡು ಸಮುದಾಯಗಳು ಒಂದೇ ನಿರ್ದಿಷ್ಟವಾದ ಭೂಪ್ರದೇಶದಲ್ಲಿ ವಾಸಿಸುವುದರಿಂದ, ಒಂದು ಸಮುದಾಯ ಇನ್ನೊಂದು ಸಮುದಾಯವನ್ನು ನೋಡಿ ಅವಲೋಕಿಸುವುದು ಹೆಚ್ಚು, ಆ ಹಿನ್ನೆಲೆಯಲ್ಲಿ ಸಾಮ್ಯತೆ ಹೆಚ್ಚಿಸಿಕೊಂಡಿರುತ್ತದೆ. ಸಾಮ್ಯತೆಯ ಜೊತೆಯಲ್ಲಿ ಭಿನ್ನತೆಯೂ ಏಕೆ ಇದೆ ಎಂದು ಪ್ರಶ್ನಿಸಿದರೆ, ಕಾಡುಗೊಲ್ಲರ ಮಾತೃಭಾಷೆ ಕನ್ನಡವಾದರೆ ಮ್ಯಾಸಬೇಡರ ಮಾತೃಭಾಷೆ ಮತ್ತು ವ್ಯಾವಹಾರಿಕವಾಗಿ ತೆಲುಗು ಮಾತನಾಡುತ್ತಾರೆ. ಭಾಷಾ ಸಂದರ್ಭದಲ್ಲಿ ಅವು ವೈವಿಧ್ಯತೆ ಕಂಡರೂ ಪ್ರಾದೇಶಿಕವಾದ ಹಿನ್ನೆಲೆಯಲ್ಲಿ, ಆ ಎರಡು ಸಮುದಾಯಗಳು ಚಿತ್ರದುರ್ಗ ಜಿಲ್ಲೆಯ ಒಂದೇ ಭೌಗೋಳಿಕ ನೆಲೆಯಲ್ಲಿ ನೆಲೆಸಿರುತ್ತವೆ. ಹಾಗಾಗಿ ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಬದುಕಿನ ಸ್ವರೂಪಗಳು ಒಂದೇ ಆಗಿರುವುದು ಕಂಡುಬರುತ್ತದೆ. ಇದರಿಂದ

ಎರಡು ಸಮುದಾಯಗಳು ಸಾಮ್ಯತೆಯ ವೇಗವನ್ನು ಹೆಚ್ಚಿಸಿಕೊಂಡಿರುವುದು ಅಧ್ಯಯನದಿಂದ ವ್ಯಕ್ತವಾಗುವುದು.

೨. ಹಟ್ಟಿ ಸಂಸ್ಕೃತಿಯ ಅನನ್ಯತೆ (ಪ್ರತ್ಯೇಕತೆ) ಹಾಗೂ ಅದರ ಅಸ್ತಿತ್ವಕ್ಕೆ ಸಂಬಂಧಿಸಿದಂತೆ, ಕಾಡುಗೊಲ್ಲ ಮತ್ತು ಮ್ಯಾಸಬೇಡರ ಮೂಲಗಳಿಗೆ ಸಂಬಂಧಿಸಿದಂತೆ, ಪ್ರಸ್ತುತ ಅಧ್ಯಯನದಲ್ಲಿ ಕಾಡುಗೊಲ್ಲರು ಮೂಲತಃ ಸ್ಥಳೀಯರು ಎನ್ನುವುದರ ಪ್ರಮಾಣ ಶೇಕಡ ೬೦.೫೩ ರಷ್ಟು ಕಂಡುಬಂದರೆ ಇವರು ಮೂಲತಃಉತ್ತರ ಭಾರತದಿಂದ ಬಂದವರು ಎನ್ನುವುದರ ಪ್ರಮಾಣ ಶೇಕಡ ೩೪.೮೭ ರಷ್ಟು ಕಂಡುಬರುವುದು. ಇವರು ಸ್ಥಳೀಯ ಸಂಸ್ಕೃತಿಯ ಆಚಾರ ರೂಢಿ, ಸಂಪ್ರದಾಯ, ಭಾಷೆ ಅಭ್ಯಾಸಗಳು ಇರುವುದನ್ನು ವಿವಿಧ ಆಯಾಮಗಳಲ್ಲಿ ನೋಡಿದಾಗ ಇವರು ಸ್ಥಳೀಯರೆ ಎನ್ನುವುದು ತಿಳಿಯುತ್ತದೆ. ಮ್ಯಾಸಬೇಡರು ಆಂಧ್ರದ ಮೂಲದವರು ಎನ್ನುವುದರ ಪ್ರಮಾಣ ಶೇಕಡ ೧೦೦ ರಷ್ಟು ಕಂಡುಬಂದಿರುವುದು. ಇವರ ಮೂಲ ಆಂಧ್ರದವರೇ ಎನ್ನುವುದಕ್ಕೆ ಅಧ್ಯಯನದ ಸಂದರ್ಭದಲ್ಲಿ ಅವಲೋಕಿಸಿದರೆ,ಇಂದಿಗೂ ಇವರ ಮಾತೃಭಾಷೆ ಮತ್ತು ವ್ಯವಹಾರಿಕ ಭಾಷೆ ತೆಲುಗು ಮಾತನಾಡುವುದರಿಂದ, ಇವರನ್ನು ಆಂಧ್ರದ ಮೂಲವರು ಎನ್ನುವುದಕ್ಕೆ ಅಧ್ಯಯನ ಸಾಕ್ಷೀಕರಿಸುವುದು.

೩. ಕಾಡುಗೊಲ್ಲ ಮತ್ತು ಮ್ಯಾಸಬೇಡರ ಸಮುದಾಯಗಳು ಸಂಪ್ರಾದಾಯಗಳಲ್ಲಿ ಇನ್ನೂ ನಂಬಿಕೆ ಇಟ್ಟಿರುವರೇ? ಯಾವ ವಿಷಯದ ಮೇಲೆ ನಂಬಿಕೆ ಇಟ್ಟಿರುವರು? ಎನ್ನುವುದಕ್ಕೆ ದೇವರ ಮೇಲಿನ ನಂಬಿಕೆ ಇಟ್ಟಿರುವುದು ಕಂಡುಬರುವುದು. ಹಾಗೆಯೆ ಮ್ಯಾಸಬೇಡರಲ್ಲಿಯೂ ದೇವರ ಮೇಲೆ ನಂಬಿಕೆ ಇಟ್ಟಿರುವುದು ಕಂಡುಬರುವುದು. ಹಟ್ಟಿಸಂಸ್ಕೃತಿಯ ಪರಂಪರೆಯನ್ನು ಸ್ವರೂಪವನ್ನು ಗುರುತಿಸುವುದಾದರೆ, ಅವರ ಕಲೆ, ನಂಬಿಕೆ, ಮೌಲ್ಯಗಳನ್ನು ತಿಳಿಯುವುದು. ಕೋಲಾಟ, ಭಜನೆ, ಸೋಬಾನೆಪದ, ನಾಟಕ, ಹಚ್ಚೆ, ರಂಗೋಲಿ, ವಾದ್ಯಗಳು ದಗಮು, ಉರುಮೆ, ಡಕ್ಕೆ, ಶಂಖಜಾಗಟೆ, ಹುಲಿಕಟ್ಟೆ ಆಟ, ಗೊಟಗೋಣಿ ಆಟ, ಇವು ಈಗಲೂ ಸಮುದಾಯಗಳಲ್ಲಿ ನಲೆಸಿವೆ ಅಂದರೆ ಎಲ್ಲೋ ಒಂದುಕಡೆ ಇವರ ಮೂಲಗಳಲ್ಲಿ ದೇವರನ್ನು ನೋಡುವ ಪದ್ದತಿ, ಈಗಲೂ ಇರುವುದು ಅಧ್ಯಯನಗಳಲ್ಲಿ ಕಂಡುಬಂದಿರುವುದು. ಈ ಹಿನ್ನೆಲೆಯಲ್ಲಿ ಸಂಪ್ರದಾಯಗಳಲ್ಲಿ ನಂಬಿಕೆ ಇಟ್ಟಿರುವುದು ವ್ಯಕ್ತವಾಗುವುದು.

೪. ಮಾಟ ಮಂತ್ರದ ಬಗ್ಗೆ ನಂಬಿಕೆಗೆ ಸಂಬಂಧಿದಂತೆ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಸಮುದಾಯಗಳಲ್ಲಿ, ಈಗಲೂ ನಂಬಕೆ ಇಟ್ಟಿದೆಯಾ? ಇಟ್ಟಿದ್ದರೆ ಯಾಕೆ ಇಟ್ಟಿದ್ದಾರೆ? ಯಾವ ಪ್ರಮಾಣದಲ್ಲಿ ನಂಬಿಕೆ ಇಟ್ಟಿರುವರು ಎನ್ನುವುದಕ್ಕೆ ಅತ್ಯಂತ ಕಡಿಮೆ ಪ್ರಮಾಣದಲ್ಲಿ ವ್ಯಕ್ತವಾಗುವುದು. ಏಕೆ ಇತ್ತೀಚಿನ ದಿನಗಳಲ್ಲಿ ಮಾಟ ಮಂತ್ರ ಕಡಿಮೆ ಆಗಿದೆ, ಅಂದರೆ ಇತ್ತೀಚಿನ ದಿನಗಳಲ್ಲಿ ಶಿಕ್ಷಣ, ತಂತ್ರಜ್ಞಾನ ಆಧುನೀಕರಣ ಮತ್ತು ಜಾಗತೀಕರಣದ ಪ್ರಬಾವದಿಂದ, ಜನರಲ್ಲಿ ವೈಚಾರಿಕತೆ ಬೆಳೆದ ಕಾರಣ ಜನರು ಮೂಢನಂಬಿಕೆಯಿಂದ ಹಿಂದೆ ಸರಿದಿರುವುದರಿಂದ, ಮಾಟ ಮತ್ತು ಮಂತ್ರಗಳು ಇತ್ತೀಚಿನ ದಿನಗಳಲ್ಲಿ ಕಡಿಮೆಯಾಗಿವೆ ಎನ್ನುವುದನ್ನು ಅಧ್ಯಯನ ಕಂಡುಕೊಂಡಿದೆ.

೫. ಸಮುದಾಯದಲ್ಲಿರುವ ಮನೋರಂಜನೆಗೆ ಸಂಬಂಧಿಸಿದಂತೆ, ಇಂದಿಗೂ ಎರಡು ಸಮುದಾಯಗಳಲ್ಲಿ ಮನರಂಜನೆಗೆ ಆದ್ಯತೆ ನೀಡಿರುವುದು ಅಧ್ಯಯನ ಗುರುತಿಸಿದೆ. ಕೋಲಾಟದಿಂದ ಇತ್ತೀಚಿನ ಬದಲಾವಣೆಗೆ ಒಗ್ಗಿಕೊಂಡಿದೆ, ಎರಡು ಸಮುದಾಯಗಳು ಕೃಷಿ ಕೆಲಸದ ನಂತರ, ಬಿಡುವಿನ ಮತ್ತು ಬೇಸರದ ವೇಳೆಯನ್ನು ಕಳೆಯುವುದಕ್ಕಾಗಿ ಕೋಲಾಟ ಮನರಂಜನೆಯ ಆಟವನ್ನು, ಸಮುದಾಯದ ಜನರು ಇಂದಿಗೂ ಆ ಸಾಂಸ್ಕೃತಿಕ ಕ್ರೀಡೆಗಳನ್ನು ಮುಂದುವರೆಸುತ್ತಾ ಸಾಗಿರುವುದನ್ನು ಅಧ್ಯಯನ ಗುರುತಿಸಿದೆ. ಈ ಎರಡು ಸಮುದಾಯಗಳಲ್ಲೂ ಬದಲಾವಣೆಗೆ ಕಾರಣವಾದ ಅಂಶವೆಂದರೆ, ಆಧುನೀಕರಣ, ಶಿಕ್ಷಣ ಮತ್ತು ಸಂಪರ್ಕ ಮಾಧ್ಯಮಗಳು, ಇತ್ತೀಚಿನ ಯುವ ಜನರನ್ನು ಸೆಳೆದಿರುವ ಅಂಶಗಳು ಕಂಡುಬಂದಿವೆ.

೬. ಹಟ್ಟಿ ಸಂಸ್ಕೃತಿಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳಿಗೆ ಸಂಬಂಧಿದಂತೆ, ಇತ್ತೀಚಿನ ವಿದ್ಯಮಾನಗಳು ತನ್ನ ಸಾಮಾಜಿಕ ಬದುಕನ್ನೇ ತನಗೆ ಬೇಕಾದ ಕ್ಷೇತ್ರದಲ್ಲಿ ತನ್ನನ್ನು ತಾನು ಹಿಗ್ಗಿಸಿಕೊಂಡಿರುವುದು, ಅಧ್ಯಯನ ಸತ್ಯಾಸತ್ಯತೆಗಳನ್ನು ಹೊರತಂದಾಗಲೇ ಸ್ಥಿತ್ಯಾಂತರಗಳ ಸ್ವರೂಪಗಳು, ತನ್ನ ಚಲನೆಯ ವೇಗವನ್ನು ಹೆಚ್ಚಿಸಿಕೊಂಡಿರುವುದು ತಿಳಿಯುತ್ತದೆ. ಇದರಿಂದ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳಿಗೆ ಬದಲಾವಣೆ ಆಗಿರುವುದಕ್ಕಿಂತ,ತನ್ನ ಸಾಂಪ್ರದಾಯಿಕ ಹಟ್ಟಿ ಸಂಸ್ಕೃತಿಯನ್ನು ಮುಂದುವರೆಸಿಕೊಂಡು ಬಂದಿರುವುದರ ಪ್ರಮಾಣ ಹೆಚ್ಚು ಇರುವುದು ತಿಳಿಯುತ್ತದೆ. ಮೂಢನಂಬಿಕೆಗಳು ಬದಲಾವಣೆಯಾಗಬೇಕು ಎಂದು ಬಯಸುತ್ತಾರೆ, ಕಾಡುಗೊಲ್ಲರಲ್ಲಿ ಹಾಗೂ ಮ್ಯಾಸಬೇಡರಲ್ಲಿ ಬದಲಾವಣೆ ಇಚ್ಚಿಸುವ ಎರಡು ದೃವಗಳು ಸಮನಾಂತರವಾಗಿ ಚಲಿಸುತ್ತಿರುವುದು ಅಧ್ಯಯನದಿಂದ ವ್ಯಕ್ತವಾಗುತ್ತದೆ.

೭. ಸಮುದಾಯದ ಮಠ ಮಾನ್ಯಗಳು ಕಾಡುಗೊಲ್ಲರಿಗೆ ಯಾದವಾನಂದಸ್ವಾಮಿ ಮಠವೇ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಗೆ, ಮಠ ಮಾನ್ಯಗಳಿಗೆ ಪ್ರಮುಖಸ್ಥಾನ ನೀಡಿರುವುದು ಅಧ್ಯಯನ ತಿಳಿಸುತ್ತದೆ. ಮಠಮಾನ್ಯಗಳು ಧರ್ಮದ ಆಧಾರದ ಮೇಲೆ ಜನರ ಮನಸ್ಸು ಮತ್ತು ಭಾವನೆಗಳನ್ನು ಬದಲಾಯಿಸುವುದು,ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳಿಗೆ ದಾರಿ ಮಾಡಿಕೊಟ್ಟಿರುವುದು ವ್ಯಕ್ತವಾಗುವುದು. ಯಾದವಾನಂದಸ್ವಾಮಿ ಮಠದಿಂದ ಕಾಡುಗೊಲ್ಲರಲ್ಲಿ ಸ್ಥಿತ್ಯಂತರಗಳಾಗಿರುವುದು ಕಂಡುಬಂದಿರುವುದು. ಹಾಗೆಯೆ ಮ್ಯಾಸಬೇಡರಲ್ಲಿ ವಾಲ್ಮೀಕಿ ಮಠದಿಂದ ಸ್ಥಿತ್ಯಂತರಗಳಾಗಿರುವುದು ಕಂಡುಬಂದಿರುವುದು. ಮಠಮಾನ್ಯಗಳು ಇಂದಿಗೂ ಮಾಡುವ ಕೆಲಸಗಳೆಂದರೆ ತನ್ನ ಸಮುದಾಯಗಳ ಕ್ಷೇಮಾಭಿವೃದ್ಧಿಗೆ ಹತ್ತಿರವಾಗಿ ಕೆಲಸಮಾಡುತ್ತಿರುವುದು. ಜನರನ್ನು ಸಂಘಟಿಸುವುದು, ಆ ಸಮುದಾಯಗಳನ್ನು ತೊಡಗಿಸಿಕೊಳ್ಳುವುದು, ರಾಜಕೀಯವಾಗಿ ಬೆಳೆಯಲು ಪಾಲ್ಗೊಳ್ಳುವಂತೆ ಪ್ರೇರಣೆ ನೀಡುವುದು, ಸರ್ಕಾರದಿಂದ ಬರುವ ಸೌಲಭ್ಯಗಳನ್ನು ಪಡೆಯುವುದು, ಮೀಸಲಾತಿ ಬಗ್ಗೆ ಹೋರಾಟಮಾಡುವುದು,ಸರ್ಕಾರದಿಂದ ಶಿಕ್ಷಣ ಸಂಸ್ಥೆಗಳಿಗೆ ಅನುಮತಿ ಪಡೆದು ತನ್ನ ಸಮುದಾಯಗಳ ಬದಲಾವಣೆಗೆ ಮತ್ತು ಸ್ಥಿತ್ಯಂತರಗಳಿಗೆ ದಾರಿ ಮಾಡಿಕೊಟ್ಟಿರುವುದು ಅಧ್ಯಯನದಿಂದ ಕಂಡುಬಂದಿದೆ.

೮. ಕಾಡುಗೊಲ್ಲರಲ್ಲಿ ಸಮುದಾಯದ ಕುಲ ಚಿಹ್ನೆಗಳು ಬಹುಮುಖಿ ಸ್ತರದಲ್ಲಿ ವ್ಯಕ್ತವಾಗುವುದು, ಅಧ್ಯಯನದಲ್ಲಿ ಗುರುತಿಸಿದೆ. ಕಾಡುಗೊಲ್ಲರಲ್ಲಿ ಅನೇಕ ಪ್ರಕಾರದ ಕುಲ ಚಿಹ್ನೆಗಳಾದ ಅಲಗು, ಗಣೆ, ಜಾಗಟೆ, ಗೊಲ್ಲಕಡಗ, ಬವನಾಸಿ, ಕಂಬಳಿ, ಕರಡಿ, ಕೊಳಲು, ಇನ್ನೂ ಮುಂತಾದುವುಗಳು ಜಾತಿ ಚಿಹ್ನೆಗಳು ಇದ್ದು, ಅವುಗಳ ಆಚರಣೆಗಳು ಆಧುನೀಕರಣದ ಸಂದರ್ಭಗಳು ಸ್ಥಿತ್ಯಂತರಗಳಿಗೆ ಮೆರುಗು ನೀಡಿರುವುದನ್ನು ಅಧ್ಯಯನಗುರುತಿಸಿದೆ. ಪ್ರಮುಖವಾಗಿ ಕಾಡುಗೊಲ್ಲರಲ್ಲಿ ಗೊಲ್ಲಕಡಗದ ಬಳಕೆ ಮತ್ತು ಆಚರಣೆಯಲ್ಲಿರುವುದು ಕಂಡುಬರುವುದು. ಅದೇ ರೀತಿ ಮ್ಯಾಸಬೇಡರಲ್ಲಿ ಕುಲದ ಚಿಹ್ನೆಗಳು ಬಿಲ್ಲು, ಬಾಣ, ಗಂಡುಕೊಡಲಿ ಮತ್ತು ಭರ್ಚಿ ಅನೇಕ ಪ್ರಕಾರದವು ಇದ್ದು ಇವುಗಳ ಆಚರಣೆಯಲ್ಲಿರುವುದು  ಕಂಡುಬಂದಿದೆ. ಇತ್ತೀಚಿನ ಯುವಕರಲ್ಲಿ ಜಾತಿ ಪ್ರೇಮವಿದೆ, ಆದರೆ ಪರಿವರ್ತನ ಸಮಾಜದ ಅಲೆಗಳಲ್ಲಿ ಜಾತಿಯ ಆಚರಣೆಗಳಲ್ಲಿ ಕುಲಚಿಹ್ನೆಗಳ ಬಳಕೆ ಮತ್ತು ಆಚರಣೆ ಕಡಿಮೆ ಇರುವುದು ಅಧ್ಯಯನದಿಂದ ವ್ಯಕ್ತವಾಗುವುದು.

೯. ಹಟ್ಟಿ ಸಂಸ್ಕೃತಿಯ ಪರಂಪರೆಯಲ್ಲಿ ಹಟ್ಟಿಯೊಳಗೆ ಕೆಲವು ಜಾತಿಗಳಿಗೆ ಪ್ರವೇಶಕ್ಕೆ ಯಾವುದೇ ಅಡ್ಡಿ ಆತಂಕ ಇರುವುದಿಲ್ಲ, ಆದರೆ ಇನ್ನೂ ಕೆಲವು ಜಾತಿಗಳಿಗೆ ಪ್ರವೇಶಮಾಡಲು ಅಡ್ಡಿ ಆತಂಕಗಳು ನಿರ್ಬಂಧಗಳು ಇರುವುದು. ಅದರಲ್ಲಿ ಪ್ರಮುಖವಾಗಿ ಕಾಡು ಗೊಲ್ಲರಲ್ಲಿ ನಿಮ್ನಜಾತಿಯಂತವರಿಗೆ ಪ್ರವೇಶ ನಿರಾಕರಣೆ ಮಾಡಿರುವುದು ಇಂದಿಗೂ ವಾಸ್ತವಿಕ. ಅದರಲ್ಲಿ ಮಡಿ ಮೈಲಿಗೆಯ ಕಲ್ಪನೆ ಇರುವುದು ಕಂಡುಬರುವುದು. ಆ ಜಾತಿಗಳಲ್ಲೂ ಪ್ರಸ್ತುತ ಸಮಾಜದಲ್ಲಿ ಸ್ಥಿತ್ಯಂತರಗಳಿಗೆ ಒಳಗಾಗಿ ಮಡಿಮೈಲಿಗೆ ಕಲ್ಪನೆಯಿಂದ ಇದೇ ಜಾತಿಯವರಿಗೆ ಪ್ರವೇಶ ಕಲ್ಪಿಸಿ ಕೊಟ್ಟಿರುವುದು ಕಂಡುಬಂದಿರುವುದು. ಆದರೆ ಮ್ಯಾಸಬೇಡರಲ್ಲಿ ಸಡಿಲವಾಗಿರುವುದು. ಇದರಿಂದ ಎಲ್ಲರಿಗೂ ಹಟ್ಟಿಯೊಳಗೆ ಪ್ರವೇಶ ನೀಡಿರುವುದು ಅಧ್ಯಯದಿಂದ ತಿಳಿಯುತ್ತದೆ. ಕಾರಣ ಎರಡು ಜಾತಿಗಳ ಸಂಪ್ರದಾಯಗಳು ಬೇರೆ ಬೇರೆ, ಪದ್ದತಿಗಳು ಭಿನ್ನ ವಿಭಿನ್ನವಾದವುಗಳು. ಕಾಡುಗೊಲ್ಲರಲ್ಲಿ ಇನ್ನೂ ವಿಧಿ ವಿಧಾನಗಳು, ಸಂಪ್ರದಾಯಗಳಿಂದ ಪೂರ್ಣ ಪ್ರಮಾಣದಲ್ಲಿ ಹೊರಬರಲು ಸಾಧ್ಯವಾಗಿರುವುದಿಲ್ಲ ಎನ್ನುವ ಸತ್ಯಾ ಸತ್ಯೆಗಳು ಅಧ್ಯಯನ ಕಂಡುಕೊಂಡಿದೆ. ಮ್ಯಾಸಬೇಡರಲ್ಲಿ ಜಾತಿ ಸಂಪ್ರದಾಯಗಳು ಪದ್ದತಿಗಳು, ವಿಧಿ ವಿಧಾನಗಳು, ಪೂರ್ಣ ಪ್ರಮಾಣದಲ್ಲಿ ಸಡಿಲಗೊಂಡಿರುವುದು ಅಧ್ಯಯನ ಗುರುತಿಸಿದೆ.

೧೦. ಮಹಿಳೆಯರು ಕುಟುಂಬದ ಹೊರಗಡೆ ದುಡಿಯುವ ವಿಷಯದಲ್ಲಿ ಎರಡು ಸಮುದಾಯಗಳಲ್ಲಿ ಪ್ರಮಾಣಾತ್ಮಕವಾಗಿ ಮತ್ತು ಗುಣಾತ್ಮಕವಾಗಿ ವಿಶ್ಲೇಷಿಸಿದರೆ, ಸಾಂಪ್ರದಾಯಿಕ ಕೃಷಿ ಮತ್ತು ಹೈನುಗಾರಿಕೆ ಕಾಡುಗೊಲ್ಲರ ಮೂಲ ವೃತ್ತಿಯಾಗಿದ್ದರೂ, ಹೊರಗಡೆ ಕೂಲಿ ಕೆಲಸಕ್ಕೆ ಹೋಗುವವರ ಪ್ರಮಾಣ ಶೇಕಡ ೪೪.೭೪ ರಷ್ಟು ಕಂಡುಬರುವುದು. ಅದರಲ್ಲೂ ಹೊರಗಡೆ ದುಡಿಯುವುದಿಲ್ಲ ಎನ್ನುವುದರ ಪ್ರಮಾಣ ಶೇಕಡ ೪೦.೧೩ ರಷ್ಟು ಕಂಡುಬಂದಿದೆ. ಮ್ಯಾಸಬೇಡರಲ್ಲಿ ಮೂಲ ವೃತ್ತಿಯ ಅವಲಂಬನೆ ಇನ್ನೂ ಉಳಿದಿಲ್ಲ, ಅದರ ಬದಲಿಗೆ ಕೂಲಿ ವೃತ್ತಿಯೇ ಮುಂದುವರೆದಿರುವುದು ಶೇಕಡ ೪೫.೪೫  ರಷ್ಟು ಕಂಡುಬಂದಿದೆ. ಆದರೆ ಎರಡು ಹಟ್ಟಿಯ

ಸಮುದಾಯಗಳಲ್ಲಿ ಶಿಕ್ಷಣ, ತಂತ್ರಜ್ಞಾನ, ಅಧಿಕಾರದ ವಿಕೇಂದ್ರಕರಣ ಮತ್ತು ಜಾಗತೀಕರಣದ ಸಂದರ್ಭದಲ್ಲಿ ಸೃಷ್ಠಿಯಾಗುತ್ತಿರುವ ಹೊಸ ಹೊಸ ಉದ್ಯೋಗವಕಾಶಗಳು, ಗ್ರಾಮೀಣರನ್ನು ಸೆಳೆಯುವ ನಾಗರೀಕತೆಯೂ ಮತ್ತು ಬರ, ಬಡತನದಿಂದ ಹಾಗೂ ಪಶುಪಾಲನೆಗೆ ಅವಲಂಬಿತವಾಗಿರುವ ಹುಲ್ಲುಗಾವಲುಗಳು ಕ್ರಮೇಣ ಕ್ಷೀಣಿಸುತ್ತಿರುವುದು, ಜೀವನೋಪಾಯದ ಪರಿಸ್ಥಿತಿಗಳಿಗೆ ಅನುಗುಣವಾಗಿ ಸ್ಥಿತ್ಯಂತರಗಳಿಗೆ ಒಳಗಾಗಿರುವುದು ಅಧ್ಯಯನದಿಂದ ವ್ಯಕ್ತವಾಗುತ್ತದೆ.

೧೧. ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಕೂಡಿಕೆ ವಿವಾಹ ಪದ್ದತಿ ಕಂಡುಬರುವುದಿಲ್ಲ ಎನ್ನುವುದು ಪ್ರಸ್ತುತ ಅಧ್ಯಯನದಿಂದ ವ್ಯಕ್ತವಾಗುತ್ತದೆ. ಇದನ್ನು ಪರಾಮರ್ಶಿಸಿದರೆ ಕಾಡುಗೊಲ್ಲರಲ್ಲಿ ಸಂಪ್ರದಾಯಿಕ ಆಚರಣೆ, ನಂಬಿಕೆಗಳು ಪದ್ದತಿಗಳು ಇನ್ನೂ ಪೂರ್ಣ ಪ್ರಮಾಣದಲ್ಲಿ ಅಳಿದು ಹೋಗಿಲ್ಲದಿರುವುದು, ಇವರಲ್ಲಿ ನಗರೀಕರಣಗೊಳ್ಳುತ್ತಿರುವುದು ಸಹ ಕಡಿಮೆ. ಮ್ಯಾಸಬೇಡರು ಸಂವಿದಾನದ ರೀತ್ಯ ಬುಡಕಟ್ಟಾಗಿರುವುದರಿಂದ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ವಿಶೇಷ ಮೂಲಭೂತ ಸೌಕರ್ಯಗಳು ನಿರಂತರವಾಗಿ ದೊರೆವುದು. ಶಿಕ್ಷಣ, ವಸತಿನಿಲಯಗಳು, ತರಬೇತಿಗಳು, ಸಾಲಸೌಲಭ್ಯಗಳು ಮತ್ತು ಉದ್ಯೋಗವಕಾಶಗಳು ಲಭ್ಯವಾಗಿರುವ ಹಿನ್ನೆಲೆಯಲ್ಲಿ, ಕ್ರಮೇಣ ಬುಡಕಟ್ಟು ಸ್ವರೂಪಗಳು ನಶಿಸುವ ಅಂಚಿನಲ್ಲಿವೆ. ಜಾಗತೀಕರಣ ಮತ್ತು ನಗರೀಕರಣದ ಸಂದರ್ಭಗಳು ಬುಡಕಟ್ಟು ಜನರ ಜೀವನದ ಕ್ರಮಗಳಲ್ಲಿ ಬದಲಾವಣೆ ತರುವುದರ ಮೂಲಕ ಸ್ಥಿತ್ಯಂತರಗಳು ತನ್ನ ಚಲನೆಯ ವೇಗವನ್ನು ಹೆಚ್ಚಿಸಿಕೊಳ್ಳುತ್ತಿರುವುದು ಅಧ್ಯಯನ ಗುರುತಿಸಿದೆ.

೧೨. ಹಟ್ಟಿ ಸಂಸ್ಕೃತಿ ಮತ್ತು ಆಧುನಿಕ ಮುಖಾ ಮುಖಿಯಾಗಿರುವ ವಿಷಯಕ್ಕೆ ಸಂಬಂಧಿದಂತೆ ಎರಡು ಸಾಂಪ್ರದಾಯಿಕ ಸಮುದಾಯಗಳಲ್ಲಿ ಖಾಯಿಲೆಯಾದಾಗ ಅನುಸರಿಸುತ್ತಿರುವ ಪದ್ಧತಿ ಮೂಲತಃ ದೇವರಿಗೆ ಮೊರೆ ಹೋಗುವುದು ಕಾಡುಗೊಲ್ಲರಲ್ಲಿ ಶೇಕಡ ೨೨.೩೭ ರಷ್ಟು ಕಂಡುಬಂದರೆ, ಮ್ಯಾಸಬೇಡರಲ್ಲಿ ಶೇಕಡ ೨೭.೨೭ ರಷ್ಟು ಕಂಡುಬರುವುದು. ನಾಟಿ ವೈದ್ಯ ಪದ್ಧತಿ ಕಾಡುಗೊಲ್ಲರಲ್ಲಿ ೨೧.೦೫ ರಷ್ಟು ಕಂಡುಬಂದರೆ, ಮ್ಯಾಸಬೇಡರಲ್ಲಿ ಶೇಕಡ ೧೩.೬೪ರಷ್ಟು ಕಂಡುಬರುವುದು. ಹಾಗಾದರೆ ಕಾಡುಗೊಲ್ಲರು ಇನ್ನೂ ನಾಟಿ ವೈದ್ಯ ಪದ್ಧತಿಗೆ ಹೊಂದಿಕೊಂಡಿರುವುದು ತಿಳಿಯುತ್ತದೆ. ಆದರೆ ಮ್ಯಾಸಬೇಡರಲ್ಲಿ ಆಧುನಿಕ ವೈದ್ಯ ಪದ್ಧತಿಗೆ ಮಾರುಹೋಗಿರುವುದು ಎರಡು ಸಮುದಾಯಗಳಲ್ಲಿ ಅನುಕ್ರಮವಾಗಿ ಶೇಕಡ ೫೫.೨೬ ರಷ್ಟು, ಶೇಕಡ ೫೪.೫೫ ರಷ್ಟು ಅಧ್ಯಯನದಿಂದ ಕಂಡುಬರುವುದು. ಪ್ರಸ್ತುತ ಸಂದರ್ಭದಲ್ಲಿ ಸಮುದಾಯಗಳಲ್ಲಿ ಬರುವ ಕಾಯಿಲೆಗಳ ಪ್ರಕಾರಗಳು ಮತ್ತು ಅವುಗಳ ಸ್ವರೂಪಗಳು ಬದಲಾಗಿರುವುದು ಒಂದು ಕಡೆಯಾದರೆ, ಇನ್ನೊಂದು ಕಡೆ ಅಭಿವೃದ್ಧಿಗೊಳ್ಳುತ್ತಿರುವ ವೈದ್ಯಕೀಯ ವಿಜ್ಞಾನಕ್ಕೆ ಇವು ನೇರ ಸಂಬಂಧವಿರುವುದನ್ನು ಅಧ್ಯಯನ ಗುರುತಿಸಿದೆ. ಹೊಸ ಖಾಯಿಲೆಗಳನ್ನು ವಾಸಿಮಾಡುವ ಸಾಮರ್ಥ್ಯ ನಾಟಿಪದ್ಧತಿ ಹಾಗೂ ದೇವರಿಗೆ ಮೊರೆ ಹೋಗುವುದರಿಂದ ಸಾಧ್ಯವಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ಜನರಿಗೆ ಸ್ಥಿತ್ಯಂತರ ಅನಿವಾರ್ಯವಾಗಿರುವುದು ಕಂಡುಬಂದಿದೆ.

೧೩. ರಾಷ್ಟ್ರ ಮತ್ತು ರಾಜ್ಯದಲ್ಲಿ ಹಟ್ಟಿ ಸಂಸ್ಕೃತಿಯ ಸಮುದಾಯಗಳಿಗೆ. ಸರ್ಕಾರದಿಂದ ಅವರ ಜೀವನೋಪಾಯ ಮತ್ತು ಅಭಿವೃದ್ಧಿ ಹಿನ್ನೆಲೆಯಲ್ಲಿ, ಅನೇಕ ಅಭಿವೃದ್ಧಿ ಯೋಜನೆಗಳನ್ನು

ಅನುಷ್ಠಾನ ಮಾಡುವ ಅವಕಾಶ ಕಲ್ಪಿಸಿರುವುದನ್ನು, ಅನೇಕ ಅಧ್ಯಯನಗಳು ಗುರುತಿಸಿರುವುದು ಕಂಡುಬಂದಿದೆ. ಆದರೆ ಚಿತ್ರದುರ್ಗ ಜಿಲ್ಲೆಯಲ್ಲಿ ಎರಡು ಹಟ್ಟಿ ಸಮುದಾಯಗಳ ಕ್ಷೇಮಾಭಿವೃದ್ಧಿಗೆ ಯಾವ ಯಾವ ಯೋಜನೆಗಳಿಂದ ನೆರವು ದೊರಕಿವೆ ಎನ್ನುವುದಕ್ಕೆ ಅನ್ನಭಾಗ್ಯ ಯೋಜನೆ, ಉದ್ಯೋಗ ಖಾತರಿ ಯೋಜನೆ, ವಸತಿ ಯೋಜನೆ, ಭಾಗ್ಯಲಕ್ಷ್ಮಿ ಯೋಜನೆಗಳು ಅನುಷ್ಠಾನವಾಗಿರುವವು, ಆದರೆ ಆ ಯೋಜನೆಗಳಲ್ಲಿ ಅನ್ನಭಾಗ್ಯ ಯೋಜನೆ ಜನರಿಗೆ ಸೌಲಭ್ಯ ನೀಡಿರುವುದು ಎನ್ನುವುದಕ್ಕೆ ಶೇಕಡ ೧೫.೧೩ ರಷ್ಟು ಸೌಲಭ್ಯ ಒದಗಿಸಿರುವುದನ್ನು ಬಿಟ್ಟರೆ ಉಳಿದಂತೆ ಯೋಜನೆಗಳಿಂದ ಸೌಲಭ್ಯ ದೊರೆಯದಿರುವುದು ಶೇಕಡ ೭೨.೩೭ ರಷ್ಟು ಕಂಡು ಬಂದಿರುವುದು. ಮ್ಯಾಸಬೇಡರ ಅನ್ನಭಾಗ್ಯ ಯೋಜನೆ, ಈ ಸಮುದಾಯಕ್ಕೆ ಸೌಲಭ್ಯ ದೊರಕಿದೆ ಎನ್ನುವುದಕ್ಕೆ ಶೇಕಡ ೫೪.೫೫ ರಷ್ಟು ಕಂಡುಬಂದಿದೆ ಎನ್ನುವುದು ಪ್ರಸ್ತುತ ಅಧ್ಯಯನದಿಂದ ವ್ಯಕ್ತವಾಗುವುದು. ಒಟ್ಟಾರೆ ಎರಡು ಸಮುದಾಯಗಳಿಗೆ ಈ ಯೋಜನಾ ಸೌಲಭ್ಯ ದೊರಕಿರುವುದು ತಿಳಿಯುತ್ತದೆ ಅದರಲ್ಲಿ ಕಾಡುಗೊಲ್ಲರಿಗಿಂತ ಮ್ಯಾಸಬೇಡರಿಗೆ ಸರ್ಕಾರದ ಯೋಜನಾ ಸೌಲಭ್ಯಗಳು ಹೆಚ್ಚಾಗಿ ದೊರಕಿರುವುದು ತಿಳಿಯುತ್ತದೆ. ಈ ಸಮುದಾಯಕ್ಕೆ ಸೌಲಭ್ಯಗಳು ಏಕೆ ದೊರಕಿವೆ? ಎನ್ನುವುದು ಹಲವು ಪ್ರಕಾರದ ಚರ್ಚೆಗಳಿಗೆ ಗ್ರಾಸವಾಗುವುದು ಅದು ಸರ್ಕಾರಿಯೋಜನೆಗಳು ಸೌಲಭ್ಯಗಳನ್ನು ನೀಡಲೇಬೇಕಾಗಿರುವುದು ಒಂದು ಕಡೆಯಾದರೆ, ಮ್ಯಾಸಬೇಡರ ಸಮುದಾಯಗಳು ತಳಮಟ್ಟದ ಸರ್ಕಾರಗಳಿಂದ ಪಾರ್ಲಿಮೆಂಟ್ ಸರ್ಕಾರದವರೆಗೆ ಅಧಿಕಾರವನ್ನು ಮ್ಯಾಸಬೇಡ ಎನ್ನುವ ಬಹು ಸಂಖ್ಯಾತ ಜಾತಿಯವರು ಹಿಡಿದಿರುವುದು ಕಂಡುಬಂದಿದೆ. ಆದ್ದರಿಂದ ಆ ಸಮುದಾಯದ ಜನರು ಸರ್ಕಾರಿ ಯೋಜನಾ ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗಿದೆ ಎನ್ನುವುದು ಪ್ರಸ್ತುತ ಅಧ್ಯಯನದಿಂದ ಕಂಡುಬಂದಿದೆ.

೧೪. ಚಿತ್ರದುರ್ಗ ಜಿಲ್ಲೆಯ ಎರಡು ಹಟ್ಟಿ ಸಮುದಾಯಗಳಾದ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಹಿಂದಿನಿಂದಲೂ ಸಮುದಾಯಗಳ ಕಲ್ಯಾಣಾಭಿವೃದ್ಧಿ ಯೋಜನೆಗಳನ್ನು ನೀಡುವಲ್ಲಿ, ಸಾಂಪ್ರದಾಯಿಕ ರಾಜಕೀಯ ನಾಯಕರ ಪಾತ್ರ ಪ್ರಮುಖವಾಗಿತ್ತು ಎನ್ನುವುದಕ್ಕೆ ಅನೇಕ ಅಧ್ಯಯನಗಳು ಸಾಬೀತುಪಡಿಸಿವೆ. ಪ್ರಸ್ತುತ ವಿದ್ಯಾಮಾನದಲ್ಲಿ ಈ ಎರಡು ಸಮುದಾಯಗಳಿಗೆ ಅಭಿವೃದ್ಧಿ ಹಿನ್ನೆಲೆಯಲ್ಲಿ ಯಾವಪಾತ್ರವಹಿಸಿವೆ ಎನ್ನುವುದಕ್ಕೆ, ಉದ್ಯೋಗ ಖಾತರಿಯಲ್ಲಿ ಉದ್ಯೋಗ ಒದಗಿಸುವುದಕ್ಕೆ ಸಮುದಾಯದ ರಾಜಕೀಯ ನಾಯಕರ ಪಾತ್ರ ಪ್ರಮುಖವಾಗಿತ್ತು ಎನ್ನುವುದಕ್ಕೆ ಕಾಡುಗೊಲ್ಲರಲ್ಲಿ ಶೇಕಡ ೩೪.೨೧ ರಷ್ಟು ಕಂಡುಬಂದರೆ, ಮ್ಯಾಸಬೇಡರಲ್ಲಿ ಶೇಕಡ ೬೮.೧೮ ರಷ್ಟು ಕಂಡುಬಂದಿರುವುದು. ಉಳಿದಂತೆ ಯಾವ ಯೋಜನೆಗಳು ನಿಗದಿತ ಉದ್ದೇಶಗಳಿಗೆ ಅನುಗುಣವಾಗಿ ಯೋಜನೆಗಳು ಅನುಷ್ಠಾನವಾಗದಿರುವುದನ್ನು ಅಧ್ಯಯನ ಗುರುತಿಸಿದೆ. ಹಾಗಾದರೆ ಕೇವಲ ಉದ್ಯೋಗ ಖಾತರಿ ಯೋಜನೆಯೊಂದೇ ಏಕೆ ಅನುಷ್ಠಾನವಾಗಿದೆ ಎನ್ನುವುದು ಹಲವು ಪ್ರಕಾರದ ಚರ್ಚೆಗಳಿಗೆ ಗ್ರಾಸವಾಗುವುದು. ಉದ್ಯೋಗ ಖಾತರಿ ಯೋಜನೆಯನ್ನು ಅನುಷ್ಠಾನ ಮಾಡುವರು ಗ್ರಾಮ ಪಂಚಾಯತಿ ಸದಸ್ಯರು ಮತ್ತು ಯೋಜನೆಯ ಕಾಮಗಾರಿಗಳನ್ನು ಗುತ್ತಿಗೆ ರೂಪದಲ್ಲಿ ಮಾಡುವವರು ಈ ಗ್ರಾಮ ಪಂಚಾಯತಿ ಸದಸ್ಯರೇ ಆಗಿರುವುದರಿಂದ ಈ ಯೋಜನೆಯು ಅನುಷ್ಠಾನಗೊಂಡಿದೆ ಎನ್ನುವುದನ್ನು ಅಧ್ಯಯನ ತಿಳಿಸುತ್ತದೆ.

೧೫. ಸಮುದಾಯದ ಆಚಾರ ವಿಚಾರಗಳು ಬದಲಾಗಬೇಕೆಂಬುದಾಗಿ ಇಚ್ಚಿಸುವುದು ಹಟ್ಟಿ ಸಮುದಾಯಗಳಲ್ಲಿ ಒಂದು ಸ್ವಾಭಾವಿಕವಾದ ವಿಚಾರವಾಗಿರುವುದು. ಅವರು ಯಾವ ವಿಷಯದಲ್ಲಿ ಬದಲಾವಣೆ ತರಬೇಕು? ಯಾವ ಪ್ರಮಾಣದಲ್ಲಿ ಬದಲಾಗಬೇಕು ಎನ್ನುವುದಕ್ಕೆ ಮೂಢನಂಬಿಕೆಗಳು ಬದಲಾವಣೆಯಾಗಬೇಕು ಎನ್ನುವ ಅಭಿಪ್ರಾಯ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಈ ಎರಡು ಸಮುದಾಯಗಳಲ್ಲಿ ಕಂಡುಬರುವುದನ್ನು ಅಧ್ಯಯನ ಕಂಡುಕೊಂಡಿದೆ..

೧೬. ಇತ್ತೀಚಿನ ದಿನಗಳಲ್ಲಿ ಸಾಮಾಜಿಕ ಸಂಘಟನೆಯನ್ನು ಅವಲೋಕಿಸಿದರೆ ಅಧ್ಯಯನ ಕ್ಷೇತ್ರಗಳಲ್ಲಿ ಕಂಡುಬರುವ ಈ ಎರಡೂ ಸಮುದಾಯಗಳಲ್ಲಿ ವ್ಯತ್ಯಾಸ ಮತ್ತು ಸಾಮ್ಯತೆಗಳೆರಡು ಇದ್ದರು ಸಾಮಾಜಿಕ ಸಂಘಟನೆಯು ಹೆಚ್ಚುತ್ತಿರುವುದು ಕಂಡುಬರುತ್ತದೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಜಾತ್ರೆ, ಹಬ್ಬ, ಉತ್ಸವದಂತಹ ಸಾಂಸ್ಕೃತಿಕ ಚಟುವಟಿಕೆಗಳನ್ನು ಬುಡಕಟ್ಟುಗಳ ಮುಖಂಡರುಗಳು ಮಠಗಳನ್ನು ಕಟ್ಟಿಕೊಂಡು ಹಟ್ಟಿಜನರ ಮನಸ್ಸು ಮತ್ತು ಭಾವನೆಗಳನ್ನು ಬದಲಾಯಿಸಿವೆ. ಇದರ ಜೊತೆಗೆ ರಾಜಕೀಯ ಮುಖಂಡರುಗಳು ಕೈಜೋಡಿಸುವುದರಮೂಲಕ ಶಿಕ್ಷಣ ಮತ್ತು ಉದ್ಯೋಗಗಳನ್ನು ನೀಡುವುದರ ಮೂಲಕ ಹಟ್ಟಿಜನರ ಸ್ಥಿತ್ಯಾಂತರಗಳಿಗೂ ದಾರಿಯಾಗಿರುವುದು ಪ್ರಸ್ತುತ ಅಧ್ಯಯನ ಗುರುತಿಸಿದೆ.

೧೭. ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಸ್ಥಿತ್ಯಂತರಗಳಿಗೆ ಸಂಬಂಧಿಸಿದಂತೆ ವಿವಾಹಕ್ಕೆ ಸಂಭಂದಿಸಿದಂತೆ ಹಿಂದೆ ವಿವಾಹ ಸಂಪ್ರದಾಯಿಕ ಚೌಕಟ್ಟಿನಲ್ಲಿ ಹಟ್ಟಿಗಳಲ್ಲಿ ನಡೆಯುತ್ತಿದ್ದರೆ ಇಂದು ಆಧುನಿಕ ಮತ್ತು ಆಡಂಬರವಾಗಿ ಒಡವೆ, ವಸ್ತು, ಹಣ ಕೊಡುವ ತೆಗೆದುಕೊಳ್ಳುವ ಪದ್ಧತಿ. ಛತ್ರಗಳಂತಹ ಸ್ಥಳಗಳಲ್ಲಿ ನಡೆಯುತ್ತಿರುವುದು ಕಂಡುಬಂದಿದೆ.ಹಿಂದೆ ಸಾಂಪ್ರದಾಯಿಕ ವಿವಾಹ ಪದ್ದತಿ ಇದ್ದರೆ ಇಂದು ಪ್ರೇಮ ವಿವಾಹಗಳು ತಲೆ ಎತ್ತಿರುವುದು ಅನೇಕ ಅಧ್ಯಯನಗಳು ಗುರುತಿಸಿದಂತೆ ಪ್ರಸ್ತುತ ಅಧ್ಯಯನವು ಸಹ ಗುರುತಿಸಿದೆ.

೧೮. ಹಟ್ಟಿಗಳ ಮೇಲೆ ಸಂಸ್ಕೃತೀಕರಣ, ನಗರೀಕರಣ, ಆಧುನೀಕರಣದ ಅಲೆ ಪ್ರಭಾವ ಬೀರಿದ್ದರೂ ಜನರಲ್ಲಿ ತಮ್ಮ ಜೀವನ ಶೈಲಿ ಬದಲಾಗಿದ್ದರು ಅವರ ತಾತ್ವಿಕ ಚಿಂತನೆಗಳು ವಿಸ್ತರಿಸಿಯೂ ಇವೆ. ಆದರೆ ಹಿಂದಿನಿಂದ ರೂಪಿಸಿಕೊಂಡು ಬಂದ ಹಟ್ಟಿ ಸಂಸ್ಕೃತಿಯ ಸ್ವರೂಪಗಳು ಇಂದಿಗೂ ಜೀವಂತವಾಗಿವೆ ಎನ್ನುವುದಕ್ಕೆ ಅಧ್ಯಯನ ಸಾಕ್ಷೀಕರಿಸುವುದು..

೧೯. ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿನ ಸಾಮಾಜಿಕ ಜೀವನ ವಿಧಾನಗಳಲ್ಲಿನ ಆಚರಣೆಗಳು, ನಂಬಿಕೆಗಳು, ವೃತ್ತಿ, ಮೂಢನಂಬಿಕೆ ಇವುಗಳು ತಮ್ಮ ಜೀವನವನ್ನು ರೂಪಿಸಲಾರವು. ಆಧುನಿಕ ಮುಖಾಮುಖಿಗೆ ತಮ್ಮನ್ನು ತೆರೆದುಕೊಳ್ಳಬೇಕಾದ ಅನಿವಾರ್ಯತೆ ಇದ್ದು ಬದಲಾದ ಪರಿಸ್ಥಿತಿಗೆ ಹೊಂದಾಣಿಕೆಯಾಗಬೇಕಾದ ಅನಿವಾರ್ಯತೆಯನ್ನು ಪ್ರಸ್ತುತ ಅಧ್ಯಯನ ಗುರುತಿಸಿದೆ.

೨೦. ಪ್ರಕರಣ ಅಧ್ಯಯನ: ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಉತ್ತರ ದಿಕ್ಕಿನ ೨೦ ಕಿಲೋ ಮೀಟರ್ ದೂರದಲ್ಲಿರುವ ನಾಯಕನಹಟ್ಟಿಯ ಸುತ್ತಮುತ್ತಲಿನ ಗ್ರಾಮಗಳಲ್ಲಿ, ಪ್ರಮುಖವಾಗಿ

ಕಾಡುಗೊಲ್ಲ ಮತ್ತು ಮ್ಯಾಸಬೇಡ ಎಂಬ ಎರಡು ಹಟ್ಟಿ ಸಮುದಾಯಗಳು ವಾಸ ಮಾಡಿಕೊಂಡಿರುವುದಕ್ಕೆ ದೀರ್ಘಕಾಲಿನ ಇತಿಹಾಸವೇ ಇರುವುದು. ಪಶುಸಂಗೋಪನೆ, ಕೃಷಿ ಮತ್ತು ವ್ಯಾಪಾರ ಇವರ ವೃತ್ತಿಗಳಾಗಿದ್ದವು. ಅವರು ವಾಸಿಸಲಿಕ್ಕೆ ಹಟ್ಟಿಗಳನ್ನು ಕಟ್ಟಿಕೊಂಡು ಹಟ್ಟಿಯೊಳಗೆ ವಾಸಿಸುವುದು ಅದೇನು ಹೊಸದಲ್ಲ, ಅದಕ್ಕೂ ಅದರದೇ ಆದಂತಹ ಇತಿಹಾಸವೂ ಇದೆ, ಅವರ ಪ್ರಮುಖ ಮೂಲವೃತ್ತಿ ಪಶುಸಂಗೋನೆಯಾಗಿರುವುದು. ಪಶುಸಂಗೋಪನೆಗೆ ನಾಯಕನಹಟ್ಟಿಯ ಸುತ್ತಮುತ್ತ ಸುಮಾರು ೧೧.೦೦೦ ಸಾವಿರ ಎಕರೆ ಕರುಚಲು ಅರಣ್ಯಪ್ರದೇಶವಿರುವುದರಿಂದ, ಪಶುಗಳು ಮೇಯಿಸಲಿಕ್ಕೆ ಆಶ್ರಯವು ಆಗಿ ಮತ್ತು ಅವರ ಜೀವನೋಪಾಯಕ್ಕೂ ದಾರಿಯೂ ಆಗಿತ್ತು. ಈ ಮಧ್ಯದಲ್ಲಿ ಭಾರತ ಸರ್ಕಾರ ಡಿ.ಆರ್.ಡಿ.ಒ. ಎಂಬ ಯುದ್ಧದ ಉಪಕರಣಗಳಾದ ಉಡಾವಣೆಗಳನ್ನು ತಯಾರಿಸುವ ಸಂಸ್ಥೆಯೊಂದನ್ನು, ನಾಯಕನಹಟ್ಟಿ ಪ್ರದೇಶದಲ್ಲಿ ೧೧.೦೦೦ ಸಾವಿರ ಎಕರೆ ಕರುಚಲು ಅರಣ್ಯಪ್ರದೇಶದಲ್ಲಿ ಸ್ಥಾಪಿಸಿದೆ. ಈ ಸಂಸ್ಥೆಯನ್ನು ಸ್ಥಾಪಿಸುವ ಪೂರ್ವದಲ್ಲಿ ಇದನ್ನು ಸ್ಥಾಪಿಸಬಾರದೆಂದು ತಡೆಯಲು ಅನೇಕ ಜನಪರ ಹೋರಾಟಗಳು, ರಾಜಕೀಯ ಪಕ್ಷದನಾಯಕರು, ಮಾನವಹಕ್ಕುಗಳ ಹೋರಾಟಗಾರರು, ಸಾಮಾಜಿಕ ಕಾರ್ಯಕರ್ತರು, ಚಿಂತಕರು ಇವರ ಹೋರಾಟದ ಬೆಂಬಲಕ್ಕೆ ನಿಂತರು, ರಾಜಕಾರಣದ ಒಳ ಸುಳಿಗಳು ಸಂಸ್ಥೆಯನ್ನು ಸ್ಥಾಪಿಸದಂತೆ ತಡೆಯುವ ಅವರಿಗೆ ಒಂದು ತಾತ್ವಿಕ ನೆಲೆ ಸಿಗಲಿಲ್ಲ. ಆ ಪ್ರದೇಶಗಳಲ್ಲಿ ಬದುಕುವವರಿಗೆ ಬರ ಮತ್ತು ಬಡತನದ ಸಂದರ್ಭಗಳು ಒಂದು ಸವಾಲುಗಳಾದರೆ, ಸರ್ಕಾರದ ನೀತಿ ಮತ್ತು ನಿಲುವುಗಳು ಯುದ್ಧದ ಉಪಕರಣಗಳಾದ ಉಡಾವಣೆಗಳನ್ನು ತಯಾರಿಸುವ ಸಂಸ್ಥೆಯೊಂದನ್ನು ಸ್ಥಾಪಿಸಿರುವುದು ಹಟ್ಟಿ ಜನರಲ್ಲಿ ಜೀವನ ಒಂದು ಪ್ರಶ್ನೆಯಾಗಿದೆ. ಹುಲ್ಲುಗಾವಲನ್ನು ಕಿತ್ತುಕೊಂಡಮೇಲೆ ಪಶುಸಂಗೋಪನೆ ನಿಂತುಹೋಯಿತು, ಕುರಿ, ಮೇಕೆ, ದನ, ಎತ್ತು ಎಮ್ಮೆ ಯಂತಹ ದೇಶಿಯ ತಳಿಗಳು ವಿನಾಶದ ಅಂಚಿನಲ್ಲಿವೆ. ನಿರುದ್ಯೋಗ ಅರೆ ಉದ್ಯೋಗಗಳು ಆಹಾರದ ಭದ್ರತೆಯ ಕೊರತೆಯನ್ನು ಹೆಚ್ಚಿಸಿವೆ. ೧೧೦೦೦ ಸಾವಿರ ಎಕರೆಯಲ್ಲಿ ಇದ್ದಂತಹ ಮರ ಮತ್ತು ಸಸ್ಯಸಂಪತ್ತು ನಾಶವಾಗಿ ಅಲ್ಲಿಯ ತಾಪಮಾನವನ್ನು ಹೆಚ್ಚಿಸಿದೆ. ಜನರು ತಮ್ಮ ಜೀವನೋಪಾಯಕ್ಕಾಗಿ ಪರ್ಯಾಯ ಮಾರ್ಗಗಳು ಅನಿವಾರ್ಯವಾಗುವುದು. ಈ ಎಲ್ಲಾ ಹಿನ್ನೆಲೆಯಲ್ಲಿ ಜನರು ತಮ್ಮ ಹಟ್ಟಿ ನೆಲೆಗಳಿಂದ ಇತರ ಗ್ರಾಮೀಣ ಮತ್ತು ನಗರ ಪ್ರದೇಶಗಳಿಗೆ ವಲಸೆ ಹೋಗುವವರ ಪ್ರಮಾಣ ಹೆಚ್ಚಿಸಿರುವುದು. ಈ ವಲಸೆಯ ಪ್ರಕ್ರಿಯೆ ಹಟ್ಟಿ ಜನರ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಾಂತರಗಳಿಗೆ ದಾರಿಯಾಗಿರುವುದು. ನಿಜವೆಂದರೆ ಸರ್ಕಾರಗಳು ಬಡತನ ನಿರ್ಮೂಲನೆಗೆ ಕೈಗೊಂಡ ಅಭಿವೃದ್ಧಿ ಯೋಜನೆಗಳು ಬಡತನ ನಿರ್ಮೂಲನೆ ಮಾಡಿವಿಯೆ? ಅಭಿವೃದ್ಧಿ ಎನ್ನುವ ಪರಿಕಲ್ಪನೆ ಹಟ್ಟಿ ಜನರಿಗೆ ವಿಲಕ್ಷಣವಾದುದು. ಬದಲಾವಣೆಯನ್ನು ರೂಪಾಂತರವೆನ್ನುತ್ತೇವೆ, ಪ್ರಗತಿ ಎನ್ನುತ್ತೇವೆ ಅಥವಾ ಪಲ್ಲಟವೆನ್ನುತ್ತೇವೆ. ಈ ಎಲ್ಲ ಪದದ ಅರ್ಥಗಳು ಕೇವಲ ಪದಗಾಗಿ ಶಬ್ಧಕೋಶದಲ್ಲಿಯೇ ಉಳಿದಿರುವುದನ್ನು ಪ್ರಸ್ತುತ ಅಧ್ಯಯನ ಗುರುತಿಸಿದೆ.

## ೬.೨ ಸಲಹೆಗಳು

೧. ಚಿತ್ರದುರ್ಗ ಜಿಲ್ಲೆಯ ಎರಡು ಹಟ್ಟಿ ಸಮುದಾಯಗಳಲ್ಲಿ ಆ ಜನರ ಸಂಪ್ರದಾಯ ನಡವಳಿಕೆ ಮತ್ತು ಅಭ್ಯಾಸಗಳು ಬದಲಾಗಬೇಕು ಜಾಗತಿಕ ಮಟ್ಟದಲ್ಲಿ ಬದಲಾವಣೆ ಸಂದರ್ಭದ ಎದುರು ಹೇಗೆ ತನ್ನ ಬದಲಾವಣೆಯ ಆಯಾಮಗಳನ್ನು ಪಡೆದುಕೊಂಡಿತೋ ಹಾಗೆಯೇ ಭಾರತದ ಈ ಸಂದರ್ಭದಲ್ಲಿ ಎರಡು ಹಟ್ಟಿಗಳು ನಗರೀಕರಣ ಮತ್ತು ಜಾಗತೀಕರಣದ ಪ್ರಭಾವಗಳಿಗೆ ಒಳಗಾದರೂ ಅಭಿವೃದ್ಧಿಯ ಬದಲಾವಣೆಯಲ್ಲಿ ಇಂದಿಗೂ ಹೊರ ಉಳಿದಿರುವುದು ಪ್ರಸ್ತುತ ಅಧ್ಯಯನದಲ್ಲಿ ವ್ಯಕ್ತವಾಗುವುದು. ಈ ಹಿನ್ನೆಯಲ್ಲಿ ಜನರಿಗೆ ಮಾಹಿತಿ ನೀಡುವುದರ ಮೂಲಕ ಸಮಾಜದ ಮುಖ್ಯವಾಹಿನಿಗೆ ತರಬೇಕಾಗುತ್ತದೆ. ಹಸಿವಿಗಾಗಿ ಮತ್ತು ಉಳಿವಿಗಾಗಿ ನಿತ್ಯ ಹೋರಾಟದ ಕಾರ್ಯತಂತ್ರ ರೂಢಿಸಿಕೊಂಡು ಜನರಲ್ಲಿ ಸಂಪ್ರದಾಯ, ನಡವಳಿಕೆ ಮತ್ತು ಅಭ್ಯಾಸದಲ್ಲಿ ಬದಲಾವಣೆ ಅನಿವಾರ್ಯವು ಆಗಿರುವುದು.

೨. ಈ ಎರಡು ಸಮುದಾಯದ ಜನರಿಗೆ ತಳಮಟ್ಟದಿಂದ ಮೇಲ್ಮಟ್ಟದವರೆಗೆ ಬಡತನ ನಿವಾರಣೆ ಮಾಡುವ ಅಭಿವೃಧಿ ಕಾರ್ಯತಂತ್ರಗಳ ತಿಳುವಳಿಕೆಯಾಗಬೇಕು. ಈ ಸಮುದಾಯದ ಮೂಲವೃತ್ತಿಗಳಲ್ಲಿ ತೊಡಕಿರುವುದರಿಂದ ಮತ್ತು ಕೃಷಿಯಲ್ಲಿಯೂ ಭೂಹಿಡುವಳಿದಾರರ ಸಂಖ್ಯೆ ಕಡಿಮೆ ಇರುವುದರಿಂದಾಗಿ ಕೂಲಿ ಕಾರ್ಮಿಕರ ಸಂಖ್ಯೆ ಹೆಚ್ಚಿದ್ದು ಸರ್ಕಾರದ ಯೋಜನೆಗಳಲ್ಲಿ ಇವರ ಅಭಿವೃದ್ಧಿಗೆ ಸರ್ಕಾರವು ಕಾರ್ಯತಂತ್ರವನ್ನು ರೂಪಿಸಬೇಕು.

೩. ಜನರ ಕಲ್ಯಾಣಾಭಿವೃದ್ಧಿ ಯೋಜನೆಗಳಲ್ಲಿ ಯೋಜನಾಹಂತ, ಯೋಜನಾ ಅನುಷ್ಠಾನದ ಹಂತ ಯೋಜನೆಯ ನಂತರದ ಹಂತದಲ್ಲಿ ಸಮುದಾಯ ಭಾಗವಹಿಸುವ ವೇಗವನ್ನು ಹೆಚ್ಚಿಸುವುದು. ಸರ್ಕಾರದ ಯೋಜನೆಗಳಲ್ಲಿ ಉದ್ಯೋಗಖಾತರಿ ಯೋಜನೆಯನ್ನು ತಿಳಿದಿರುವ ಕಾಡುಗೊಲ್ಲರ ಶೇ.ಪ್ರಮಾಣ ೧೦.೫೩ ರಷ್ಟಿದ್ದು, ಮ್ಯಾಸಬೇಡರಲ್ಲಿ ಶೇ.ಪ್ರಮಾಣ೪.೫೫ ರಷ್ಟಿದ್ದು, ಅನ್ನಭಾಗ್ಯ ಯೋಜನೆಯ ಬಗ್ಗೆ ಕಾಡುಗೊಲ್ಲರಲ್ಲಿ ೧೧.೧೮ ರಷ್ಟಿದ್ದು, ಮ್ಯಾಸಬೇಡರಲ್ಲಿ ೧೩.೪೬ ರಷ್ಟು ಕಂಡುಬಂದಿದೆ. ಒಟ್ಟಾರೆಯಾಗಿ ಈ ಎರಡು ಸಮುದಾಯಗಳಲ್ಲಿ ಶೇಕಡ ಪ್ರಮಾಣ ೧೧.೪೯ ಕಂಡುಬಂದಿದ್ದು, ಯೋಜನೆಗಳ ಬಗ್ಗೆ ತಿಳಿದಿಲ್ಲದಿರುವ ಪ್ರಮಾಣ ೪೮.೬೮ ಕಾಡುಗೊಲ್ಲರಲ್ಲಿ ಇದ್ದು, ಮ್ಯಾಸಬೇಡರಲ್ಲಿ ೪೯.೪೩ ಇರುವುದು ಅಧ್ಯಯನದಿಂದ ಕಂಡುಬಂದಿದ್ದು, ಈ ಸಮುದಾಯಗಳಿಗೆ ಯೋಜನೆಗಳ ಅರಿವು ಮೂಡಿಸುವ ಅಗತ್ಯವಿದೆ.

೪. ಮೀಸಲಾತಿ ಅಭಿವೃದ್ಧಿಯ ಎಲ್ಲಾ ಹಂತಗಳಲ್ಲೂ ಮತ್ತು ಅಧಿಕಾರದ ಎಲ್ಲಾ ಹಂತಗಳಲ್ಲೂ ಸಂವಿದಾನಿಕವಾಗಿ ನಿಗದಿ ಪಡಿಸಿದ ಪ್ರಮಾಣದಲ್ಲಿ ಪ್ರಾತಿನಿಧ್ಯ ನೀಡುವುದು.

೫. ಈ ಎರಡು ಸಮುದಾಯಗಳಲ್ಲಿ ಸಮುದಾಯಾಧಾರಿತ ಸಮುದಾಯ ಅಭಿವೃದ್ಧಿ ಸಾದಿಸುವ ಹಿನ್ನೆಲೆಯಲ್ಲಿ ಸಮುದಾಯವನ್ನು ಸಂಘಟಿಸಿ ಸಹಭಾಗಿತ್ವದ ಮೂಲಕ ಸರ್ಕಾರದ ಮತ್ತು ಸಂಸ್ಥೆಗಳಿಂದ ಲಭ್ಯವಿರುವ ಮೂಲ ಸೌಲಭ್ಯಗಳನ್ನು ಪಡೆಯುವ ಹಿನ್ನೆಲೆಯಲ್ಲಿ ಸಂಘಸಂಸ್ಥೆಗಳನ್ನು ಸ್ಥಾಪಿಸಿ ಅವುಗಳಲ್ಲಿ ಅವರನ್ನು ತೊಡಗಿಸಿಕೊಳ್ಳುವುದು.

೭. ಎಷ್ಟೆ ವಿಜ್ಞಾನ ತಂತ್ರಜ್ಞಾನ ಶಿಕ್ಷಣ ಪಡೆದರು ಇಂದಿಗೂ ಲಿಂಗ ಸಂಬಂಧಿ ಅಭಿವೃದ್ಧಿಯ ಸ್ಥಿತಿಯನ್ನು ಅವಲೋಕಿಸಿದರೆ ಇಂದಿಗೂ ಮಹಿಳೆಯರು ಲಿಂಗ ತಾರತಮ್ಯ ಎನ್ನುವ ಸಮಸ್ಯೆಗಳು ಎದುರಾಗಿರುವುದು ಅದು ಮಹಿಳೆಯರಿಗೆ ಹೆಚ್ಚು ಎನ್ನುವುದು ಪ್ರಸ್ತುತ ಅಧ್ಯಯನದಲ್ಲಿ ವ್ಯಕ್ತವಾಗಿದೆ. ಇದರಿಂದ ಮಹಿಳೆಯರ ಅಭಿವೃದ್ಧಿ ಮತ್ತು ಸಬಲೀಕರಣಗಳಿಗೆ ಆದ್ಯತೆ ನೀಡಿ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆ ಮತ್ತು ಸವಾಲುಗಳ ಬಿಕ್ಕಟ್ಟನ್ನು ಸುಧಾರಿಸುವುದು.

೭. ಪ್ರಜಾಪ್ರಭುತ್ವ, ಜಾಗತೀಕರಣ, ಅಧಿಕಾರದ ವಿಕೇಂದ್ರಿಕರಣ ಸಂಪರ್ಕ ಮತ್ತು ಸಾರಿಗೆ ವ್ಯವಸ್ಥೆ ಇದ್ದರೂ ಅವರಲ್ಲಿ ಇನ್ನೂ ಮೂಲಭೂತ ಸೌಲಭ್ಯಗಳು ಮರೀಚಿಕೆಯಾಗಿರುವುದು. ಹಟ್ಟಿಗಳ ಅಭಿವೃದ್ಧಿಯಲ್ಲಿ ಹಟ್ಟಿ ಜನರಿಗೆ ಹೆಚ್ಚು ತಿಳುವಳಿಕೆ ಹಾಗು ಅವರ ಅಭಿವೃದ್ಧಿಗೆ ಹೆಚ್ಚು ಒತ್ತು ನೀಡುವುದು ಅನಿವಾರ್ಯತೆ ಇರುವುದು

೮. ಕೆಲವು ಹಳೆಯ ಪರಂಪರೆ ಮತ್ತು ನಂಬಿಕೆಗಳಲ್ಲಿ ವೈಜ್ಞಾನಿಕತೆ ಮತ್ತು ವೈಚಾರಿಕತೆ ಇರುವುದರಿಂದ ಇವುಗಳನ್ನು ಉಳಿಸಿ ಮತ್ತು ಮುಂದುವರೆಸಿಕೊಂಡು ಹೋಗಲು ಹಾಲಿ ಇರುವ ಪದ್ದತಿಗಳು, ಕಲೆ, ಸಾಹಿತ್ಯ, ಜೀವನ ಕೌಶಲ್ಯಗಳನ್ನು ಜೀವಂತಗೊಳಿಸಲು ವೈಚಾರಿಕ ನಿನೂತನ ಕಾರ್ಯತಂತ್ರಗಳನ್ನು ಬಳಸುವುದು.

೯. ಎಲ್ಲಾ ಗೊಲ್ಲರ ಹಟ್ಟಿಗಳನ್ನು ಕಂದಾಯ ಗ್ರಾಮಗಳನ್ನಾಗಿ ಪರಿವರ್ತಿಸಬೇಕು.

೧೦. ಹಟ್ಟಿಯ ಮಕ್ಕಳಿಗೆ ಶೈಕ್ಷಣಿಕ ಪ್ರಗತಿಯನ್ನುಂಟು ಮಾಡಲು ಮಹಿಳಾ ಅಭ್ಯರ್ಥಿಗಳಿಗೆ ಸೇರಿಸಿ ಜಿಲ್ಲಾ, ತಾಲ್ಲೂಕು ಮಟ್ಟದಲ್ಲಿ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸುವುದು.

೧೧. ಕಾಡುಗೊಲ್ಲ ಮತ್ತು ಮ್ಯಾಸಬೇಡರಿಗೆ ರಾಜಕೀಯ ಸ್ಥಾನಮಾನ ನೀಡಿ, ಚುನಾವಣೆಗೆ ಪ್ರತಿನಿಧಿಸಲು ಪ್ರಾತಿನಿಧ್ಯ ನೀಡುವುದು.

೧೨. ಕಾಡುಗೊಲ್ಲರನ್ನು ಪ್ರವರ್ಗ–೧ ಇರುವುದನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಬೇಕು.

೧೩. ಸರಕಾರ ಹಟ್ಟಿಗಳ ಪ್ರಗತಿಗೆ ಬರೀ ಭರವಸೆ ಮೂಡಿಸುತ್ತಿದ್ದು ಅವುಗಳನ್ನು ಕಡ್ಡಾಯವಾಗಿ ಜಾರಿಗೊಳಿಸಬೇಕು.

೧೪. ಕಾಡುಗೊಲ್ಲರ ಹಟ್ಟಿಗಳಲ್ಲಿ ಹುಟ್ಟು, ಮುಟ್ಟು, ಸಾವು, ಋತುಮತಿ ಇನ್ನಿತರ ಆಚರಣೆಗಳಿಗೆ ಸಂಬಂಧಿಸಿದಂತೆ ಅನೇಕ ಮೌಢ್ಯಗಳಿರುವುದು ಕಂಡುಬರುತ್ತದೆ. ಈ ನಿಟ್ಟಿನಲ್ಲಿ ಮೂಢನಂಬಿಕೆಗಳನ್ನು ಹೋಗಲಾಡಿಸುವಲ್ಲಿ ನಿರಂತರವಾಗಿ ಶಿಬಿರಗಳನ್ನೇರ್ಪಡಿಸಿ ಅರಿವು ಮೂಡಿಸಬೇಕು. ಇತ್ತೀಚಿನ ದಿನಗಳಲ್ಲಿ ಪ್ರಸಾರಮಾದ್ಯಮಗಳು ಹಾಗು ಪತ್ರಿಕಾಮಾದ್ಯಮಗಳು ಇದರ ಬಗ್ಗೆ ಅರಿವು ಮೂಡಿಸುವ ಕಾರ್ಯವನ್ನು ಮಾಡುತ್ತಿವೆ.

೧೫. ಕಾಡುಗೊಲ್ಲ ಮತ್ತು ಮ್ಯಾಸಬೇಡರ ಸಂಸ್ಕೃತಿ ಅಪಾಯದ ಅಂಚಿಗೆ ಸಿಲುಕಿದೆ. ಹಾಗಾಗಿ ಅವರಲ್ಲಿರುವ ಹಾಡು. ಕಲೆ. ಪಾರಂಪರಿಕ ಜ್ಞಾನ. ಕೋಲಾಟದ ಪದಗಳು. ಜಾನಪದ

ಹಾಡುಗಳು, ಅವರಲ್ಲಿದ್ದ ತಿಳುವಳಿಕೆ, ಇವುಗಳನ್ನು ಸಂಶೋಧಕರು ಮತ್ತು ಸರ್ಕಾರ ಹಿರಿಯ ಪೀಳಿಗೆಯವರಿಂದ ಸಂಗ್ರಹಿಸಿ ರಕ್ಷಿಸಬೇಕಾದ ಅಗತ್ಯತೆ ಇದೆ.

೧೬. ಈ ಎರಡು ಬುಡಕಟ್ಟು ಸಮುದಾಯಗಳು ಕೃಷಿಗೆ ಬಂದು ನೆಲೆ ನಿಂತಿರುವುದರಿಂದ ಸರ್ಕಾರದಿಂದ ಬಡ್ಡಿರಹಿತ ಸಾಲ, ಸಬ್ಸಿಡಿ, ಕೃಷಿಗೆ ಪೂರಕವಾದ ಸಲಕರಣೆಗಳನ್ನು ಒದಗಿಸುವ ವ್ಯವಸ್ಥೆಯಾಗಬೇಕು. ಅಂದಾಗ ಮಾತ್ರ ಆರ್ಥಿಕ ಸ್ವಾವಲಂಬಿಗಳಾಗಲು ಸಾಧ್ಯವಾಗುತ್ತದೆ. ಜೊತೆಗೆ ಯುವಕರಿಗೆ ಕೃಷಿಗೆ ಪೂರಕವಾದ ಉದ್ಯೋಗಗಳನ್ನು ಕಲ್ಪಿಸಿ ಕೌಶಲ್ಯ, ತರಬೇತಿ ಕೊಟ್ಟು ಸ್ವಾವಲಂಬಿಗಳಾಗಿಸಬೇಕು.

೧೭. ಕಾಡುಗೊಲ್ಲರ ಜೀವನ ವಿಧಾನವನ್ನು ಮಾನವ ವಿಜ್ಞಾನಿಗಳು ಅಧ್ಯಯನ ಮಾಡುದಾಗ್ಯೂ ಅವರ ನಂಬಿಕೆ, ಆಚರಣೆಗಳು, ಪ್ರತ್ಯೇಕವಾಗಿ ವಾಸಿಸುವಿಕೆ ಅಪ್ಪಟ ಬುಡಕಟ್ಟು ಲಕ್ಷಣಗಳನ್ನು ಪ್ರಸ್ತುತ ಅಧ್ಯಯನವು ಸಾಕ್ಷೀಕರಿಸಿದ್ದು ಸಾವಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಹಿಂದುಳಿದಿರುವ ಇವರಿಗೆ ಆದೇಶ ನಂ.SWL:12:PB 20-2-1977 ರಂದು ಪ್ರವರ್ಗ–೧ ಕ್ಕೆ ಸೇರಿಸಿ. ಹಿಂದುಳಿದ ಬುಡಕಟ್ಟು (ಬಿ.ಟಿ) ಎಂದು ಗುರುತಿಸಿ ಶೇಕಡ ೫ ಮಿಸಲಾತಿಯನ್ನು ಕೊಟ್ಟು ಬುಡಕಟ್ಟಾಗಿಯೂ ಬುಡಕಟ್ಟಾಗದ ಸಮುದಾಯವಾಗಿ ಸೌಲಭ್ಯ ವಂಚಿತರಾಗಿದ್ದಾರೆ. ಕೇಂದ್ರ ಮತ್ತು ರಾಜ್ಯ ಸರ್ಕಾರ ಪರಿಶೀಲಿಸಿ ಬುಡಕಟ್ಟು ಪಂಗಡಕ್ಕೆ ಸೇರಿಸುವ ಅನಿವಾರ್ಯತೆ ಇದೆ.

# ಪರಾಮರ್ಶನ ಗ್ರಂಥಗಳು

## ಕನ್ನಡ ಗ್ರಂಥಗಳು


ಅಂಬಳಿಕೆ ಹಿರಿಯಣ್ಣ. ಕಾಡುಗೊಲ್ಲರ ಜನಪದ ಗೀತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೮.

ಈಶ್ವರಪ್ಪ. ಎಂ.ಜಿ. ಮ್ಯಾಸಬೇಡರು ಪಿ.ಬಿ.ಹೆಚ್. ಪ್ರಕಾಶನ. ಬೆಂಗಳೂರು, ೧೯೮೨.

ಕರಿಶೆಟ್ಟಿ ರುದ್ರಪ್ಪ. ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫.

ಕಾಳೇಗೌಡ ನಾಗವಾರ. ಒಂದು ಹಟ್ಟಿಯ ಜನಪದೀಯ ಅಧ್ಯಯನ. ಪಿಹೆಚ್.ಡಿ. ಪ್ರಬಂಧ. ಬೆಂಗಳೂರು ವಿಶ್ವವಿದ್ಯಾಲಯ, ೧೯೮೪.

ಕಾಳೆಗೌಡ ನಾಗವಾರ, ಕಾಡುಗೊಲ್ಲ ಬದುಕಿನ ಅರ್ಥ ವ್ಯವಸ್ಥೆ. ಆದಿವಾಸಿ ಆಖ್ಯಾನ. ಸಿದ್ದಾರ್ಥ ಪ್ರಕಾಶನ. ಹೊಸಪೇಟೆ, ೨೦೦೬.

ಕೃಷ್ಣಮೂರ್ತಿ ಹನೂರು. ಮ್ಯಾಸಬೇಡರು. ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು, ೧೯೯೩.

ಕೃಷ್ಣಮೂರ್ತಿ ಹನೂರು. ಸಾವಿರದ ಸಿರಿಬೆಳೆಗು. ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೫.

ಗಿರಿಜಾ .ಟಿ. ಚಿತ್ರದುರ್ಗ ಜಿಲ್ಲಾ ದರ್ಶಿನಿ, ರೇಖಾ ಪ್ರಕಾಶನ, ಮೈಸೂರು, ೧೯೯೧.

ಗುರುಲಿಂಗಯ್ಯ.ಎಂ. ಕಾಡುಗೊಲ್ಲ ಸಾಮಾಜಿಕ ಚಲನೆ ಮತ್ತು ಸಾಮಾಜಿಕ ಪರಿವರ್ತನೆ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೧೯೯೯.

ಗುರುಲಿಂಗಯ್ಯ.ಎಂ. ಕರ್ನಾಟಕದ ಗೊಲ್ಲ ಸಮುದಾಯ ಸಮಾಜೋ-ಸಾಂಸ್ಕೃತಿಕ ಅಧ್ಯಯನ. ಶಕ್ತಿ ಪ್ರಕಾಶನ. ಬೆಂಗಳೂರು, ೨೦೦೫.

ಗುರುಲಿಂಗಯ್ಯ.ಎಂ. ಮತ್ತು ನಾಗಪ್ಪ. ಎ. ಕಾಡುಗೊಲ್ಲ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳುರು, ೨೦೦೮.

**ಗಂಗಾಧರ ದೈವಜ್ಞ**, ಬುಡಕಟ್ಟು ಸಮಾಜ, ಹುಟ್ಟು - ಸಾವಿನ ನಡುವೆ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦.

**ಚಲುವರಾಜು.** ಜುಂಜಪ್ಪ-ಬುಡಕಟ್ಟು ಮಹಾಕಾವ್ಯ-ಪ್ರಕಾಶಕರು. ಎ.ವಿ.ನಾವಡ, ನಿರ್ದೇಶಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

**ಚಿಕ್ಕಪ್ಪಯ್ಯ ಬಿ.** ಶ್ರೀ ಶ್ರೀ ಎತ್ತಪ್ಪಸ್ವಾಮಿ - ಶ್ರೀ ಶ್ರೀ ಜುಂಜಪ್ಪಸ್ವಾಮಿ ಸ್ಮರಣ ಸಂಚಿಕೆ. ಕಾಡುಗೊಲ್ಲರ ಸ್ಥಿತಿಗತಿಗಳ ಮುನ್ನೋಟ, ೨೦೧೩.

**ಚಿಕ್ಕಪ್ಪಯ್ಯ**, ಶ್ರೀ ಭರಮಗಿರಿ ಈರಣ್ಣ ಸ್ವಾಮಿಸ್ಮರಣ ಸಂಚಿಕೆ-೨೦೧೩.

**ಚಿದಾನಂದ ಮೂರ್ತಿ.ಎಂ.** ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಸಂಪುಟ - ೧ ಮೈಸೂರು ವಿಶ್ವವಿದ್ಯಾಲಯ ಮೈಸೂರು, ೧೯೬೬.

**ಚಂದ್ರಪೂಜಾರಿ.** ಎಂ. ಸಂಶೋಧನೆ ಏನು? ಏಕೆ? ಹೇಗೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೯.

**ಚಂದ್ರಪೂಜಾರಿ.** ಎಂ. ಸಂಶೋಧನಾ ಪ್ರಸ್ತಾವ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

**ಡಂಗ.ಡಿ.ಬಿ.** ಜನಾಂಗ ಪರಿಚಯ, ಸಪ್ತಾಪುರ, ಪೆರಿಯಾರ್ ಪ್ರಕಾಶನ, ದಾರವಾಢ, ೧೯೮೮.

**ತಾರಿಹಳ್ಳಿ ಹನುಮಂತಪ್ಪ.** ಕರ್ನಾಟಕದ ಬುಡಕಟ್ಟು ಸಮುದಾಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ **ಹಂಪಿ, ೨೦೧೦.**

**ದುರುಗಪ್ಪ. ಎಂ. ಕೆ.** ವಿಜಯನಗರೋತ್ತರ ಕಾಲೀನ ಬೇಡ ಜನಾಂಗ ಚಾರಿತ್ರಿಕ ಅಧ್ಯಯನ, ವಾಲ್ಮೀಕಿ ಸಾಹಿತ್ಯ ಸಂಪದ, ೨೦೧೦.

**ದೊಡ್ಡಮಲ್ಲಯ್ಯ.** ಕಾಡುಗೊಲ್ಲರ ಸಂಸ್ಕೃತಿ ಒಂದು ಅವಲೋಕನ. ಸ್ಮರಣ ಸಂಚಿಕೆ, ೨೦೧೩.

**ಪ್ರಭಾಕರ.** ಎ.ಎಸ್. ಮ್ಯಾಸಬೇಡರ ಕಥನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೯.

**ಪ್ರಭಾಕರ.** ಎ.ಎಸ್. ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦.

**ಪ್ರಭಾಕರ.** ಎ.ಎಸ್. ಬುಡಕಟ್ಟು ಅಭಿವೃದ್ಧಿ ಮಿಮಾಂಸೆ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೪.

**ಪ್ರಭಾಕರ.** ಎ.ಎಸ್. ಆದಿವಾಸಿ ಆಖ್ಯಾನ. ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ೨೦೦೬.

**ಬೋರಲಿಂಗಯ್ಯ ಹಿ.ಚಿ.** ಗೊಂಡರ ರಾಮಾಯಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೯.

**ಬೋರಲಿಂಗಯ್ಯ ಹಿ.ಚಿ.** ಗಿರಿಜನ ನಾಡಿಗೆ ಪಯಣ, ರಾಗಿ ರೊಟ್ಟಿ ಪ್ರಕಾಶನ, ಬೆಂಗಳೂರು, ೧೯೯೧.

**ಬೋರಲಿಂಗಯ್ಯ ಹಿ.ಚಿ.** ಬುಡಕಟ್ಟು ದೈವಾರಾಧನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦.

**ಬೋರಲಿಂಗಯ್ಯ ಹಿ.ಚಿ.** ಕರ್ನಾಟಕ ಜನಪದ ಕಲೆಗಳ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫.

**ಮಲ್ಲಿಕಾರ್ಜುನ ಕಲಮರಹಳ್ಳಿ,** ಕಾಡುಗೊಲ್ಲರ ಜನಪದ ಕಾವ್ಯಗಳಲ್ಲಿ ಸಾಂಸ್ಕೃತಿಕ ಸಂಘರ್ಷ. ಪಿಎಚ್.ಡಿ. ಪ್ರಬಂಧ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ೨೦೦೭.

**ಮಲ್ಲಿಕಾರ್ಜುನ ಕಲಮರಹಳ್ಳಿ.** ಗೊಲ್ಲರ ಇತಿಹಾಸ ಕಥನ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೧೧.

**ಮಹದೇವ ಶಾಸ್ತ್ರಿ.** ಯಾದವರ ಕೈಪಿಡಿ ಅಥವಾ ಗೊಲ್ಲಗೌಡರ ವಂಶಾವಳಿಗಳು.ಕೊಡಗನೂರು ಮುದ್ರಣಾಲಯ. ದಾವಣಗೆರೆ, ೧೯೪೦.

**ಮೀರಾಸಾಬಿಹಳ್ಳಿ ಶಿವಣ್ಣ.** ಕಾಡುಗೊಲ್ಲ ಬುಡಕಟ್ಟು ವೀರರು– ಸಿವಿಜಿ ಪಬ್ಲಿಕೇಶನ್ಸ್ ಬೆಂಗಳೂರು, ೧೯೯೬.

**ಮೀರಾಸಾಬಿಹಳ್ಳಿ ಶಿವಣ್ಣ,** ಗೊಲ್ಲಕಡಗ ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು, ೧೯೯೯.

**ಮೀರಾಸಾಬಿ ಹಳ್ಳಿ ಶಿವಣ್ಣ.** ಮ್ಯಾಸಮಂಡಲ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩.

**ಮೀರಾಸಾಬಿ ಹಳ್ಳಿ ಶಿವಣ್ಣ.** ಕಾಡುಗೊಲ್ಲರ ಸಂಸ್ಕೃತಿ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪.

**ಮೀರಾಸಾಬಿ ಹಳ್ಳಿ ಶಿವಣ್ಣ.** ಮ್ಯಾಸಮಂಡಲ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩.

**ಮುತ್ತಯ್ಯ ಎಸ್.ಎಂ.** ಚಿತ್ರದುರ್ಗ ಜಿಲ್ಲೆಯ ಬುಡಕಟ್ಟುಗಳು : ಪರಂಪರೆ–ಆಧುನಿಕತೆ, ಬುಡಕಟ್ಟು ಅಧ್ಯಯನ, ಸಂಪುಟ ೬, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

**ಮೇತ್ರಿ. ಕೆ. ಎಂ.** ಕೃಷ್ಣ ಗೊಲ್ಲರ ಕಥನ ಕಾವ್ಯಗಳು, ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

**ಮೊಗಳ್ಳಿ ಗಣೇಶ್.** ಅವ್ಯಕ್ತ ಚರಿತ್ರೆ. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

**ಮಂಜುನಾಥ ಬೇವಿನಕಟ್ಟಿ.** ಬುಡಕಟ್ಟು ನಂಬಿಕೆಗಳು, ಒಂದು ನೋಟ, ಬುಡಕಟ್ಟು ಅಧ್ಯಯನ. ಸಂಪುಟ ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

ಮಂಜಣ್ಣ. ಎಂ. ಸಿರಿಯಜ್ಜಿ ಹಾಡಿದ ಜನಪದ ಕಾವ್ಯಗಳು ಒಂದು ಸಾಂಸ್ಕೃತಿಕ ಅಧ್ಯಯನ. ಪಿಎಚ್.ಡಿ. ಪ್ರಬಂಧ, ಮೈಸೂರು ವಿಶ್ವವಿದ್ಯಾಲಯ, ೨೦೧೧.

ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯಯನ. ಸಾಹಿತ್ಯ ಅಕಾಡೆಮಿ ಪ್ರಕಾಶನ, ೨೦೦೪.

ರಂಗರಾಜವನದುರ್ಗ. ಜನಪದ ಸಾಂಸ್ಕೃತಿಕ ವೀರರು. ಡಾ.ಬಿ.ಆರ್. ಅಂಬೇಡ್ಕರ್ ಅಧ್ಯಯನ ಕೇಂದ್ರ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ೨೦೦೭.

ರೈಸ್. ಬಿ.ಎಲ್. ಎಪಿಗ್ರಫಿಯ ಕರ್ನಾಟಕ, ಚಿತ್ರದುರ್ಗ ಜಿಲ್ಲೆ, ೧೯೦೩.

ಲಕ್ಷ್ಮಣ್ ತೆಲಗಾವಿ. ಹರತಿಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೮೭.

ಲೋಕೇಶ. ಜಿ.ಎಂ. ಕರ್ನಾಟಕ ಬಯಲು ಸೀಮೆಯ ಮ್ಯಾಸನಾಯಕರ ಹಟ್ಟಿಗಳು ಚಾರಿತ್ರಿಕ ಅಧ್ಯಯನ, ಮಹಾ ಪ್ರಬಂದ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩.

ವಿರುಪಾಕ್ಷಿ ಪೂಜಾರಹಳ್ಳಿ, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೨.

ವಿರೂಪಾಕ್ಷಿ ಪೂಜಾರಹಳ್ಳಿ, ಬೇಟೆ ಮತ್ತು ಬೇಡರು. ಚಿನ್ನಹಗರಿ ಪ್ರಕಾಶನ. ಪೂಜಾರಹಳ್ಳಿ, ೨೦೦೭.

ವೀಣಾ. ಎಂ.ಪಿ. ಮನೆ ಸಮಾಜ ಮತ್ತು ಸಂಸ್ಕೃತಿ, ನೆಲೆ ಮನೆ ಪ್ರಕಾಶನ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ, ೨೦೦೦.

ಶಿವಣ್ಣ .ಪಿ.ಬಿ. ಮ್ಯಾಸಮಂಡಲ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩.

ಶಂಕರ್‌ರಾವ್ .ಚ.ನ. ಸಮಾಜಶಾಸ್ತ್ರದ ಮೂಲತತ್ವಗಳು ಜೈಭಾರತ್ ಪ್ರಕಾಶನ. ಮಂಗಳೂರು, ೨೦೦೭.

ಶಂಕರನಾರಾಯಣ. ತೀ.ನಂ ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು ಮೈಸೂರು ವಿಶ್ವವಿದ್ಯಾಲಯ. ಮೈಸೂರು, ೧೯೭೮.

ಶಂಬಾಜೋಶಿ, ಶಂಬಾಕೃತಿ ಕೃತಿ ಸಂಪುಟ. ಕಂನಾಡು-ಕರ್ನಾಟ ಸಂಪುಟ-೦೧, ಕನ್ನಡ ಪುಸ್ತಕ ಪ್ರಾಧಿಕಾರ, ೧೯೯೯.

ಶಂಬಾಜೋಶಿ, ಶಂಬಾಕೃತಿ ಕೃತಿ ಸಂಪುಟ. ಕಂನಡ-ಕಂನುಡಿ. ಸಂಪುಟ-೦೨ ಕನ್ನಡ ಪುಸ್ತಕ ಪ್ರಾಧಿಕಾರ, ೧೯೯೯.

ಶಂಬಾಜೋಶಿ, ಶಂಭಾಕೃತಿ ಸಂಪುಟ-೩. ಕನ್ನಡ ಪುಸ್ತಕ ಪ್ರಾಧಿಕಾರ, ೧೯೯೯.

ಸಣ್ಣೋಬಯ್ಯ .ಎಸ್.ಕೆ. ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳು. ಒಂದು ಸಮಾಜಶಾಸ್ತ್ರೀಯ ಅಧ್ಯಯನ. ಪಿಹೆಚ್.ಡಿ ಮಹಾ ಪ್ರಬಂಧ ಕನ್ನಡ ವಿಶ್ವವಿದ್ಯಾಲಯ. ಹಂಪಿ, ೨೦೦೨.

ಸಿದ್ಧಗಂಗಯ್ಯ ಕಂಬಾಳು. ಮಾತಾಡು ಮಲ್ಲಿಗೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೧೯೭೩.

ಸಿದ್ದಲಿಂಗಯ್ಯ ಜನ ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

ಹಿರೇಮಠ. ಎಸ್. ಎಸ್. "ಕರ್ನಾಟಕ ಸಂಸ್ಕೃತಿ ಪರಂಪರೆ- ಭಾಗ ೧ (ಹಬ್ಬಗಳು)", ಸಮತಾ ಪ್ರಕಾಶನ, ಹರಪನಹಳ್ಳಿ, ೧೯೯೨.

ಹಿರೇಮಠ್. ಎಸ್.ಎಸ್. "ಕರ್ನಾಟಕದಲಿತ ಸಂಸ್ಕೃತಿ ಪರಂಪರೆ- ಭಾಗ ೨ ( ಜಾತ್ರೆಗಳು)ಸಮತ ಪ್ರಕಾಶನ, ಹೊಸಪೇಟೆ, ೧೯೯೩.

## ಇಂಗ್ಲೀಷ್ ಗ್ರಂಥಗಳು

**Buchanan Francis**, Journey through Mysore, Canara and Malbar, London 1807.

**Edger Thurston and K. Rangachari,** Caste and Tribes of Southern India, Vol-1 2 3 4 5 Asian Educational Services, New Delhi, 1987.

**Enthoven .R.E**. The tribes and Castes of Bambay , Bombay Government Central press: rpt, Casmo Publications, vols 3, Delhi, 1922.

**Herkovits.M.J** Cultural Anthropology, Indian Book House, New Delhi. 1974.

**Iyer. L.k.** Tribes and Caste, Mithal Publications, Delhi, 1930.rpt, Mithal Publications,5 Vols, Delhi, 1998.

**Kapadia K.M.** Marriage and Family in India: Oxford University Press, Culcutta, 1968.

**Kuppu Awamy,** Social change in india: Vikas Publishing House, pvt.Ltd, New Delhi,1986.

**Luiz A A D.** The Trebes of Mysore, G S Viswa and Co, Bangalore,1963.

**Manoj Sharma**. Research Methodolgy anmol Publications pvt, Ltd, Newdelhi, 2004.

**Nanjundaiah. H.V**, The Ethnographic Survey of Mysore, Government Press, Bangalore, 1908.

**Nanjundaiah. H.V. & Ananthakrishna Iyer,** The Tribes and Castes, Vol - III 1936.

**Nanjundaiah. H.V, Iyer**, The Mysore Tribes and Caste : Vol.5, Mysore Govt Press, 1928.

**Sharanappa K.C**. Kadugolla Tribal Community of Hatti Culture and Impure Practices. www.epratrust.com, 2014.

**Sharanappa K.C.** Transition in Hatti Culture, www.deccanjournals.com, 2015.

**Shashi. S.S.** The world of Nomads , Lotus press, Newdelhi, 2006.

**Srinivas. M. N.** Religion and Society among the Coorgs of South India: Asia Publishing House, Bolbay, 1965.

**Srinivas. M. N.** Social Change in Modern India: Allied Publication, Bombay, 1966.

**ವಿಶ್ವಕೋಶ**

**ನಾಗೇಗೌಡ. ಹೆಚ್. ಎಲ್.** ಕನ್ನಡ ಜಾನಪದ ಕೋಶ: ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ೧೯೯೮.

ಕರ್ನಾಟಕ ಕನ್ನಡ ವಿಶ್ವಕೋಶ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೭೯.

**ಕರೀಗೌಡ ಬೀಚನಹಳ್ಳಿ.** ಕರಕುಶಲ ಕಲೆಗಳು, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ : ೨, ಪ್ರಸಾರಾಂಗ, ೨೦೦೦.

**ಶಂಕರರಾವ್. ಚ. ನ,** ಸಮಾಜ ಶಾಸ್ತ್ರದ ಕಿರು ವಿಶ್ವಕೋಶ: ಜೈ ಭಾರತ್ ಪ್ರಕಾಶನ, ಮಂಗಳೂರು, ೨೦೦೧.

**ವರದಿಗಳು**

**Havanur.L.G.** Karnataka backward class commission Report Govt of Karnataka, Bangalore,1975.

**Ravivarmakumar** (Chairman ) The Karnataka State commission for backward classes special report, Bangalore Government press, 2000.

**Reddy.O Chinnappa** (Chairman ) report of the Karnataka third backward classes Commission, Government press, Bangalore, 1990.

**ಜಿಲ್ಲಾ ಸಂಖ್ಯಾ ಸಂಗ್ರಹಣ ಅಧಿಕಾರಿಗಳು-** ಚಿತ್ರದುರ್ಗ ಜಿಲ್ಲಾ ಅಂಕಿ ಅಂಶಗಳ ನೋಟ, ೨೦೦೯-೧೦.

**ಜಿಲ್ಲಾ ಸಂಖ್ಯಾ ಸಂಗ್ರಹಣ ಅಧಿಕಾರಿಗಳು-** ಚಿತ್ರದುರ್ಗ ಜಿಲ್ಲಾ ಅಂಕಿ ಅಂಶಗಳ ನೋಟ, ೨೦೧೨-೧೩.

**ಜಿಲ್ಲಾ ಸಂಖ್ಯಾ ಸಂಗ್ರಹಣ ಅಧಿಕಾರಿಗಳು-** ಚಿತ್ರದುರ್ಗ ಜಿಲ್ಲಾ ಅಂಕಿ ಅಂಶಗಳ ನೋಟ, ೨೦೧೪-೧೫.

**Studies of Scheduled Tribes in Karnataka.** Karnataka Human Development Report-2005.

National Family Health Survey, 2005-06.

National Sample survey Organaization  NSSO -2010.

**ಕನ್ನಡ ಪತ್ರಿಕೆಗಳು**

**ವಿಜೃಂಭಣೆಯ ಆವಿನಗೂಡಿನಹಬ್ಬ**, ಪ್ರಜಾವಾಣಿ ದಿನಾಂಕ; ೧೨.೧೨.೨೦೧೨.

**ಹಿ.ಚಿ.ಬೋರಲಿಂಗಯ್ಯ**, ಬುಡಕಟ್ಟುಜನಾಂಗಕ್ಕೆ ಕಾಡುಗೊಲ್ಲರು ಸೇರಲಿ, ಪ್ರಜಾವಾಣಿ, ದಿನಾಂಕ: ೧೬.೧೨.೨೦೧೨.

**ಮಲ್ಲಿಕಾರ್ಜುನ ಕಲಮರಹಳ್ಳಿ**, ಸಂಗತ: ಕಾಡುಗೊಲ್ಲಬುಡಕಟ್ಟು ಅಭಿವೃದ್ಧಿ ಸೂತ್ರಗಳು, ಪ್ರಜಾವಾಣಿ, ದಿನಾಂಕ; ೦೪.೦೧.೨೦೧೩.

**ಮುರ್ಲಹಳ್ಳಿ ಕ್ಯಾತಪ್ಪನ ಪರಿಸೆ**, ವಿಜಯ ಕರ್ನಾಟಕ ದಿನಾಂಕ; ೩೦.೦೧.೨೦೧೩.

**ರವಿಶಂಕರ**, ಅಸ್ಪೃಶ್ಯತೆ ಇಲ್ಲಿನ್ನೂ ಜೀವಂತ, ಕನ್ನಡಪ್ರಭ ದಿನಾಂಕ; ೨೮.೦೪.೨೦೧೩.

**ಪ್ರಭಾಕರ. ಕೆ.ವಿ. ಜಾತಿಜ್ಯೋತಿ**, ಅಡವಿಗೊಲ್ಲರಿರುವ ಹಟ್ಟಿಗೆ ಕೋಳಿಗಳು ಕಾಲಿಡುವಂತ್ತಿಲ್ಲ, ಕನ್ನಡಪ್ರಭ ದಿನಾಂಕ; ೩೧.೦೮.೨೦೧೩.

**ಕೃಷ್ಣಪ್ಪ**, ಹಟ್ಟಿಯ ಸಮಸ್ಯೆಗೆ ಹೊರಬೀಡು ಮದ್ದು, ವಿಜಯವಾಣಿ, ದಿನಾಂಕ; ೧೫.೦೫.೨೦೧೪.

**ಕೆಂಚಪ್ಪ**. ಕೆ. ಗೊಲ್ಲರಹಟ್ಟಿಗಿಲ್ಲ ಸರ್ಕಾರದ ಸೌಲಭ್ಯ, ವಿಜಯವಾಣಿ ದಿನಾಂಕ; ೨೬.೦೬.೨೦೧೬.

**ಕೆಂಚಪ್ಪ**. ಕೆ. ನಾಲ್ಕುದಶಕದ ನಂತರ ಹೆಜೆಕಟ್ಟಿನಹಬ್ಬ, ವಿಜಯವಾಣಿ; ದಿನಾಂಕ; ೦೨.೧೨.೨೦೧೬.

**ಇಂಗ್ಲೀಷ್ ಮ್ಯಾಗಝಿನ್**

Vihar Ahmed Sayeed, Unclean and outcast, Frontline, Date 24-08-2012.

# ವಕ್ತೃ ವಿವರ

| ಕ್ರಸಂ | ವಕ್ತೃಗಳ ಹೆಸರು | ಸಮುದಾಯ | ಸ್ಥಳ | ತಾಲ್ಲೂಕು |
|---|---|---|---|---|
| ೧ | ಓದೋಈರಜ್ಜ | ಕಾಡುಗೊಲ್ಲ | ಚನ್ನಮ್ಮನಾಗತಿಹಳ್ಳಿ | ಚಳ್ಳಕೆರೆ |
| ೨ | ಶಿವಲಿಂಗಪ್ಪ | ಕಾಡುಗೊಲ್ಲ | ಚಿತ್ರಹಳ್ಳಿ | ಹೊಳಲ್ಕೆರೆ |
| ೩ | ಬೋರಣ್ಣ | ಮ್ಯಾಸಬೇಡ | ದೊರೆಹಟ್ಟಿ | ಚಳ್ಳಕೆರೆ |
| ೪ | ಬೋಸೆಮಲ್ಲಯ್ಯ | ಮ್ಯಾಸಬೇಡ | ಹೂಡೇಂ | ಕೂಡ್ಲಿಗಿ |
| ೫ | ರಾಜಣ್ಣ | ಮ್ಯಾಸಬೇಡ | ಚಿಕ್ಕೋಬನಹಳ್ಳಿ | ಮೊಳಕಾಲ್ಮೂರು |
| ೬ | ಕೆ.ಟಿ.ತಿಪ್ಪೇಸ್ವಾಮಿ | ಮ್ಯಾಸಬೇಡ | ಚನ್ನಬಸಯ್ಯನ ಹಟ್ಟಿ | ಚಳ್ಳಕೆರೆ |
| ೭ | ಸೂರನಾಯಕ | ಮ್ಯಾಸಬೇಡ | ನನ್ನಿವಾಳ | ಚಳ್ಳಕೆರೆ |
| ೮ | ಪಾಲಮ್ಮ | ಮ್ಯಾಸಬೇಡ | ದೊರೆ ಹಟ್ಟಿ | ಚಳ್ಳಕೆರೆ |
| ೯ | ಮಾರಪ್ಪ | ಮ್ಯಾಸಬೇಡ | ದಳವಾಯಿ ಕರಿಹಟ್ಟಿ | ಚಳ್ಳಕೆರೆ |
| ೧೦ | ಮಂಜುಳ<br>ಯಶೋಧ<br>ಪುಟ್ಟೀರಮ್ಮ<br>ಸರೋಜಮ್ಮ | ಕಾಡುಗೊಲ್ಲ<br>ಮಹಿಳೆಯರು | ಚನ್ನಮ್ಮನಾಗತಿಹಳ್ಳಿ | ಚಳ್ಳಕೆರೆ |
| ೧೧ | ಕೆಂಚಪ್ಪ | ಕಾಡುಗೊಲ್ಲ | ದುಗ್ಗಾಣಿ ಹಟ್ಟಿ | ಹಿರಿಯೂರು |
| ೧೨ | ಅನ್ನಪೂರ್ಣ | ಕಾಡುಗೊಲ್ಲ | ದುಗ್ಗಾಣಿ ಹಟ್ಟಿ | ಬಾಣಂತಿ<br>ಹಿರಿಯೂರು |
| ೧೩ | ಚಿಕ್ಕಪ್ಪಯ್ಯ.ಬಿ | ಕಾಡುಗೊಲ್ಲ | ಮೈಸೂರು | ಮೈಸೂರು |
| ೧೪ | ಗುರುಲಿಂಗಯ್ಯ.ಎಂ | ಕಾಡುಗೊಲ್ಲ | ಬೆಂಗಳೂರು | ಬೆಂಗಳೂರು |
| ೧೫ | ನಾಗಪ್ಪ.ಎ | ಕಾಡುಗೊಲ್ಲ | ವೇಣುಕಲ್ಲು ಗುಡ್ಡ | ಹಿರಿಯೂರು |
| ೧೬ | ಕುರಿಈರಜ್ಜರ ನಾಗಣ್ಣ | ಕಾಡುಗೊಲ್ಲ | ಯರಬಳ್ಳಿ ಗೊಲ್ಲರಹಟ್ಟಿ | ಹಿರಿಯೂರು |
| ೧೭ | ಪಿಳ್ಳಣ್ಣ | ಕಾಡುಗೊಲ್ಲ | ಯರಬಳ್ಳಿ ಗೊಲ್ಲರಹಟ್ಟಿ | ಹಿರಿಯೂರು |
| ೧೮ | ಪೂಜಾರಿ ಚಂದ್ರಣ್ಣ | ಕಾಡುಗೊಲ್ಲ | ಯರಬಳ್ಳಿ ಗೊಲ್ಲರಹಟ್ಟಿ | ಹಿರಿಯೂರು |
| ೧೯ | ಸಾಂತಮ್ಮ<br>ಕರಿಯಮ್ಮ<br>ಈರಮ್ಮ<br>ಜಯಮ್ಮ | ಕಾಡುಗೊಲ್ಲ | ಯರಬಳ್ಳಿ ಗೊಲ್ಲರಹಟ್ಟಿ | ಹಿರಿಯೂರು |

| | | | | |
|---|---|---|---|---|
| ೨೦ | ಸಿಂಪಣ್ಣ | ಕಾಡುಗೊಲ್ಲ | ಯರಬಳ್ಳಿ ದೊಡ್ಡಗೊಲ್ಲರಹಟ್ಟಿ | ಹಿರಿಯೂರು |
| ೨೧ | ಈರಣ್ಣ | ಕಾಡುಗೊಲ್ಲ | ಮದ್ದನ ಕುಂಟೆ | ಹಿರಿಯೂರು |
| ೨೨ | ಶಂಕರಪ್ಪ | ಕಾಡುಗೊಲ್ಲ | ಯರಬಳ್ಳಿ ದೊಡ್ಡಗೊಲ್ಲರಹಟ್ಟಿ | ಹಿರಿಯೂರು |
| ೨೩ | ನರಸಿಂಹಮೂರ್ತಿ | ಕಾಡುಗೊಲ್ಲ | ವೇಣುಕಲ್ಲು ಗುಡ್ಡ | ಹಿರಿಯೂರು |
| ೨೪ | ಪೂಜಾರಿ ಮಹಲಿಂಗಪ್ಪ | ಕಾಡುಗೊಲ್ಲ | ಚಿತ್ರಹಳ್ಳಿ | ಹೊಳಲ್ಕೆರೆ |
| ೨೫ | ಪೂಜಾರಿ ಮಾರಣ್ಣ | ಕಾಡುಗೊಲ್ಲ | ಕರಿಓಬೇನಹಳ್ಳಿ | ಹಿರಿಯೂರು |
| ೨೬ | ಚಿತ್ತಯ್ಯ | ಕಾಡುಗೊಲ್ಲ | ಮ್ಯಾಕ್ಲೋರಹಳ್ಳಿ | ಹಿರಿಯೂರು |
| ೨೭ | ನಿರಂಜನ್ ಕುಮಾರ್ | ಕಾಡುಗೊಲ್ಲ | ಜಾನುಕೊಂಡ ಗೊಲ್ಲರಹಟ್ಟಿ | ಚಿತ್ರದುರ್ಗ |
| ೨೮ | ರಾಮಣ್ಣ | ಕಾಡುಗೊಲ್ಲ | ಹಿರೇಗುಂಟನೂರು ಗೊಲ್ಲರಹಟ್ಟಿ | ಚಿತ್ರದುರ್ಗ |
| ೨೯ | ಎಸ್.ಎಂ. ಮುತ್ತಯ್ಯ | ಮ್ಯಾಸಬೇಡ | ಶಿವಮೊಗ್ಗ | ಶಿವಮೊಗ್ಗ |
| ೩೦ | ತಿಪ್ಪೇಸ್ವಾಮಿ | ಮ್ಯಾಸಬೇಡ | ಭರಮಸಾಗರ | ಚಿತ್ರದುರ್ಗ |
| ೩೧ | ಬೋರಜ್ಜ | ಮ್ಯಾಸಬೇಡ | ಕಂಪಳ ದೇವರಹಟ್ಟಿ | ಮೊಳಕಾಲ್ಮೂರು |
| ೩೨ | ವಿಜಯ್ ಯಾದವ್ | ಕಾಡುಗೊಲ್ಲ | ಕೂಡ್ಲಹಳ್ಳಿ | ಹಿರಿಯೂರು |
| ೩೩ | ನಾಗೇಶ್ | ಮ್ಯಾಸಬೇಡ | ಕಂಪಳ ದೇವರಹಟ್ಟಿ | ಮೊಳಕಾಲ್ಮೂರು |
| ೩೪ | ಸೂರಣ್ಣ | ಮ್ಯಾಸಬೇಡ | ಚಿಕ್ಕೋಬನಹಳ್ಳಿ | ಮೊಳಕಾಲ್ಮೂರು |
| ೩೫ | ಬೈಯ್ಯಣ್ಣ | ಮ್ಯಾಸಬೇಡ | ಕರ್ನಾರಹಟ್ಟಿ | ಕೂಡ್ಲಿಗಿ |
| ೩೬ | ಪೂಜಾರಿ ರೇವಣ್ಣ | ಮ್ಯಾಸಬೇಡ | ಕಂಪಳದೇವರಹಟ್ಟಿ | ಮೊಳಕಾಲ್ಮೂರು |
| ೩೭ | ದೊಡ್ಡ ಮಲ್ಲಯ್ಯ | ಕಾಡುಗೊಲ್ಲ | ಚಿತ್ರದುರ್ಗ | ಚಿತ್ರದುರ್ಗ |
| ೩೮ | ಕೃಷ್ಣಮೂರ್ತಿಹನೂರು | ಮ್ಯಾಸಬೇಡ | ಮೈಸೂರು | ಮೈಸೂರು |
| ೩೯ | ಬಂಜಗೆರೆಜಯಪ್ರಕಾಶ್ | ಮ್ಯಾಸಬೇಡ | ಬೆಂಗಳೂರು | ಬೆಂಗಳೂರು |
| ೪೦ | ಕೃಷ್ಣಪ್ಪ | ಕಾಡುಗೊಲ್ಲ | ವೇಣುಕಲ್ಲು ಗುಡ್ಡ | ಹಿರಿಯೂರು |
| ೪೧ | ಶ್ರೀನಿವಾಸ್ | ಕಾಡುಗೊಲ್ಲ | ವೇಣುಕಲ್ಲು ಗುಡ್ಡ | ಹಿರಿಯೂರು |
| ೪೨ | ರಂಗಪ್ಪ | ಕಾಡುಗೊಲ್ಲ | ಅಮೃತಾಪುರ ಗೊಲ್ಲರಹಟ್ಟಿ | ಹೊಳಲ್ಕೆರೆ |
| ೪೩ | ಸಂಗಪ್ಪ | ಕಾಡುಗೊಲ್ಲ | ಅಮೃತಾಪುರ ಗೊಲ್ಲರಹಟ್ಟಿ | ಹೊಳಲ್ಕೆರೆ |
| ೪೪ | ತಿಮ್ಮಣ್ಣ | ಕಾಡುಗೊಲ್ಲ | ಬ್ಯಾಡರಹಳ್ಳಿ ಗೊಲ್ಲರಹಟ್ಟಿ | ಹಿರಿಯೂರು |
| ೪೫ | ಶ್ರೀನಿವಾಸ | ಕಾಡುಗೊಲ್ಲ | ಬ್ಯಾಡರಹಳ್ಳಿ ಗೊಲ್ಲರಹಟ್ಟಿ | ಹಿರಿಯೂರು |
| ೪೬ | ಗಿರಿಸ್ವಾಮಿ | ಕಾಡುಗೊಲ್ಲ | ಗೊಲ್ಲಹಳ್ಳಿ | ಹಿರಿಯೂರು |
| ೪೭ | ಲಲಿತಮ್ಮ | ಕಾಡುಗೊಲ್ಲ | ಗೊಲ್ಲಹಳ್ಳಿ | ಹಿರಿಯೂರು |
| ೪೮ | ಪಾಪನಾಯ್ಕ | ಮ್ಯಾಸಬೇಡ | ಹೂಡೇಂ | ಕೂಡ್ಲಿಗಿ |
| ೪೯ | ಓಬಳೇಶ | ಮ್ಯಾಸಬೇಡ | ಕಂಪಳ ದೇವರಹಟ್ಟಿ | ಮೊಳಕಾಲ್ಮೂರು |
| ೫೦ | ಜ್ಯೋತಿ | ಕಾಡುಗೊಲ್ಲ | ಕಾಟಪ್ಪನ ಹಟ್ಟಿ | ಹಿರಿಯೂರು |
| ೫೧ | ಮಹೇಶ | ಕಾಡುಗೊಲ್ಲ | ಕೂಡ್ಲಹಳ್ಳಿ | ಹಿರಿಯೂರು |
| ೫೨ | ಸುನಂದ | ಕಾಡುಗೊಲ್ಲ | ಕಪಿಲೆ ಹಟ್ಟಿ | ಹಿರಿಯೂರು |
| ೫೩ | ಹೊಸಮನೆ ಪಾತಣ್ಣ | ಕಾಡುಗೊಲ್ಲ | ಕಪಿಲೆ ಹಟ್ಟಿ | ಹಿರಿಯೂರು |
| ೫೪ | ಪರುಶುರಾಮಯ್ಯ | ಕಾಡುಗೊಲ್ಲ | ಕರಿಯೋಬೇನಹಳ್ಳಿ | ಹಿರಿಯೂರು |

| | | | | |
|---|---|---|---|---|
| ೫೫ | ಗೊಂಚಿ ತಿಪ್ಪೇಸ್ವಾಮಿ | ಕಾಡುಗೊಲ್ಲ | ಮದ್ದನಕುಂಟೆ | ಹಿರಿಯೂರು |
| ೫೬ | ಸತೀಶ್ | ಕಾಡುಗೊಲ್ಲ | ಮದ್ದನ ಕುಂಟೆ | ಹಿರಿಯೂರು |
| ೫೭ | ಚಂದ್ರಮ್ಮ | | | |
| | ಶಿವಮ್ಮ | | | |
| | ತ್ರಿವೇಣಿ | ಕಾಡುಗೊಲ್ಲ | ಕಾಟಪ್ಪನ ಹಟ್ಟಿ | ಹಿರಿಯೂರು |
| ೫೮ | ಪ್ರೇಮ ಜಿ.ಕೆ | ಕಾಡುಗೊಲ್ಲ | ಶಿವಮೊಗ್ಗ | ಶಿವಮೊಗ್ಗ |
| ೫೯ | ನಗರಿ ಓಬಯ್ಯ | ಮ್ಯಾಸಬೇಡ | ಕಂಪಳ ದೇವರಹಟ್ಟಿ | ಮೊಳಕಾಲ್ಮೂರು |
| ೬೦ | ಮುಡೇಲರು ಚನ್ನಪ್ಪ | ಮ್ಯಾಸಬೇಡ | ಕಂಪಳ ದೇವರಹಟ್ಟಿ | ಮೊಳಕಾಲ್ಮೂರು |
| ೬೧ | ಪೂಜಾರಿಬಸವರಾಜು | ಮ್ಯಾಸಬೇಡ | ಯರನಿಂಗನಹಳ್ಳಿ | ಕೂಡ್ಲಿಗಿ |
| ೬೨ | ವೆಂಕಟೇಶ್ | ಮ್ಯಾಸಬೇಡ | ಮೊಳಕಾಲ್ಮೂರು | ಮೊಳಕಾಲ್ಮೂರು |
| ೬೩ | ಮುದಿಯಪ್ಪ | ಕಾಡುಗೊಲ್ಲ | ಹಿರಿಯೂರು | ಹಿರಿಯೂರು |
| ೬೪ | ಪ್ರಹ್ಲಾದ | ಕಾಡುಗೊಲ್ಲ | ಕರಿಯೋಬೇನಹಳ್ಳಿ | ಹಿರಿಯೂರು |
| ೬೫ | ಪಾಲಮ್ಮ | ಮ್ಯಾಸಬೇಡ | ಮಲ್ಲೂರಹಳ್ಳಿ | ಚಳ್ಳಕೆರೆ |
| ೬೬ | ದೇವರಾಜ | ಕಾಡುಗೊಲ್ಲ | ಚನ್ನಮ್ಮನಾಗತಿಹಳ್ಳಿ | ಚಳ್ಳಕೆರೆ |
| ೬೭ | ಯರ್ರಣ್ಣ | ಕಾಡುಗೊಲ್ಲ | ಚನ್ನಮ್ಮನಾಗತಿಹಳ್ಳಿ | ಚಳ್ಳಕೆರೆ |
| ೬೮ | ಪಾಪಣ್ಣ | ಮ್ಯಾಸಬೇಡ | ಚಿಕ್ಕೋಬನಹಳ್ಳಿ | ಮೊಳಕಾಲ್ಮೂರು |
| ೬೯ | ಸಣ್ಣ ಮಲಯ್ಯ | ಮ್ಯಾಸಬೇಡ | ಹೂಡೇಂ | ಕೂಡ್ಲಿಗಿ |
| ೭೦ | ಕಿಲಾರಿಗಳ ಚಿನ್ನಯ್ಯ. | | | |
| | ಊಲೆ ಪಾಪಯ್ಯ | | | |
| | ಕಿಲಾರಿ ಜೋಗಯ್ಯ | | | |
| | ಕಿಲಾರಿ ಬೋರಯ್ಯ | ಮ್ಯಾಸಬೇಡ | ನನ್ನಿವಾಳ | ಚಳ್ಳಕೆರೆ |
| ೭೧ | ಸೂರನಾಯ್ಕ | ಮ್ಯಾಸಬೇಡ | ನನ್ನಿವಾಳ | ಚಳ್ಳಕೆರೆ |
| ೭೨ | ಕೆಂಚಪ್ಪ | ಕಾಡುಗೊಲ್ಲ | ಕರೆ ಕೆಂಚಯ್ಯನಹಟ್ಟಿ | ಹಿರಿಯೂರು |
| ೭೩ | ಕರಿಯಮ್ಮ | | | |
| | ದೊಡ್ಡಕ್ಕ | | | |
| | ದ್ರಾಕ್ಷಾಯಣಿ | ಕಾಡುಗೊಲ್ಲ | ದುಗ್ಗಾಣಿ ಹಟ್ಟಿ | ಹಿರಿಯೂರು |

# ಛಾಯಾಚಿತ್ರಗಳು



ಕಾಡುಗೊಲ್ಲ ಮಹಿಳೆ



ಕಾಡುಗೊಲ್ಲರ ಹೆಣ್ಣುಮಕ್ಕಳು ಸೋಬಾನೆ ಹೇಳುವುದು



ಗಣೆ ಊದುತ್ತಿರುವ ಸಿಂಪಣ್ಣ



ಕಂಪಳ ದೇವರ ಜಾತ್ರೆಯಲ್ಲಿ ದಗಮು ಬಡಿಯುವುದು



ಎತ್ತಿನ ಕಿಲಾರಿಗಳು



ಮೀಸಲು ಮರ ತರಲು ಹೊರಟಿರುವ ಕಾಡುಗೊಲ್ಲರ ಯಜಮಾನ



ಕ್ಯಾತೇದೇವರಿನ ಜಾತ್ರೆಯಲ್ಲಿ ಮೀಸಲು ಮರ ತರುವ ಮರವಾಯಿಗಳು



ಮ್ಯಾಸಬೇಡರು ಧಾನ್ಯ ಸಂಗ್ರಹಿಸುವ ಮಣ್ಣಿನ ವಾಡೇವು



ಕಂಪಳದೇವರ ಜಾತ್ರೆಯಲ್ಲಿ ಪಂಜಿನ ಸೇವೆ



ಕಂಪಳದೇವರು ಗುಡಿದುಂಬುವಾಗ ಉರುಳು ಸೇವೆ ಮಾಡುವುದು



ಮನೆಯ ಪಕ್ಕದಲ್ಲಿ ಕುರಿಯ ರೊಪ್ಪ



ಸನ್ನಿವಾಳದ ಕಿಲಾರಿ ಊಲೆಪಾಲಯ್ಯ



ಮ್ಯಾಸಬೇಡರ ಹೆಣ್ಣುಮಗಳ ಕೈಮೇಲಿನ ಹಚ್ಚೆ



ಹೆಡೆಕಟ್ಟಿನ ಹಬ್ಬದಲ್ಲಿ ನಿರ್ಮಿಸಿದ
ಸರ್ಪಾಕೃತಿ



ಪೂಜಾರಿ ರೇವಣ್ಣ ಮುತ್ತಿನ ಕಾಲುಪೆಂಡೆ ತೋರಿಸುವುದು



ಕಾಡುಗೊಲ್ಲರ ಪಿಳ್ಳೆಣ್ಣನೊಂದಿಗೆ ಸಂದರ್ಶನ



ಹಾಲುಗುಡದ ಸ್ವಾಮಿಯ ಪೂಜಾರಿ



ಯರಬಳ್ಳಿ ಗೊಲ್ಲರಹಟ್ಟಿಯ ದೇವರ ಗುಬ್ಬಗಳು



ಗುಗ್ಗರಿ ಹಬ್ಬದಲ್ಲಿ ಏರಿಸಿದ ಝಂಡೇವು



ಹಾಲುಗುಡದಪ್ಪ ಸ್ವಾಮಿಯ ಗುಬ್ಬ ಮತ್ತು ಪೂಜಾರಿ



ಕೊಂಡ್ಲಹಳ್ಳಿ ಗೊಲ್ಲರಹಟ್ಟಿಯ ಹಿರಿಯರೊಂದಿಗೆ ಸಂದರ್ಶನ



ಮಾರಮ್ಮನ ದೇವಸ್ಥಾನ



ಮುಟ್ಟಾದ ಹೆಣ್ಣುಮಕ್ಕಳು ಹಟ್ಟಿಯಿಂದ ಹೊರಗಿರುವುದು



ಕಾಡುಗೊಲ್ಲರ ಹೆಣ್ಣುಮಗಳು ಕೈಗೆ ತೊಟ್ಟಿರುವ ಗೊಲ್ಲ ಕಡಗ



ಕಂಪಳದೇವರ ಹಟ್ಟಿಯ ಕಂಪಳದೇವರ ಗುಬ್ಬ



ಗೊಲ್ಲಗೌಡರು ಮತ್ತು ಪೂಜಾರಿಗಳು ಕ್ಯಾತೇಲಿಂಗನ ಜಾತ್ರೆಯಲ್ಲಿ ಕಳಸ ಇಟ್ಟಿರುವುದು



ಕಾಡುಗೊಲ್ಲರು ಕ್ಯಾತೇಲಿಂಗನ ಜಾತ್ರೆಯಲ್ಲಿ ಕಳಸ ಕೀಳುತ್ತಿರುವುದು



ಕ್ಯಾತೇಲಿಂಗನ ದೇವರ ಆಭರಣಗಳು



ಕಾಡುಗೊಲ್ಲರು ಮಣೇವು ಆಡುತ್ತಿರುವುದು



ಕಾಡುಗೊಲ್ಲರು ಸಂಗ್ರಹಿಸುವ ಮೀಸಲು ಹಾಲು



ಕಾಡುಗೊಲ್ಲರ ಮದುವೆಯಲ್ಲಿ ಹಸೆ ಚಿತ್ತಾರ



ಕಂಪಳದೇವರ ಜಾತ್ರೆಯ ಪಂಜಿನ ಸೇವೆ



ಕಂಪಳದೇವರ ಜಾತ್ರೆಯಲ್ಲಿ ಗುಗ್ಗರಿ ಬೇಯಿಸಲು ಸಂಗ್ರಹಿಸಿದ ಕಾಳುಗಳು



ಮ್ಯಾಸಬೇಡರ ಮಕ್ಕಳ ಕೋಲಾಟ



ಶಂಖ ಜಾಗಟೆ ಊದುತ್ತಿರುವ ದಾಸಯ್ಯ

## ಪ್ರಶ್ನಾವಳಿ

I. ಸಾಮಾನ್ಯ ಮಾಹಿತಿ
ಎ) ಸಮೀಕ್ಷೆಯ ದಿನಾಂಕ :
ಬಿ) ಬುಡಕಟ್ಟು :
ಸಿ) ಮಾತೃಭಾಷೆ :
ಡಿ) ಉಪಪಂಗಡ :
ಇ) ಗೋತ್ರ/ಬೆಡಗು/ಬಳಿ :
ಎಫ್) ಕುಲಚಿನ್ಹೆ :

ಜಿ) ಮನೆತನದ ಹೆಸರು :
ಹೆಚ್) ಮನೆ ಸಂಖ್ಯೆ :
ಐ) ಗ್ರಾಮ/ಪಟ್ಟಣ/ನಗರ :
ಜೆ) ವಾರ್ಡ್ :
ಕೆ) ಪಂಚಾಯ್ತಿ :
ಎಲ್) ತಾಲ್ಲೂಕು :
ಎಂ) ಜಿಲ್ಲೆ :

ಎನ್) ಭೂ ಹಿಡುವಳಿ(ಎಕರೆಗಳಲ್ಲಿ)
1) ಒಣ :
2) ನೀರಾವರಿ :
ಓ) ನಿವೇಶನ, ಮನೆ ಇಲ್ಲ :
ಪಿ) ನಿವೇಶನ ಇದೆ. ಮನೆ ಇಲ್ಲ :
ಕ್ಯೂ) ಅತಿಕ್ರಮಣ ಜಮೀನೋ ? :
ಅಧಿಕೃತಗೊಳಿಸಲಾಗಿದೆಯೋ? :

ಆರ್) ಪಶು ಸಂಪತ್ತು (ಸಂಖ್ಯೆಗಳಲ್ಲಿ)
1) ಎತ್ತು, ಹೋರಿ :
2) ಆಕಳು, ಕರು :
3) ಎಮ್ಮೆ, ಕೋಣ :
4) ಕುರಿ :
5) ಮೇಕೆ :
6) ಕೋಳಿ :
7)

### II ವೈಯಕ್ತಿಕ ಮಾಹಿತಿ

| ಕ್ರ ಸಂ. | ಕುಟುಂಬದ ಸದಸ್ಯರ ಹೆಸರುಗಳು | ಸಂಬಂಧ | ಲಿಂಗ | ವಯಸ್ಸು | ಶಿಕ್ಷಣ | ವೈವಾಹಿಕ ಸ್ಥಾನಮಾನ | ವೃತ್ತಿ | ಕುಟುಂಬ ಯೋಜನೆ | ಸರಕಾರಿ ಸೌಲಭ್ಯಗಳು | | | | |
|---|---|---|---|---|---|---|---|---|---|---|---|---|---|
| | | | | | | | | | ಓಟಿನ ಕಾರ್ಡ್ | ವಿಧುರ ವಿಧವೆ | ಅಂಗವಿಕಲ | ವೃದ್ಧಾಪ್ಯ ವೇತನ | ಶಿಷ್ಯ ವೇತನ |
| i | ii | iii | iv | v | vi | vii | viii | ix | x | xi | xii | xiii | xiv |
| 1 | | | | | | | | | | | | | |
| 2 | | | | | | | | | | | | | |
| 3 | | | | | | | | | | | | | |
| 4 | | | | | | | | | | | | | |
| 5 | | | | | | | | | | | | | |
| 6 | | | | | | | | | | | | | |
| 7 | | | | | | | | | | | | | |
| 8 | | | | | | | | | | | | | |
| 9 | | | | | | | | | | | | | |
| 10 | | | | | | | | | | | | | |

ಎಸ್) ಮನೆ ವಿವರ
1) ಗುಡಾರ
2) ಗುಡಿಸಲು
3) ಟನ್ ಮನೆ
4) ದಾದಾ ಮಾಳಿಗೆ
5) ಆರ್.ಸಿ.ಸಿ. ಮನೆ
6) ಹೆಂಚಿನ ಮನೆ
7) ಆಶ್ರಯ ಮನೆ
8) ಬಾಡಿಗೆ ಮನೆ
9)
10) ನಿವೇಶನ
11) ಮನೆ
ಅ) ಸ್ವಂತದ್ದು
ಆ) ಸರಕಾರದ್ದು
12) ವಿದ್ಯುತ್
ಅ) ಸ್ವಂತದ್ದು
ಆ) ಸರಕಾರದ್ದು
ಟಿ) ಇತರ ಸೌಲಭ್ಯಗಳು
1) ಪಡಿತರ ಚೀಟಿ
2) ಗ್ಯಾಸ್
3) ನಲ್ಲಿ
4) ಶೌಚಾಲಯ
5) ಸ್ನಾನಗೃಹ
6) ಸೈಕಲ್
7) ರೇಡಿಯೋ
8) ಟೇಪ್ ರೆಕಾರ್ಡ್
9) ಟಿ.ವಿ.
10) ದೂರವಾಣಿ ಸಂಖ್ಯೆ
11) ಮೊಬೈಲ್ ಸಂಖ್ಯೆ

**ಕೆ.ಸಿ.ಶರಣಪ್ಪ**
ಸಂಶೋಧಕ ಹಾಗೂ ಉಪನ್ಯಾಸಕರು.
ಸರ್ಕಾರಿ ಕಲಾ ಕಾಲೇಜು. ಚಿತ್ರದುರ್ಗ

**ಡಾ|| ಚಲುವರಾಜು**
ಪ್ರಾಧ್ಯಾಪಕಹಾಗೂ ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮಾಹಿತಿದಾರರ ಹೆಸರು ಮತ್ತು ಸಹಿ

